ಮಲೆಯ ಮಾದೇಶ್ವರ (ಸಂಪಾದಿತ ಕೃತಿ) : ಜಾನಪದ ಮಹಾಕಾವ್ಯ
ಸಂ. ಡಾ. ಬಿ.ಎಸ್. ಸ್ವಾಮಿ, ಪ್ರಕಾಶಕರು : ದಾಮಿನಿ ಸಾಹಿತ್ಯ, ನಂ. 201,
7ನೇ ಮುಖ್ಯ ರಸ್ತೆ, ಆರ್.ಪಿ.ಸಿ. ಬಡಾವಣೆ, ವಿಜಯನಗರ ಪೂರ್ವ,
ಬೆಂಗಳೂರು-೪೦. ☎ : 3380442

ಪುಟಗಳು : 396



ಪ್ರಥಮ ಮುದ್ರಣ : ೨೦೦೧

ಪ್ರತಿಗಳು : 1000

ಬೆಲೆ : ರೂ. ೩೦೦/-



ರಕ್ಷಾಪತ್ರ ವಿನ್ಯಾಸ : ಶ್ರೀ ಮೋನಪ್ಪ

ತಿರುಪತಿ ತಿರುಮಲೆ ದೇವಸ್ಥಾನದ ಸಹಾಯ ಧನದಿಂದ ಈ ಪುಸ್ತಕ
ಪ್ರಕಟಗೊಂಡಿದೆ. ಅದಕ್ಕಾಗಿ ಕೃತಜ್ಞತೆಗಳು

ಛಾಯಾಕ್ಷರ ಜೋಡಣೆ :
ವರ್ಷಿಣಿ ಗ್ರಾಫಿಕ್ಸ್, ಬೆಂಗಳೂರು-೪೦. ☎ : 3402575

ಮುದ್ರಣ :
ಶ್ರೀ ವೆಂಕಟೇಶ್ವರ ಪ್ರಿಂಟರ್ಸ್
ನಂ. ೧೮೬/ಬಿ, ೫೬ನೇ ಕ್ರಾಸ್, ೪ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು-೫೬೦ ೦೧೦.
☎ : 3357955.

# ೧. ಪ್ರಸ್ತಾವನೆ

"ಮಾದೇಶ್ವರ ಕಾವ್ಯ" ಒಬ್ಬ ದೇವನ ಬಗೆಗೆ, ಒಬ್ಬ ಶರಣನ ಬಗೆಗೆ, ಮಾನವನಿಂದ ದೇವ ಮಾನವನಾದ ಮಾದೇಶ್ವರನ ಬಗೆಗೆ ರೂಪಿತವಾದ ಮಹಾಕಾವ್ಯ. ಜನಪದರು ಮಾದೇಶ್ವರನ ಮೇಲ್ಮೆಯನ್ನು ವೈಭವೀಕರಿಸಿ, ಅವನ ವ್ಯಕ್ತಿತ್ವವನ್ನು ಪವಾಡಗಳನ್ನು ಬೆರೆಸಿ, ಆಶಯಗಳನ್ನು ತುಂಬಿ, ರೋಚಕವಾಗಿ ನಿರೂಪಣೆಗೈದ ಜಾನಪದ ಮಹಾಕಾವ್ಯ. ಇದು ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಒಬ್ಬ ವಕ್ತೃವಿನ ಬಾಯಿಂದ ಮತ್ತೊಬ್ಬ ವಕ್ತೃವಿನ ಬಾಯಿಗೆ ಬರುವಾಗ ಹಲವಾರು ಬದಲಾವಣೆ ಕಂಡು, ಹೊಸತನವನ್ನು ಕಂಡುಕೊಂಡು ಬಂದ ಪ್ರಸಿದ್ಧ ಜಾನಪದ ಮಹಾಕಾವ್ಯ. ಜನಪದರು ತಾವು ಕೇಳಿದ ಧಾರ್ಮಿಕ ಕಾವ್ಯಗಳಲ್ಲಿ ಬರುವ ಆಶಯ, ಪವಾಡಗಳನ್ನು ಆತನ ಕಥೆಗೆ ಬೆರಸಿ ಆತನನ್ನು ಮಾನವತ್ವದಿಂದ ದೇವಮಾನವನಾಗುವವರೆಗೆ ಚಿತ್ರಿಸಿದ್ದಾರೆ. ಈ ಮಹಾಕಾವ್ಯದಲ್ಲಿ ಜನಪದ ಮಹಾಕವಿಗೆ ಅರಿವಾಗದಂತೆ ಅಲಂಕಾರ, ರಸಗಳು ಬೆರೆತು ಛಂದೋಗಂಧಿ ಶೈಲಿಯಲ್ಲಿ, ಕೆಲವೆಡೆ ತ್ರಿಪದಿಗಳು, ಚಂಪೂ ಶೈಲಿಯಲ್ಲಿ ಕಾವ್ಯವಾಗಿ ರೂಪಿತವಾಗಿದೆ. ಜನಪದರು ಈ ಅಲಿಖಿತ ಮಹಾಕಾವ್ಯವು ವಾಗ್ರೂಪದಲ್ಲಿ ಸೃಷ್ಟಿಯಾಯಿತೆಂದರೆ ಅಚ್ಚರಿಯೇ ಸರಿ. ಇದು ಏಕಸೂತ್ರತೆ ಇಲ್ಲದೆ ಖಂಡ ಕಾವ್ಯಗಳ ಸಂಗಮವಾಗಿ ರೂಪಿತವಾದ ಮಹಾಕಾವ್ಯ. ಕರ್ನಾಟಕದಲ್ಲೇ ಗಾತ್ರದಲ್ಲಿ ಅತ್ಯಂತ ಹಿರಿದಾದ ಮಹಾಕಾವ್ಯ.

ಡಾ. ಕೆ. ಕೇಶವನ್ ಪ್ರಸಾದ್ ಅವರು ಸಂಪಾದಿಸಿರುವ "ಮಲೆ ಮಾದೇಶ್ವರ" ಕಾವ್ಯದ ಮುನ್ನುಡಿಯಲ್ಲಿ ಡಾ. ಚಂದ್ರಶೇಖರ ಕಂಬಾರರು, "ಮಾದೇಶ್ವರ ಕಾವ್ಯವನ್ನು ಬುಡಕಟ್ಟು ಕಾವ್ಯಕ್ಕೆ ಸೇರಿಸಿ ಅದರಿಂದ ಕನ್ನಡ ಸಂಸ್ಕೃತಿಯನ್ನು ಹುಡುಕುವ ಕಾರ್ಯಕ್ಕೆ ನಾವು ಕೈ ಹಾಕಿದ್ದೇವೆ. ಒಂದು ವಿಶಿಷ್ಟವಾದ ಭೂಪ್ರದೇಶ ಅಥವಾ ಬುಡಕಟ್ಟಿನ ಪರಂಪರೆಯಲ್ಲಿ ಸೃಷ್ಟಿಯಾಗಿರುವ ದೈವ ಪುರುಷರು ಇವತ್ತಿನ ಸಂಸ್ಕೃತಿ ಚಿಂತಕರಿಗೆ ಮುಖ್ಯವಸ್ತುವಾಗಬೇಕಾಗಿದೆ. ಕಾಡು ಮತ್ತು ನಾಡಿನ ಹತ್ತಾರು ಜನವರ್ಗಗಳು ಪೂಜಿಸುವ ದೈವಗಳು ಮತ್ತು ಆ ದೈವಗಳ ಬಗ್ಗೆ ಅವರು ಕಟ್ಟಿಕೊಂಡ ಕಥನಗಳು ನೂರಾರು. ಈ ಕಥನಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನು ನಿರೂಪಿಸಬಲ್ಲವು.

ಇದುವರೆಗೆ ನಿರ್ಲಕ್ಷಿಸಲ್ಪಟ್ಟ ಜನಗಳಿಗೆ ಕೂಡ ಶ್ರೀಮಂತ ಸಂಸ್ಕೃತಿ ಇದೆ ಎಂಬುದನ್ನೂ, ಆ ಸಂಸ್ಕೃತಿಗೆ ಒಂದು ಪರಂಪರೆ ಇದೆ ಎಂಬುದನ್ನೂ, ಆ ಪರಂಪರೆಯೇ ಒಂದು ನಾಡಿನ ವಿವೇಕ ಮತ್ತು ಜ್ಞಾನವನ್ನು ಕಾಪಾಡಿಕೊಂಡು ಬಂದಿದೆ ಎಂಬುದನ್ನೂ ನಾವು ತಿಳಿಯುತ್ತೇವೆ" ಎಂದಿದ್ದಾರೆ.

'ಇದು ಫಿನ್‌ಲ್ಯಾಂಡಿನ ಮೌಖಿಕ ಮಹಾಕಾವ್ಯದಷ್ಟೇ ದೊಡ್ಡದು' ಎಂಬುದು ಹಾ.ಮಾ. ನಾಯಕರ ಅಭಿಪ್ರಾಯ. "ಈ ಮಹಾಕಾವ್ಯದಲ್ಲಿ ಬರುವ ಮೌಲ್ಯಗಳು ಸರ್ವಕಾಲಿಕವಾಗಿವೆ ಹಾಗೂ ಅಲ್ಲಿನ ಪರಿಸರ ಪ್ರಜ್ಞೆ, ಸಾಮಾಜಿಕ ತಿಳುವಳಿಕೆ ಹಾಗೂ ಮನಸ್ಸಿನ ಹರಹುಗಳು ಈಗಲೂ ಪ್ರಸ್ತುತವಾಗಿವೆ. ಮಹಾಕಾವ್ಯದ ಮತ್ತೊಂದು ಪ್ರಮುಖ ಅಂಶ ಕಾವ್ಯದ ನಾಯಕ ಮಹಾಪುರುಷನಾಗಬೇಕು ಹಾಗೂ ಅಲ್ಲಿ ಬರುವ ವ್ಯಕ್ತಿಗಳೂ ಸಹ ಮಹಾವ್ಯಕ್ತಿಗಳಾಗಿರಬೇಕು. ಹಾಗೆಯೇ ಮಾದಪ್ಪ ಮಾದೇಶ್ವರನಾಗಿ ಮಹಾಪುರುಷನಾಗುತ್ತಾನೆ. ಓರ್ವ ಕ್ರಾಂತಿಕಾರಿಯಾಗಿ ಕೆಟ್ಟ ವ್ಯವಸ್ಥೆಯನ್ನು ಖಂಡಿಸಿ ಒಟ್ಟಾರೆ ಸಾಮಾಜಿಕ ಪ್ರಜ್ಞೆಯನ್ನು ತೋರಿಸಿ ವಸ್ತು-ಸ್ಥಿತಿಯ ಅರಿವುಂಟು ಮಾಡುತ್ತಾನೆ" ಎನ್ನುತ್ತಾರೆ ಡಾ. ಕೆ. ಕೇಶವನ್ ಪ್ರಸಾದ್ ಅವರು.

ಡಾ. ಕೆ. ಕೇಶವನ್ ಪ್ರಸಾದ್ ಅವರು ಸಂಪಾದಿಸಿದ ಕೃತಿಯ ಪ್ರಸ್ತಾವನೆಯಲ್ಲಿ ಹಿ.ಚಿ. ಬೋರಲಿಂಗಯ್ಯನವರು ಮಾದೇಶ್ವರ ಕಾವ್ಯದ ಬಗ್ಗೆ ಬರೆಯುತ್ತಾ-

"ಮಹಾಕಾವ್ಯ ಎಂದರೆ ಹೀಗಿರಬೇಕು ಎಂಬ ನಿರ್ದಿಷ್ಟ ಕಲ್ಪನೆಯಲ್ಲೇ ಯೋಚಿಸಿದ ಇವರೆಲ್ಲಾ ಕೇವಲ ಶಿಷ್ಟ ಕಾವ್ಯಗಳನ್ನು ಕುರಿತಾದ ಏಕಮುಖಿ ಚರ್ಚೆಯನ್ನು ಬೆಳೆಸುವ ಮೂಲಕ ಸಾಂಸ್ಕೃತಿಕ ವಲಯದ ಬಹು ಮುಖ್ಯ ಭಾಗವಾದ ಮೌಖಿಕ ಕಾವ್ಯಗಳನ್ನು ಮರೆತರು ಎಂದೇ ಹೇಳಬಹುದು ಅಥವಾ ಅವರಿಗೆ ಮೌಖಿಕ ಪರಂಪರೆ ಮುಖ್ಯವಾಗಿ ಕಂಡಿಲ್ಲದಿರಬಹುದು. ಆದರೆ ಪಾಶ್ಚಾತ್ಯ ಮೌಖಿಕ ಕಾವ್ಯಗಳೆನಿಸಿದ ಕಲೇವಾಲ, ಗಿಲ್ಗಮಿಷ್ ಮತ್ತು ಬೋವುಲ್ಫ್‌ಗಳಂಥ ಕಾವ್ಯಗಳನ್ನು ಅಪ್ಪಟ ಕಾವ್ಯ ಹೌದು ಎಂದು ಪರಿಗಣಿಸಿದ ಪಾಶ್ಚಾತ್ಯ ವಿದ್ವಾಂಸರು ಈ ಸಾಲಿನಲ್ಲಿ ಅವುಗಳನ್ನು ಸ್ಪಷ್ಟವಾಗಿ ದಾಖಲಿಸಿದರು. ಸಿ.ಎಂ. ಬೋವ್ರನಂಥ ವಿದ್ವಾಂಸ ಈ ಮೌಖಿಕ ಮಹಾಕಾವ್ಯ ಮತ್ತು ಶಿಷ್ಟ ಮಹಾಕಾವ್ಯದ ಸ್ವರೂಪದ ಬಗ್ಗೆ ಚರ್ಚಿಸುತ್ತಾ, "ಈ ಎರಡು ಬಗೆಯ ಮಹಾಕಾವ್ಯಗಳಲ್ಲಿ ವಾಚಿಕ ಮಹಾಕಾವ್ಯವೇ (oral Epic) ಶುದ್ಧವಾದ, ಸಹಜ, ನೇರ, ನಿರರ್ಗಳ, ನಾಗರೀಕತೆಯಿಂದ ಕಲುಷಿತವಾಗದ ಕವಿವಾಣಿ" ಎಂದು ಘೋಷಿಸಿದ. ರಾಮಾಯಣ, ಮಹಾಭಾರತಗಳು ಮಾತ್ರ ಮಹಾಕಾವ್ಯಗಳೆಂಬ ಸಾರ್ವತ್ರಿಕ ಅಭಿಪ್ರಾಯ ನಮ್ಮದಾಗಿತ್ತು. ಅಂಥ ಕಾವ್ಯವನ್ನೇ ನಮ್ಮ ಬುಡಕಟ್ಟಿನವರು ಹಾಡಿಕೊಳ್ಳುತ್ತಿದ್ದರೂ ಸ್ಥಾಪಿತ ಮೌಲ್ಯಗಳಿಗೆ ಅವು ವಿರುದ್ಧವಾದುದರಿಂದ ಅವುಗಳನ್ನು

ಮಾನ್ಯಮಾಡಲಿಲ್ಲ. ಅಕ್ಷರ ಬಲ್ಲವ ಮಾತ್ರ ರಚಿಸಬಲ್ಲ ಎಂಬ ತಿಳುವಳಿಕೆಯಿಂದ ನಿರ್ಲಕ್ಷ್ಯಕ್ಕೆ ಒಳಗಾಯಿತು" ಎನ್ನುತ್ತಾರೆ.

ಅಷ್ಟಾದಶ ವರ್ಣನೆ ಜನಪದ ಮಹಾಕಾವ್ಯದ ಉದ್ದೇಶವಲ್ಲ. ಕಂಡದ್ದನ್ನು ಹೇಳುವುದು, ಬೈರಾಗಿ, ಅಲೆಮಾರಿಗಳಾಗಿ ಒಂದೆಡೆ ನಿಲ್ಲುವ ತವಕ ಹೊಂದಿರುವವರು. ಮಾದೇಶ್ವರ, ಜುಂಜಪ್ಪ, ಮೈಲಾರರಂಥವರು, ಮಂಟೇಸ್ವಾಮಿಯಂಥವರು. ಮಾದೇಶ್ವರರಂಥವರು ಕೆಳವರ್ಗದವರ ಅಸ್ತಿತ್ವವನ್ನು ಪುನರ್ ಸ್ಥಾಪಿಸುವ, ಪ್ರತಿ ಸಂಸ್ಕೃತಿಯೊಂದರ ನಿರ್ಮಾಣ ಇದರ ಉದ್ದೇಶವಾಗಿದ್ದಂತೆ ತೋರುತ್ತದೆ. ಬೇಡರು, ಕಾಡು ಕುರುಬರು, ಸೋಲಿಗರೆಂಬ ಆದಿವಾಸಿಗಳೇ ಮಾದಪ್ಪನ ಸೇವಕರು. ಅವರ ಉದ್ದೇಶಕ್ಕೆ ದುಡಿದವ ಮಾದೇಶ್ವರ.

ಹಿ.ಚಿ. ಬೋರಲಿಂಗಯ್ಯನವರು "ಒಬ್ಬನೇ ಗಾಯಕನಿಂದ ಹಾಡಿಸಿ ಹಲವು ಪಾಠಗಳನ್ನು ಒದಗಿಸುವವರೆ ಮುಂದೆ ಅದನ್ನು ಶಾಸ್ತ್ರೀಯವಾಗಿ ಸಂಪಾದಿಸಲು ಸಹಾಯವಾಗುತ್ತದೆ" ಎಂದು ಅಭಿಪ್ರಾಯಪಡುತ್ತಾರೆ. ಅದೂ ಒಂದು ರೀತಿಯಲ್ಲಿ ಸರಿ ಎನಿಸುತ್ತದೆ. ಆದರೆ ಪಿ.ಕೆ. ರಾಜಶೇಖರ ಅವರು "ನಾನು ಅನೇಕ ಪಾಠಾಂತರಗಳನ್ನು ಉಪಯೋಗಿಸಿಕೊಂಡು ಶಾಸ್ತ್ರೀಯವಾಗಿ ಸಂಗ್ರಹಿಸಿ ಪರಿಷ್ಕರಿಸಿ ಪ್ರಕಟಿಸಿರುವುದು" ಎಂದು ಹೇಳುತ್ತಾರೆ.

ಪಿ.ಕೆ. ರಾಜಶೇಖರ ಹಾಗೂ ನಾನು ಈ ಸಂಗ್ರಹ ಕಾರ್ಯವನ್ನು ಇಪ್ಪತ್ತೈದು ವರ್ಷಗಳಿಂದ ಆರಂಭಿಸಿದೆವು. ಆದರೆ ಅಂದಿಗೂ ಇಂದಿಗೂ ಅನೇಕ ಬದಲಾವಣೆ, ಮಾರ್ಪಾಡಾಗಿರುವುದನ್ನು ಕಾಣಬಹುದು. ಪಿ.ಕೆ. ರಾಜಶೇಖರ ಅವರು ಮುನ್ನುಡಿಯಲ್ಲಿ ಇದನ್ನೇ ಪ್ರಸ್ತಾಪಿಸಿದ್ದಾರೆ. "ಮುಂದಿನ ಪೀಳಿಗೆಯಲ್ಲಿ ಕೆಲವರು ಇದಕ್ಕೆ ತಿಲಾಂಜಲಿ ಇತ್ತರು. ಇದು ಈಗ ಪಾವಿತ್ರ್ಯತೆಯನ್ನು ಕಳೆದುಕೊಂಡಿದೆ. ಅನೇಕ ಕಡೆ ಸಾಮಾಜಿಕ ಪ್ರಜ್ಞೆ ಕಾವ್ಯಗಳಲ್ಲಿ ಮಿಂಚಿರುವುದನ್ನು ಕಾಣಬಹುದಾಗಿದೆ. ಇಡೀ ರಾಷ್ಟ್ರದ ಸಮಷ್ಟಿ ಪ್ರಜ್ಞೆಯ ಪ್ರತಿನಿಧಿಯಾಗಿ ಆ ರಾಷ್ಟ್ರದ ಔನ್ನತ್ಯದ ಸಂಕೇತವಾಗಿ ಆವಿರ್ಭವಿಸುವ ಕೃತಿ ವಿಭೂತಿಯನ್ನು ನಾವು ಮಹಾಕಾವ್ಯ ಎಂದು ಕರೆಯುತ್ತೇವೆ. ಈ ಕೃತಿ ಒಬ್ಬ ಕವಿಯಿಂದ ರಚಿತವಾಗಿರದೆ ಸಮಷ್ಟಿ ಕೃತವಾಗಿರುವುದರಿಂದ ಇದನ್ನು ಜನಪದ ಮಹಾಕಾವ್ಯ ಎಂದು ಕರೆಯುತ್ತೇವೆ" ಎಂದು.

ಹಾಡುವ ಸಂಪ್ರದಾಯವೇ ಜನಪದ ಸಾಹಿತ್ಯದ ಆದರಲ್ಲೂ ವಸ್ತುನಿಷ್ಠ ಕಥನ ಗೀತೆಗಳು ಹಾಗೂ ಮಹಾಕಾವ್ಯಗಳ ಉಗಮ ಸ್ಥಾನ. ಮಹಾಕಾವ್ಯಗಳನ್ನು Tribal, National, Literary, Folk Epic ಗಳೆಂದು ವಿಂಗಡಿಸಬಹುದು. Heroic Epic

(ವೀರಕಾವ್ಯ) ಏಕಕವಿಕೃತವಾದ ಮಹಾಕಾವ್ಯವನ್ನು Epic Art ವರ್ಗಕ್ಕೆ ಸೇರಿಸುತ್ತಾರೆ. ಸಮಷ್ಟಿ ಪ್ರಜ್ಞೆಯನ್ನು ಪ್ರತಿನಿಧಿಸಿದಾಗ ಈ ಕಾವ್ಯಗಳು ಮೇರು ಕೃತಿಯಾಗುತ್ತವೆ.

ಬಾಯಿಂದ ಬಾಯಿಗೆ ಬರುವಾಗ ಅನೇಕ ಹೊಸ ಘಟನೆಗಳು ಸೃಷ್ಟಿಯಾಗಿ, ಅದು ಬೆಳೆಯುತ್ತಾ ಹೋಗುತ್ತದೆ. ಆಗ ಅದು Acretion Epic ಆಗುತ್ತದೆ. ಅನಾಗರೀಕ ಜನಾಂಗದವರಿಂದ ಅನೇಕ ತಲೆಮಾರುಗಳಲ್ಲಿ ಅದು ಬೆಳೆದು ಬಂದುದರಿಂದ "Primitive Epic" ಎನ್ನುವುದುಂಟು. ಒಬ್ಬರ ಬಾಯಿಂದ ಒಬ್ಬರ ಬಾಯಿಗೆ ಬರುವುದರಿಂದ 'Oral Epic' ಎನ್ನಬಹುದು. ಇಡೀ ಜನಾಂಗದ ಆಚಾರ, ವಿಚಾರ, ರೀತಿ, ನೀತಿ, ನಡವಳಿಕೆಗಳನ್ನು ಧ್ವನಿಸುವುದರಿಂದ ಸಾಂಸ್ಕೃತಿಕ ಮಹಾಕಾವ್ಯವೆಂದೂ ಕರೆಯಬಹುದು.

ಮಾದೇಶ್ವರ ಮಹಾಕಾವ್ಯ ಹಲವರ ಹೃದಯಗಳ ಚಿತ್ತಸ್ಪಂದನದಿಂದ ಸೃಷ್ಟಿಯಾದುದು. ರಾ. ಗೌ. ಅವರು ಮಾದೇಶ್ವರ ಕಾವ್ಯವನ್ನು "ಲಾವಣಿಗಳ ಸರಣಿ" (Ballad Epic) ಎನ್ನುತ್ತಾರೆ.

ಜನಪದ ಮಹಾಕಾವ್ಯದ ಲಕ್ಷಣವನ್ನು ಪಿ.ಕೆ. ರಾಜಶೇಖರ ಅವರು ಹೀಗೆ ಗುರುತಿಸುತ್ತಾರೆ. "ಇವರು ಹಾಡುವ ಕಾವ್ಯಗಳಲ್ಲಿ ನಿತ್ಯಸಿದ್ಧ ಪದಗುಚ್ಛಗಳಿರುತ್ತವೆ. ಪುನರಾವರ್ತನೆ, ಪದ್ಯಕ್ಕೇ ಮೀಸಲಾದ ಕೆಲವು ವಿಶೇಷ ಶಬ್ದಗಳಿರುತ್ತವೆ. ಒಂದೇ ಪ್ರಸಂಗವನ್ನು ಕಾಲಾವಕಾಶಕ್ಕೆ ತಕ್ಕ ಹಾಗೆ ಹಾಡಿದರೂ ಅಂತ್ಯದ ಭಾವನೆ ಸ್ಫುರಿಸುತ್ತದೆ. ಕಲಾವಿದ, ಜನರ ಮನೋಭಾವಕ್ಕೆ ತಕ್ಕ ಹಾಗೆ ಹಾಡುತ್ತಾನೆ. ಪಾಂಡಿತ್ಯ ಪ್ರದರ್ಶನವಿಲ್ಲ, ಶೈಲಿ, ವರ್ಣನೆಯಲ್ಲಿ ವೈವಿಧ್ಯತೆ ಇಲ್ಲದಿರಬಹುದು. ಬೆಳೆವ ಕಾವ್ಯದಲ್ಲಿ ಆ ಕಾಲದ ಆಚಾರ, ವಿಚಾರ, ಸಂಸ್ಕೃತಿಯನ್ನು ಬಿಂಬಿಸುತ್ತಾರೆ.

"ಜಾನಪದ ಮಹಾಕಾವ್ಯ ಒಬ್ಬನ ಸೃಷ್ಟಿಯಲ್ಲ , ಒಂದು ದಿನದ ಸೃಷ್ಟಿಯಲ್ಲ ಸಮಷ್ಟಿಯ ಸೃಷ್ಟಿ. ಇದು ನಿರಂತರವಾಗಿ ಬೆಳೆದು ಬರುತ್ತದೆ. ಪುರಾಣ ಕಥೆಗಳು ಜೀವನಾನುಭವಗಳ ಅಭಿವ್ಯಕ್ತಿಯಾದ ಐತಿಹ್ಯ ಕಥೆಗಳನ್ನೂ ತನ್ನಲ್ಲಿ ಲೀನವಾಗಿಸಿಕೊಂಡು ಬೆಳೆಯುತ್ತದೆ." ಎಂಬುದು ಫ್ರಾನ್ಸಿನ ಬಿ. ಗುಮ್ಮೆರೆ ಅವರ ಅಭಿಪ್ರಾಯ.

ಮಾದೇಶ್ವರ ಕಾವ್ಯ ಇಡೀ ಜನಾಂಗದ, ರಾಷ್ಟ್ರದ ಸೃಷ್ಟಿ. ಇದು ರಾಷ್ಟ್ರೀಯ ಕಾವ್ಯ, ಜನತಾ ಕಾವ್ಯ.

**ಮಲೆಯ ಮಾದೇಶ್ವರರನ್ನು ಕುರಿತು ಅಧ್ಯಯನ:**

೧೭೫೦ರಿಂದ ೧೯೯೯ರವರೆಗೆ ಮಾದೇಶ್ವರರ ಬಗೆಗೆ ಬಂದಿರುವ ಕಾವ್ಯ, ಸಂಸ್ಮರಣ ಸಂಪುಟಗಳು, ಸುಪ್ರಭಾತಗಳು, ಕಾದಂಬರಿ, ನಾಟಕಗಳು, ಜನಪದ

ಪದ್ಯ ಹಾಗೂ ಗದ್ಯ ಕೃತಿಗಳು, ವಚನಗಳು, ತಮಿಳು ಸಾಹಿತ್ಯ, ಪತ್ರಿಕೆಗಳು, ತಾಮ್ರಶಾಸನ, ಶಿಲಾ ಶಾಸನಗಳು - ಇವು ಮಾದೇಶ್ವರರ ಬಗೆಗೆ ತಿಳಿದುಕೊಳ್ಳಲು ಸಹಾಯಕವಾಗಿವೆ.

**ಶಿಷ್ಟ ಸಾಹಿತ್ಯದಲ್ಲಿ ಮಾದೇಶ್ವರರು :** ಮಾದೇಶ್ವರರ ಬಗೆಗೆ ತಿಳಿದುಕೊಳ್ಳಲು ಸಿಗುವ ಶಿಷ್ಟಕಾವ್ಯವೆಂದರೆ ೧೭೫೦ರಲ್ಲಿ ಕೊಳ್ಳೇಗಾಲ ತಾಲ್ಲೂಕಿನ ಮಾದೇಶ್ವರ ಬೆಟ್ಟದ ಹತ್ತಿರವಿರುವ ಮಿಣ್ಯ ಗ್ರಾಮದ ಗುರುಸಿದ್ಧ ಕವಿಯ "ಮಾದೇಶ್ವರ ಸಾಂಗತ್ಯ". ಇದು ಸಾಂಗತ್ಯದಲ್ಲಿ ರಚಿತವಾಗಿದೆ. ಕಾವ್ಯವು ಮೂರು ಸಂಧಿಗಳು ಮುನ್ನೂರರಪತ್ತು ಪದ್ಯಗಳನ್ನೊಳಗೊಂಡಿದೆ. ಮಾದೇಶ್ವರ ಕ್ಷೇತ್ರದ ವರ್ಣನೆ, ಮಾದೇಶ್ವರರು ಲಿಂಗವಾದುದು ಹಾಗೂ ಜಾತ್ರೆಯ ವರ್ಣನೆ ಬರುತ್ತದೆ. ಇದರಲ್ಲಿ ಮಾದೇಶ್ವರರ ಜೀವನಕ್ಕಿಂತ ವರ್ಣನೆಗಳೇ ಹೆಚ್ಚಾಗಿ ಬರುತ್ತದೆ.

೧೮೩೮ರಲ್ಲಿದ್ದ ಜೈನ ಕವಿ ದೇವಚಂದ್ರನ ರಾಜಾವಳಿ ಕಥೆಯಲ್ಲಿ ಮಾದೇಶ್ವರರ ಬಗೆಗೆ ಸ್ವಲ್ಪ ಉಲ್ಲೇಖವಿದೆ. ಪುರಾಣ, ಚರಿತ್ರೆ ಹಾಗೂ ಸ್ಥಳ ವಿವರಗಳಿಗೆ ಸಂಬಂಧಿಸಿದ ಅನೇಕ ವಿಚಾರಗಳು ಬರುತ್ತವೆ. ಈ ಕವಿ ಜನಪದ ಕಥೆಗಳ ಆಧಾರದ ಮೇಲೆ ಮಾದೇಶ್ವರರನ್ನು ದೇವರನ್ನಾಗಿ ಚಿತ್ರಿಸಿದ್ದಾನೆ. ಕೆಲವು ಕಲ್ಪನೆಗಳೂ ಬೆರೆತಿವೆ. ಜೈನ ಗ್ರಂಥದ ಹಿನ್ನೆಲೆಯಲ್ಲೇ ಮಾದೇಶ್ವರರಿಗೆ ಸಂಬಂಧಿಸಿದ ವಿಷಯಗಳನ್ನು ನೋಡಿದ್ದಾನೆ.

"ನಿರಂಜನ ವಂಶ ರತ್ನಾಕರ" ೧೯೩೨ನೇ ಇಸವಿಯಲ್ಲಿ ಪ್ರಕಟವಾಗಿದೆ. ಇದನ್ನು ಫ.ಗು. ಹಳಕಟ್ಟಿಯವರು ಸಂಪಾದಿಸಿದ್ದಾರೆ. ಈ ಗ್ರಂಥದ ವಿಷಯಗಳನ್ನು ಸ್ಥಳ ಪುರಾಣದಿಂದ ಕವಿ ಸಂಗ್ರಹಿಸಿರುವಂತೆ ಇದರಲ್ಲಿ ಹೇಳಿದೆ. ಇದನ್ನು ಬರೆದ ಕವಿ ಯಾರೆಂಬುದೂ ತಿಳಿದಿಲ್ಲ.

ಕುಂತೂರಿನ ಸಿ. ಸಂಗಪ್ಪ ಶಾಸ್ತ್ರಿಗಳು ೧೯೩೩ರಲ್ಲಿ ಬರೆದ "ಶ್ರೀ ಸುತ್ತೂರು ಸಿಂಹಾಸನದ ಗುರುಪರಂಪರೆ" ಭಾಮಿನಿ ಷಟ್ಪದಿಯ ಸಾವಿರ ಪದ್ಯಗಳಿಂದ ರಚಿತವಾದ ಕೃತಿ. ಇದರಲ್ಲಿ ಮಾದೇಶ್ವರನ ಚರಿತ್ರೆಗೆ ಸಂಬಂಧಿಸಿದ ಕೆಲವು ಸಂಗತಿಗಳಿಗೆ ೨೧ ರಿಂದ ೫೬ನೇ ಪದ್ಯದವರೆಗೆ ಮಾದೇಶ್ವರರ ಬಗೆಗೆ ಉಲ್ಲೇಖವಿದೆ. ಆತನ ಬಾಲ್ಯ ಸುತ್ತೂರು ಮಠದಲ್ಲಿ ಹೇಗಾಯಿತು ಎಂಬುದಿದೆ. ಇಲ್ಲಿ ಅವನು ಅನೇಕ ಪವಾಡಗಳನ್ನು ಮಾಡುತ್ತಾನೆ. ಹಾವು ಕಚ್ಚಿದವನನ್ನು ಬದುಕಿಸುವುದು, ರಾಗಿ ಬೀಸುವ ಪವಾಡವೆಸಗುವುದು, ದನಗಳನ್ನು ಆರೋಗ್ಯವಂತವಾಗಿ ಮಾಡುವುದನ್ನು ಕಾಣಬಹುದು.

ತಮಿಳರು ಉಡುಕುವಾದ್ಯ ನುಡಿಸಿಕೊಂಡು ಮಾದೇಶ್ವರನ ಸ್ತೋತ್ರ ಹಾಡುವುದನ್ನು ಕಾಣಬಹುದು. ತಮಿಳು ಸಾಹಿತ್ಯದಲ್ಲಿ ಮಾದೇಶ್ವರರ ಬಗೆಗೆ ಸಿಗುವುದು ಅತ್ಯಲ್ಪ.

ಜನಪದ ಸಾಹಿತ್ಯದ ಆಧಾರದ ಮೇಲೆ, ತಾಮ್ರ, ಶಿಲಾಶಾಸನಗಳ ಆಧಾರದ ಮೇಲೆ ಹಲವಾರು ಕೃತಿಗಳು ಹೊರಬಂದಿವೆ.

ತಾಮ್ರ ಮತ್ತು ಶಿಲಾ ಶಾಸನಗಳಲ್ಲೂ ಮಾದೇಶ್ವರರ ಬಗೆಗೆ ತಿಳಿದು ಬರುವ ವಿಷಯಗಳು ಉಪಸಾಮಗ್ರಿಗಳಾಗುತ್ತವೆ. ಹರದನಹಳ್ಳಿ, ಹೈದರಾಲಿಯ ತಾಮ್ರ ಶಾಸನಗಳಲ್ಲಿ ಮಾದೇಶ್ವರ ದೇವಾಲಯದ ೧೭ನೇ ಶತಮಾನದ ಶಿಲಾಶಾಸನಗಳಲ್ಲಿ ಮಾದೇಶ್ವರರ ಬಗೆಗೆ ಉಲ್ಲೇಖಗಳಿವೆ. ಹೈದರಾಲಿ ಶಾಸನ ಕ್ರಿ.ಶ. ೧೭೭೬ರಲ್ಲಿ ಸಿದ್ಧವಾದುದು. ಇವುಗಳಲ್ಲಿ ಸಿಗುವ ಮಾಹಿತಿಗಳೂ ಅಲ್ಪ.

**ಕ್ಷೇತ್ರ ಕಾರ್ಯ**

ಮಲೆಯ ಮಾದೇಶ್ವರರ ಬಗೆಗೆ ತಿಳಿದುಕೊಳ್ಳಲು ಮೈಸೂರು, ತುಮಕೂರು, ಮಂಡ್ಯ, ಬೆಂಗಳೂರು, ಜಿಲ್ಲೆಗಳಲ್ಲಿರುವ ಕೆಲವು ಕಂಸಾಳೆ ಕಲಾವಿದರು, ನಾಟಕಕಾರರು, ಲೇಖಕರು, ಮಾದೇಶ್ವರರ ಬಗೆಗೆ ಮಾಹಿತಿ ಒದಗಿಸುವ ಕೆಲವು ಹಿರಿಯರನ್ನು ಭೇಟಿ ಮಾಡಿ, ವಿಷಯವನ್ನು ಸಂಗ್ರಹ ಮಾಡಲಾಯಿತು. ಆಗ ಆದ ಕ್ಷೇತ್ರಾನುಭವ ಅಪಾರ.

ಕಂಸಾಳೆ ಕಲಾವಿದರನ್ನು ಹಿಡಿದು, ಅವರಿಂದ ಕಥೆಯನ್ನು ಹೇಳಿಸಲು ಸಾಕಷ್ಟು ಶ್ರಮ ವಹಿಸಬೇಕಾಯಿತು. ವಿಷಯ ಸಂಗ್ರಹಿಸಿ ಮಾದೇಶ್ವರ ಕ್ಷೇತ್ರ, ಸುತ್ತೂರು, ಕುಂತೂರು, ಮುಡುಕುತೊರೆ, ಸರಗೂರು, ಸಿಂಗಾನಲ್ಲೂರು, ಕಾಮಗೆರೆ, ರಾಮಾಪುರ, ಗೋಪಿಶೆಟ್ಟಿಪಾಳ್ಯ, ಕೊಳ್ಳೇಗಾಲ, ವಡೆಯರಪಾಳ್ಯ, ನರಸೀಪುರ, ಕನಕಪುರ, ಉಪ್ಪಾರದೊಡ್ಡಿ, ಮಳವಳ್ಳಿ, ಕಿರುಗಾವಲು, ಮೈಸೂರು, ಮಧುವನ ಹಳ್ಳಿ ಮುಂತಾದ ಊರುಗಳನ್ನು ಸುತ್ತಿ ಅಲ್ಲಿ ಮಾದೇಶ್ವರರಿಗೆ ಸಂಬಂಧಿಸಿದ ಐತಿಹ್ಯಗಳನ್ನು ಹಾಗೂ ಇನ್ನಿತರ ವಿಷಯಗಳನ್ನು ಸಂಗ್ರಹಿಸಲಾಯಿತು. ಇಡೀ ರಾತ್ರಿ ಕಲಾವಿದರಿಂದ ಹಾಡಿಸಿ ಧ್ವನಿಮುದ್ರಣ ಮಾಡಿಕೊಂಡು ಅಲ್ಲಿನ ಪ್ರಮುಖ ಸ್ಥಳಗಳು, ವ್ಯಕ್ತಿಗಳು, ಕಲಾವಿದರುಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು.

ಕಂಸಾಳೆ ಕಲಾವಿದರಿಗೆ ಹಲವಾರು ಕಥೆಗಳು ಗೊತ್ತಿದ್ದರೂ ಹಣದ ಆಮಿಷದಿಂದಾಗಿ ಅವರು ಪೂರ್ತಿಯಾಗಿ ಹೇಳುವುದಿಲ್ಲ. ಹಣದಾಸೆಗೆ ಕೆಲವರು ಕಥೆಯನ್ನು ಬೆಳೆಸಿಕೊಂಡು ಹೋಗುವುದೂ ಉಂಟು. ತಾಳ್ಮೆ, ಸಂಯಮ, ಶ್ರಮ, ಜಾಣ್ಮೆಯಿಂದ ಹಾಡಿಸಿಯೇ ತೀರುವೆ ಎಂಬ ದೃಢ ಸಂಕಲ್ಪಗಳಿಂದ

ಹಾಡಿಸಬೇಕಾಗುತ್ತದೆ. ಕಂಸಾಳೆ ಕಥೆಗಳನ್ನು ಧ್ವನಿಮುದ್ರಿಸಿಕೊಳ್ಳಲು ಹೊರಟಾಗ ಕೆಲವು ಕಂಸಾಳೆಯವರು ಹಣಕ್ಕೆ ಆಸೆಪಟ್ಟಿದ್ದೂ ಉಂಟು. ಕೆಲವರು ಎಲ್ಲಿ ಧ್ವನಿಮುದ್ರಣ ಮಾಡಿಕೊಂಡು, ಅದನ್ನೇ ಹಾಕಿಬಿಟ್ಟು ಮುಂದೆ ನಮ್ಮಿಂದ ಜನರು ಹಾಡಿಸದೆ ಇರುತ್ತಾರೆಯೋ ಎಂಬ ಭಯದಿಂದ ಹಾಡದಿದ್ದುದೂ ಉಂಟು. "ಮಲೆಯ ಮಾದೇಶ್ವರರ ಬಗ್ಗೆ ಸಂಶೋಧನೆಗೆ ಹೊರಟಿದ್ದೇನೆ, ನಿಮ್ಮ ಕಥೆ ಹಾಡುಗಳಲ್ಲಿ ಏನು ವೈವಿಧ್ಯತೆಗಳು ಇವೆ ಎಂಬುದನ್ನು ನೋಡಲು ಧ್ವನಿ ಮುದ್ರಿಸಿಕೊಳ್ಳಲಾಗುವುದು, ವ್ಯಾಪಾರದ ದೃಷ್ಟಿಯಿಂದ ಮಾಡುವುದಿಲ್ಲ" ಎಂದು ಹೇಳಿ ಅವರನ್ನು ಸಮಾಧಾನಿಸಿ, ಊರಿನ ಪ್ರಮುಖರು, ಗಣ್ಯ ವ್ಯಕ್ತಿಗಳ ಸಹಾಯದಿಂದ ಧ್ವನಿಮುದ್ರಿಸಿಕೊಳ್ಳಲಾಯಿತು.

ವಡೆಯರ ಪಾಳ್ಯದ ಹತ್ತಿರದ ಉಮ್ಮತ್ತೂರಿನ ಕಲಾವಿದರಾದ ಚಿಕ್ಕ ಬಸವಶೆಟ್ಟಿ ಎಂಬುವವರನ್ನು ಮಾತನಾಡಿಸಿದಾಗ, ಚೆನ್ನಾಗಿಯೇ ಮಾತನಾಡಿದರು. ಅವರ ಛಾಯಾ ಚಿತ್ರವನ್ನು ತೆಗೆದುಕೊಂಡು ಧ್ವನಿ ಮುದ್ರಣ ಮಾಡಲು ಸಿದ್ಧವಾಗಲು, ಅವರು ರಾತ್ರಿ ಬರುತ್ತೇನೆಂದು ಹೇಳಿ ಮಾತು ಕೊಟ್ಟು ಬರಲೇ ಇಲ್ಲ. ಅಲ್ಲಿಂದ ನಿರಾಸೆಯಿಂದ ಹೊರಡಬೇಕಾಯಿತು.

ಮತ್ತೊಂದು ದಿನ ಮಳವಳ್ಳಿಯ ಕಂಸಾಳೆ ಮಹಾದೇವಪ್ಪನವರನ್ನು ಕಂಡು ಮಾದೇಶ್ವರರ ಕಥೆಯನ್ನು ಹಾಡಿ ಎಂದಾಗ "ನೀವು ನಮ್ಮ ಕಥೆ ಧ್ವನಿ ಮುದ್ರಿಸಿಕೊಂಡು ಹಣ ಮಾಡಿಕೊಳ್ಳೀರಿ, ನಾನು ಬೆಂಗಳೂರಿಗೆ ಬರ್ತೀನಿ, ಹಾಡ್ತೀನಿ, ನಿಮ್ಮ ವಿಳಾಸ ಕೊಟ್ಟು ಹೋಗಿ, ನೀವು ಕಾಗದ ಹಾಕಿದರೆ ಬಂದು ಹಾಡುತ್ತೇನೆ" ಎಂದು ಹೇಳಿ ಕೈಕೊಟ್ಟರು.

ಅದೇ ಊರಿನಲ್ಲಿ ಹರಿಜನ ಕಲಾವಿದರೊಬ್ಬರು ಕಥೆ ಮಾಡುತ್ತೇನೆ ಎಂದು ಮುಂದೆ ಬರುತ್ತಿದ್ದವರನ್ನು ಮಹಾದೇವಪ್ಪ ಅವರು ಹೋಗಬೇಡ ಎಂದು ಮುರಿದರು.

ಮಧುವನಹಳ್ಳಿಯ ಮಾದಶೆಟ್ಟಿ ಮತ್ತು ಸಂಗಡಿಗರು ಮಧ್ಯಾಹ್ನದಿಂದ ರಾತ್ರಿಯವರೆಗೂ ಹಾಡಿದರು. ಕಾಫಿ ಕುಡಿಯಲೊಮ್ಮೆ, ಬೀಡಿ ಸೇದಲೊಮ್ಮೆ ಮಾತ್ರ ವಿಶ್ರಾಂತಿ ಪಡೆದರು. ಅವರನ್ನು ಸಂದರ್ಶಿಸಿದಾಗ "ಸ್ವಾಮಿ ನಾನು ಸಂಪೂರ್ಣ ಹಾಡುವುದೇ ಕಡಿಮೆ. ರೇಡಿಯೋಕ್ಕೆ ಹತ್ತು ನಿಮಿಷಗಳು ಮಾತ್ರ ಹಾಡುತ್ತಿದ್ದೆ. ಈಗ ನಿಮಗೋಸ್ಕರ ಉಸಿರುಕಟ್ಟಿಕೊಂಡು ಹಾಡಬೇಕಾಯಿತು" ಎಂದು ಕಂಸಾಳೆಯ ಕಥೆಗಳನ್ನು ಸಂಪೂರ್ಣವಾಗಿ ಹಾಡಿ ಮುಗಿಸಿದರು.

ಮಳವಳ್ಳಿ ಬಸ್ ನಿಲ್ದಾಣದಲ್ಲಿ ಕಂಸಾಳೆ ಹಿಡಿದು ಬಂದ ಕಿರುಗಾವಲು ಮಾದಯ್ಯ ಅವರನ್ನು "ಮಾದೇಶ್ವರರ ಕಥೆಯನ್ನು ಹಾಡುತ್ತೀರಾ?" ಎಂದು ಕೇಳಿದಾಗ ಅವರು

"ಊರಿಗೆ ಬನ್ನಿ ಹಾಡೋಣ" ಎಂದರು ಸಂತಸದಲ್ಲಿ. ಕೆಲವು ದಿನಗಳಾದ ಮೇಲೆ ಒಂದು ಕಾಗದವನ್ನು ಬರೆದು ಇಂಥ ತಾರೀಖು ಬರುತ್ತೇನೆ ಎಂದು ಹಾಕಲು ಅವರಿಂದ ಮಾರೋಲೆ ಬರಲಿಲ್ಲ. ಅವರ ಊರಿಗೇ ಹೋಗಬೇಕಾಯಿತು. ಅವರು ಊರಿನಲ್ಲಿ ಸಿಕ್ಕಿ, ತಮ್ಮ ಮನೆಯ ಹತ್ತಿರ ಕರೆದುಕೊಂಡು ಹೋದರು. ಅವರನ್ನು "ಈ ಹೊತ್ತು ಮಾದೇಶ್ವರರ ಕಥೆಯನ್ನು ಹಾಡುತ್ತೀರಾ?" ಎಂದಾಗ ಅವರು, "ಸೊಲ್ಲಿಸುವವರೊಬ್ಬರನ್ನು ಕರೆತರಬೇಕು, ಅದಕ್ಕೆ ಬಸ್ಸಿಗೆ ಸ್ವಲ್ಪ ಹಣಬೇಕಲ್ಲಾ" ಎಂದು ರಾಗ ಆರಂಭಿಸಿದರು. 'ಆಗಲಿ' ಎಂದು ಹಣವನ್ನು ಕೊಟ್ಟ ಮೇಲೆ ಬೇರೆ ಊರಿನಿಂದ ಒಬ್ಬರು ಸೊಲ್ಲಿಸುವವರನ್ನು ಕರೆತಂದರು. ಅಲ್ಲಿಯವರೆಗೆ ಆ ಊರ ಶಾಲೆಯಲ್ಲಿ ಕುಳಿತುಕೊಳ್ಳಬೇಕಾಯಿತು. ಮತ್ತೆ ಮಾದಯ್ಯನವರ ತಾಯಿ ಬಂದು "ದೇವರ ಪೂಜೆ ಮಾಡಬೇಕು ಸ್ವಲ್ಪ ಹಣ....." ಎಂದು ಹಿಡಿದು ಮಾತನಾಡಿದಾಗ, ಸ್ವಲ್ಪ ಹಣವನ್ನು ಕೊಟ್ಟಿದ್ದೂ ಆಯಿತು. ಕೊನೆಗೆ ಆ ಊರಿನವರೊಬ್ಬರ ಮನೆಯಲ್ಲಿ ಕಥೆ ಹಾಡಲು ವ್ಯವಸ್ಥೆ ಮಾಡಿದರು. ರಾತ್ರಿ ಹತ್ತು ಘಂಟೆಗೆ ಕಥೆ ಆರಂಭಿಸಿ ಬೆಳಕು ಹರಿಯುವವರೆಗೂ ಹಾಡಿ ಮುಗಿಸಿದರು.

ಕನಕಪುರ ತಾಲ್ಲೂಕಿನಲ್ಲಿ ಒಂದು ಕಂಸಾಳೆ ಕಥೆಯನ್ನು ಧ್ವನಿ ಮುದ್ರಣ ಮಾಡಬೇಕು ಎಂದು ದೇಗುಲಮಠಕ್ಕೆ ಹೋಗಿ, ಅಲ್ಲಿ ಸ್ವಾಮಿಗಳನ್ನು ಕೇಳಲಾಯಿತು. ಆಗ ಅವರ ಪಕ್ಕದಲ್ಲಿದ್ದ ಪ್ರಾಥಮಿಕ ಶಾಲಾ ಉಪಾಧ್ಯಾಯರೊಬ್ಬರು "ಮಳಗಾಳಿನ ಮರಿ ಎಸ್. ಮಾದಯ್ಯ ಎಂಬುವವರನ್ನು ಕರೆಸುತ್ತೇನೆ ಎಂದರು. ಅವರು ಬರಲು ಒಪ್ಪದೆ ಇರಲು, ಉಪಾಧ್ಯಾಯರು ಬಂದು ಹೇಳಿದರು. "ಆ ಊರಿನ ಪಂಚಾಯಿತಿ ಅಧ್ಯಕ್ಷರು ಹೇಳಿದರೂ ಬರಲಿಲ್ಲ. ಈಗ ಶಿವಳ್ಳಿಯಲ್ಲಿ ಹಾಡುವವರಿದ್ದಾರೆ, ಸೈಕಲಿನಲ್ಲೇ ಹೋಗೋಣ ಬನ್ನಿ" ಎಂದು ಕರೆದುಕೊಂಡು ಹೊರಟರು. ದಾರಿಯಲ್ಲಿ ಹೋಗುವಾಗ ಮರಿ ಎಸ್. ಮಾದಯ್ಯ ಸಿಕ್ಕಿದರು. ಎಲ್ಲರನ್ನೂ ಫಲಹಾರ ಮಂದಿರಕ್ಕೆ ಕರೆದುಕೊಂಡು ಹೋಗಿ ಕಾಫಿ, ತಿಂಡಿಯನ್ನು ಕೊಡಿಸಿದ್ದಾಯಿತು. ಇದಾದ ಮೇಲೆ ಆ ಉಪಾಧ್ಯಾಯರು "ಪತ್ರೆ (ಭಂಗಿಸೊಪ್ಪು) ತೆಗೆದುಕೊಳ್ಳಲು ಸ್ವಲ್ಪ ಹಣಕೊಡಿ" ಎಂದು ಹಣ ಪಡೆದು ಪತ್ರೆಯ ದಮ್ಮೆಳೆದು "ಈಗ ನನಗೆ ಸ್ಫೂರ್ತಿ ಬಂದಿದೆ ಧ್ವನಿಮುದ್ರಿಸಿಕೊಳ್ಳಿ" ಎಂದು ಹಾಡತೊಡಗಿದರು. ಈ ಧ್ವನಿಮುದ್ರಣ ಕಾರ್ಯವು ದೇಗುಲಮಠದಲ್ಲಿ ಆಯಿತು. ಆಗಾಗ ಭಂಗಿ ಸೊಪ್ಪಿನ ಹೊಗೆ ಸೇದುತ್ತಾ ಗತ್ತಿನಿಂದ ಅವರು ಹಾಡಿದರು. ಕನಕಪುರದ ಅವರ ಶಿಷ್ಯರಾದ ಪಂಚಲಿಂಗಪ್ಪ ಅವರನ್ನು ಸೊಲ್ಲಿಗೆ ಸೇರಿಸಿಕೊಂಡರು. ಆಮೇಲೆ ಅವರೇ ಸ್ವಂತ ಮಾದೇಶ್ವರರ ಎರಡು ಕಥೆಗಳನ್ನು ಹಾಡಿದರು.

ಆಲ್ಗೋಡಿನ ಪುಟ್ಟಮಾದಯ್ಯ ಅವರನ್ನು ನಮ್ಮ ಭಾವನವರು ತಮ್ಮ ಮನೆಗೆ ಕರೆದುಕೊಂಡು ಬಂದರು. ಪುಟ್ಟಮಾದಯ್ಯ ಅವರಿಗೆ ಜ್ವರ ಬಂದಿದ್ದರೂ

ಬೆಳಗಾಗುವವರೆಗೆ ಕಥೆಯನ್ನು ಹಾಡಿದರು. ಅಂದು ವಿದ್ಯುಚ್ಛಕ್ತಿ ನಿಂತು ಹೋದುದರಿಂದ ಮೇಣದ ಬತ್ತಿಯನ್ನೇ ಹೊತ್ತಿಸಿ ಧ್ವನಿ ಮುದ್ರಣ ಕಾರ್ಯವನ್ನು ಮಾಡಲಾಯಿತು.

ಬೆಂಗಳೂರಿನಲ್ಲಿರುವ ವರಕೋಡು ಮಾದಯ್ಯ ಮತ್ತು ಹುಣಸೂರಿನ ಸಿ. ಮಾದಯ್ಯ ಅವರನ್ನು ಬೆಂಗಳೂರಿನ ಅರಳೇಪೇಟೆಯಲ್ಲಿ ಭೇಟಿ ಮಾಡಿ ಬಂದ ವಿಷಯವನ್ನು ಅವರಲ್ಲಿ ಪ್ರಸ್ತಾಪಿಸಲು ಅವರು "ಆಗಲೀ ಸ್ವಾಮಿಯವರೇ" ಎಂದು ಹತ್ತಾರು ದಿನಗಳು ಹಾಡಿ ಮುಗಿಸಿದರು. ಇವರ ಸಹಕಾರವನ್ನು ಎಂದೆಂದೂ ಮರೆಯುವಂತಿಲ್ಲ.

ಮದ್ದೂರು ತಾಲ್ಲೂಕಿನ ಉಪ್ಪಾರದೊಡ್ಡಿಯ ಪೂಜಾರಿ ಸಿದ್ದಶೆಟ್ಟರಿಗೆ ಪತ್ರ ಬರೆದು ಉಪ್ಪಾರದೊಡ್ಡಿಗೆ ಹೋದಾಗ ಸತ್ಕರಿಸಿ ಸಂತೋಷದಿಂದ ಹಾಡಿದರು. ಮೊದಲು ಹಾಡಿದ ಪೂಜಾರಿ ಸಿದ್ಧಶೆಟ್ಟಿಯವರಿಗೆ. ಎಂಬತ್ತಕ್ಕೂ ಹೆಚ್ಚು ವಯಸ್ಸಾಗಿತ್ತು. ಸುಮಾರು ಇಪ್ಪತ್ತು ನಿಮಿಷಗಳು ನಿರರ್ಗಳವಾಗಿ ಕಥೆಯನ್ನು ಮಾಡಿದರು. ಇಳಿ ವಯಸ್ಸಿನ ದೆಸೆಯಿಂದ ಮರೆವು, ಪುನರಾವರ್ತನೆ ಆರಂಭವಾಯಿತು. ಆಗ ಅವರ ಶಿಷ್ಯರಾದ ಐವತ್ತು ವರ್ಷದ ಈರಯ್ಯ ಅವರು ಸರಾಗವಾಗಿ ಕಥೆಗಳನ್ನೆಲ್ಲಾ ಹಾಡಿ ಮುಗಿಸಿದರು.

ಕಂಸಾಳೆಯ ಕಲಾವಿದರ ಅನ್ವೇಷಣೆ, ಧ್ವನಿಮುದ್ರಣವನ್ನು ಮತ್ತೆ ಪ್ರತಿ ಮಾಡುವಾಗ ಅನುಮಾನಗಳು ಬಂದು ಮತ್ತೆ ಅವರನ್ನು ಕೇಳಿ ಬರೆದುಕೊಳ್ಳುವ ಸಂದರ್ಭಗಳೂ ಬಂದವು.

ಮಾದೇಶ್ವರ ಬೆಟ್ಟಕ್ಕೆ ಅನೇಕ ಸಾರಿ ಭೇಟಿ ಕೊಡಬೇಕಾಯಿತು. ಕರ್ನಾಟಕದ ಎಲ್ಲೆಡೆಗಳಿಂದ ಕಂಸಾಳೆಯವರು ಮಾದೇಶ್ವರ ಬೆಟ್ಟಕ್ಕೆ ಬರುತ್ತಾರೆ. ಅವರಿಂದ ಧ್ವನಿಮುದ್ರಣ ಮಾಡಿಕೊಳ್ಳೋಣವೆಂದು ಹೋಗಬೇಕಾಯಿತು. ಜಾತ್ರೆ ಸಮಯಗಳಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಾರೆಂದು ಹೋಗಿ ಅಲ್ಲಿಗೆ ಬಂದಿದ್ದ ಕಂಸಾಳೆಯವರನ್ನು ಮಾತನಾಡಿಸಿ 'ನೀವು ಯಾವ ಊರು? ಮಾದೇಶ್ವರರ ಬಗೆಗೆ ಎಷ್ಟು ಕಥೆಗಳನ್ನು ಹಾಡುತ್ತೀರಿ? ಹೇಳುತ್ತೀರಾ?" ಎಂದು ಹಲವಾರು ಪ್ರಶ್ನೆಗಳನ್ನು ಕೇಳಲಾಯಿತು. ಅದಕ್ಕೆ ಅವರು "ನೀವು ಒಂದು ಕಾಗದ ಹಾಕಿಸಿ ಬರ್‍ತಿವಿ, ಈಗಾಗೋಕ್ಕಿಲ್ಲ ಪರ ಮಾಡುವವರ ಅನ್ನರಾಶಿ ಪೂಜೆ ಮಾಡಿ ಹಾಡಬೇಕು, ಇಲ್ಲದೇ ಹೋದ್ರೆ ಕಾಣಿಕೆ ಬರೋದು ತಪ್ಪೋಗ್ತದೆ" ಎಂದು ಹೇಳಿ ತಪ್ಪಿಸಿಕೊಂಡವರೇ ಹೆಚ್ಚು. ಈ ಜಾತ್ರೆಗಳ ಸಮಯದಲ್ಲಿ ಇವರಿಗೆ ಸಂಪಾದನೆ ಜೋರು. ಆದ್ದರಿಂದ ಅದನ್ನು ತಪ್ಪಿಸಿಕೊಳ್ಳಲು ಅವರು ಇಷ್ಟಪಡುವುದಿಲ್ಲ.

ಹಲವರು ಕಂಸಾಳೆಯ ಗುಡ್ಡರು ಸಾಲೂರು ಮಠಕ್ಕೆ ಗುರು ಕಾಣಿಕೆಯನ್ನು ಒಪ್ಪಿಸಲು ಬರುತ್ತಿದ್ದರು. ಮಠದಲ್ಲಿದ್ದ ಪ್ರೌಢಶಾಲೆಯ ಉಪಾಧ್ಯಾಯರೊಬ್ಬರನ್ನುದ್ದೇಶಿಸಿ

"ಕೆಲವು ಕಂಸಾಳೆಯ ಕಲಾವಿದರಿಂದ ಮಾದೇಶ್ವರರ ಕಥೆಯನ್ನು ಧ್ವನಿ ಮುದ್ರಿಸಿಕೊಳ್ಳಬೇಕಲ್ಲಾ, ಕರೆಸುತ್ತೀರಾ?" ಎಂದಾಗ ಅದಕ್ಕೇನಂತೆ ಆಗಲಿ ಎಂದು ಒಪ್ಪಿಕೊಂಡರು. ಅವರು ಎಷ್ಟು ಪ್ರಯತ್ನಿಸಿದರೂ ಕಲಾವಿದರು ಸಿಗುವುದು ಕಷ್ಟವೇ ಆಯಿತು. ಪ್ರಯತ್ನ ಮುಂದುವರಿಯಿತು. ಅವರೊಡನೆ ಮಾತನಾಡಿ, ಧ್ವನಿಮುದ್ರಣ ಮಾಡಿ ಎಂದು ಕೇಳಿದಾಗ ಅವರು, "ಊರಿಗೆ ಬನ್ನಿ, ಇಲ್ಲ ನಿಮ್ಮೂರಿಗೇ ಬಂದು ಮಾಡುತ್ತೇವೆ" ಎಂದು ಹೇಳಿ ನಿರಾಸೆಯನ್ನುಂಟು ಮಾಡಿದರು.

ಸೋಲಿಗರ ಗುಡ್ಡ ವೀರಣ್ಣನವರ ಜೊತೆಯಲ್ಲಿ ನಾಗಮಲೆ, ತಪಸರೆ, ಆಲಂಬಾಡಿ ಮುಂತಾದ ಪ್ರದೇಶಗಳನ್ನು ನೋಡಲು ಹೋದಾಗ ರೋಮಾಂಚಕಾರಕ ಅನುಭವಗಳಾದವು. ದಾರಿಯಲ್ಲಿ ದೊಣೆಯೊಂದರಲ್ಲಿ ನೀರು ಕುಡಿಯಲು ಹೋದಾಗ ಬಿಲ್ಲುರಿ ಹಾವಿನ ದರ್ಶನವನಾಗಿ ಮೈಯೆಲ್ಲಾ ಪುಳಕವಾಗಿ ರೋಮಗಳು ಸೆಟೆದುಕೊಂಡವು.

ಆ ಬಿಸಿಲಿನ ತಾಪಕ್ಕೆ ಯಾವುದೋ ಒಂದು ನೀರು ಸಿಕ್ಕಿದರೆ ಸಾಕು ಎನ್ನಿಸಿತ್ತು ಘಟಕ್ಕೆ. ಇದ್ದ ಸ್ವಲ್ಪ ನೀರನ್ನೇ ಒಂದು ಲೋಟದಲ್ಲಿ ತಂದು, ಮತ್ತೊಂದು ಲೋಟಕ್ಕೆ ಬಟ್ಟೆ ಹಾಕಿ ಸೋಸಿ ಕೊಟ್ಟರು. ಆ ಸಮಯದಲ್ಲಿ ಅದೇ ಅಮೃತವಾಗಿತ್ತು. ಹನ್ನೆರಡು ಹದಿಮೂರು ಕಿಲೋಮೀಟರ್ ಹತ್ತಿಳಿದು ಪ್ರಯಾಣ ಮಾಡಿ ನಾಗಮಲೆಯ ದರ್ಶನ ಮಾಡಬೇಕಾಯಿತು. ಅಲ್ಲಿಂದ ಗೋಪಿನಾಥಕ್ಕೆ ನಡೆದು ಹೋದದ್ದಾಯಿತು. ಸೈಕಲ್ಲಿನಲ್ಲಿ ಆಲಂಬಾಡಿ ನೋಡಲು ಅಲ್ಲಿನವರೊಬ್ಬರ ಜೊತೆಯಲ್ಲಿ ಹೊರಟು, ದಾರಿಯುದ್ದಕ್ಕೂ ಕಾವೇರಿ ನದಿಯ ನೀರನ್ನು ಕುಡಿಯುತ್ತಾ, ಸಿಗುವ ಹಣ್ಣುಗಳನ್ನು ಮೆಲ್ಲುತ್ತಾ ಸಾಗಬೇಕಾಯಿತು. ಆಲಂಬಾಡಿ, ರಂಗನಾಥಸ್ವಾಮಿ ದೇವಾಲಯ, ಅಲ್ಲಿ ಶಿಥಿಲವಾಗಿದ್ದ ಕೋಟೆಗಳನ್ನು ನೋಡಿಕೊಂಡು, ಗೋಪಿನಾಥದಲ್ಲಿ ಎಳನೀರು ಕುಡಿದು, ವೀರಣ್ಣನವರು ಸಿದ್ಧಪಡಿಸಿದ್ದ ಊಟವನ್ನು ಮಾಡಿ ಮತ್ತೆ ಮಾದೇಶ್ವರ ದೇವಾಲಯದ ಕಡೆ ಪಯಣ ಬೆಳೆಸಿದ್ದಾಯಿತು.

ಮತ್ತೊಮ್ಮೆ ಮಾದೇಶ್ವರ ಬೆಟ್ಟದಲ್ಲಿ ಪುಳ್ಳೇಕಾರ ಪುಟ್ಟಮಾದ ಅವರ ಜೊತೆ ಕಂಬದ ಜೋಳಿಗೆ ಹೋಗುವಾಗ ದೊಡ್ಡ ಕಾಳಿಂಗ ಸರ್ಪವೊಂದು ಸರಸರನೆ ಹರಿಯುತ್ತಿದ್ದಾಗ, ಕಿರುಚಿಕೊಂಡು ಹೋಗುತ್ತಿದ್ದ ಪುಟ್ಟಮಾದ ಅವರು ಅದನ್ನು ಹೊಡೆಯಲು ದೊಣ್ಣೆಯನ್ನು ಮೇಲೆತ್ತಲು "ಅದರಷ್ಟಕ್ಕೆ ಅದು ಹೋಗಲಿ ಬಿಡಿ" ಎಂದು ತಡೆದದ್ದಾಯಿತು. ಅದು ಹಾಗೆಯೇ ಹರಿದುಕೊಂಡು ಕಣ್ಮರೆಯಾಯಿತು.

ತಮಿಳು ಸಾಹಿತ್ಯದಲ್ಲಿ ಮಾದೇಶ್ವರರ ಬಗೆಗೆ ತಿಳಿದುಕೊಳ್ಳಬೇಕು, ಕನ್ನಡ-ತಮಿಳು ಸಾಹಿತ್ಯದಲ್ಲಿ ಮಾದೇಶ್ವರ ಬಗೆಗೆ ತುಲನಾತ್ಮಕ ಅಧ್ಯಯನ ನಡೆಸಬೇಕು ಎಂಬ

ಉದ್ದೇಶದಿಂದ ತಮಿಳುನಾಡಿನ ಸೇಲಂ ಜಿಲ್ಲೆಯ ಕೆಲವು ಸ್ಥಳಗಳನ್ನು ಸಂದರ್ಶಿಸಬೇಕೆಂಬ ಉದ್ದೇಶದಿಂದ ಹೊರಟದ್ದಾಯಿತು. ಸಾಲೂರು ಮಠದ ಮಹಾದೇವ ಸ್ವಾಮಿಗಳು ತಮಿಳು ಹಾಡುಗಾರರು, ಶಿವರಾತ್ರಿ, ಯುಗಾದಿಗೆ ವಿಶೇಷವಾಗಿ ಬರುತ್ತಾರೆ ಎಂದು ಹೇಳಿದ್ದರು. ಅದರಂತೆ ಶಿವರಾತ್ರಿಯಂದು ಜಾತ್ರೆಯ ಮಾಳಕ್ಕೆ ಬದಲು 'ಉಡುಕು' ವಾದ್ಯವನ್ನು ನುಡಿಸುತ್ತಾ, ಮಾದೇಶ್ವರನ ಸ್ತುತಿಸುತ್ತಿದ್ದ ಕಲಾವಿದರನ್ನು ಕಂಡು ಮಾತನಾಡಿಸಿದ ಮೇಲೆ ಅವರ ಹೆಸರು ಮಾದಯ್ಯ ಎಂಬುದಾಗಿ ತಿಳಿಯಿತು. ಅವರು ಹಾಡುತ್ತಿದ್ದ ಸ್ತೋತ್ರವನ್ನು ಧ್ವನಿಮುದ್ರಿಸಿಕೊಂಡು ಸಂದರ್ಶನವನ್ನು ತಮಿಳಿನಲ್ಲಿಯೇ ಬೇರೆಯವರಿಂದ ಮಾಡಿಸಬೇಕಾಯಿತು.

"ನಿಮ್ಮ ಗುರುಗಳಾರು? ಯಾವ ಊರಿನಲ್ಲಿದ್ದಾರೆ?" ಎಂದಾಗ "ನಮ್ಮ ಗುರುಗಳು ಮಾಯವರ್ ಎಂಬವರು. ಅವರು ಕೊಳತ್ತೂರಿನಲ್ಲಿದ್ದಾರೆ ಎಂದಾಗ ಇಡೀ ರಾತ್ರಿ ಮಾದೇಶ್ವರನ ಕಥೆಯನ್ನು ಅವರು ಹಾಡುತ್ತಾರೆ. ನಾನು ಶುಕ್ರವಾರ ಇಲ್ಲಿಗೆ ಬಂದು ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ" ಎಂಬ ಭರವಸೆ ನೀಡಿದಾಗ ಸಂತೋಷವಾಯಿತು. ಆದರೆ ಶುಕ್ರವಾರವಿಡೀ ಸಾಲೂರು ಮಠದತ್ತ ಮುಖ ತೋರದೆ ಬಾರದಿದ್ದುದು ತುಂಬಾ ನಿರಾಸೆಯನ್ನುಂಟು ಮಾಡಿತು. ಛಲ ಬಿಡಲಿಲ್ಲ, ಕೊಳತ್ತೂರಿಗೆ ಹೋಗಬೇಕು, ಅವರಿಂದ ಕಥೆ ಹೇಳಿಸಬೇಕೆಂಬ ಹಂಬಲ ಹೆಚ್ಚಾಗಲು ಹೋದದ್ದಾಯಿತು. ಆ ಊರಿನಲ್ಲಿ ಮಾದೇಶ್ವರ ದೇವಾಲಯದ ಆಡಳಿತ ನಿವೃತ್ತ ಅಧಿಕಾರಿಗಳೊಬ್ಬರು ಇದ್ದರು. ಅವರನ್ನು ಭೇಟಿ ಮಾಡಿ ನಡೆದ ವಿಷಯವನ್ನು ತಿಳಿಸಲು, ಅವರು "ಈ ಊರಿನಲ್ಲಿ ಮಾಯವರ್, ಮಾದಯ್ಯ ಇಬ್ಬರೂ ಇಲ್ಲ. ಮಾದೇಶ್ವರರ ಬಗೆಗೆ ತಮಿಳಿನಲ್ಲಿ ಜಾನಪದ ಹಾಡು ಹಾಡುವವರೂ ಇಲ್ಲ" ಎಂದಾಗ ಮತ್ತಷ್ಟು ನಿರಾಸೆಯಾಯಿತು. ಮಾಡಿದ್ದ ಇಪ್ಪತ್ತು ನಿಮಿಷಗಳ ಧ್ವನಿ ಮುದ್ರಣವನ್ನು, ತಮಿಳು ಬರುವವರ ಮುಂದೆ ಕೇಳಿಸಿದಾಗ, ಅದು ಮಾದೇಶ್ವರರ ಸ್ತೋತ್ರದ ಪುನರಾವರ್ತನೆ ಎಂಬುದು ಖಚಿತವಾಯಿತು. ಅದರಲ್ಲಿ ಮಾದೇಶ್ವರರ ಬಗೆಗೆ ಬೆಳಕು ಚೆಲ್ಲುವ ಯಾವ ವಿಷಯವೂ ಇರಲಿಲ್ಲ.

'ಮಲೆಯ ಮಾದೇಶ್ವರ' ಕಾವ್ಯದ ಪ್ರಸ್ತಾವನೆಯಲ್ಲಿ ಲೇಖಕರು, "ತಮಿಳು ಸಾಹಿತ್ಯದಲ್ಲಿ ಸುಮಾರು ಎಂಟು ರಾತ್ರಿಗಳು ದೀರ್ಘವಾಗಿ ಹಾಡುವ ಸಾಹಿತ್ಯವಿದೆ" ಎಂದು ಬರೆದಿದ್ದಾರೆ. ಅಲ್ಲದೆ ಅವರು ಆ ಕಲಾವಿದರುಗಳ ವಿಳಾಸಗಳನ್ನು ನೀಡಿದ್ದಾರೆ. ಅವರೊಡನೆ ತಮಿಳಿನಲ್ಲಿ ಪತ್ರ ವ್ಯವಹಾರವನ್ನು ಮಾಡಿದಾಗ ಬರೆದ ಪತ್ರಗಳೇ ಹಿಂತಿರುಗಿ ಬಂದವು. ಸೇಲಂ ಜಿಲ್ಲೆಯ ಕೆಲವು ಊರುಗಳನ್ನು ಸುತ್ತಿ ಕೇಳಲಾಗಿ, ಮಾದೇಶ್ವರರ ಬಗೆಗೆ ಕಥೆ ಹೇಳುವವರು ಯಾರೂ ಇಲ್ಲ ಎಂಬ ಉತ್ತರ ದೊರೆಯಿತು.

ಆದರೆ ಧರ್ಮಪುರಿಯ ಕೆಲವು ಪ್ರದೇಶಗಳಲ್ಲಿ ಮಾದೇಶ್ವರರ ಸ್ತೋತ್ರ ಹಾಡುವ ಕೆಲವು ಭಕ್ತರು ಇದ್ದಾರೆ ಎಂಬುದು ಸ್ಪಷ್ಟವಾಯಿತು. ಉಡುಕು ವಾದ್ಯವನ್ನು ಉಪಯೋಗಿಸಿಕೊಂಡು ಕನ್ನಡದವರೇ ತಮಿಳು ನಾಡಿಗೆ ಸೇರಿಕೊಂಡು ತಮಿಳಿನಲ್ಲಿ ಪದ್ಯ ಕಟ್ಟಿ ತಮ್ಮದೇ ಆದ ಧಾಟಿಯಲ್ಲಿ ಹಾಡುವರೆಂದೆನಿಸುತ್ತದೆ. ಏನೇ ಇರಲಿ ತಮಿಳಿನ ಜನಪದ ಸಾಹಿತ್ಯದಲ್ಲಿ ಮಾದೇಶ್ವರರ ಕಥೆಗಳಿಲ್ಲ ಎಂಬುದು ಖಚಿತವಾಯಿತು.

ಒಮ್ಮೆ ಜಾತ್ರೆಗೆ ಹೋದಾಗ ಶ್ರೀಕ್ಷೇತ್ರದಲ್ಲಿ ತಮಿಳುನಾಡಿನ ಕಲಾವಿದರೊಬ್ಬರು ಉಡುಕುವಾದ್ಯ ಬಾರಿಸುತ್ತಿದ್ದರು. ಅವರನ್ನು "ಹಣ ಕೊಡುತ್ತೇನೆ. ಮಾದೇಶ್ವರರ ಬಗ್ಗೆ ತಮಿಳಿನಲ್ಲಿ ಕಥೆ ಹೇಳುತ್ತೀರಾ?" ಎನ್ನಲು "ಆಗಲೀ ಹಾಡುತ್ತೇನೆ ಇನ್ನು ಸ್ವಲ್ಪ ಹೊತ್ತಿಗೆ ನಮ್ಮ ಜೊತೆಯವರನ್ನು ಕರೆದುಕೊಂಡು ಬರುತ್ತೇನೆ" ಎಂದು ಹೋದವರು ಮತ್ತೆ ಕಣ್ಣಿಗೆ ಸಿಗಲೇ ಇಲ್ಲ. ಸಾಲೂರು ಮಠದಲ್ಲಿ ಕಾದು ಕಾದು ಸಾಕಾಯಿತು. ಅವರನ್ನು ಜಾತ್ರೆ ಮಾಳದಲ್ಲೆಲ್ಲಾ ಶೋಧಿಸಿದರೂ ಸಿಗಲಿಲ್ಲ. ಬಹುಶಃ ಅವರಿಗೆ ಕಥೆ ಹೇಳಲು ಬರುತ್ತಿರಲಿಲ್ಲವೇನೋ ಎನ್ನಿಸುತ್ತದೆ.

ಮಾದೇಶ್ವರರ ಬಗೆಗೆ ವಿಷಯವನ್ನು ಸಂಗ್ರಹಿಸಲು ಹಲವಾರು ಸ್ಥಳಗಳನ್ನು ಸುತ್ತಿ, ಪ್ರಮುಖ ಸ್ಥಳಗಳ ಛಾಯಚಿತ್ರಗಳನ್ನು ತೆಗೆದುಕೊಂಡು, ಸುಮಾರು ನಲವತ್ತು ಘಂಟೆಗಳಿಗೂ ಹೆಚ್ಚು ಕಾಲ ಧ್ವನಿ ಮುದ್ರಣ ಮಾಡಿ, ಸಾವಿರ ಪುಟಗಳಿಗೂ ಹೆಚ್ಚಿನ ಕಥೆಯನ್ನು, ಟಿಪ್ಪಣಿಗಳನ್ನು ಬರೆದುಕೊಂಡಾಯಿತು. ತಮಿಳಿನಲ್ಲಿ ಸುಮಾರು ಇಪ್ಪತ್ತು ನಿಮಿಷಗಳ ಧ್ವನಿಮುದ್ರಣ ಮಾಡಿಕೊಳ್ಳಲಾಯಿತು. ಅನೇಕ ಊರುಗಳಲ್ಲಿ ಕಂಸಾಳೆ ಕಥಾ ಸಂಪ್ರದಾಯದ ಕಥೆಗಳನ್ನು ಧ್ವನಿ ಮುದ್ರಿಸಿಕೊಂಡು, ಮತ್ತೆ ಅವುಗಳನ್ನು ಕೇಳಿ ಶುದ್ಧ ಪ್ರತಿಯನ್ನು ಮಾಡಲು ಆರು ತಿಂಗಳುಗಳೇ ಹಿಡಿದವು.

ಕೆಲವರು ದಿನಕ್ಕೆ ಸ್ವಲ್ಪ ಸ್ವಲ್ಪ ಮಾಡಿ ಏಳು ಕಥೆಗಳನ್ನು ಮುಗಿಸಿದರು. ಕೆಲವು ಕಥೆಗಳನ್ನು ಕೆಲವು ಕಲಾವಿದರು ಹೇಳದೇ ಹೋದಾಗ ಮತ್ತೆ ಆ ಊರಿಗೇ ಹೋಗಿ ಧ್ವನಿ ಮುದ್ರಿಸಿಕೊಂಡು ಬರಬೇಕಾದ ಸಂದರ್ಭಗಳು ಹಲವಾರು. ಕ್ಷೇತ್ರಕ್ಕೆ ನಡೆದುಕೊಳ್ಳುವ ಹಿರಿಯರಿಂದಲೂ, ಕಲಾವಿದರಿಂದಲೂ ಮಾದೇಶ್ವರರು ಹಾಗೂ ಮಾದೇಶ್ವರ ಕ್ಷೇತ್ರದ ಬಗೆಗೆ ಕೆಲವು ಆಶಾದಾಯಕ ವಿಚಾರಗಳು ದೊರೆತವು.

ಕರ್ನಾಟಕ, ತಮಿಳುನಾಡುಗಳನ್ನು ಸುತ್ತಿ ಕೆಲವು ಮಾಹಿತಿಗಳನ್ನು ಸಂಗ್ರಹಿಸಲಾಯಿತು. 'ಸ್ಥಳ ಪುರಾಣ'ದ ಬಗೆಗೂ ಆಸಕ್ತಿಯಿಂದ ಮಾದೇಶ್ವರ ಕ್ಷೇತ್ರಕ್ಕೆ ಸಂಬಂಧಿಸಿದ ಹಲವಾರು ಊರುಗಳಲ್ಲಿ ಹುಡುಕಿದರೂ ದೊರೆಯಲಿಲ್ಲ. ಮಾದೇಶ್ವರರ ಬಗೆಗೆ ತಿಳಿದುಕೊಳ್ಳಲು ನೂರಾರು ಕಂಸಾಳೆ ಕಲಾವಿದರನ್ನು ಮಾತನಾಡಿಸಿ, ಆರು

ಕಂಸಾಳೆಯ ಗುಡ್ಡರುಗಳಿಂದ ಮಾದೇಶ್ವರರ ಬಗೆಗೆ 'ಏಳು ಕಥೆಗಳನ್ನು ಮೈಸೂರು ಜಿಲ್ಲೆಯ ಹಲವಾರು ಪ್ರದೇಶಗಳನ್ನು ಸುತ್ತಿ ಸಂಗ್ರಹಿಸಲಾಯಿತು.

**ಗ್ರಂಥ ಸಂಪಾದನೆ:**

'ಮಲೆಯ ಮಾದೇಶ್ವರ-ಒಂದು ಅಧ್ಯಯನ' ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸುವಾಗ ಹಲವಾರು ಕಂಸಾಳೆ ಕಲಾವಿದರಿಂದ ಕಂಸಾಳೆ ಸಾಹಿತ್ಯವನ್ನು ಧ್ವನಿಮುದ್ರಿಸಿಕೊಂಡೆ. ನನ್ನ ಮಾರ್ಗದರ್ಶಕರಾದ ಡಾ. ಜೀ.ಶಂ. ಪರಮಶಿವಯ್ಯನವರು ಮೈಸೂರು, ಬೆಂಗಳೂರು, ಮಂಡ್ಯ ಜಿಲ್ಲೆಗಳಲ್ಲಿ ಧ್ವನಿ ಮುದ್ರಿಸಿಕೊಂಡರೆ ವೈವಿಧ್ಯತೆ ದೊರೆಯುವುದು ಎಂದು ತಿಳಿಸಿದರು. ಅದರಂತೆ ನಾನು ಆರು ಜನ ಕಲಾವಿದರುಗಳಿಂದ ಮಾದೇಶ್ವರ ಕಾವ್ಯವನ್ನು ಧ್ವನಿಮುದ್ರಿಸಿಕೊಂಡೆ. ವರಕೋಡು ಮಾದಯ್ಯ ಹಾಗೂ ಸಿ. ಮಾದಯ್ಯ (೧), ಕನಕಪುರ ತಾಲ್ಲೂಕು ಮಳಗಾಳಿನ ಮರಿ ಎಸ್. ಮಾದಪ್ಪ ಮತ್ತು ಪಂಚಲಿಂಗಪ್ಪ (೨), ನರಸೀಪುರ ತಾಲ್ಲೂಕಿನ ಆಲ್ಗೋಡು ಪುಟ್ಟಮಾದಯ್ಯ ಮತ್ತು ನಂಜಯ್ಯ (೩), ಮಂಡ್ಯ ಜಿಲ್ಲೆಯ ಕಿರುಗಾವಲಿನ ಮಹಾದೇವ ಶೆಟ್ಟಿ (೪), ಕೊಳ್ಳೇಗಾಲ ತಾಲ್ಲೂಕಿನ ಮಧುವನಹಳ್ಳಿಯ ಮಹದೇವ ಮತ್ತು ಮಹಾದೇವ ಶೆಟ್ಟಿಯಿಂದ (೫), ಮದ್ದೂರು ತಾಲ್ಲೂಕಿನ ಉಪ್ಪಾರ ದೊಡ್ಡಿಯ ಪೂಜಾರಿ ಸಿದ್ದಶೆಟ್ಟಿ ಮತ್ತು ಈರಯ್ಯನವರಿಂದ (೬) ಕಬ್ಬಳ್ಳಿ ಗ್ರಾಮದ ಚಾಮಯ್ಯನಿಂದ ಇಕ್ಕೇರಿ ದೇವಮ್ಮನ ಪ್ರಸಂಗ (೭), ಏಳು ಕಂಸಾಳೆ ಸಂಪ್ರದಾಯಗಳನ್ನು ಧ್ವನಿಮುದ್ರಿಸಿಕೊಂಡೆ. ನಾನು ಸಂಪಾದಿಸಿದ ಏಳು ಪಾಠಗಳನ್ನು ಇಟ್ಟುಕೊಂಡು ಜೊತೆಗೆ ಎರಡು ಪ್ರಕಟಿತ ಕೃತಿಗಳನ್ನು ಇಟ್ಟುಕೊಂಡು ಪರಿಷ್ಕರಣ ಕಾರ್ಯವನ್ನು ಕೈಗೊಂಡು ಶುದ್ಧ ಪಾಠ ಮಾಡಿದೆ. ಇವುಗಳಿಗೆ ಕಂಸಾಳೆ ಸಾಹಿತ್ಯ ೧,೨,೩,೪,೫,೬,೭,೮,೯ ಎಂದು ಇಟ್ಟುಕೊಂಡೆ.

ಇವುಗಳಲ್ಲಿ ಯಾವುದು ಹಳೆಯ ಪಾಠ ಎಂದು ಹೇಳುವುದು ಕಷ್ಟ. ಎಲ್ಲರೂ ಸಮಕಾಲೀನರಾದುದರಿಂದ ಒಂದೇ ರೀತಿಯ ಕಥೆ ಬರುವುದು ಸಹಜ. ಕೆಲವು ಬದಲಾವಣೆಗಳೊಂದಿಗೆ ನವ್ಯ ಪ್ರಜ್ಞೆ ಬೆರಸಿ ಹೇಳುವುದನ್ನು ಗಮನಿಸಬಹುದು. ಆದುದರಿಂದ ಒಂದು ಪಾಠವನ್ನು ಪ್ರಮುಖವಾಗಿಟ್ಟುಕೊಂಡು ಮಿಕ್ಕವುಗಳಲ್ಲೇನಾದರೂ ಹೊಸತಿದ್ದರೆ ಅವುಗಳನ್ನು ಸೇರಿಸಿ ಒಂದು ಹೊಸ ರೂಪ ಕೊಡಲು ಪ್ರಯತ್ನಿಸಿರುವೆ.

ಈಗಾಗಲೇ ಎರಡು ಪ್ರಕಟಿತ ಕೃತಿಗಳು ಹೊರಬಂದಿವೆ. ಪಿ.ಕೆ. ರಾಜಶೇಖರ ಅವರು ವಿವಿಧ ಕಂಸಾಳೆ ಕಲಾವಿದರಿಂದ ಸಂಪಾದಿಸಿದ ಕೃತಿ ಮಲೆಯ ಮಾದೇಶ್ವರ ಇದನ್ನು ಕಂಸಾಳೆ ಸಂಪ್ರದಾಯ '೮' ಎಂದು ಇಟ್ಟುಕೊಂಡಿರುವೆ. ಮತ್ತೊಂದು ಹೆಬ್ಬಣಿ ಮಾದಯ್ಯನೊಬ್ಬನಿಂದಲೇ ಡಾ. ಕೇಶವನ್ ಪ್ರಸಾದ್ ಅವರ ಸಂಪಾದಕತ್ವದಲ್ಲಿ

ಪ್ರಕಟವಾಗಿರುವ ಕೃತಿ "ಮಲೆ ಮಾದೇಶ್ವರ". ಇದನ್ನು ಹಂಪಿ ವಿಶ್ವವಿದ್ಯಾಲಯ ಪ್ರಕಟಿಸಿದೆ. ಇದು ಸಮಗ್ರವಾಗಿ ಬಂದಿಲ್ಲ, ಇಕ್ಕೇರಿ ದೇವಮ್ಮನ ಕಥೆ ಬಂದಿಲ್ಲ. ಆದರೆ ಒಬ್ಬರೇ ಎಲ್ಲಾ ಸಾಲುಗಳನ್ನು ಹಾಡುವುದು ಅಪರೂಪ ಎನಿಸುತ್ತದೆ. ಇದನ್ನು ಕಂಸಾಳೆ ಸಂಪ್ರದಾಯ '೯' ಎಂದು ಇಟ್ಟುಕೊಂಡಿರುವೆ.

ನಾನು ಹೊರತರುತ್ತಿರುವ "ಮಲೆಯ ಮಾದೇಶ್ವರ" ಮೂರನೆಯ ಪ್ರಕಟಿತ ಕಾವ್ಯವಾಗಿ ಹೊರಬರುತ್ತಿದೆ. ಹದಿನೆಂಟು ವರ್ಷಗಳಿಂದ ಪ್ರಯತ್ನಪಟ್ಟರೂ ಪ್ರಕಟಿಸಲಾಗದೆ, ಕೊನೆಗೆ ನಾನೇ ಇದರ ಪ್ರಕಟಣೆಯ ಭಾರ ಹೊತ್ತು ಹೊರತರುತ್ತಿರುವೆ. ಈಗ ಮತ್ತೊಂದು ಪ್ರಕಟಣೆಯ ಅಗತ್ಯವಿದೆಯೇ? ಎಂದು ಕೇಳಬಹುದು. ಆದರೆ ಹಲವಾರು ಪಾಠಗಳನ್ನಿಟ್ಟುಕೊಂಡು ಒಂದು ಹೊಸರೂಪದ ಕೃತಿಯನ್ನು ಹೊರತರಬಹುದು. ಈ ಸಂಪಾದನೆಯಲ್ಲಿ ಹುಟ್ಟಿ ಬೆಳೆದ ಸಾಲು, ಬೇವಿನ ಕಾಳಿ, ಶ್ರವಣ, ಸಂಕಮ್ಮ, ಸರಗೂರಯ್ಯ, ಇಕ್ಕೇರಿ ದೇವಮ್ಮ, ಜುಂಜೇಗೌಡನ ಸಾಲುಗಳೆಂದು ಏಳು ಸಾಲುಗಳಿದ್ದು ಮಹಾಕಾವ್ಯಕ್ಕೆ ಹೊಸ ರೂಪು ಬಂದಿದೆ. ಗ್ರಂಥ ಸಂಪಾದನೆ ಅಷ್ಟೊಂದು ಸುಲಭವಾದ ಕೆಲಸವಲ್ಲ. ಅದರ ಹಿಂದೆ ಅಪಾರ ಶ್ರಮವಿದೆ ಎಂಬುದನ್ನು ಮಾಡಿದವರು ಮಾತ್ರ ಬಲ್ಲರು. ಮೈ ಕೈ, ಬುದ್ಧಿ ಎಲ್ಲಕ್ಕೂ ಕಸರತ್ತು.

ಮಹಾಕಾವ್ಯದಲ್ಲಿ ಪದ್ಯದ ಭಾಗಗಳು ಬಹಳ ಕಡಿಮೆ. ವಚನಗಂಧಿಯ, ಚಂಪೂ ಶೈಲಿಯಲ್ಲಿ ಮಹಾಕಾವ್ಯ ಓಡುವುದು. ಪಿ.ಕೆ. ರಾಜಶೇಖರ್ ಅವರನ್ನೇ ಡಾ. ಕೇಶವನ್ ಪ್ರಸಾದ್ ಅವರು ಅನುಸರಿಸಿ ವಚನವನ್ನೂ ಪದ್ಯದ ರೀತಿಯಲ್ಲೇ ಬರೆದುಕೊಂಡು ಹೋಗಿದ್ದಾರೆ. ವಚನಗಂಧಿಯ ಭಾಗವನ್ನು ನಾನು ಗದ್ಯದ ರೀತಿಯಲ್ಲೇ ಎಲ್ಲೆಲ್ಲಿ ನಿಲ್ಲಿಸಬಹುದೋ ಅಲ್ಲಿಗೆ ಒಂದು ಗೀಟು ಹಾಕಿಕೊಂಡು ಹೋಗಿರುವೆ. ಒಂದೊಂದು ಸಾಲನ್ನು ಏಕರೂಪತೆಗೆ ತರುವಲ್ಲಿ ಪ್ರಯತ್ನಿಸಿರುವೆ. ಆದರೆ ಒಟ್ಟಾರೆ ಕಾವ್ಯವನ್ನು ಏಕಸೂತ್ರತೆಗೆ ತರಲು ಸಾಧ್ಯವಾಗಿಲ್ಲ, ಪ್ರತಿಯೊಂದು ಸಾಲೂ ಒಂದೊಂದು ಖಂಡ ಕಾವ್ಯವಾಗಿ ಶೋಭಿಸುತ್ತಿದೆ. ಮಾದೇಶ್ವರರ ಹುಟ್ಟಿನಿಂದ ಹಿಡಿದು ಬಾಲ್ಯ, ವಿದ್ಯಾಭ್ಯಾಸ, ಮೆರೆವ ಪವಾಡಗಳು, ಕೊನೆಗೆ ಲಿಂಗರೂಪ ತಾಳಿ ಶಿಷ್ಯಕೋಟಿಯನ್ನು ಪಡೆದುಕೊಳ್ಳುವವರೆಗೆ ಕಾವ್ಯ ಸಮಗ್ರವಾಗಿ ಚಿತ್ರಿಸುತ್ತದೆ. ಒಂದೊಂದು ಖಂಡ ಕಾವ್ಯವನ್ನು ತೆಗೆದುಕೊಂಡು ಅದರ ಜೊತೆಗೆ ಅನೇಕ ಪಾಠಗಳಲ್ಲಿ ಬರುವ ಹೊಸ ಹೊಸ ಘಟನೆಗಳು, ಕಥೆಗಳನ್ನು ಅಳವಡಿಸಿಕೊಳ್ಳಲಾಗಿದೆ. ಆದುದರಿಂದ ಈ ಸಂಪಾದನೆ ಈಗ ಪ್ರಕಟವಾಗಿ ಬಂದಿರುವ ಕೃತಿಗಳಿಗಿಂತ ಸ್ವಲ್ಪ ಭಿನ್ನವಾಗಿದೆ ಎಂದು ಹೇಳಬಹುದು.

ಮಹಾಕಾವ್ಯದ ಗಾಯಕರು:

**ಮಾದಯ್ಯ** : ಮಾದಯ್ಯನವರನ್ನು ಸಂದರ್ಶಿಸಿದಾಗ ೭೦ ವರ್ಷ ವಯಸ್ಸಾಗಿತ್ತು. ಇವರು ಹಾಲುಮತದವರು. ಗುರುಗಳು ದಿವಂಗತ ತಲಕಾಡು ಗೌರಿ ಮಾದಯ್ಯ. ಇವರಲ್ಲದೆ ಹಲವಾರು ಗುಡ್ಡರಿಂದ ಕಂಸಾಳೆ ಕಲೆಯನ್ನು ಕಲಿತರು. ಅವರೆಂದರೆ, ಮೈಸೂರಿನ ನಂಜಯ್ಯ, ಎಲಕ್ಕೂರು ಮಾದಪ್ಪ, ವರಕೋಡು ಸಂಜೀವಯ್ಯ. ಮಾದಯ್ಯನವರಿಗೆ ಹದಿನಾರನೇ ವಯಸ್ಸಿನಲ್ಲಿ ಪುರುಸೇಕಾರಿ ಮಾದಯ್ಯ ಅವರಿಂದ ದೀಕ್ಷೆ ಆಯಿತು. ಇವರ ಜನ್ಮಸ್ಥಳ ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಕೆಂಪಯ್ಯನ ಹುಂಡಿ. ತಂದೆ ವರಕೋಡು ಮಾದಪ್ಪ. ಇವರನ್ನು ಮಾತುಗಾರ ಮಾದಪ್ಪ ಎಂದು ಕರೆಯುತ್ತಿದ್ದರು. ಕರ್ನಾಟಕ ಸರ್ಕಾರ ಇವರ ಕಲಾಸೇವೆಗೆ ೨೫೦ ರೂಪಾಯಿಗಳ ಮಾಶಾಸನವನ್ನು ನೀಡುತ್ತಿತ್ತು. ಇವರ ಮಗ ಮಹಾದೇವಪ್ಪ ಅವರು ಸ್ವಲ್ಪ ಹಾಡುತ್ತಾರೆ. ಇವರು ಮಾದೇಶ್ವರ ಕಂಸಾಳೆ ಕಥಾ ಸಂಪ್ರದಾಯದ ಐದು ಕಥೆಗಳನ್ನು ಹಾಡಿದ್ದಾರೆ. ಕಂಸಾಳೆ ಕಲೆ, ಸಾಹಿತ್ಯದಲ್ಲಿ ಐವತ್ತು ವರ್ಷಗಳ ಅನುಭವವಿತ್ತು. ಬೆಂಗಳೂರಿನಲ್ಲಿ ವಾಸವಾಗಿದ್ದ ಇವರು ಕರ್ನಾಟಕ ಜನಪದ ಕಲಾಸಂಘದ ಸ್ಥಾಪಕರು. ಇವರು ಕೆಲವು ಲೌಕಿಕ ಕಥೆಗಳು, ಉಪಕಥೆಗಳನ್ನು ಹಾಡಿದ್ದಾರೆ.

ಕಂಸಾಳೆಯ ಕಲಾವಿದರನ್ನು ಹಿಡಿದು ಅವರಿಂದ ಹಾಡಿಸಿ ಧ್ವನಿಮುದ್ರಣ ಮಾಡುವ ಕೆಲಸ ಬಹಳ ಕಷ್ಟ. ಕೆಲವರು ಹಣಕ್ಕಾಗಿ ಆಸೆಪಡುತ್ತಾರೆ. ಕೆಲವರು ಎಲ್ಲಿ ಹಾಡಿಬಿಟ್ಟರೆ ಧ್ವನಿಮುದ್ರಣ ಮಾಡಿ ಹಣ ಸಂಪಾದಿಸಿಕೊಂಡುಬಿಡುತ್ತಾರೆಯೋ, ಇಲ್ಲ ನಮ್ಮ ಹಾಡನ್ನು ಹಾಡಿಸಿ ಧ್ವನಿಮುದ್ರಿಸಿಕೊಂಡು ಕ್ಯಾಸೆಟ್ ಮಾಡಿಬಿಟ್ಟರೆ ನಮ್ಮನ್ನು ಜನ ಕರೆಸಿ ಹಾಡಿಸುವುದಿಲ್ಲ ಎಂಬ ನಾನಾ ಭಯ ಭೀತಿಗಳು ಅವರಿಗೆ. ಆದ್ದರಿಂದಲೇ ಕಲಿತದ್ದನ್ನೆಲ್ಲಾ ಹಾಡುವುದಿಲ್ಲ. ಕೆಲವರು ಇಷ್ಟೇ ಕೊಡಬೇಕು, ಅಷ್ಟೇ ಕೊಡಬೇಕು ಎಂದು ಹೇಳುವವರೂ ಉಂಟು. ಆದರೆ ಇವರು ಹಾಗಲ್ಲ. ಕಲಿತದ್ದನ್ನೆಲ್ಲಾ ನಿರರ್ಗಳವಾಗಿ ಹೇಳುವ ನಿರ್ವಂಚನೆಯವರು ಅರ್ಧ ಕಾಫಿ ಕುಡಿದು ಆರಂಭಿಸಿದರೆ ನಿರರ್ಗಳವಾಗಿ ಹಾಡಲಾರಂಭಿಸುವರು. ಕೆಲವು ವೇಳೆ ಕೆಲವು ಪದಗಳಿಗೆ ಅರ್ಥ ತಿಳಿಯದಿದ್ದಾಗ ಹೇಳುವುದು, ತಾತ್ಪರ್ಯ ಹೇಳುವುದು ಒಟ್ಟಿನಲ್ಲಿ ಯಾವಾಗಲಾದರೂ ಸರಿ ಮುಕ್ತ ಚರ್ಚೆಗೆ ಅಣಿಯಾಗುತ್ತಿದ್ದರು. ಆಗಾಗ ಬಂದು ಕ್ಷೇಮ ವಿಚಾರಿಸಿಕೊಳ್ಳುತ್ತಾರೆ. ಆಕಾಶವಾಣಿಯಲ್ಲಿ ಕಾರ್ಯಕ್ರಮ ಮಾಡುತ್ತಾರೆ. ಒಮ್ಮೆ ರಷ್ಯಾ, ಜಪಾನ್ ದೇಶಗಳಿಗೆ ರಾಜ್ಯ ಸರ್ಕಾರದ ವತಿಯಿಂದ ಹೋಗಬೇಕಾದಾಗ ಬಂದು, "ಸ್ವಾಮಿ ಇನ್ನು ಬರ್ತೀವೋ ಇಲ್ವೋ" ಎಂದು ಹೇಳಿದಾಗ ನಾನು ಸಮಾಧಾನಿಸುತ್ತಾ- "ಹಿಂದೆ ಹಡಗಿನಲ್ಲಿ ಹೋಗಬೇಕಾಗಿತ್ತು. ಆಗ ಅದು ಮುಳುಗುವುದೋ ಏನೋ ಎಂಬ ಭಯ ಇರುತ್ತಿತ್ತು.

ಈಗ ವಿಮಾನದಲ್ಲಿ ಒಂದೇ ದಿನದಲ್ಲಿ ಹೋಗಿ ಬರಬಹುದು. ನಿಮ್ಮ ಕಲೆಯನ್ನು ಪ್ರದರ್ಶಿಸಿ ಬನ್ನಿ" ಎಂದು ಹೇಳಿ ಕಳುಹಿಸಿದ್ದೆ. ಆದರೆ ಅಲ್ಲಿಂದ ಬಂದು ಶ್ವಾಸಕೋಶದ ತೊಂದರೆಯಿಂದ ಆಸ್ಪತ್ರೆಗೆ ಸೇರಿ ೧೯೮೭ನೇ ಇಸವಿಯಲ್ಲಿ ಇವರು ನಿಧನರಾದರು. ಆ ವಯಸ್ಸಿನಲ್ಲೂ ಬೀಸು ಕಂಸಾಳೆಯನ್ನು ಆಡುವ ಹುಮ್ಮಸ್ಸಿತ್ತು. ಕಥೆ ಹೇಳುವ ಕಲೆಗಾರಿಕೆ ಇತ್ತು. ಕೊನೆ ಕೊನೆಗೆ ನಮ್ಮಿಬ್ಬರ ಸಂಬಂಧ ತೀರ ಹತ್ತಿರವಾಗಿ ಆಗಾಗ ಬಂದು ನನ್ನನ್ನು ಕಾಣುತ್ತಿದ್ದರು. ಜನಪದ ಸಾಹಿತ್ಯ ಅಕಾಡೆಮಿಯಿಂದ ಪ್ರಶಸ್ತಿ ಕೊಡಿಸಿ ಎಂದು ಕೇಳುತ್ತಿದ್ದರು. ಆದರೆ ಅದೊಂದು ಅವರಿಗೆ ದೊರೆಯಲಿಲ್ಲ. ಹಳೆಯ ತಲೆಗಳಲ್ಲೊಂದನ್ನು ನಾಪಿಂಮ ಕಳೆದುಕೊಂಡಂತಾಯಿತು. ಇವರು ಹುಟ್ಟಿ ಬೆಳೆದ ಸಾಲು, ಬೇವಿನ ಕಾಳಿ ಸಾಲು, ಜುಂಜೇಗೌಡನ ಸಾಲು, ಸರಗೂರಯ್ಯನ ಸಾಲುಗಳನ್ನು ಹಾಡಿದ್ದಾರೆ. ಆಕಾಶವಾಣಿ, ಟೆಲಿವಿಷನ್, ಸಿನೆಮಾಗಳಲ್ಲಿ ಇವರ ಕಲೆ ದೇಶ ವಿದೇಶಗಳಲ್ಲಿ ಪ್ರಸಾರವಾಗಿವೆ, ಪ್ರಚಾರವಾಗಿವೆ. ಮಾತುಗಾರ ಮಾದಪ್ಪ ಎಂದೇ ಇವರನ್ನು ಕರೆಯುತ್ತಿದ್ದರು.

ಸಿ. **ಮಾದಯ್ಯ :** ಇವರು ಮೈಸೂರು ಜಿಲ್ಲೆಯ ನರಸೀಪುರದ ಹತ್ತಿರದ ಹುಣಸೂರಿನವರು. ಈಗ ಬೆಂಗಳೂರಿನ ವಾಸಿ. ಹಾಡಿದಾಗ ಇವರ ವಯಸ್ಸು ೬೫ ವರ್ಷ. ಇವರು ಗಂಗ ಮತಸ್ಥರು. ಮಾವನಳ್ಳಿ ಮರಿಯಪ್ಪನವರು ಇವರ ಗುರುಗಳು. ಇವರು ಮಹಾದೇವ ಎಂಬುವವರಿಗೆ ಕಂಸಾಳೆ ಕಥೆಯನ್ನು ಕಲಿಸಿದ್ದಾರೆ. ಇವರು ಮಾದೇಶ್ವರನ ಕಥೆಯಲ್ಲದೆ ಬೇರೆ ಕಥೆಯನ್ನೂ ಹಾಡುತ್ತಾರೆ. ಇವರಿಗೂ ಸರ್ಕಾರ ಮಾಸಾಶನವನ್ನು ನೀಡಿದೆ. ಇವರು ಸಂಕಮ್ಮ, ಇಕ್ಕೇರಿ ದೇವಮ್ಮ ಹಾಗೂ ಶ್ರವಣನ ಕಥೆಯನ್ನು ಹಾಡಿದ್ದಾರೆ. ಮಾತುಗಾರ ಮಾದಪ್ಪನವರ ಜೊತೆಯಲ್ಲಿ ರೇಡಿಯೋ, ಟೆಲಿವಿಷನ್, ಸಿನಿಮಾಗಳಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿದ್ದಾರೆ.

ಕಂಸಾಳೆ ಸಾಹಿತ್ಯ ೨ನ್ನು ಹಾಡಿದವರು ಮರಿ ಎಸ್. ಮಾದಪ್ಪ ಮತ್ತು ಎನ್. ಪಂಚಲಿಂಗಪ್ಪ.

**ಮರಿ ಎಸ್. ಮಾದಪ್ಪ :** ಇವರು ಕನಕಪುರ ತಾಲ್ಲೂಕಿನ ಮಳಗಾಳು ಗ್ರಾಮದವರು. ಗುರು ತಂದೆ ದೊಡ್ಡ ಭೈರಪ್ಪ. ಬೆಂಕಿ ಮಾದಪ್ಪನವರು ಇವರಿಗೆ ಕಂಸಾಳೆ ಕಥೆಯನ್ನು ಹೇಳಿಕೊಟ್ಟರು. ಇವರಿಗೆ ಮೊದಲು ಮಾದೇಶ್ವರರ ಬಗೆಗೆ ಕಂಸಾಳೆ ಕಥೆಯನ್ನು ಮಾದೇಶ್ವರನ ಬೆಟ್ಟದ ಕಡೆಯವರು ಕಲಿಸಿದರಂತೆ. ಗಂಗಡಕಾರ ಒಕ್ಕಲಿಗ ಗೌಡರಾದ ಇವರದು ವ್ಯವಸಾಯವೇ ಮುಖ್ಯ ವೃತ್ತಿ, ಅದರ ಜೊತೆಗೆ ಈ ಕಥೆ ಹಾಡುವ ಕಲೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಒಂದು ವರ್ಷದಲ್ಲಿ ಕಲೆಯನ್ನು ಕರಗತ ಮಾಡಿಕೊಂಡರಂತೆ. ವಂಶ ಪಾರಂಪರ್ಯವಾಗಿ ಬಂದ ಈ ಕಲೆಯನ್ನು

ಬೇರೆಯವರಿಗೂ ಕಲಿಸಿದ್ದಾರೆ, ಕಲಿಸುತ್ತಿದ್ದಾರೆ. ಇವರು ಹಾಡಿದಾಗ ನಲವತ್ತೆರಡು ವರ್ಷ ಇವರು ಈ ಕಾವ್ಯದ ನಾಲ್ಕು ಕಥೆಗಳನ್ನೂ ಹಾಡಿದ್ದಾರೆ. ಶ್ರವಣ, ಬೇವಿನಕಾಳ, ಜುಂಜೇಗೌಡ ಹಾಗೂ ಹುಟ್ಟಿ ಬೆಳೆದ ಸಾಲು ಕಥೆಗಳನ್ನು ಹಾಡಿದ್ದಾರೆ.

ಇವರಿಗೆ ಭಂಗಿ ಕುಡಿಯುವ ಚಪಲ. ಮೊದಲು ಸೊಪ್ಪು ಕೊಡಿಸಿದ ಮೇಲೆ ಕನಕಪುರದ ಮಠಕ್ಕೆ ಬಂದು ಹಾಡಲು ಆರಂಭಿಸಿದರು. ಭಂಗಿ ಕುಡಿದ ಮತ್ತಿನಲ್ಲಿ "ಈಗ ರಿಕಾರ್ಡಿಂಗ್ ಮಾಡಿಕೊಳ್ಳಿ" ಎನ್ನುತ್ತಿದ್ದರು. ಗತ್ತಿನ ಶೈಲಿಯಲ್ಲಿ ಕಥೆಯನ್ನು ನಿರೂಪಿಸುತ್ತಿದ್ದರು. ನೀವೇಕೆ ಕುಳಿತುಕೊಳ್ಳುತ್ತೀರಿ ಈ ಟೇಪ್ ರೆಕಾರ್ಡರ್ ಕೊಡಿ, ನಾನೇ ಆನಂದವಾಗಿ ಹೊಲದಲ್ಲಿ ಹಾಡಿ ಕೊಡ್ತೀನಿ ಎಂಬ ಹುಮ್ಮಸ್ಸು. ಹೊಲಗದ್ದೆ ಕೆಲಸದ ಕಡೆ ಗಮನವಾದ್ದರಿಂದ ಹೀಗೆ ಹೇಳಿದರು. ಪತ್ರೆ ಇಲ್ಲದಿದ್ದರೆ ಸ್ಫೂರ್ತಿ ಇಲ್ಲವಂತೆ. ಹಾಡಿದ ಮೇಲೆ ಸ್ವಲ್ಪ ಹಣ ಕೊಟ್ಟ ಮೇಲೆ ಸಂತೋಷವಾಗಿ ಹೊರಟರು.

**ಪಂಚಲಿಂಗಪ್ಪ** : ಇವರು ಕನಕಪುರದವರು. ಹಾಡಿದಾಗ ಇವರ ವಯಸ್ಸು ೩೫. ಇವರೂ ಸಹ ಗಂಗಡಕಾರ ಗೌಡರು. ಇವರ ಗುರು ಮರಿ ಎಸ್. ಮಾದಪ್ಪ ಹಾಗೂ ಅವರ ಅಣ್ಣ ಮಹಾದೇವಪ್ಪ. ಇವರು ಇಕ್ಕೇರಿ ದೇವಮ್ಮ, ಸಂಕಮ್ಮ, ಮೂಗಯ್ಯನ ಕಥೆಗಳನ್ನು ಹಾಡಿದ್ದಾರೆ. ಬಹಳ ಚುರುಕು.

**ಪುಟ್ಟಮಾದಯ್ಯ** : ಇವರು ನರಸೀಪುರ ತಾಲ್ಲೂಕಿನ ಆಲ್ಗೋಡಿನವರು. ಹಾಡಿದಾಗ ಇವರ ವಯಸ್ಸು ೬೩. ಜಾತಿಯಲ್ಲಿ ಗಂಗಮತಸ್ಥರು. ಇವರು ಕಂಸಾಳೆ ಕಥೆ ಹಾಡುವಾಗ ಏಕತಾರಿ, ಚಿಟಿಕೆಗಳನ್ನು ಉಪಯೋಗಿಸಿದರು. ಇವರ ಜೊತೆ ನಂಜಯ್ಯ ಮತ್ತು ಮಲ್ಲಿಕಾರ್ಜುನಯ್ಯ ಅವರು ಸೊಲ್ಲು ನೀಡಿದರು. ಇವರ ಗುರು ಸೌದೆ ರಂಗಯ್ಯನ ಸಿದ್ಧಯ್ಯ. ಇವರು ಜ್ವರವಿದ್ದರೂ ರಾತ್ರಿಯೆಲ್ಲಾ ಕಥೆ ಹಾಡಿ ಜನರನ್ನು ರಂಜಿಸಿದರು.

**ನಂಜಯ್ಯ** : ಆಲ್ಗೋಡಿನ ಇವರು ಹಾಡಿದಾಗ ಮೂವತ್ತೈದು ವರ್ಷಗಳು. ಗಂಗಾಮತಸ್ಥರು. ಮೂರು ವರ್ಷಗಳಲ್ಲಿ ಕಂಸಾಳೆ ಕಥೆಯನ್ನು ಕಲಿತಿದ್ದಾರೆ. ಹದಿನಾರು ವರ್ಷಗಳ ಹಿಂದೆಯೇ ಇವರು ಇದನ್ನು ಕಲಿತಿದ್ದಾರೆ.

**ಮಾದೇವ ಶೆಟ್ಟಿ** : ನಂಜನಗೂಡು ತಾಲ್ಲೂಕಿನ ಮರಳ್ಳಿಯಿಂದ ಬಂದ ಇವರು ಕಿರುಗಾವಲಿನಲ್ಲಿ ಹದಿನಾಲ್ಕು ವರ್ಷಗಳಿಂದಲೂ ಇದ್ದಾರೆ. ಇವರು ಹಾಡಿದಾಗ ಐವತ್ತು ವರ್ಷ ವಯಸ್ಸು, ಜಾತಿಯಲ್ಲಿ ಮಡಿವಾಳರು. ಇವರಿಗೆ ಸರ್ಕಾರ ಉಚಿತ ನಿವೇಶನ

ನೀಡಿದೆ. ಇವರೊಡನೆ ದನಿಗೂಡಿಸಿದವರು ಚಿಕ್ಕಮಲ್ಲೂರಿನ ೪೦ ವರ್ಷಗಳ ಹರಿಜನರ ದೊಡ್ಡಮಾದಯ್ಯ ಮತ್ತು ಮಾದೇವಶೆಟ್ಟಿ. ಇವರು ಮಾದೇಶ್ವರರ ಬಗೆಗೆ ಆರು ಕಥೆಗಳನ್ನು ಹಾಡಿದ್ದಾರೆ.

**ಮಹಾದೇವ ಶೆಟ್ಟಿ** : ಇವರು ಕೊಳ್ಳೇಗಾಲ ತಾಲ್ಲೂಕಿನ ಮಧುವನಹಳ್ಳಿಯವರು. ಜಾತಿಯಲ್ಲಿ ಉಪ್ಪಲಿಗಶೆಟ್ಟರು. ಇವರ ಗುರುಗಳು ದುಂಡು ಶೆಟ್ಟರು. ಹಾಡಿದಾಗ ವಯಸ್ಸು ೪೭ ವರ್ಷಗಳು. ಇವರು ಇಕ್ಕೇರಿ ದೇವಮ್ಮನ ಕಥೆಯೊಂದನ್ನು ಬಿಟ್ಟು ಮಿಕ್ಕೆಲ್ಲಾ ಕಥೆಗಳನ್ನೂ ಹಾಡಿದ್ದಾರೆ. ಇವರಿಗೆ ಸೊಲ್ಲುಕೊಟ್ಟವರು ಮಾರಶೆಟ್ಟಿ, ನಂಜುಂಡ ಶೆಟ್ಟಿ.

**ಮಹಾದೇವ** : ಇವರು ಮಧುವನ ಹಳ್ಳಿಯವರು. ಜಾತಿಯಲ್ಲಿ ಉಪ್ಪಲಿಗ ಶೆಟ್ಟರು. ಇವರು ಹಾಡಿದಾಗ ವಯಸ್ಸು ೪೭ ವರ್ಷಗಳು. ಇವರು ಇಕ್ಕೇರಿ ದೇವಮ್ಮನ ಕಥೆಯನ್ನು ಹಾಡಿದ್ದಾರೆ.

**ಪೂಜಾರಿ ಸಿದ್ದಶೆಟ್ಟಿ** : ಇವರು ಹಾಡಿದಾಗ ೭೭ ವರ್ಷ ವಯಸ್ಸು. ಜಾತಿಯಲ್ಲಿ ಉಪ್ಪಲಿಗರು. ಮದ್ದೂರು ತಾಲ್ಲೂಕಿನ ಉಪ್ಪಾರದೊಡ್ಡಿ ಇವರ ಊರು. ಇವರ ಗುರುಗಳು ಉಪ್ಪಲಿಗಶೆಟ್ಟರ ಕುಳ್ಳೀರ ಶೆಟ್ಟಿ. ವಯಸ್ಸಿನ ದೆಸೆಯಿಂದ ಸ್ವಲ್ಪ ಜ್ಞಾಪಕಶಕ್ತಿ ಕಡಿಮೆ. ಪುನರಾವರ್ತನೆಗಳು ಹೆಚ್ಚಾದುದರಿಂದ ಅವರ ಶಿಷ್ಯರಿಂದ ಹೇಳಿಸಬೇಕಾಯಿತು. ಇವರು ಸರಗೂರಯ್ಯನ ಸಾಲನ್ನು ಸ್ವಲ್ಪ ಹಾಡಿದರು.

**ಈರಯ್ಯ** : ಇವರು ಹಾಡಿದಾಗ ೬೨ ವರ್ಷ ವಯಸ್ಸು. ಮಾದೇಶ್ವರ ಕಾವ್ಯದ ಏಳು ಸಾಲುಗಳನ್ನು ನಿರರ್ಗಳವಾಗಿ ರಾತ್ರಿಯೆಲ್ಲಾ ಹಾಡಿದರು. ಇವರು ಜಾತಿಯಲ್ಲಿ ಉಪ್ಪಲಿಗರು. ಇವರ ಜೊತೆ ಸೊಲ್ಲು ಗೂಡಿಸಿದವರು ಸಿದ್ದಸೆಟ್ಟಿ ಮತ್ತು ಮಾದಶೆಟ್ಟಿ. ಸೌಜನ್ಯದ ಗುಣ. ರಾತ್ರಿಯಾದುದರಿಂದ ಅಡಿಗೆ ಮಾಡಿಕೊಳ್ಳಿ ಎಂದರು. ಬೇಡವೆಂದಾಗ ಬಾಳೆಹಣ್ಣು ಕಡಲೇಪುರಿಯನ್ನು ತರಿಸಿಕೊಟ್ಟರು. ಕಲಿತ ಎಲ್ಲಾ ಏಳು ಸಾಲುಗಳನ್ನು ಒಂದೇ ರಾತ್ರಿಯಲ್ಲಿ ಮುಗಿಸಿದ ಜ್ಞಾಪಕ ಶಕ್ತಿ ಇವರದು.

**ಕಬ್ಬಳ್ಳಿ ಚಾಮಯ್ಯ** : ಕನಕಪುರ ತಾಲ್ಲೂಕಿನ ಕಬ್ಬಳ್ಳಿಯ ಚಾಮಯ್ಯ. ಬೀಸು ಕಂಸಾಳೆಯ ಹಾಗೂ ಕುಳಿತು ಕಥೆ ಮಾಡುವ ಕಲಾವಿದ. ಸು. ೭೦ ವರ್ಷ ವಯಸ್ಸಾಗಿದ್ದರೂ ಹುಮ್ಮಸ್ಸಿತ್ತು. ಬೀಸು ಕಂಸಾಳೆಯಲ್ಲಿ ನುರಿತ ಕಲಾವಿದ. ವೈವಿಧ್ಯಮಯವಾಗಿ ಹಾಡಿ ನೃತ್ಯಗೈದು ಜನರ ಮನ ತಣಿಸುತ್ತಿದ್ದರು. ಹಲವಾರು ಯುವ ಕಲಾವಿದರನ್ನು ತರಬೇತು ಮಾಡಿ, ಇತ್ತೀಚೆಗೆ ನಿಧನರಾದರು.

## ಮಾದೇಶ್ವರ ಕ್ಷೇತ್ರ ಪರಿಚಯ:

ಮಾದೇಶ್ವರನ ಬೆಟ್ಟಕ್ಕೆ ಕೊಳ್ಳೇಗಾಲದಿಂದ ಸಿದ್ದಯ್ಯನಪುರ, ಮಧುವನಹಳ್ಳಿ, ಸಿಂಗಾನಲ್ಲೂರು, ಕಾಮಗೆರೆ, ಹನೂರು, ರಾಮಾಪುರ, ಕೌದಳ್ಳಿ ಮಾರ್ಗವಾಗಿ ಹೋಗಬೇಕಾಗುತ್ತದೆ. ಕೌದಳ್ಳಿ ಗ್ರಾಮದಿಂದ ಸುಮಾರು ಹದಿಮೂರು ಕಿಲೋಮೀಟರ್ ದೂರಕ್ಕೆ "ತಾಳುಬೆಟ್ಟ" ಸಿಗುತ್ತದೆ. ಮಾದೇಶ್ವರರು ನಡುಮಲೆಯಲ್ಲಿ ನೆಲೆಗೊಳ್ಳಲು ಬಂದಾಗ ತನ್ನ ಶಿಶುಮಕ್ಕಳಲ್ಲದೆ ದುಷ್ಟರು ಯಾರೂ ತನ್ನ ಬೆಟ್ಟಕ್ಕೆ ಬರದಿರಲೆಂದು "ತಾಳ" (ಬೀಲಕ) ಹಾಕಿಬಿಟ್ಟ. ಅದರಿಂದಲೇ ಇದಕ್ಕೆ "ತಾಳು ಬೆಟ್ಟ" ಎಂದು ಹೆಸರಾಯಿತೆಂದು ಪ್ರತೀತಿ. ತಮಿಳಿನಲ್ಲಿ "ತಾಳು ಮಲೆ" ಎಂದರೆ "ಮೊದಲ ಬೆಟ್ಟ" ಎಂದು ಅರ್ಥ. ಈ ಬೆಟ್ಟದಲ್ಲಿ ಮಕ್ಕಳ ಫಲಕ್ಕಾಗಿ ಹರಕೆ ಕಟ್ಟಿಕೊಂಡಿದ್ದವರು, ತೊಟ್ಟಿಲುಗಳನ್ನು ಮಾಡಿ, ಇಲ್ಲವೇ ಬಟ್ಟೆಯಲ್ಲಿ "ನ್ಯಾನೆ"ಯನ್ನು ಮಾಡಿ ಅದರೊಳಗೆ ಕಲ್ಲಿಟ್ಟು ಮರಗಳಲ್ಲಿ ತೂಗಿಬಿಡುತ್ತಾರೆ. ಕರ್ನಾಟಕದವರೂ ಸಹ ಇದೇ ರೀತಿ ಮಾಡುವ ವಾಡಿಕೆ ಇದೆ.

ಎಪ್ಪತ್ತೇಳು ಮಲೆಗಳ ಮಧ್ಯೆ, ಈಗ ಮಾದೇಶ್ವರ ದೇವಾಲಯ ಇರುವ ಮಲೆಯೇ "ನಡುಮಲೆ" ಅಥವಾ "ವಜ್ರಮಲೆ". ಮಾದೇಶ್ವರರು ಕುಂತೂರಿನಿಂದ ಈ ಮಲೆಗೆ ಬಂದಾಗ ಇಲ್ಲಿಗೂ ಕುಂತೂರು ಬೆಟ್ಟ ಕಾಣುತ್ತಿತ್ತಂತೆ. ತನ್ನ ಬೆಟ್ಟ ಕುಂತೂರಿನ ಬೆಟ್ಟಕ್ಕಿಂತ ಕೆಳಗಿರಬೇಕೆಂದು ಮಾದೇಶ್ವರರು ಕಾಲಿನಿಂದ ತುಳಿದಾಗ, ಅದು ನಡುಮಲೆಯಾಯಿತು ಎಂಬುದು ಒಂದು ಪ್ರತೀತಿ. ತಾನಿರುವ ಮಲೆಗೆ ಚಾಮುಂಡಿ ಬೆಟ್ಟ ಕಾಣುತ್ತದೆಂದು ತಿಳಿದು, ತುಳಿದಾಗ ನಡುಮಲೆ ಆಯಿತು ಎಂಬುದು ಮತ್ತೊಂದು ಪ್ರತೀತಿ. ನಡುಮಲೆಯನ್ನು ತಲುಪಲು ಬಸವನ ಹಾದಿ ಮತ್ತು ಸರ್ಪನ ಹಾದಿ ಎಂಬ ಎರಡು ದಾರಿಗಳಿವೆ. ಬಸವನ ಹಾದಿ ಮಾದೇಶ್ವರ ದೇವಾಲಯಕ್ಕೆ ಸ್ವಲ್ಪ ನೇರವಾಗಿ ಹೋಗುತ್ತದೆ. ಇದು ತಾಳು ಬೆಟ್ಟದಿಂದಲೇ ಆರಂಭವಾಗುತ್ತದೆ. ಕುಂತೂರಿನಲ್ಲಿದ್ದ ಬಸವ, ಮಾದೇಶ್ವರರನ್ನು ಹುಡುಕಿಕೊಂಡು ಬಂದ ದಾರಿಯೇ "ಬಸವನ ದಾರಿ" ಎಂದು ಹೇಳುವರು. ಕುಂತೂರು ಮಠದಲ್ಲಿ ಸರ್ಪವೊಂದು ಪೂಜೆ ಆದಮೇಲೆ ಹಾಲನ್ನು ಕುಡಿದು ಹೋಗುತ್ತಿತ್ತು. ಮಾದೇಶ್ವರರು ಕುಂತೂರು ಮಠವನ್ನು ಬಿಟ್ಟು ಹೊರಟ ಮೇಲೆ, ಆ ಸರ್ಪ ಮಾದೇಶ್ವರರನ್ನು ಹುಡುಕಿಕೊಂಡು ಹೋಯಿತು. ಮಲೆಯ ಮತ್ತೊಂದೆಡೆ ಹಾವು ಹರಿದುಕೊಂಡು ಹೋದ ದಾರಿಯೇ "ಸರ್ಪನ ದಾರಿ". ಈ ರಸ್ತೆ ಡೊಂಕು ಡೊಂಕಾಗಿ ಇದೆ. ಇದೂ ಕೂಡ ಮಾದೇಶ್ವರ ದೇವಾಲಯಕ್ಕೆ ಸೇರುತ್ತದೆ. ಇದಕ್ಕೆ ಇನ್ನೊಂದು ಕಥೆಯೂ ಇದೆ. ಕಾಮತಟಕಾಪುರಿಯಲ್ಲಿ ಗಂಗಾಧರ ಎಂಬ ಮುನಿಯು ಅಷ್ಟಸಿದ್ಧಿಗಳನ್ನು ಪಡೆದುಕೊಂಡಿದ್ದನು. ಈತ ತನ್ನ ಊರಲ್ಲಿ ಯಾರೂ

ವಾಹನಾರೂಢರಾಗಿ ಹೋಗಬಾರದೆಂಬ ಕಟ್ಟಪ್ಪಣೆಯನ್ನು ಮಾಡಿದ್ದ. ಒಮ್ಮೆ ಮಾದೇಶ್ವರರು ವಾಹನಾರೂಢರಾಗಿ ಅತ್ತ ಬರುತ್ತಿರಲು, ಗಂಗಾಧರ ಮಾದೇಶ್ವರರನ್ನು ಶರಣಾಗತರಾಗುವಂತೆ ಕೇಳಿದ. ಮಾದೇಶ್ವರರು ಎಷ್ಟು ಬುದ್ಧಿ ಹೇಳಿದರೂ ಆತ ಕೇಳಲಿಲ್ಲ. ಕೊನೆಗೆ ಮಾದೇಶ್ವರರು ಅವನಿಗೆ ಘಟಸರ್ಪ ಆಗುವಂತೆ ಶಾಪವನ್ನಿತ್ತರು. ಆ ಸರ್ಪ ಹರಿದುಕೊಂಡು ಮಾದೇಶ್ವರರ ಹತ್ತಿರ ಹೋಯಿತು. ಅದೇ "ಸರ್ಪನ ಹಾದಿ" ಎಂದು ಹೇಳುವವರೂ ಉಂಟು.

ತಮಿಳು ನಾಡಿನಿಂದ ಮಾದೇಶ್ವರ ಕ್ಷೇತ್ರಕ್ಕೆ ಬರಬೇಕಾದರೆ ಸೇಲಂ, ಕರೂರು, ಆರನಾಸಿ, ಮೇಚೇರಿ, ಕೊಂಜುಂ ಪಾಳ್ಯಂ, ಮೆಟ್ಟೂರು, ಕೊಳತ್ತೂರು, ಕಾವೇರಿಪುರ, ಚಟ್ಟಿಪಟ್ಟಿ, ಪಾಲಾರ್, ತಾಳುಬೆಟ್ಟವನ್ನು ದಾಟಿ ಮಾದೇಶ್ವರನ ಬೆಟ್ಟವನ್ನು ತಲುಪಬಹುದು.

ಮಾದೇಶ್ವರ ದೇವಾಲಯವು ಸುತ್ತಲೂ ಸುಂದರವಾದ ಪೌಳಿ ಮತ್ತು ಮಂಟಪಗಳಿಂದ ಅಲಂಕೃತವಾಗಿದೆ. ಈ ಮಂಟಪಗಳು ಪೂರ್ವ ಪಶ್ಚಿಮವಾಗಿ ಇಪ್ಪತ್ತನಾಲ್ಕು ಅಂಕಣಗಳು, ದಕ್ಷಿಣೋತ್ತರ ಹದಿನೆಂಟು ಅಂಕಣವುಳ್ಳವಾಗಿವೆ. ದೇವಾಲಯದ ಮುಖ ಪಶ್ಚಿಮ, ಗೋಪುರ ದಕ್ಷಿಣ, ಉತ್ತರಕ್ಕೆ ಆಲಂಬಾಡಿ ಬಸವೇಶ್ವರ ದ್ವಾರ ಎಂಬ ಬಾಗಿಲುಂಟು. ದೇವಾಲಯದಲ್ಲಿ ಗರ್ಭಗುಡಿ, ಒಂದು ಅಂಕಣ, ಸುಕನಾಸಿಯ ಒಂದು ಅಂಕಣ, ಮುಖ ಮಂಟಪ ಇಪ್ಪತ್ತೈದು ಅಂಕಣ ಇದೆ.[?] 'ಮಾದೇಶ್ವರ ಲಿಂಗದೆದುರು ಒಂದು ಅಂಕಣದ ಬಸವೇಶ್ವರ ಗುಡಿ ಇದೆ. ಇದನ್ನು ಬೆಳಕವಾಡಿಯ ಹೊನ್ನಲಗ ಶೆಟ್ಟರ ಮಕ್ಕಳು ಗುರುಬಸಶೆಟ್ಟಿ ಎಂಬಾತ ಯುವ ಸಂವತ್ಸರ ಪುಷ್ಯಮಾಸ ಬಹುಳ ಬಿದಿಗೆಯಲ್ಲಿ ಕಟ್ಟಿಸಿದಂತೆ ಶಾಸನವಿದೆ."[?]

ಗೋಪುರದ ತಳಭಾಗದಲ್ಲಿ ವಿಘ್ನೇಶ್ವರ ದೇವಾಲಯವಿದೆ. ಭಕ್ತರು ಈತನ ದರ್ಶನವನ್ನು ಮೊದಲು ಮಾಡಿ, ಆಮೇಲೆ ಮಾದೇಶ್ವರ ಲಿಂಗದ ದರ್ಶನಕ್ಕೆ ಹೋಗುತ್ತಾರೆ. ಈ ದೇವಾಲಯದ ಮುಖ ಮಂಟಪದಲ್ಲಿ ವೀರಭದ್ರನ ವಿಗ್ರಹವಿದೆ. ದೇವಾಲಯದ ಬಲದ್ವಾರದಲ್ಲಿ ಬಸವನ ವಿಗ್ರಹವಿದೆ. ಇದು ಆಲಂಬಾಡಿಗೆ ಮುಖ ಮಾಡಿದೆ. ಹಸುಗಳು ಈ ಬಸವನನ್ನು ದೃಷ್ಟಿಸಿದರೆ ಫಲವಾಗುತ್ತದೆಂಬ ನಂಬಿಕೆ. ಮಾದೇಶ್ವರ ದೇವಾಲಯದ ಎಡಭಾಗದಲ್ಲಿ 'ಈರತ್ತ ಕಟ್ಟೆ' (ವಿರಕ್ತ ಕಟ್ಟೆ) ಇದೆ. ಇಲ್ಲಿ ಸಾಲೂರು ಮಠದ ಜಂಗಮರು ಕುಳಿತು ಪರಿಷೆಗೆ ಬರುವ ಜನರಿಗೆ ಮೂರು ಹಿಡಿ ಕಡಲೆ ಹಾಕಿ, ಮತ್ತೆ ಮತ್ತೆ ಪ್ರಸಾದವಾಗಿ ಅಲ್ಲೇ ಕಡಲೆ ಪಡೆಯುತ್ತಾರೆ. ಹಿಂದೆ ಮಾದೇಶ್ವರರು ಉಕ್ಕನಳ್ಳಿ ಬಸವನಿಗೆ ಉಕ್ಕಿನ ಕಡಲೆಯನ್ನು ತಿನ್ನಿಸುತ್ತಿದ್ದರು ಎಂಬುದು ಮಾದೇಶ್ವರ ಕಾವ್ಯದಲ್ಲಿ ಬರುತ್ತದೆ. ಅದಕ್ಕೆ ಈಗಲಾದರೂ ಜಂಗಮರಿಗೆ ಕಡಲೆ

ತಿನ್ನಿಸೋಣ ಎಂದು ಈ ರೀತಿ ಮಾಡುವ ಸಂಪ್ರದಾಯ ಬೆಳೆದು ಬಂದಿದೆ. ದೇವಾಲಯದ ದ್ವಾರವನ್ನು ಪ್ರವೇಶಿಸಿದ ಕೂಡಲೇ 'ಧೂಪದ ಕುಂಡ' ಸಿಗುತ್ತದೆ. ಇಲ್ಲಿ ಭಕ್ತಾದಿಗಳು ಮಾದೇಶ್ವರನಿಗೆ ಧೂಪ ಹಾಕಿ ಕೈ ಮುಗಿದು ಆಮೇಲೆ ಮುಂದಿನ ಕೆಲಸ ಮಾಡುವರು. ಇಲ್ಲಿ ದವ್ವ ಹಿಡಿದವರಿಗೆ ದೆವ್ವ ಬಿಟ್ಟು ಹೋಗುತ್ತದೆ ಎಂಬ ನಂಬಿಕೆ.

ಧೂಪದ ಕುಂಡದ ಪಕ್ಕದಲ್ಲಿ ಗಾಳಿ ಬಸವನ ಗುಡಿ ಇದೆ. ಇದರ ಹಿಂದೆ ಮೂರುವರೆ ಅಡಿಯ ಒಂದು ಗಂಟೆಯಾಕಾರಕದ ಕಲ್ಲಿದೆ. ಇಲ್ಲಿಂದ ಭಕ್ತರು ಎದುರಿನ ಗರ್ಭಗುಡಿಯಲ್ಲಿರುವ ಮಾದೇಶ್ವರ ಲಿಂಗವನ್ನು ನೋಡಲು ಒಂದು ಕಿಂಡಿ ಇದೆ. ಲಿಂಗವನ್ನು ನೋಡಿ ಕೈಮುಗಿದು ಗೊಂಬೆಯಾಕಾರದ ಕಲ್ಲಿನ ಮೇಲೆ ಹಸ್ತ ಊರುತ್ತಾರೆ. ಇಷ್ಟಾರ್ಥಗಳು ಫಲಿಸುವುದಾದರೆ ಅಂಗೈ ಜಾರಿ ಬೆರಳುಗಳು ಬಿಡಿಸಿಕೊಳ್ಳುತ್ತದೆ ಎಂದು ಜನರು ನಂಬುತ್ತಾರೆ.

## ಮಾದೇಶ್ವರ ಕ್ಷೇತ್ರದ ವಿವಿಧ ನೆಲೆಗಳು:

ಮಾದೇಶ್ವರ ಕ್ಷೇತ್ರವು ಹಲವಾರು ಮಹತ್ವಪೂರ್ಣ ಸ್ಥಳಗಳ ಆಗರವಾಗಿದೆ. ದೇವಾಲಯದ ಪಕ್ಕದಲ್ಲಿ ಅಂತರಗಂಗೆ ಇದೆ. ಇದರ ಉದ್ಭವದ ಬಗೆಗೆ ಹೀಗೆ ಹೇಳುವುದುಂಟು. "ಆಲಂಬಾಡಿ ಜುಂಜೇಗೌಡ, ತನ್ನ ಹಸುಗಳ ಬಾಯಿಲೆ ವಾಸಿಯಾದರೆ ಉರಿಗದ್ದುಗೆಯನ್ನು ಕಟ್ಟಿಸುತ್ತೇನೆ ಎಂದು ಮಾದೇಶ್ವರರಲ್ಲಿ ಹರಕೆ ಕಟ್ಟಿಕೊಂಡ. ಆತನ ಭಕ್ತಿಗೆ ಮೆಚ್ಚಿದ ಮಾದೇಶ್ವರರು ಅಲ್ಲೇ ಇದ್ದ ಬಂಡೆಯನ್ನು ಕಾಲಿನಿಂದ ಒದೆಯಲು ನೀರು ಬುಗ್ಗೆಯಾಗಿ, ಅದರ ಅಂತರಂಗದಿಂದ ಚಿಮ್ಮಲಾರಂಭಿಸಿತು. ಅದಕ್ಕೆ "ಅಂತರಗಂಗೆ" ಎಂದು ಹೆಸರಾಯಿತು. ಮಾದೇಶ್ವರರು ಜುಂಜೇಗೌಡನನ್ನು ಉದ್ದೇಶಿಸಿ "ಈ ಅಂತರಗಂಗೆಯ ನೀರನ್ನು ಬಿದಿರ ಗೊಟ್ಟದಲ್ಲಿ ಹಾಕಿ ದನಗಳಿಗೆ ಕುಡಿಸು. ಅದರಿಂದ ಹಸುಗಳ ಕಾಯಿಲೆ ಕೂಡಲೇ ವಾಸಿಯಾಗುತ್ತದೆ ಎಂದರು. ಜುಂಜೇಗೌಡ ಹಾಗೆಯೇ ಮಾಡಲು ಹಸುಗಳು ಗುಣಮುಖವಾದವು. ಇದೇ ಅಂತರಗಂಗೆ ಶೇಷಣ್ಣೊಡೆಯರ ಗದ್ದುಗೆಯು ಬಿಲ್ಲಯ್ಯನ ಮಗ ಶೇಷಣ್ಣ ಗದ್ದುಗೆಯಾಗಿರುವ ಸ್ಥಳ. ಇದು ಮಾದೇಶ್ವರ ದೇವಾಲಯದ ಉತ್ತರಕ್ಕೆ ಇದೆ. ಈತ ಅನ್ನಸಾಲಮ್ಮ ಬಿಲ್ಲಯ್ಯರ ಮಗ. ಮಾದೇಶ್ವರರ ಶಿಷ್ಯ. ಇಲ್ಲಿ ಹನ್ನೆರಡು ವರ್ಷಕ್ಕೊಮ್ಮೆ ಸಾಲೂರು ಮಠದವರು ಹಾಗೂ ಅರ್ಚಕರು ಸೇರಿ ಆರಾಧನೆಯನ್ನು ನಡೆಸುತ್ತಾರೆ.

ಮಾದೇಶ್ವರ ದೇವಾಲಯಕ್ಕೆ ಸ್ವಲ್ಪ ದೂರವಿರುವ, ಅಂದರೆ ಈಗಿನ ಮಹಾರಾಜರ ಛತ್ರದ ಎದುರು ಜಡೆಯಕಲ್ಲು ಎಂಬುದಿದೆ. ಇದು ಮಾದೇಶ್ವರರು ಸ್ನಾನ ಮಾಡಿ ತಮ್ಮ ಜಡೆಯನ್ನು ಒದರಿಕೊಂಡು ಬಿಸಿಲು ಕಾಯಿಸುತ್ತಿದ್ದ ಸ್ಥಳ ಎಂದು ಹೇಳುವರು.



ತಮ್ಮಡಗೇರಿಯಲ್ಲಿ ದುಂಡಮ್ಮನ ಸಮಾಧಿ ಇದೆ. ದುಂಡಮ್ಮ ಭಕ್ತ ಬೇಡರ ಕನ್ನಯ್ಯನ ಹೆಂಡತಿ. ಮಾದೇಶ್ವರರು ಈಕೆಯ ಮನೆಯಲ್ಲಿ ಬಂದು ಸೀಗೆಸೊಪ್ಪಿನ ಸಾರು, ರಾಗಿ ಮುದ್ದೆಯನ್ನು ಊಟ ಮಾಡಿ ಹೋಗುತ್ತಿದ್ದರಂತೆ. ದುಂಡಮ್ಮ ಮಾದೇಶ್ವರರ ಪರಮ ಭಕ್ತೆಯಾಗಿದ್ದಳಂತೆ.

'ಬಿಲ್ಲಯ್ಯನ ಹೊಂಡ' ಅಂತರಗಂಗೆ ಹರಿವಲ್ಲಿ ಇದೆ. ಬಿಲ್ಲಯ್ಯ ಮಾದೇಶ್ವರರ ಪೂಜೆಗೆ ಹೂವನ್ನು ತರುತ್ತಿದ್ದು ಹದಿನಾರು ವರ್ಷ ಕಳೆದವು. ಒಂದು ದಿನ ಮರವನ್ನು ಹತ್ತಿ ಹೂ ಬಿಡಿಸುವಾಗ ಮೇಲಿಂದ ಬಿದ್ದು ಇಹವನ್ನು ತ್ಯಜಿಸಿದ. ಅದೇ 'ಬಿಲ್ಲಯ್ಯನ ಹೊಂಡ'. ಇದು ದೇವಾಲಯಕ್ಕೆ ಒಂದು ಕಿಲೋಮೀಟರ್ ದೂರದಲ್ಲಿದೆ.

ಮಾದೇಶ್ವರ ದೇವಾಲಯದ ಎದುರು ಇರುವ ಬೆಟ್ಟವೇ ಎದುರುಬೋಳಿ (ಎದುರು ಬೆಟ್ಟ). ಇದಕ್ಕೆ "ಈಶ್ವರ ಗುಡ್ಡ" ಎಂದೂ ಕರೆಯುವರು. ಜಾತ್ರೆಯ ಸಮಯದಲ್ಲಿ ಮಾದೇಶ್ವರ ಈ ಗುಡ್ಡದ ಮೇಲೆ ನಿಂತು ಬರುವ ಪರಿಸೆಯನ್ನು ನೋಡುತ್ತಾನೆ ಎಂದು ಪ್ರತೀತಿ. ಇಲ್ಲಿ ಕಾರಯ್ಯ ಬಿಲ್ಲಯ್ಯ ಇಬ್ಬರ ತೋರುಗದ್ದುಗೆಗಳಿವೆ.

ದೇವಾಲಯಕ್ಕೆ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿ ಸಾಲೂರು ಮಠವಿದೆ. ಇದು ವೀರಶೈವರ ಮಠ. ರಾಯಣ್ಣನ ಮನೆತನದವರು, ಬೇಡಗಂಪಣನವರು, ದುಂಡೇಗೌಡರ ಮನೆತನದವರು, ಕಾಡು ಸೋಲಿಗರು, ಕುರುಬರು, ದೇವರ ಗುಡ್ಡರುಗಳೇ ಮೊದಲಾದವರು ಜಾತಿ ಮತ ಭೇದವಿಲ್ಲದೆ ಈ ಮಠಕ್ಕೆ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಅನೇಕರು ಈ ಮಠದ ಗುರುಗಳಿಂದ ದೀಕ್ಷೆಯನ್ನು ಪಡೆದಿದ್ದಾರೆ. ಮಠದ ಗುರುಗಳು, ಹಾಗೂ ಅವರ ಶಿಷ್ಯರುಗಳಿಗೆ ಮಾದೇಶ್ವರರ ಪೂಜೆಯಲ್ಲಿ ಅಗ್ರ ತಾಂಬೂಲ. ಕಾಡು ಜನರ ಏಳಿಗೆಗೆ ಈ ಮಠವು ಸ್ಥಾಪಿತವಾಯಿತು. ಈ ಮಠವನ್ನು ಸ್ಥಾಪಿಸಲು ಮೂಲಕಾರಣ ಮಾದೇಶ್ವರರು. ಇವರು ಮೊದಲು ಸಂಸಾರಿ ಸಂಗಪ್ಪನ ಜೊತೆಯಲ್ಲಿ ಬಂದಾಗ ಇಲ್ಲೊಂದು ಮಠವನ್ನು ಸ್ಥಾಪಿಸು ಎಂದು ಕಂಬವನ್ನು ನೆಟ್ಟು ಮುಹೂರ್ತ ಮಾಡುತ್ತಾರೆ. ಅದು ಈಗಲೂ ಮಠದಲ್ಲಿ ಇದೆ. ಕುಂತೂರು ಮಠದ ಶಾಸನದಲ್ಲಿ ಸಾಲೂರು ಮಠದ ಸ್ವಾಮಿಗಳ ಬಗೆಗೆ ಗೌರವಪೂರ್ಣ ಭಾವನೆ ಇದೆ. 'ಈ ಮಠದಲ್ಲಿ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಕುಂತೂರಿನಿಂದ ಬಂದು ಕಾಡು ಜನರಿಗೆ ದೀಕ್ಷೆ ನೀಡಿ, ಅಲ್ಲೆ ಐಕ್ಯವಾದರು' ಎಂದಿದೆ. ಅದಕ್ಕೆ 'ಶಾಂತಮಲ್ಲಿಕಾರ್ಜುನರ ಗದ್ದುಗೆ' ಎಂದು ಕರೆಯುತ್ತಾರೆ. ಇಲ್ಲಿ ಮಾದೇಶ್ವರರ ಜೋಳಿಗೆ, ಬೆತ್ತ, ಶಂಕು, ಜಾಗಟೆಗಳು ಇನ್ನೂ ಕುರುಹಾಗಿ ಇವೆ. ಇಲ್ಲಿ ಮಕ್ಕಳಿಲ್ಲದವರಿಗೆ ಪಿಂಡಪ್ರಸಾದವನ್ನು ನೀಡಲಾಗುವುದು. ಅನೇಕ ಗ್ರಹ, ಪೀಡೆ, ವ್ಯಾಧಿಗಳ ವಿಮೋಚನೆಗೆ ಯಂತ್ರವನ್ನು ಕಟ್ಟಲಾಗುವುದು.

"ಮೊಟ್ಟಮೊದಲು ಮುಪ್ಪಿನ ಸ್ವಾಮಿಗಳು ಇಲ್ಲಿ ಒಂದು ಪರ್ಣಶಾಲೆಯನ್ನು ಮಾಡಿಕೊಂಡು ವಾಸವಾಗಿದ್ದರು. ಅವರು ಒಂದು ಸ್ತಂಬವನ್ನು ಮುಹೂರ್ತ ಮಾಡಿದರು." ಎಂದು 'ಶ್ರೀಸಾಲೂರು ಮಠ'[1] ಹೊತ್ತಗೆಯಲ್ಲಿ ಲೇಖಕರು ಪಟ್ಟದ ಮಲ್ಲಿಕಾರ್ಜುನ ಸ್ವಾಮಿಗಳು ಹೇಳಿದಂತೆ ಬರೆದಿರುವೆ ಎಂದಿದ್ದಾರೆ. ಇದರ ಪ್ರಕಾರ ಶ್ರೀಸಾಲೂರು ಸ್ವಾಮಿಗಳು, ಕರಿಬಸವ ಸ್ವಾಮಿಗಳು, ಶಾಂತಲಿಂಗ ಸ್ವಾಮಿಗಳು, ಸಾಲೂರು ಸ್ವಾಮಿಗಳು, ಮದ್ದುವೀರಸ್ವಾಮಿಗಳು, ಕೆಂಪನಂಜ ಸ್ವಾಮಿಗಳು, ಶಾಂತಲಿಂಗ ಸ್ವಾಮಿಗಳು, ಸಿದ್ಧವೀರಸ್ವಾಮಿಗಳು, ಗುಂಡೇಗಾಲದ ಸ್ವಾಮಿಗಳು, ಚೆನ್ನೂರಿನ ಸ್ವಾಮಿಗಳು, ದೇವರಳ್ಳಿ ಸ್ವಾಮಿಗಳು, ಸಿದ್ಧವೀರ ಸ್ವಾಮಿಗಳು, ಕೆಂಪನಂಜ ಸ್ವಾಮಿಗಳು, ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ಮುದ್ದುವೀರಸ್ವಾಮಿಗಳು ಮಹಾದೇವ ಸ್ವಾಮಿಗಳು, 'ಶಿಕಾರಿಪುರದ ಸಾಲೂರು ಎಂಬ ಗ್ರಾಮದಿಂದ ಬಂದ ಸಾಲೂರು ಸ್ವಾಮಿಗಳು ಈ ಮಠದ ಪಟ್ಟಾಧಿಕಾರಿಗಳಾದುದರಿಂದ ಈ ಮಠಕ್ಕೆ 'ಸಾಲೂರು ಮಠ' ಎಂಬ ಹೆಸರಾಯಿತು ಎಂಬುದು ಪ್ರತೀತಿ ಎಂದಿದ್ದಾರೆ. ಮಠದ ಪಕ್ಕದಲ್ಲಿ ಹಿಂದಿನ ಗುರುಗಳ ಹದಿನೈದು ಗದ್ದುಗೆಗಳಿವೆ. ಆದರೆ ಉಳಿದ ಇನ್ನಷ್ಟು ಗುರುಗಳ ಗದ್ದುಗೆಗಳು ಅಜ್ಞಾತವಾಗಿದೆಯೋ ತಿಳಿಯದಾಗಿದೆ. ಈ ಮಠಕ್ಕೆ ಪೊನ್ನಾಚಿ, ಬರಗೂರು, ಆಲಂಬಾಡಿ, ಹೂಗ್ಯ, ಹಳೆಯೂರುಗಳಲ್ಲಿ ಐದು ಶಾಖಾ ಮಠಗಳಿವೆ. ಇವುಗಳನ್ನು ಮಾದೇಶ್ವರರ ಶಿಷ್ಯರಾದ ನಿರಂಜನ ಸ್ವಾಮಿಗಳು ಸ್ಥಾಪಿಸಿದರೆಂದು ತಿಳಿದು ಬರುತ್ತದೆ. ೧೯೫೦ರವರೆಗೆ ಮಾದೇಶ್ವರ ದೇವಸ್ಥಾನವು ಈ ಮಠದ ಸ್ವಾಮಿಗಳ ಆಡಳಿತದಲ್ಲಿದ್ದು, ಅನಂತರ ಸರ್ಕಾರ ವಹಿಸಿಕೊಂಡಿತು.

ಶ್ರವಣನನ್ನು ಮಾದೇಶ್ವರನು ಸಂಹರಿಸಿದ ಬೆಟ್ಟವೇ 'ಶ್ರವಣನ ಬೋಳಿ'. ಇದು ಕೊಯಮತ್ತೂರು ಜಿಲ್ಲೆಯ ಸತ್ಯಮಂಗಲ ರಸ್ತೆಯಲ್ಲಿ ಗೋಪಿ ತಾಲ್ಲೂಕಿನ ಗೇರುಮಾಳದ ಬಳಿ ಇದೆ. ಇಲ್ಲಿ ಶ್ರವಣ ಚಮ್ಮಾವುಗೆಯನ್ನು ಮೆಟ್ಟಲು ಹೋಗಿ ಕಾಲು ಜಾರಿದ ಹೆಜ್ಜೆಯ ಗುರುತುಗಳು ಬಂಡೆಯ ಮೇಲೆ ಇವೆ. ಅರಮನೆಯ ಇಟ್ಟಿಗೆಯ ಚೂರುಗಳು ಕುರುಹುಗಳಾಗಿವೆ ಎಂದು ಹೇಳುತ್ತಾರೆ.

ಶ್ರವಣನನ್ನು ಸಂಹಾರ ಮಾಡುವುದಕ್ಕೆ ಮುಂಚೆ ಮಾದೇಶ್ವರರು ತಪಸ್ಸು ಮಾಡಿದ ಸ್ಥಳವೇ ತಪಸರೆ. ಸಾಲೂರು ಮಠದಿಂದ ಮಾರ್ಗಶಿರದಲ್ಲಿ ಆರಾಧನೆ ನಡೆಸುತ್ತಾರೆ. ವರ್ಷಕ್ಕೊಮ್ಮೆ ಜಾತ್ರೆ ನಡೆಯುವಾಗ, ಸುಮಾರು ಮಧ್ಯರಾತ್ರಿಯ ಎರಡು ಘಂಟೆಯ ಹೊತ್ತಿಗೆ ಒಂದು ಹಸುವು ಬರುತ್ತದೆ. ತಮ್ಮಡಪ್ಪ ಹಾಲು ಕರೆದ ಸ್ವಲ್ಪ ಹೊತ್ತಿಗೆ ಯಾರಿಗೂ ಕಾಣಿಸಿಕೊಳ್ಳದೆ ಹೊರಟು ಹೋಗುತ್ತದೆಯಂತೆ. ಬೆಳಿಗ್ಗೆ ತಮ್ಮಡಿ ಪೂಜೆಮಾಡಿ ಹಿಂತಿರುಗುತ್ತಾನಂತೆ.

ಮಾದೇಶ್ವರರು ನಾಗಮಲೆಗೆ ಹೋಗಿ ನೆಲೆಗೊಳ್ಳುವಾಗ ತಮ್ಮ ವಾಹನವಾದ ಹುಲಿಯನ್ನು ಸಂಕುಮಲೆಯಲ್ಲಿ ಸಂಕೋಲೆ ಬಿಗಿದು, ಗಾಳಿಯಲ್ಲಿಟ್ಟರು. ಅದು ಮಾದೇಶ್ವರರನ್ನು ಬಿಟ್ಟು ಇರಲಾರೆ ಎಂದು ಬರುತ್ತಿರಲು, ಮಾದೇಶ್ವರರು ಅದನ್ನು ಕಟ್ಟಿಹೋದರು. ಇಲ್ಲಿ ಆ ಪಾದಗಳ ಹೆಜ್ಜೆ ಗುರುತು ಇರುವುದನ್ನು ಕಾಣಬಹುದು. ಇದು ಸಂಕುಮಲೆಗೆ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿದೆ.

ತಪಸರೆ ಬೆಟ್ಟದ ಪಕ್ಕದಲ್ಲಿ 'ಕಂಬದ ಬೋಳಿ' ಇದೆ. ಮಾದೇಶ್ವರರು ನಡುಮಲೆಗೆ ಬರುವಾಗ ಇಲ್ಲಿ ತವಸರ (ಜಾಲಿ) ಕಂಬವನ್ನು ನೆಟ್ಟರೆಂದು ಪ್ರತೀತಿ. ಮಾದೇಶ್ವರರ ಬೆಟ್ಟಕ್ಕೆ ಬರುವ ಪರಿಸೆಗಳು ಇಲ್ಲಿ ಸಂಸರ್ಗ ಸೇರಿದರೆ ಅಂಥವರನ್ನು ಹೊತ್ತುಕೊಂಡು ಹೋಗಿ ಕುಕ್ಕಿ ತಿನ್ನಲು ಹುಲಿಯನ್ನು ಬಿಡಬೇಕೆಂದು, ಮಾದೇಶ್ವರರು ತಮ್ಮನಾದ ಕೊಂಗಳ್ಳಿ ಮಲ್ಲಪ್ಪನನ್ನು ಈ ಕಂಬದ ಮೇಲೆ ಕೂರಿಸಿದರಂತೆ.

'ನಾಗಮಲೆ' ಮಾದೇಶ್ವರ ಬೆಟ್ಟದ ಪೂರ್ವದಿಕ್ಕಿಗೆ ಸುಮಾರು ಹದಿನೆಂಟು ಕಿಲೋಮೀಟರ್ ದೂರದಲ್ಲಿದೆ. ಇಲ್ಲಿ ಮಾದೇಶ್ವರರು ತಪಸ್ಸು ಮಾಡಿದರು ಎಂದು ಹೇಳುತ್ತಾರೆ. ಇಲ್ಲೇ ದೊಡ್ಡ ಬಂಡೆಯೊಂದು ಲಿಂಗಾಕಾರವಾಗಿದೆ. ಸರ್ಪಾಕಾರದ ಬಂಡೆ ಲಿಂಗಕ್ಕೆ ನೆರಳು ಮಾಡಿದಂತೆ ಇದೆ. ಲಿಂಗ ಸುಮಾರು ಇಪ್ಪತ್ತೈದು ಮೂವತ್ತು ಅಡಿ ಎತ್ತರವಿದೆ. ಇದು ನೋಡಲು ನಾಗಲಿಂಗ ಪುಷ್ಪದಂತಿದೆ. ಈ ಲಿಂಗದ ಮೇಲೆ ಒಂದು ಸಣ್ಣ ಬಂಡೆ ಇದೆ. ಇದಕ್ಕೆ 'ಗೊಟ್ಟಿಕಾಯಿ' ಎಂದು ಹೇಳುತ್ತಾರೆ. ಒಮ್ಮೆ ಒಬ್ಬ ಕುರುಬರ ಹುಡುಗ ಗೊಟ್ಟಿಕಾಯಿಯನ್ನು ಲಿಂಗದ ಮೇಲೆ ಇಟ್ಟು ಚಿಚ್ಚುತ್ತಿರಲು ಮಾದೇಶ್ವರರು ಕೋಪಗೊಂಡು ಆ ಹುಡುಗನನ್ನು ಕಮರಿಗೆ ತಳ್ಳಿದರಂತೆ. ಈಗಲೂ ಆ ಕಾಯಿ ಕಲ್ಲಾಗಿ ಬೆಳೆದಿದೆಯೆಂಬ ನಂಬಿಕೆ. ಲಿಂಗ, ಸರ್ಪ ಎರಡೂ ನಾ ಹೆಚ್ಚು ಎಂದು ಬೆಳೆಯುತ್ತಿರಲು, ಮಾದೇಶ್ವರರು ಕೋಪದಿಂದ ಸರ್ಪವನ್ನು ಕೆಳಗೆ ತಳ್ಳಿದರಂತೆ. ಆದರೂ ಸರ್ಪ ಮಾದೇಶ್ವರರಿಗೆ ನೆರಳಾಗಬೇಕೆಂದು ಎತ್ತರಕ್ಕೆ ಬೆಳೆದು ನಿಂತಿದೆ. ಹೆಂಗಸರು ಈ ಮಲೆಗೆ ಹೋಗುವಂತಿಲ್ಲ, ಪ್ರತಿದಿನ ಪೂಜೆ ದೇವಸ್ಥಾನದ ವತಿಯಿಂದ ನಡೆಯುತ್ತದೆ. ಇದನ್ನು ನಾಗಮಲೆಯಲ್ಲಿರುವ ಪುಟ್ಟತಮ್ಮಡಿ ಸಂತತಿಯವರು ಪೂಜಿಸಿಕೊಂಡು ಬರುತ್ತಿದ್ದಾರೆ. ವಿಶೇಷ ಸಂದರ್ಭಗಳಲ್ಲಿ ಸಾಲೂರು ಮಠದ ಸ್ವಾಮಿಗಳು ಬರುತ್ತಾರೆ. ಇಲ್ಲಿಗೆ ಕಾಲ್ನಡಿಗೆಯಲ್ಲೇ ಹೋಗಬೇಕು.

ಸಂಕುಮಲೆ ಸುತ್ತಿನ ಕಾಡಿಗೆ 'ಕೊಂಡದ ಗುಳಿಕಾನು' ಎಂದು ಕರೆಯುತ್ತಾರೆ. ಇದು, ಸೋಲಿಗರ ನೀಲಯ್ಯ ತನ್ನ ಹೆಂಡತಿಯಾದ ಸಂಕಮ್ಮನ ಶೀಲದ ಬಗ್ಗೆ ಶಂಕಿಸಿ ಅವಳು ಸತ್ಯವಂತೆಯಾದರೆ, ಈ ಬೆಂಕಿ ಕೊಂಡದಿಂದ ಹೊರ ಬರಲಿ ಎಂದು ಹೇಳಿ ಆಕೆಯನ್ನು ಬೆಂಕಿಗೆ ತಳ್ಳಿದ ಸ್ಥಳವಂತೆ.

ತಾಳು ಬೆಟ್ಟದಿಂದ ಸ್ವಲ್ಪ ದೂರಹೋದರೆ "ಬೇವಿನ ಹಟ್ಟಿ" ಸಿಗುತ್ತದೆ. ಇದು ಬೇವಿನಕಾಳಿ ಸಕಲೈಶ್ವರ್ಯದಿಂದ ಮೆರೆದ ತಾಣ. ಮಾದೇಶ್ವರರು ಆಕೆಯನ್ನು ಪರೀಕ್ಷಿಸಿದ ಸ್ಥಳ. ಬೇವಿನ ಕಾಳಿ ಎಳ್ಳಿನ ಭಿಕ್ಷೆ ನೀಡದೆ ಇರಲು, ಆಕೆಯ ಸರ್ವಸ್ವವನ್ನೂ ನಾಶ ಮಾಡಿದುದು ಇಲ್ಲೆ. ಮಾದೇಶ್ವರನ ಬೆಟ್ಟಕ್ಕೆ ಕಾಲ್ನಡಿಗೆಯಲ್ಲಿ ಹೋಗುವ ಪರಿಷೆ "ಬೇವಿನ ಹಟ್ಟಿ ಧೂಪ" ಎಂದು ಹಾಕಿ ಮುಂದೆ ಹೋಗುವರು. ಬೇವಿನ ಕಾಳಿ ವಾಸವಾಗಿದ್ದ ಈ ಸ್ಥಳವು 'ಒಡಕೆ ಹಳ್ಳ'ದ ಹತ್ತಿರವೇ ಇದೆ.

ಮಾದೇಶ್ವರರು ಶ್ರೀ ಕ್ಷೇತ್ರಕ್ಕೆ ಬಂದು ಬಿಸಿಲಿನ ತಾಪವನ್ನು ತಾಳಲಾರದೆ ವಿಶ್ರಮಿಸಿಕೊಳ್ಳಲು ಒಂದು ಮರದ ಕೆಳಗೆ ಕುಳಿತುಕೊಂಡರು. ಆಗ ಕೆಲವು ಆನೆಗಳು ಬಂದು ಮಾದೇಶ್ವರರಿಗೆ ನೆರಳು ಮಾಡಿದವು. ಮಾದೇಶ್ವರರು ಅವುಗಳಿಗೆ ಮೋಕ್ಷ ನೀಡಿದರು. ಈ ಸ್ಥಳಕ್ಕೆ "ಆನೆತಲೆದಿಂಬು" ಎಂದು ಹೆಸರಾಯಿತು.

ಕಾಳಿ ಕಂಕಾಳಿಯರು ಶ್ರವಣನಿಗೆ ಕಾಡೆಮ್ಮೆ ಹಾಲನ್ನು ಗಡಿಗೆಯಲ್ಲಿ ತೆಗೆದುಕೊಂಡು ಹೋಗುತ್ತಿರಲು, ಮಾದೇಶ್ವರರು ಅದನ್ನು ಕೆಳಗುರುಳುವಂತೆ ಮಾಡಿದರು. ಹಾಲು ಹರಿಯಿತು. 'ಹಾಲು ಹಳ್ಳ'' ಎಂದು ಹೆಸರಾಯಿತು. ಮತ್ತೊಂದು ಕಥೆ ಹೀಗಿದೆ: ಶೇಷಣ್ಣೊಡೆಯ ಮಾದೇಶ್ವರರ ಪೂಜೆಗೆ ಹಾಲರುವೆಯನ್ನು ತೆಗೆದುಕೊಂಡು ಹೋಗುತ್ತಿದ್ದ, ಆತನ ವ್ರತವನ್ನು ಪರೀಕ್ಷಿಸಲು ಅದನ್ನು ಕಾಲಿನಿಂದ ಉರುಳಿಸಿದರು. ಆಗ ಶೇಷಣ್ಣ ಮಾದೇಶ್ವರರ ಅಭಿಷೇಕಕ್ಕೆ ಹಾಲಿಲ್ಲವಲ್ಲ ಎಂದು ಆತ್ಮಹತ್ಯೆ ಮಾಡಿಕೊಳ್ಳಲನುವಾದನು. ಕೂಡಲೇ ಮಾದೇಶ್ವರರು ಆತನ ಭಕ್ತಿಗೆ ಮೆಚ್ಚಿ "ಈ ಹಾಲರುವೆಯಿಂದ ಹರಿದ ಹಾಲೇ ಹಾಲು ಹಳ್ಳವಾಗಲಿ, ದೀಪಾವಳಿಯಲ್ಲಿ ಇದರಿಂದ ನನಗೆ ಮಜ್ಜನವಾಗಲಿ" ಎಂದು ಆಶೀರ್ವದಿಸಿದರು. ಇನ್ನೊಂದು ಕಥೆ ಹೀಗಿದೆ: "ಉತ್ತರಾಜಮ್ಮ"ನ ಬೆನ್ನು ಮಟ್ಟಿ ಸೀಳಿಕೊಂಡು ಬಂದ ಮಾದೇಶ್ವರರನ್ನುದ್ದೇಶಿಸಿ" "ನನ್ನ ಕಂದ ಮಾದೇವಾ ನನ್ನ ಎದೆ ಪಾಲು ಬಿಗಿತವೆ ಊಟ ಮಾಡುಬಾರಪ್ಪ" ಅಂದಾಗ 'ನಿನ್ನ ಎದೆ ಪಾಲು ಊಟ ಮಾಡಿದ್ರೆ ನಿನ್ನ ಹೊಟ್ಟೆಯಲ್ಲಿ ಹುಟ್ಟಿದಾಗಾಗುತ್ತೆ. ಕಂಬದ ಬೋಳಿ ಮ್ಯಾಲೆ ನಿಂತು ಮೂರು ತೊಟ್ಟು ಹಾಲು ಕರೆದು ಬಿಟ್ರೆ ಚಿಕ್ಕ ಹಾಲಳ್ಳ, ದೊಡ್ಡ ಹಾಲಳ್ಳ ಅಂತ ಮೂರು ಹಾಲುಹಳ್ಳ ಮಾಡ್ತೀನಿ ತಾಯಿ. ನನಗೆ ದೀವಳಿಗೆ ಸ್ನಾವೆಗೆ ಹಾಲು ಹಳ್ಳದಿಂದ ಹಾಲರುವೆ ಬರಲಿ'' ಎಂದು ಹೇಳಲು ಆಕೆ ಹಾಗೆಯೇ ಮಾಡಲು ಹಾಲು ಹಳ್ಳವಾಯಿತು" ಎಂಬುದು ಮತ್ತೊಂದು ಪ್ರತೀತಿ. ಈಗಲೂ ಈ ಹಾಲು ಹಳ್ಳದಲ್ಲಿ ಹರಿಯುವ ನೀರು ಹಾಲಿನಂತೆ ಬೆಳ್ಳಗಿರುವುದು ಒಂದು ವಿಶೇಷ.

ಶ್ರವಣನ ಮರ್ಧನವನ್ನು ಮಾಡಿದ ಮೇಲೆ ಮಾದೇಶ್ವರರು ಅಲ್ಲಿದ್ದ ದೇವಾದಿ ದೇವತೆಗಳು, ಜಂಗಮರು, ಎಲ್ಲರನ್ನೂ ಶ್ರವಣನ ಮೇಲೆ ಒಂದೊಂದು ಕಲ್ಲು ಹಾಕಿ

ಎಂದು ಹೇಳಿದಾಗ, ರಂಗನಾಥ ಅಲ್ಲಿಂದ ಓಡಿದ. ಆಗ ಮಾದೇಶ್ವರರು ಆತನನ್ನು ತಡೆದು ನಿಲ್ಲಿಸಿದ ಆ ಸ್ಥಳವನ್ನೇ "ರಂಗನಾಥ ಸ್ವಾಮಿಯ ಒಡ್ಡು" ಎಂದು ಕರೆಯುತ್ತಾರೆ.

ಸಾಲೂರು ಮಠದ ಉತ್ತರ ದಿಕ್ಕಿಗೆ ಬಸವನ ತಲೆಯಿದೆ. ಇದಕ್ಕೆ ಬಳೇಕಲ್ಲು ಬಸಪ್ಪ (ಬಳಪದ ಕಲ್ಲು ಬಸವೇಶ್ವರ) ಎಂದು ಕರೆಯುತ್ತಾರೆ. ಇದರ ಬಾಲದ ಭಾಗವನ್ನು ಹೂಗ್ಯದ ಗ್ರಾಮದವರು ಕಾವೇರಿ ನದಿಯ ಹತ್ತಿರ ಪೂಜಿಸುತ್ತಾರೆ. ತಲೆಯ ಭಾಗದ ಬಳೇಕಲ್ಲು ಬಸಪ್ಪನಿಗೆ ತಿಂಗಳಿಗೊಮ್ಮೆ ಮಾದೇಶ್ವರ ಬೆಟ್ಟದ ದೇವಾಲಯದ ಆಡಳಿತ ವರ್ಗದವರು ಪೂಜೆಗೆ ವ್ಯವಸ್ಥೆ ಮಾಡಿದ್ದಾರೆ. ಇದಕ್ಕೆ ಮಾರ್ಗಶಿರ ಮಾಸದಲ್ಲಿ ವಿಶೇಷ ಪೂಜೆ ನಡೆಯುತ್ತದೆ.

ಮಾದೇಶ್ವರರ ದನಗಳನ್ನು ಶೇಷಣ್ಣೊಡೆಯ ಕಾಯುತ್ತಿದ್ದ. ಒಂದು ದಿನ ಬಸವಗಳು ಗೌಜಲು ಹಕ್ಕಿಗಳಂತೆ ಹೋರಾಡುತ್ತಿರಲು, ಒಂದು ಬಸವ ಮಡಿಯಿತು. ಅದಕ್ಕೆ "ಗೌಜಲಕ್ಕಿ ಬಸವೇಶ್ವರ" ಎಂದು ಹೆಸರಾಯಿತು.

"ಗಾಣದಗುಡ್ಡ"ದ ಹತ್ತಿರ 'ಹಿಂಡಿ ಬಸವೇಶ್ವರ' ದೇವಾಲಯವಿದೆ. ಮಾದೇಶ್ವರರಿಗೆ ಎಳ್ಳೆಣ್ಣೆ ತೆಗೆದು ಇಟ್ಟ ಹಿಂಡಿಯೇ ಬಸವನ ರೂಪ ತಾಳಿತಂತೆ. ಅದೇ ಹಿಂಡಿ ಬಸವೇಶ್ವರ. ಈ ಸ್ಥಳದಲ್ಲಿ ರಾತ್ರಿ ಹೊತ್ತು ನಗಾರಿ, ಜಾಗಟೆ ಶಬ್ದ ಆಗುತ್ತದೆಂದು ಪ್ರತೀತಿ. ಇದು ಮಾದೇಶ್ವರ ದೇವಸ್ಥಾನದಿಂದ ೭-೮ ಕಿಲೋಮೀಟರ್ ದೂರದಲ್ಲಿದೆ. ಇದಕ್ಕೂ ಸಹ ಮಾದೇಶ್ವರ ದೇವಾಲಯದ ಆಡಳಿತ ವರ್ಗದವರು ತಿಂಗಳಿಗೊಮ್ಮೆ ಪೂಜೆಯ ವ್ಯವಸ್ಥೆ ಮಾಡಿದ್ದಾರೆ.

"ಕಣಿವೆ ಬಸವೇಶ್ವರ"ನನ್ನು 'ಬಂಡಳ್ಳಿ ಬಸವ' ಎಂದೂ ಕರೆಯುವುದುಂಟು. ಬಂಡಳ್ಳಿ ದುರ್ಗದಿಂದ ಬರುತ್ತಿದ್ದ ಬಸವ ದಾರಿಯಲ್ಲಿ ಅಸುನೀಗಿತಂತೆ. ಇದೇ ಕಣಿವೆ ಬಸವೇಶ್ವರನ ಗದ್ದುಗೆ. ಇದು ಆನೆ ತಲೆ ದಿಂಬಿನ ರಸ್ತೆಯ ಪಕ್ಕದಲ್ಲಿದೆ.

ತಮಿಳುನಾಡಿನ ಬರಗೂರಿನಲ್ಲಿರುವ ವೀರಭದ್ರೇಶ್ವರ ದೇವಾಲಯದ ಆಡಳಿತವನ್ನು ಮಾದೇಶ್ವರ ದೇವಾಲಯದ ಆಡಳಿತ ವರ್ಗವೇ ನೋಡಿಕೊಂಡು ಪೂಜಾ ಕಾರ್ಯವನ್ನು ನಡೆಸಿಕೊಂಡು ಹೋಗುತ್ತದೆ.

'ಗೋಪಿನಾಥ' ಎಂಬ ಊರಿನ ಪಕ್ಕದಲ್ಲಿ 'ಆದಿಮಲೆ ಮಾದಪ್ಪನ' ಬೆಟ್ಟ ಇದೆ. ಆಲಂಬಾಡಿ ಕಡೆಯಿಂದ ಮಾದೇಶ್ವರರು ಸುತ್ತಾಡಿಕೊಂಡು ಬರುವಾಗ ವಿಶ್ರಾಂತಿ ಪಡೆದ ಸ್ಥಳ ಇದೆಂದು ಹೇಳುತ್ತಾರೆ. ಇದಕ್ಕೂ ಕೂಡ ಮಾದೇಶ್ವರ ದೇವಾಲಯದ ವತಿಯಿಂದ ತಿಂಗಳಿಗೊಮ್ಮೆ ಮಾರ್ಗಶಿರ ಮಾಸದಲ್ಲಿ ಪೂಜೆ ನಡೆಯುತ್ತದೆ.

ಬೇಡಗಂಪಣ ರಾಜ್ಯವಾಗಿದ್ದ ಆಲಂಬಾಡಿಯಲ್ಲಿ ರಂಗನಾಥಸ್ವಾಮಿ ದೇವಾಲಯ, ಕೋಟೆ, ಮದ್ದಿನ ಮನೆಗಳಿವೆ. ಇಂದು ಇವು ಬಹಳ ಶಿಥಿಲವಾಗಿವೆ.

ಸಂಕಮ್ಮನ ಮಲೆಗೆ ಹೋಗುವಾಗ "ಸಂತೇಕಾನಿ ಬೋಳಿ" ಸಿಗುತ್ತದೆ. ಒಂದು ಸಾರಿ ಕಾಡಿನ ಬೇಡರು ಬೇಟೆ ಆಡುತ್ತಿದ್ದರು. ಅವರ ಕಣ್ಣಿಗೆ ಒಂದು ಚಿನ್ನದ ಉಡ, ಬೆಳ್ಳಿಯ ಉಡ ಎರಡು ಕಾಣಿಸಿಕೊಂಡವು. ಬೇಡರು ಅವುಗಳನ್ನು ಹಿಡಿಯಬೇಕೆಂದು ಹಿಂಬಾಲಿಸಿದರು. ಗವಿಯೊಂದರಲ್ಲಿ ಮಾದೇಶ್ವರರು ತಪಸ್ಸು ಮಾಡುತ್ತಿದ್ದರು. ಆ ಬಂಡೆಯ ಮಧ್ಯೆ ಈ ಉಡಗಳು ಹೋದ ಕೂಡಲೆ ಬಂಡೆಗಳು ಮುಚ್ಚಿಕೊಂಡವು. ಬೇಡರು ನಿರಾಶರಾಗಿ ಹೊರಟು ಹೋದರು. ಈಗಲೂ ಆ ಬಂಡೆಗಳ ಮಧ್ಯೆ ಪ್ರಕಾಶಮಾನವಾದ ಜ್ಯೋತಿ ಕಾಣಿಸುತ್ತದಂತೆ. ಇದಕ್ಕೆ ಭಕ್ತರು ಪೂಜೆ ಸಲ್ಲಿಸುತ್ತಾರೆ. ಇದೇ 'ಸಂತೇಕಾನಿ ಬೋಳಿ'.

ಇವಲ್ಲದೆ ಪಾಲಮಲೆ ಸಿದ್ದೇಶ್ವರ, ಪೊನ್ನಾಚಿಮಲೆ ಪರಮೇಶ್ವರ ಮುಂತಾದ ದೇವತೆಗಳು ಸೋಲಿಗರ, ಕಾಡುಜನರ ದೇವರುಗಳಾಗಿ ಮೆರೆಯುತ್ತಿದ್ದಾರೆ. ಬರಗೂರಿನ ಪಂದೇಶ್ವರ, ಮಾರ್ಟಳ್ಳಿಯ ಬ್ರಹ್ಮೇಶ್ವರ, ಇವೆಲ್ಲಾ ಮಾದೇಶ್ವರ ಕ್ಷೇತ್ರದ ಸುತ್ತಲೂ ಇವೆ.

"ಎಲಚೀಕೆರೆ, ಬಿದರಳ್ಳಿ, ಕಡಬೂರು, ಮಾರ್ಟಳ್ಳಿ, ಸುಳ್ಳವಾಡಿ, ನಾಲ್‌ರೋಡು ಮಿಣ್ಯ, ಕೋಣನಕೆರೆ, ಕೊಕ್ಕಬರೆ, ತೋಕೆರೆ, ದೊಡ್ಡಣೆ, ತೊಳಸೀಕೆರೆ, ಅಣೇಹೊಲ, ಕೊಂಬುದಿಕ್ಕಿ, ತೇಕಣೆ, ಗದ್ದೀಗೀರಪ್ಪನ ದೊಡ್ಡಿ, ಇಂಡಿಗನತ್ತ, ಕೀರನ ಹೊಲ, ಗೊರಸಾಣೆ, ಕೊಂಗನೂರು, ಪಡಿಸಲನತ್ತ, ಗೋಪಿನಾಥ, ಜಂಬೋಟಿ, ಆಲಂಬಾಡಿ ಹೂಜಿಮಲೆ, ತಟ್ಟೇಕೆರೆ, ಗರಕೇಕಂಡಿ" ಮುಂತಾದ ಸ್ಥಳಗಳನ್ನು ಮಾದೇಶ್ವರ ಕ್ಷೇತ್ರ ಆವರಿಸಿದೆ.

ದೇವಾಲಯದ ಹತ್ತಿರ ಇರುವ ಊರು ತಮ್ಮಡಳ್ಳಿ (ದೇವರಹಳ್ಳಿ). ಹಿಂದೆ ತಮ್ಮಡಿಗಳು ದೇವಾಲಯದ ಹತ್ತಿರ ಮನೆ ಮಾಡಿಕೊಂಡು ಇದ್ದರು. ಇವರಿಗೆ 'ಕಂಪಣದವರು' ಎಂದು ಕರೆಯುವರು. ಇವರು ಬೇಡಗಂಪಣ ರಾಜ್ಯದಲ್ಲಿದ್ದ ಜನರು. ಕಂಪಣದವರು (ಒಂದು ರೀತಿಯ ಆಯುಧವನ್ನು ಹೊಂದಿದವರು) ಮಾದೇಶ್ವರನ ಭಕ್ತರು. ಇವರಲ್ಲಿ 'ಗೌಡರು', 'ತಮ್ಮಡಿಗಳು' ಎಂಬ ಎರಡು ವಿಧಗಳುಂಟು. ಒಬ್ಬರು ಮತ್ತೊಬ್ಬರಿಗೆ ಹೆಣ್ಣು ಕೊಡುವುದು, ತರುವುದು ಮಾಡುತ್ತಾರೆ. ಆದರೆ ಒಂದೇ ಪಂಗಡದಲ್ಲಿ ಅಂದರೆ ಗೌಡರ ಗುಂಪಿನಲ್ಲಿ ಗೌಡರು ಮದುವೆ ಆಗುವುದಿಲ್ಲ. ಏಕೆಂದರೆ ಅವರಿಬ್ಬರೂ ಅಣ್ಣ ತಮ್ಮಂದಿರಾಗುತ್ತಾರೆ ಎಂಬ ದೃಷ್ಟಿಯಿಂದ. ಗೌಡರಲ್ಲೂ ಅನೇಕ

ಗುಂಪುಗಳಿವೆ. ಕೆಲವರು ಬಸವೇಶ್ವರನನ್ನು ಪೂಜಿಸುತ್ತಾರೆ. ತಮ್ಮಡಿತನವನ್ನು ಗಂಡು ಸಂತತಿಯವರು ಮಾತ್ರ ವಹಿಸಿಕೊಳ್ಳುತ್ತಾರೆ. ಗೌಡರ ಹೆಂಗಸರು ಮಾದೇಶ್ವರರನ್ನು ಪೂಜಿಸುವುದಿಲ್ಲ. ಅಂದರೆ ತಮ್ಮಡಿತನ ಮಾಡುವುದಿಲ್ಲ. ಅವರು ಭಕ್ತರಾಗಿ ಪೂಜೆಗೆ ಸಹಾಯಕರಾಗುತ್ತಾರೆ. ಇವರು ಲಿಂಗಧಾರಿಗಳಾದರೂ ಇವರ ಮದುವೆ ಮುಂತಾದ ಕಾರ್ಯಗಳು ಗಿರಿಜನರ ಸಂಪ್ರದಾಯವನ್ನು ಹೋಲುತ್ತವೆ. ಎಲ್ಲಾ ಶಾಸ್ತ್ರಗಳಾದ ಮೇಲೆ ಹೆಣ್ಣಿನ ಮನೆಯಲ್ಲಿ ತಾಳಿ ಕಟ್ಟಿಸುತ್ತಾರೆ. ಪೂಜಾರಿ ಕಾರ್ಯಗಳಲ್ಲಿ ಸಾಲೂರು ಮಠದ ಸ್ವಾಮಿಗಳು ಬರುತ್ತಾರೆ. ಕೂಡ್ಲೂರು ಮಠದ ಜಂಗಮರಿಲ್ಲದೆ ಇವರು ಮದುವೆ ಮಾಡುವಂತಿಲ್ಲ. ಹಿಂದೆ ಮದುವೆ ಐದು ದಿನಗಳು ನಡೆಯುತ್ತಿದ್ದುವು. ಈಗ ಅದು ಕಾಲಕ್ಕೆ ತಕ್ಕಂತೆ ಮೂರೇ ದಿನಗಳಲ್ಲಿ ಮುಗಿಯುತ್ತದೆ. ತಮ್ಮಡಿಗಳು ಭಾವಮೈದುನರು, ಆದುದರಿಂದ ಅದೇ ಪಂಗಡದಿಂದ ಹೆಣ್ಣು ತರುವುದಿಲ್ಲ. ಗಂಡಿನ ಮನೆಯಲ್ಲಿ ಹುಡುಗನಿಗೆ, ವಧುವಿನ ಮನೆಯಲ್ಲಿ ಹೆಣ್ಣಿಗೆ ಕಂಕಣ ಕಟ್ಟಿಸುತ್ತಾರೆ. ಈ ಸಂಪ್ರದಾಯದವರು ತಮಿಳುನಾಡಿನಲ್ಲೂ ಸಹ ಇದ್ದಾರೆ. ಇವರನ್ನು 'ಬೇಡರ ಕನ್ನಯ್ಯನ ಮೂಲ ಸಂತತಿಯವರು' ಎಂದು ಹೇಳುತ್ತಾರೆ. ಇವರೆಲ್ಲರ ದೀಕ್ಷಾ ಗುರುಗಳು ಸಾಲೂರು ಮಠದ ಸ್ವಾಮಿಗಳು. ಮಾದೇಶ್ವರನನ್ನು ಪೂಜಿಸಲು ಕಾಳಮಾದ ಒಡೆಯ, ಚೋಳಮಾದ ಒಡೆಯ, ಕೆಂಪಮಾದ ಒಡೆಯರ ಸಂತಾನದ ಮೂರು ಒಕ್ಕಲುಗಳಿವೆ. ಇವರು ಗೇರುಮಾಳ, ಹಾಸನೂರು, ತಟ್ಟೆ ಬಾಗಿಲುಗಳಲ್ಲಿದ್ದಾರೆ. ಇವರು ಕ್ರಮವಾಗಿ ನಾಲ್ಕು ನಾಲ್ಕು ತಿಂಗಳಿಗೊಮ್ಮೆ ಮಾದೇಶ್ವರನ್ನು ಪೂಜಿಸುತ್ತಾರೆ. ತಮ್ಮ ಸರದಿ ಬಂದಾಗ ತಮ್ಮಡಗೇರಿಯಲ್ಲಿ ಬಂದಿದ್ದುಕೊಂಡು ಪೂಜೆಮಾಡಿ ಮತ್ತೆ ಹಿಂತಿರುಗಿ ಹೋಗುತ್ತಾರೆ.

ಹಿಂದೆ ಈ ಕ್ಷೇತ್ರದಲ್ಲಿ ಸೋಲಿಗರು, ಕುರುಬರು ವಾಸವಾಗಿದ್ದು ಜೇನು ಕೀಳುವುದು, ಬೇಟೆ ಆಡುವುದು ಇವುಗಳನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡಿದ್ದರು. ಬರುಬರುತ್ತಾ ಅವರು ವ್ಯವಸಾಯ ಮಾಡಿ ರಾಗಿ, ಜೋಳ, ಅವರೆ, ತೊಗರಿ, ಹುರುಳಿ, ಉಚ್ಚೆಳ್ಳು, ಎಳ್ಳು ಮುಂತಾದುವುಗಳನ್ನು ಬೆಳೆಯುತ್ತಿದ್ದಾರೆ. ಇಲ್ಲಿ ಎಲ್ಲಾ ರೀತಿಯ ಜನರೂ ವಾಸವಾಗಿದ್ದು, ಶಾಲೆ, ಆಸ್ಪತ್ರೆ, ಮುಂತಾದ ನವೀನ ಸೌಲಭ್ಯಗಳನ್ನು ಪಡೆದಿದ್ದಾರೆ. ಈಗ ಮಾದೇಶ್ವರ ಕ್ಷೇತ್ರ ಸಂಸ್ಕೃತಿಯ ನೆಲೆಯಾಗಿದೆ.

## ಕಂಸಾಳೆ ಸಂಪ್ರದಾಯ:

**ಕಂಸಾಳೆ ವಾದ್ಯ** : ಮಾದೇಶ್ವರ ಭಕ್ತರು ತಮ್ಮ ಆರಾಧ್ಯ ದೇವತೆಯಾದ ಮಾದೇಶ್ವರನನ್ನು ಒಲಿಸಿಕೊಳ್ಳಲು ಕಂಸಾಳೆಯನ್ನು ಬಳಸಿದರು. ಈ ಕಂಸಾಳೆಯನ್ನು ಬಿರುದು ಎಂದು ಹೇಳುವ ವಾಡಿಕೆ ಇದೆ. ಮಾದೇಶ್ವರನ ಮಹಿಮೆಯನ್ನು ಎತ್ತಿ

ಹಿಡಿಯಲು ಆ ಭಕ್ತರು ಆತನ ಬಗ್ಗೆ ಅದ್ಭುತ ಕಥೆಗಳನ್ನು ಕಟ್ಟಿ ಅವನ ಚರಿತ್ರೆಯನ್ನು ಕಂಸಾಳೆ ತಾಳದೊಂದಿಗೆ ಹಾಡಿ ಹೊಗಳಿದರು. ಆತನನ್ನು ನೆನೆದು ಪ್ರೇಮರೆತು ನರ್ತಿಸಿದರು. ಅದೇ ಕಂಸಾಳೆಯ ಕಲೆಯಾಯಿತು. ನೃತ್ಯ, ಗೀತೆ, ಸಾಹಿತ್ಯ, ಅಭಿನಯ ಸೇರಿ ಅದೇ ಒಂದು ವಿಶಿಷ್ಟ ಕಲೆಯಾಗಿ ಪರಿಣಮಿಸಿ ಕಂಸಾಳೆ ಮೇಳವೆನಿಸಿತು.

ಮಾದೇಶ್ವರನ ಸಂಪ್ರದಾಯದವರು ಬಳಸುವ 'ಕಂಸಾಳೆ' ತಾಳವು ಒಂದು ಪ್ರಮುಖವಾದ ಜಾನಪದ ವಾದ್ಯ. 'ಕಂಸಾಳೆ' ಎಂಬುದು ಕಾಂಸ್ಯತಾಳ ಎಂಬುದರ ತದ್ಭವ ರೂಪ. 'ಕಾಂಸ್ಯತಾಳ' ಎಂದರೆ 'ಕಂಚಿನ ತಾಳ'.

ಕಂಸಾಳೆ ಕಂಚಿನಿಂದ ಮಾಡಿದ ಅಂಗೈ ಅಗಲದ ಒಂದು ಬಟ್ಟಲು, ಅದಕ್ಕೊಂದು ಕಂಚಿನ ಮುಸುಕು. ಇದು ತಟ್ಟೆಯಾಕಾರವಾಗಿರುತ್ತದೆ. ಇದು ಸುಮಾರು ೧೦ ಮೀಟರ್ ವ್ಯಾಸವಿರುತ್ತದೆ. ಇದರ ಮಧ್ಯೆ ಸ್ವಲ್ಪ ಉಬ್ಬಿದ ಭಾಗ. ಅದಕ್ಕೊಂದು ರಂಧ್ರ. ಅದಕ್ಕೆ ಬಣ್ಣ ಬಣ್ಣದ ದಾರಗಳನ್ನು ಜೋಡಿಸಿ, ಗಗ್ಗರ ಮತ್ತು ಐದಾರು ಗೊಂಡೆಗಳಿಂದ ಅಲಂಕಾರ ಮಾಡಿ, ಹಿಡಿದುಕೊಳ್ಳಲು ಅನುಕೂಲವಾಗುವಂತೆ ಮಾಡಿರುತ್ತಾರೆ. ಇಂಥ ಕಂಚಿನ ಸಾಧನಗಳ ಬಡಿತದಿಂದ 'ಕಣೆ ಕಣೆ' ನಾದ ಹೊರ ಹೊಮ್ಮುತ್ತದೆ. ನಮ್ಮ ಜನಪದ ಕವಿಗಳು 'ಕಂಚಿನ ಕಂಸಾಳೆ ಚಂದ, ಪಂಚೈದುಗೊಂಡ ಚೆಂದ' ಎಂದು ಹೇಳಿದ್ದಾರೆ. ಆದಯ್ಯನ ವಚನದಲ್ಲೂ ಈ ಕಂಸಾಳೆಯ ಪ್ರಸ್ತಾಪ ಬಂದಿರುವುದನ್ನು ಕಾಣಬಹುದು.

> "...... ಇನ್ನು ಪ್ರಸಾದ ಲಿಂಗದಲ್ಲಿಯ ಮಿಶ್ರಾರ್ಪಣದ ವಿವರವೆಂತೆಂದಡೆ
> ಗಂಟೆ, ಜಯಗಂಟೆ, ತಾಳ, ಕಂಸಾಳ, ಮೊದಲಾದ
> ವಾದ್ಯವಿರುವುದು ಪ್ರಸಾದ ಲಿಂಗದಲ್ಲಿಯ ಆಚಾರಲಿಂಗ"[೬]

ಕ್ರಿ.ಶ.೧೭೫೦ರಲ್ಲಿದ್ದ ಮಿಣ್ಣದ ಗುರುಸಿದ್ಧ ಕವಿಯು ಮಾದೇಶ್ವರನ ಜಾತ್ರೆಯ ವೈಭವವನ್ನು ಬಣ್ಣಿಸುವಾಗ-

> ಕೊಂಬು ತಮ್ಮಟೆ ಸಮ್ಮೇಳ ಕಂಸಾಳೆಯ
> ಇಂಬಾಗಿ ನುಡಿದ ಧಮರಿಮಿ
> ಕುಂಭಿಣಿ ದೊರೆಗಳು ಪೊಡೆವ ಭೇರಿಯ ದನಿ
> ಸಂಭ್ರಮದಿಂದ ನಡೆದಾರು।।
>
> ವಾಸಕಂಸಾಳೆಯ ನುಡಿಸಿಕೊಂಡು ಮಾ।
> ದೇಶ್ವರನಂಘ್ರಿಗೆ ನಮೋ ಯೆಂದು।
> ಭಾಷಪಾಲಕ ದುರಿತವ ಮೊರೆಯೆಂದು ವೀ
> ರೇಶನ ಕೊಂಡಾಡಿದರು।।[೭]

'ಶಿವ ಮತ್ತು ಶರಣರ ಮಹಿಮೆಯನ್ನು ಕಾವ್ಯವಾಗಿ ಹಾಡುವ ಸಂಪ್ರದಾಯ ಮಾದೇಶ್ವರ ಭಕ್ತರದು'.[8] ಭಜನೆ ಹಾಡುಗಳಲ್ಲಿ, ಜಾತ್ರೆಯ ವೇಳೆಗಳಲ್ಲಿ ಕೊಂಬು ತಮ್ಮಟೆಗಳ ಜೊತೆ ಇಂಪಿಗೆ ಈ ತಾಳವನ್ನು ನುಡಿಸುವುದುಂಟು. ನಂಜುಂಡೇಶ್ವರ, ಬಂಜೆಹೊನ್ನಮ್ಮ , ಸಾರಂಗಧರ ಮೊದಲಾದ, ಧಾರ್ಮಿಕ ಲೌಕಿಕ ಕಥೆಗಳನ್ನು ಹಾಡುವಾಗಲೂ ಕಂಸಾಳೆಯವರು ಕಂಸಾಳೆಯನ್ನು ಉಪಯೋಗಿಸುತ್ತಾರೆ.

ಹಿತ್ತಾಳೆ, ಕಂಚಿನ, ಎರಕದ ಕಂಸಾಳೆಯನ್ನು ದೇವರೆಂದು ಪರಿಗಣಿಸಿ ಕಂಸಾಳೆಯವರು ನುಡಿಸುತ್ತಾರೆ. ಮಾದೇಶ್ವರರು 'ಕ್ವಾರಣ್ಯ' ಸಾರುವಾಗ ಈ ಕಂಸಾಳೆಯನ್ನು ಉಪಯೋಗಿಸುತ್ತಿದ್ದರು ಎಂಬುದು ನಮ್ಮ ಕಂಸಾಳೆಯವರ ಅಭಿಮತ. ಮಾದೇಶ್ವರ ನುಡಿಸಿದ ಕಂಸಾಳೆಯನ್ನು ದೇವರೆಂದೇ ಪರಿಗಣಿಸುತ್ತಾರೆ. ದೇವರ ಗುಡ್ಡರು ಅದಕ್ಕೂ ಪೂಜೆ ಸಲ್ಲಿಸಿ, ಅದನ್ನು ನುಡಿಸುತ್ತಾ, ಅದರ ಇಂಪಾದ ದನಿಯೊಡನೆ ತಮ್ಮ ಹಾಡುಗಳನ್ನು ಹಾಡುವರು. ಇದು ಕೇಳುವವರಿಗೆ ತುಂಬಾ ಹಿತವಾಗಿರುತ್ತದೆ. ಕಂಸಾಳೆಯ ಮೇಲಿನ ಮುಸುಕಿಗೆ ಭದ್ರಿಸುವ ಕೈಗೆ ಆಧಾರವಾಗಿ ಹಿಡಿದುಕೊಳ್ಳಲು, ಅಂದವಾಗಿ ಆಕರ್ಷಕವಾಗಿ ಎದ್ದು ಕಾಣಲು ಬಣ್ಣ ಬಣ್ಣದ ದಾರಗಳು ಮತ್ತು ಬಟ್ಟೆಗಳಿಂದ ಗೊಂಡೆಗಳನ್ನು ಮಾಡಿ, ಗಗ್ಗರಗಳಿಂದ ಅಲಂಕರಿಸಿ, ನೋಡಲು ಸುಂದರವಾಗಿ ಇರುವಂತೆ ಮಾಡುತ್ತಾರೆ. ಈ ರೀತಿಯ 'ವಾಸ ಕಂಸಾಳೆ'ಯನ್ನು ಮಾದೇಶ್ವರನ ಜಾತ್ರೆಯಲ್ಲಿ ಭಕ್ತಾದಿಗಳು ಇಂಪಾದ ನಾದ ಮಾಡುತ್ತಾ , ಮಾದೇಶ್ವರನ ಮಹಿಮೆಯನ್ನು ಹಾಡಿ ಹೊಗಳುತ್ತಿದ್ದರೆಂದು, ಮಿಣ್ಯದ ಗುರುಸಿದ್ಧ ಕವಿ 'ಮಾದೇಶ್ವರ ಸಾಂಗತ್ಯ'ದಲ್ಲಿ ಬಣ್ಣಿಸಿದ್ದಾನೆ. ವಾಸ ಕಂಸಾಳೆ ಎಂದರೆ ಬಟ್ಟೆಯಲ್ಲಿ ಅಲಂಕರಿಸಿದ ಕಂಸಾಳೆ ಎಂದು.

ಕಂಸಾಳೆ ಕಲೆಯನ್ನು ಎರಡು ವಿಧಗಳಾಗಿ ವಿಂಗಡಿಸಬಹುದು.

೧. ಬೀಸು ಕಂಸಾಳೆ ೨. ಕುಳಿತು ಹಾಡುವ ಕಂಸಾಳೆ ಮೇಳ.

### ೧. ಬೀಸು ಕಂಸಾಳೆ:

ಇದು ಬೀಸು ಕಂಸಾಳೆಯ ನೃತ್ಯ ಮೇಳ. ಬೀಸು ಕಂಸಾಳೆಯ ಮೂಲ ಪ್ರವರ್ತಕ ಮಾದೇಶ್ವರ. ಮಾದೇಶ್ವರ ಕತ್ತಿ ಪವಾಡದ ಹಳ್ಳದಲ್ಲಿ ಬಿಲ್ಲಯ್ಯ ಕಾರಯ್ಯರನ್ನು ಪರೀಕ್ಷೆ ಮಾಡಿದ ಮೇಲೆ ಸಂತೋಷದಿಂದ ಕಂಸಾಳೆ ಬೀಸಿ ನೃತ್ಯವೆಸಗಿದನಂತೆ. ಇದೇ ಬೀಸು ಕಂಸಾಳೆಯಾಯಿತು ಎಂಬುದು ನಮ್ಮ ಜನಪದರ ನಂಬಿಕೆ. ಬೀಸು ಕಂಸಾಳೆಯಲ್ಲಿ ಎರಡು ವಿಧಗಳುಂಟು. 'ತಟ್ ಬಟ್ಟು' ಮತ್ತು 'ತಾರ್ ಬಟ್ಟು'. ಕಂಸಾಳೆಯನ್ನು ಕಲಾವಿದರು ಒಬ್ಬರಿಗೊಬ್ಬರು ತಟ್ಟುತ್ತಾ, ಹಾಡುತ್ತಾ ಕುಣಿಯುವ ವಿಧಾನ 'ತಟ್‌ಬಟ್ಟು'. ಇದರಲ್ಲಿ ಮೂವರಿಂದ ಎಂಟು ಜನರು ಭಾಗವಹಿಸುವುದನ್ನು ಕಾಣಬಹುದು. ಇದು ಕಣ್ಣು ಕಿವಿಗಳೆರಡಕ್ಕೂ ಹಿತ. ಈ ಕಂಸಾಳೆಯ ಕಲಾವಿದರಿಗೆ ನಿರ್ದಿಷ್ಟವಾದ ಉಡಿಗೆ

ತೊಡಿಗೆಗಳೇನೂ ಇಲ್ಲ, ಸಾಧಾರಣವಾದ ಅಂಗಿ, ಮೊಣಕಾಲಿನವರೆಗೂ ಕಚ್ಚೆ ಹಾಕಿಕೊಂಡು ತಲೆಗೆ ಬಣ್ಣ ಬಣ್ಣದ ಅಲಂಕಾರವಾದ ರುಮಾಲನ್ನು ಸುತ್ತಿರುತ್ತಾರೆ. ಕೆಲವು ಸಾರಿ ಕೇವಲ ಚಡ್ಡಿಯೊಂದನ್ನೇ ಹಾಕಿಕೊಳ್ಳುವುದೂ ಉಂಟು. ಹಣೆ ಮೈಕೈಗಳಿಗೆ ವಿಭೂತಿಧಾರಣೆ ಮಾಡಿಕೊಂಡು, ಕೊರಳು ಮತ್ತು ಕಿವಿಗಳನ್ನು ರುದ್ರಾಕ್ಷಿಗಳಿಂದ ಅಲಂಕರಿಸಿಕೊಂಡಿರುತ್ತಾರೆ. ಕಂಸಾಳೆಯ ಮೇಲು ಮುಸುಕಿಗೆ ಸುಮಾರು ೦.೪೫ ಮೀಟರ್‌ನಿಂದ ೦.೬೧ ಮೀಟರ್ ದಾರಕ್ಕೆ ಬಣ್ಣ ಬಣ್ಣದ ಗೊಂಡೆಗಳನ್ನು ಕಟ್ಟಿರುತ್ತಾರೆ. ಈ ದಾರದ ತುದಿಯನ್ನು ಹಿಡಿದುಕೊಂಡು ಬೀಸಿ ತಾಳ ಹಾಕುತ್ತಾರೆ; ಕಲಾವಿದರು. ಕೋಲಾಟದಲ್ಲಿ ಕೋಲು ಹಿಡಿದು ಆಡುವಂತೆ ಈ ಬೀಸು ಕಂಸಾಳೆಯಲ್ಲಿ ಕಂಸಾಳೆ ಹಿಡಿದು ವೃತ್ತಾಕಾರವಾಗಿ ಅಥವಾ ತ್ರಿಕೋಣಾಕಾರವಾಗಿ ನಿಂತು ಆವೇಶದಿಂದ ಕಂಸಾಳೆಗಳನ್ನು ತಟ್ಟುತ್ತಾ, ಹಾಡುತ್ತಾ, ತಿರುಗಿಸುತ್ತಾ ನರ್ತಿಸುವರು. ಇದು ಚಮತ್ಕಾರ, ಶ್ರಮ, ಎರಡೂ ಸೇರಿ ಅಭಿವ್ಯಕ್ತವಾಗುವ ಒಂದು ವಿಶಿಷ್ಟ ಶೈಲಿಯ ಕಲೆ. ನಾಲ್ಕು ಜನ ಕಲಾವಿದರಿದ್ದರೆ ಮಧ್ಯೆ ಒಬ್ಬ, ಸುತ್ತಾ ಮೂವರು ನಿಂತು ಮಧ್ಯೆ ಇರುವ ಕಲಾವಿದ ನಿಂತು ಕುಳಿತು ತಲೆಯ ಮೇಲೆ, ಬೆನ್ನು ಹಿಂದೆ, ಕಾಲುಗಳ ಕೆಳಗೆ ಬಾಗಿ ಬಳುಕಿ ಉರುಳುತ್ತಾ, ಸುತ್ತಾ ನಿಂತಿರುವ ಮೂವರು ಕಲಾವಿದರಿಗೂ ತಾಳಗಳನ್ನು ಕೊಡುತ್ತಾ, ನಿರ್ದಿಷ್ಟ ಲಯದಲ್ಲಿ ಕಂಸಾಳೆಯ ಕಲೆಯನ್ನು ಪ್ರದರ್ಶಿಸುತ್ತಾರೆ. ಮಂದಗತಿಯಲ್ಲಿ ಆರಂಭವಾದ ಈ ಆಟ ತೀವ್ರ ಗತಿಯಲ್ಲಿ ಸಾಗುತ್ತದೆ.

"ಲಿಂಗ ಬಾ ಮುದ್ದುಲಿಂಗ ಬಾ
ನಮ್ಮ ಮುದ್ದು ಮಾದಯ್ಯನ ಲಿಂಗ ಬಾ"

ಎಂಬ ಹಾಡನ್ನು ತಾಳಲಯ ಬದ್ಧವಾಗಿ ಹಾಡುತ್ತಾ ನೃತ್ಯವೆಸಗುತ್ತಾರೆ. ಈ ನೃತ್ಯದ ಸಂದರ್ಭದಲ್ಲಿ ಕಲಾವಿದನ ಕೈಚಳಕ, ಕಂಚಿನ ತಾಳದ ಇಂಪಾದ ನಾದ, ನೋಡಲು ಕೇಳಲು ಆನಂದ ಹಾಗೂ ಆಶ್ಚರ್ಯವನ್ನುಂಟುಮಾಡುತ್ತದೆ. ಕಂಸಾಳೆ ಬೀಸುವಾಗ ಕಲಾವಿದರ ದೇಹಕ್ಕೆ ತಾಗುವ ಸಂದರ್ಭ ಹೆಚ್ಚಾಗಿರುತ್ತದೆ. ಆದರೆ ಸತತಾಭ್ಯಾಸದಿಂದ ತಾಳ ಸರಿಯಾಗಿ ಕಂಸಾಳೆ ಬಟ್ಟಲುಗಳಿಗೇ ಬೀಳುತ್ತಿರುತ್ತವೆ. ತಾಳ ತಪ್ಪದಂತೆ ಎಚ್ಚರಿಕೆ ವಹಿಸುವ ಕಲಾವಿದರ ಕುಶಲತೆ ಅಪಾರ.

ತಾರ್‌ಬಟ್ಟು ಎಂಬ ವಿಧಾನದಲ್ಲಿ ಕಂಸಾಳೆ ಕಲಾವಿದನೊಬ್ಬನೇ ಭಾಗವಹಿಸುತ್ತಾನೆ. ಎಡದ ಕೈಯಲ್ಲಿ ಕಂಸಾಳೆಯ ಬಟ್ಟಲನ್ನು ಹಿಡಿದು ಬಲಗೈಯಲ್ಲಿ ಉದ್ದವಾದ ದಾರ, ಗೊಂಡೆ, ಗಗ್ಗರ, ಹೊಂದಿದ ಕಂಸಾಳೆಯ ಮುಸುಕು ಹಿಡಿದುಕೊಳ್ಳುತ್ತಾನೆ. ಕಲಾವಿದ ಆಯಕ್ಕೆ ತಕ್ಕಷ್ಟು ಉದ್ದದ ದಾರ ಬಿಟ್ಟು, ಗೊಂಡೆ ಹಿಡಿದ ಕಂಸಾಳೆಯ ಮುಸುಕನ್ನು ಬೀಸಿ ಮೈಕೈ ಬಾಗಿ ಬಳುಕಿಸಿ, ಕಲೆಯಲ್ಲಿ ಮೈ

ಮರೆತು ಕುಣಿಯುತ್ತಾನೆ. ಇದೇ 'ತಾರ್‌ಬಟ್ಟು'. ತಾರ್‌ಬಟ್ಟು ಎಂದರೆ ಬಿರುಸಾಗಿ ಕಂಸಾಳೆಯ ಮೇಲ್ಮುಸುಕನ್ನು ಬೀಸಿ ಆಡುವ ವಿಧಾನ.

ಇತ್ತೀಚೆಗಂತೂ ಬೀಸುಕಂಸಾಳೆಯನ್ನು ವೈವಿಧ್ಯಮಯ ಮಾಡುವ, ರಂಜಿಸುವ ದೃಷ್ಟಿಯಿಂದ ಕಣ್ಣಿಗೆ ಬಟ್ಟೆ ಕಟ್ಟಿಕೊಂಡೇ ಆಡುವರು. ಕನಕಪುರದ ಚಾಮಯ್ಯ ಮತ್ತು ವೃಂದದವರಿಂದ ಕರ್ನಾಟಕ ಜನಪದ ಹಾಗೂ ಯಕ್ಷಗಾನ ಅಕಾಡೆಮಿಯವರು ಬೆಂಗಳೂರಿನಲ್ಲಿ ವಾರ್ಷಿಕ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಏರ್ಪಡಿಸಿದ್ದ ಬೀಸುಕಂಸಾಳೆ ನೃತ್ಯ ಪ್ರದರ್ಶನದಲ್ಲಿ , ಒಬ್ಬ ತಮ್ಮಟೆ, ಮತ್ತೊಬ್ಬ ಖಂಜಿರ, ಒಬ್ಬ ಕತ್ತಿ ಹಿಡಿದು, ಮೂವರು ಬೀಸುಕಂಸಾಳೆ ಆಡಿದರು. ಸಣ್ಣ ಹುಡುಗರಿಬ್ಬರು ಮತ್ತೊಬ್ಬ ಹುಡುಗನನ್ನು ಮೈ ಮೇಲೆ ಕುಳ್ಳಿರಿಸಿಕೊಂಡು ಕಂಸಾಳೆಯನ್ನು ತಟ್ಟಲಾರಂಭಿಸಿದರು. ಇದು ಬರೇ ಕಸರತ್ತಿನ ಆಟವಾಗಿ ಗೊಂದಲಮಯವಾಗಿ ಪರಿಣಮಿಸಿತು. ಶುದ್ಧ ಜನಪದದವರು ಆಡುವ ನೃತ್ಯಕ್ಕೆ ಸರಿಸಾಟಿಯಾಗದೆ ಬೇಸರವನ್ನು ತಂದಿತು.

**ಕುಳಿತು ಹಾಡುವ ಕಂಸಾಳೆ ಮೇಳ:**

ಇಡೀ ರಾತ್ರಿ ಮಾದೇಶ್ವರನ ಕಥೆಯನ್ನು ಹಾಡಬೇಕಾದುದರಿಂದ ಕಂಸಾಳೆಯವರು ಕುಳಿತು ಹಾಡಬೇಕಾಗುತ್ತದೆ. ಇದು ಕುಳಿತು ಹಾಡುವ ಕಂಸಾಳೆ ಮೇಳ. ಇದರಲ್ಲಿ ಮೂವರಿಂದ ಎಳೆಂಟು ಜನ ಭಾಗವಹಿಸುತ್ತಾರೆ. ಪ್ರಧಾನ ಗಾಯಕ ಮಧ್ಯದಲ್ಲಿ ಕುಳಿತಿರುತ್ತಾನೆ. ಮಿಕ್ಕವರು ಕಡಪ್ಪ, ಕಂಸಾಳೆ, ಕೆಲವು ವೇಳೆ ಚಿಟಿಕೆ, ಏಕತಾರಿಗಳನ್ನು ಹಿಡಿದು ಸುತ್ತಾ ಕುಳಿತುಕೊಳ್ಳುತ್ತಾರೆ. ಪ್ರಧಾನ ಗಾಯಕ ಕಥೆಯನ್ನು ನಿರೂಪಿಸುತ್ತಾ ಹಾಡಿದರೆ, ಮಿಕ್ಕವರು ವಾದ್ಯವಿಶೇಷಗಳನ್ನು ಬಾರಿಸುವುದರ ಜೊತೆಗೆ ಹಾಡಿಗೆ ಸೇರಿಕೊಳ್ಳುತ್ತಾರೆ. ಈ ಒಕ್ಕೊರಳ ಉಲಿತ ಕಿವಿಗೆ ಮತ್ತಷ್ಟು ಅಪ್ಯಾಯಮಾನವಾಗುವುದು. ಕೆಲವು ವೇಳೆ ಈ ಕಥೆ ಮಾಡುವುದು ಸಂಭಾಷಣಾ ರೂಪಿನಲ್ಲೂ ಸಾಗುತ್ತದೆ. ಕೆಲವು ಸೊಲ್ಲಿನವರು 'ಹೌದಪ್ಪಾ ಹೌದು' ಎಂದು ಹೂಂ ಗುಟ್ಟುವುದೂ ಉಂಟು. ಕಥೆಯಾಡುವ ಚಾಕಚಕ್ಯತೆ ಉಳ್ಳವರು ಇದ್ದಾಗ ಕಥೆಯಲ್ಲಿ ಬರುವ ಸಂಭಾಷಣೆಗಳನ್ನು ತಾವೇ ಪಾತ್ರಧಾರಿಗಳಂತೆ ಆಡುವುದನ್ನು ಕಾಣಬಹುದು. ಮತ್ತೆ ಕೆಲವು ವೇಳೆ ಒಬ್ಬ ಒಂದು ಕಥೆ ಮಾಡಿ ನಿಲ್ಲಿಸಿದಾಗ, ಮತ್ತೊಬ್ಬ ಇನ್ನೊಂದು ಕಥೆಯನ್ನು ಮುಂದುವರಿಸಿಕೊಂಡು ಹೋಗುವುದೂ ಉಂಟು. ಇತ್ತೀಚೆಗೆ ನವ್ಯಪ್ರಜ್ಞೆಯನ್ನು ಬೆರೆಸಿ ನಾಟಕದ ಸೂತ್ರಧಾರ ಮಾತನಾಡುವಂತೆ ಮಾತನಾಡಿ, ಕಥೆ ಆರಂಭಿಸಿದಾಗ, ಮಧ್ಯೆ ಮಧ್ಯೆ ಕಥೆ ಹೇಳುವಾಗ ನಿರೂಪಣೆ ಮಾಡುತ್ತಾ, ಜನರ ಮನವನ್ನು ಆಕರ್ಷಿಸುವ ರೀತಿಯಲ್ಲಿ ತಂತ್ರವನ್ನು ಬದಲಾಯಿಸಿಕೊಂಡು, ಹಳೆಯ ಜಾಡಿಗೆ ಹೊಸ ಮೆರುಗನ್ನು ಕೊಡುವ ಕಲಾವಿದರೂ ಹೆಚ್ಚಿದ್ದಾರೆ. ಕಾರಣ ಕಾಲಕ್ಕೆ ತಕ್ಕಂತೆ ಜನರನ್ನು ಆಕರ್ಷಿಸುವ ದೃಷ್ಟಿ.

ಗದ್ಯಪದ್ಯಗಳೆರಡನ್ನು ಮಿಶ್ರಣ ಮಾಡಿ ಕಂಸಾಳೆಯ ಕಲಾವಿದ ಮಾದೇಶ್ವರನ ಕಥೆಯನ್ನು ನಿರೂಪಿಸುತ್ತಾನೆ. ಇದೇ ರೀತಿ ಮೇಳ ಹಾಗೂ ಮೇಳ ನಾಯಕನಿಂದ ಕಥೆ, ಹಾಡು, ನಿರೂಪಣೆ, ಮಾಡುವ ವಿಧಾನ ಕ್ರಿ.ಪೂ. ೬-೭ನೇ ಶತಮಾನದಲ್ಲೇ ಗ್ರೀಸ್‌ನಲ್ಲಿತ್ತು.[1] ಅದು ಅನಂತರ ಅನೇಕ ಮಾರ್ಪಾಟುಗಳನ್ನು ಹೊಂದಿ ನಾಟಕವಾಗಿ ಪರಿವರ್ತಿಸಲ್ಪಟ್ಟಿತು. ಮಾದೇಶ್ವರನ ಕಥಾಮೇಳದ ಕೆಲವು ಅಂಶಗಳಲ್ಲಿ ಗ್ರೀಕ್ ಮೇಳದಂತೆ ಮೇಳನಾಯಕ ಹಾಡುತ್ತಾನೆ, ಕಥೆಯನ್ನು ನಿರೂಪಿಸುತ್ತಾನೆ. ಮೇಳದವರು ವಾದ್ಯವನ್ನು ನುಡಿಸುತ್ತಾ, ಸೊಲ್ಲಿಕ್ಕಿ ಕಥೆಗೆ ಮೆರುಗನ್ನು ಕೊಡುತ್ತಾರೆ. ಕಂಸಾಳೆ ಮೇಳ ನಾಟಕೀಯತೆಯನ್ನು ಪಡೆದರೂ ಗ್ರೀಕ್‌ನ ಮೇಳದ ಹಾಗೆ ಶುದ್ಧನಾಟಕ ರೂಪವಾಗಿ ಬೆಳೆದಿಲ್ಲದಿರುವುದು ವಿಚಾರಾರ್ಹ ಸಂಗತಿ.

ಹಿಂದೆ ಭಕ್ತಾದಿಗಳು ಕಾಲ್ನಡಿಗೆಯಲ್ಲಿ ಹೋಗಲು ಹಲವಾರು ದಿನಗಳು ಹಿಡಿಯುತ್ತಿದ್ದವು. ಇವರನ್ನು 'ಪರಿಸೆ' ಎಂದು ಹೇಳುತ್ತಾರೆ. ಊರೂರುಗಳಲ್ಲಿ ಮಾದೇಶ್ವರನ ಭಕ್ತರು ಅರವಟ್ಟಿಗೆ ಇಡಿಸಿ, ಪಾನಕ, ನೀರುಮಜ್ಜಿಗೆ, ಮಡಿಕೆ ನೀರು ಮುಂತಾದುವುಗಳನ್ನು ಪ್ರಯಾಣಿಕರಿಗೆ ದಾನವಾಗಿ ನೀಡುತ್ತಿದ್ದರು. ಈ ಪರಸೆಗಳು ರಾತ್ರಿವೇಳೆ, ಬಿಸಿಲಿನವೇಳೆ, ಅಲ್ಲಲ್ಲಿ ತಂಗಿ ವಿಶ್ರಮಿಸಿಕೊಂಡು ಹೋಗುತ್ತಿದ್ದರು. ಆಗ ಮಾದೇಶ್ವರನ ಮಹಿಮೆಯನ್ನು ಹಾಡಿ ಹೊಗಳಿ, ಕುಣಿದು ಆನಂದಿಸುತ್ತಿದ್ದರು. ಜಾತ್ರೆ, ಹಬ್ಬ, ಹುಟ್ಟುಹಬ್ಬ, ಒಕ್ಕಣೆ, ನಾಟಿ ಮುಂತಾದ ವೇಳೆಗಳಲ್ಲೂ ಈ ಕಂಸಾಳೆಯವರು ಜೋಳಿಗೆ, ನಾಗಬೆತ್ತ, ಕಂಸಾಳೆಗಳನ್ನಿಟ್ಟು ಪೂಜಿಸಿ ಮಾದೇಶ್ವರನ ಕಥೆಗಳನ್ನು ಹಾಡಿ ತೃಪ್ತಿ ಹೊಂದುತ್ತಾರೆ. ಕಷ್ಟ ಪರಿಹಾರವಾಗಲೆಂದೂ ಹಾಡುತ್ತಾರೆ. ಯಾರಾದರೂ ದೈವಾಧೀನರಾಗಿದ್ದರೆ, ಅಂಥವರ ಮನೆಯವರು ಇವರನ್ನು ಕರೆಯಿಸಿ ಹಾಡಿಸಿ, ಮಹಾತ್ಮನ ಕಥೆಯನ್ನು ಕೇಳುವದು ರೂಢಿಯಲ್ಲಿದೆ.

ಕಂಸಾಳೆಯವರು ಕಥೆ ಮಾಡುವ ಮೊದಲು ಗಣಪತಿ, ಸರಸ್ವತಿ, ಮೊದಲಾದ ದೇವತೆಗಳನ್ನು ಸ್ತುತಿಸಿ ಆಮೇಲೆ ಮಾದೇಶ್ವರನ ಕಥೆಯನ್ನು ಆರಂಭಿಸುತ್ತಾರೆ. ಮಂಗಳದೊಂದಿಗೆ ಕಥೆ ಮುಕ್ತಾಯವಾಗುತ್ತದೆ. ಕೆಲವು ವೇಳೆ ಆರಂಭ ಮತ್ತು ಅಂತ್ಯದಲ್ಲಿ ಮಾದೇಶ್ವರರ ಹಾಗೂ ಇಷ್ಟದೈವಗಳನ್ನು ನೆನೆದು ಕಥೆ ಮಾಡುತ್ತಾರೆ. ಕಂಸಾಳೆಯವರಿಗೆ ಮಾದೇಶ್ವರನ ಮಹಿಮೆಯ ಕಥೆ ಹೇಳುವುದೇ ಮುಖ್ಯ ಗುರಿ. ಇವರು ಕರ್ನಾಟಕದ ಒಂದು ಮುಖ್ಯ ಸಂಪ್ರದಾಯದವರು. ಮಾದೇಶ್ವರನ ಕಥೆಯನ್ನು ಕಂಚಿನ ತಾಳಗಳ ಇಂಪು ಹಾಗೂ ಕೈಚಳಕಗಳ ಸುಂದರ ಸಮ್ಮಿಳನದಿಂದ ವಿಸ್ಮಯಕರವಾಗಿ ಮಾಡಿ ಜನರ ಮನವನ್ನು ತಣಿಸಿ ಆನಂದವನ್ನುಂಟುಮಾಡುವುದಲ್ಲದೆ ಭಕ್ತಿಪ್ರಸಾರ ಕಾರ್ಯವನ್ನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಕೈಗೊಳ್ಳುವರು.

ಮಾದೇಶ್ವರನ ಭಕ್ತರು ಮಾದೇಶ್ವರನ ಮಹಿಮೆಯನ್ನು ಹಾಡಿಹೊಗಳಿ ಭಕ್ತಿ ಪ್ರಚಾರಕ್ಕೆ ಕಾರಣವಾದರು. ಇವರು ಭಿಕ್ಷೆ ಮಾಡುವ ಉದ್ದೇಶದಿಂದ ಈ ಕಥೆಗಳನ್ನು ಕಟ್ಟಿದವರಲ್ಲ, ಕಲಿತವರಲ್ಲ. ಮಾದೇಶ್ವರನ ಮಹಿಮೆಯನ್ನು ಎತ್ತಿ ಹಿಡಿಯಲು ಕಲಿತವರು. ಈ ಪರಂಪರೆ ಉಳಿದುಕೊಂಡು, ಬೆಳೆದುಕೊಂಡು ಬರುತ್ತಿದೆ. ಆದರೆ ಇದು ಎಂದಿನಿಂದ ಬೆಳೆದು ಬಂದಿದೆ ಎಂಬುದು ಇನ್ನೂ ಅಜ್ಞಾತವಾಗಿದೆ.

"ಕುಳಿತು ಹಾಡುವ ಕಂಸಾಳೆ" ಕಲೆಗಿಂತ ಬೀಸುಕಂಸಾಳೆ ಕಲೆ ಕಷ್ಟಕರವಾದುದು. ಮಾದೇಶ್ವರನ ಭಕ್ತರಲ್ಲಿ ಹಲವರು ಈ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಸೌದತ್ತಿ ಎಲ್ಲಮ್ಮನ ಸಂಪ್ರದಾಯಕ್ಕೆ ಸೇರಿದ 'ಚೌಡಿಕೆ ಮೇಳ' ಅಥವಾ "ಗೊಂದಲಿಗರ ಮೇಳ"ವು ಸಹ ಕಲಾದೃಷ್ಟಿಯಿಂದ ಹೇಳುವುದಾದರೆ 'ಕಂಸಾಳೆ ಮೇಳ'ದ ಸಾಮ್ಯವನ್ನು ಹೊಂದಿದೆ. ಇದರಲ್ಲಿ ನಿರೂಪಕ ಮಾತ್ರ ನೃತ್ಯವೆಸಗುವುದು. ಉಳಿದವರು ಹಿಮ್ಮೇಳ ಮಾತ್ರ. ಎರಡು ಮೂರು ಜನರು ಸೇರಿ ಈ ಮೇಳವನ್ನು ನಡೆಸುತ್ತಾರೆ. "ಮುಖ್ಯ ನಿರೂಪಕ ಕರಿಯ ನಿಲುವಂಗಿ, ಕಚ್ಚೆ ಪಂಚೆ ಉಟ್ಟು, ತಲೆಗೆ ಕೆಂಪು ರುಮಾಲನ್ನು ಸುತ್ತಿ, ಕೊರಳಿಗೆ ಹಳದಿ ಮಣಿಯನ್ನು ಹಾಕಿಕೊಂಡಿರುತ್ತಾನೆ. ಚೌಡಿಕೆ ಹಿಡಿದು ಹಾಡುತ್ತಾ, ವಿವರಣೆ ನೀಡುತ್ತಾ, ಹಾವಭಾವದಿಂದ ಮೆರೆಯುತ್ತಾನೆ. ಕಾಲನ್ನು ಮೇಲೆ ಮಡಿಸಿ, ಹಿಂದೆ, ಮುಂದೆ, ಅತ್ತಇತ್ತ, ಬಾಗಿ ಬಳುಕಿ ನೃತ್ಯವೆಸಗುತ್ತಾನೆ. ವೇಗವಾಗಿ ಎರಡು ಕಾಲನ್ನು ಎತ್ತಿ ಕುಪ್ಪಳಿಸುವ ವೈಖರಿ ಆಕರ್ಷಕ. ಕಾಲುಗೆಜ್ಜೆ, ಚೌಡಿಕೆನಾದ, ಮೋಹಕವಾಗುತ್ತದೆ. ಹಾಡು ಕುಣಿತ, ಎರಡು ಏಕಕಾಲದಲ್ಲಿ ಬರುವುದಿಲ್ಲ, ಮುಖ್ಯ ನಿರೂಪಕ ಲಾವಣಿ ಪದ್ಯ ಎತ್ತಿಕೊಟ್ಟು ಹಿಮ್ಮೇಳದವರು ಆ ಪಾದವನ್ನು ಪೂರ್ಣಗೊಳಿಸುವಲ್ಲಿ ಮುಖ್ಯ ನಿರೂಪಕ ನೃತ್ಯದಲ್ಲಿ ತೊಡಗುತ್ತಾನೆ."

ಜನಪದ ಸತ್ವವುಳ್ಳ ಈ ಸ್ವಾರಸ್ಯಕರವಾದ ಕಥಾ ಸಂಪ್ರದಾಯಗಳನ್ನು ಉಳಿಸಿಕೊಂಡು ಬರುತ್ತಿರುವ ಕಂಸಾಳೆ ಕಲೆ. ಜನಪದ ಕ್ಷೇತ್ರದ ದೊಡ್ಡನಿಧಿಗಳಲ್ಲಿ ಒಂದಾಗಿದೆ. ಕಂಸಾಳೆ ಹಿಡಿದು ಮನೆ ಮನೆಯ ಬಾಗಿಲಿಗೆ ಬರುವ ಮಾದೇಶ್ವರನ ಭಕ್ತರು ಭಿಕ್ಷುಕರಲ್ಲ. ಮಾದೇಶ್ವರನ ಕಥೆಗಳನ್ನು ಹಾಡುವ ಕಥೋಪಜೀವಿಗಳು. ಈ ಧಾರ್ಮಿಕ ವೃತ್ತಿಗಾಯಕರು ಸ್ವಸಂತೋಷಕ್ಕೆ ಈ ಕಂಸಾಳೆಯ ಕಲೆಯನ್ನು ಪ್ರದರ್ಶಿಸಿ, ಪರೋಕ್ಷವಾಗಿ ತಮ್ಮ ಅಮೋಘ ಕಾಣಿಕೆಯನ್ನು ಮಾದೇಶ್ವರನಿಗೆ ಸಲ್ಲಿಸುತ್ತಾರೆ. ಇವರು ನಮ್ಮ ಸಂಸ್ಕೃತಿಯ ಸಿರಿಯನ್ನು ತುಂಬಿಕೊಂಡಿರುವ "ಜನಪದ ಗಾಯಕರು" ಎಂದು ಹೇಳಬಹುದು.

೩. ಕಂಸಾಳೆ ದೇವರ ಗುಡ್ಡರು:

"ದೇವರ ಗುಡ್ಡ" ಎಂದರೆ 'ದೇವರ ಶಿಷ್ಯ' ಎಂದರ್ಥ. ಕರ್ನಾಟಕದಲ್ಲಿ ಮಾದೇಶ್ವರರ ಗುಡ್ಡರು, ಮಂಟೆಲಿಂಗಸ್ವಾಮಿ ಗುಡ್ಡರು, ಎಲ್ಲಮ್ಮನ ಗುಡ್ಡರು ಮುಂತಾದವರು ಇರುವುದನ್ನು ಕಾಣಬಹುದು. ಈ ಗುಡ್ಡರು ಆಯಾ ದೇವರ ಹೆಸರಿನಲ್ಲಿ 'ಕ್ಷಾರಣ್ಯ.'[೧೦] (ಭಿಕ್ಷೆ)ವನ್ನು ಸಾರುತ್ತಾರೆ. ಎಡಗೈ, ಬಲಗೈನವರು, ಕುಂಬಾರರು, ಮಡಿವಾಳರು, ಹೆಗ್ಗಡೆಗೌಡರು ಸಿದ್ದಪ್ಪಾಜಿಯ ಗುಡ್ಡರಾಗುವರು. ಹರಿಜನ, ಹಾಲು ಮತದವರು, ಗೊಲ್ಲರು ಜುಂಜಪ್ಪನ ಗುಡ್ಡರಾದರೆ, ಒಕ್ಕಲಿಗರು, ಗಂಗಮತದವರು, ಉಪ್ಪಲಿಗರು, ಮಡಿವಾಳರು ಪರಿವಾರದವರು, ಹರಿಜನರು, ಮಾದೇಶ್ವರನ ಗುಡ್ಡರಾಗುವರು. ಕುರುಬರು, ಗಂಗಮತದವರು, ಹರಿಜನರು, ವಿಶೇಷವಾಗಿ ಮಾದೇಶ್ವರನ ಗುಡ್ಡರಾಗುತ್ತಾರೆ. ಗುಡ್ಡರಾಗಲು ಬಡವ ಬಲ್ಲಿದ ಎಂಬ ಭೇದಭಾವವಿಲ್ಲ, ಮಂಟೇಸ್ವಾಮಿ, ಸಿದ್ದಪ್ಪಾಜಿ, ಗುಡ್ಡರುಗಳು ಸಾಮಾನ್ಯವಾಗಿ ಮಂಟೇದಯ್ಯ, ಮಂಟೇಲಿಂಗಯ್ಯ, ಸಿದ್ದಪ್ಪ, ಸಿದ್ದಯ್ಯ ಎಂದು ಹೆಸರಿಟ್ಟುಕೊಳ್ಳುವಂತೆ, ಮಾದೇಶ್ವರರ ಗುಡ್ಡರು, ಮಾದಪ್ಪ, ಮಾದಯ್ಯ, ಮಾದು, ಚಿಕ್ಕ ಮಾದು, ದೊಡ್ಡ ಮಾದು, ಪುಟ್ಟಮಾದ, ಮುದ್ದು ಮಾದ, ದುಂಡುಮಾದ, ಮಾದೇವ, ಮರಿದೇವರು, ಮಾದೇವಸ್ವಾಮಿ ಎಂದೂ, ಹೆಂಗಸರಾದರೆ ಮಾದಮ್ಮ, ಮಾದೇವಿ, ಪುಟ್ಟಮಾದಿ, ದೊಡ್ಡಮಾದಿ, ಚಿಕ್ಕಮಾದಿ, ರಾಮವ್ವೆ ಎಂದು ಇಟ್ಟುಕೊಳ್ಳಬೇಕೆಂಬ ನಿಯಮವಿರುತ್ತದೆ. ಸರಗೂರಿನಲ್ಲಿ ಮೂಗಯ್ಯನ ತಾಯಿ, ಮಾದೇಶ್ವರನ ಭಕ್ತೆ. ಆದುದರಿಂದ ಈ ಹೆಸರನ್ನು ಮಾದೇಶ್ವರನ ಭಕ್ತರು ಇಟ್ಟುಕೊಳ್ಳುತ್ತಾರೆ ಎನ್ನಿಸುತ್ತದೆ.

ಮಾದೇಶ್ವರನ ಭಕ್ತರನ್ನು ಎರಡು ವಿಧಗಳಾಗಿ ವಿಂಗಡಿಸಬಹುದು.

(೧) ಮಾದೇಶ್ವರನಿಗೆ ನಡೆದುಕೊಳ್ಳುವ ಭಕ್ತರು (೨) ಮಾದೇಶ್ವರನಿಗೆ ಬಿಟ್ಟಂಥ ಭಕ್ತರು, ಅಂದರೆ ಮಾದೇಶ್ವರನ ಗುಡ್ಡರು. ಮಾದೇಶ್ವರನ ಗುಡ್ಡರಿಗೆ 'ಕೈಸಾಲೆಯವರು', 'ಕಂಸಾಳೆಯವರು' ಎಂದು ಹೇಳುವ ರೂಢಿ ಇದೆ. ಮಂಟೇಸ್ವಾಮಿ ಗುಡ್ಡರಿಗೆ ತಂಬೂರಿ, ಎಲ್ಲಮ್ಮನ ಗುಡ್ಡರಿಗೆ ಚೌಡಿಕೆ, ಜುಂಜಪ್ಪನ ಗೊಲ್ಲರಿಗೆ ಗಣೆ ವಾದ್ಯ ಮುಖ್ಯವಾದಂತೆ, ಮಾದೇಶ್ವರನ ಗುಡ್ಡರಿಗೆ ಕಂಸಾಳೆಯ ವಾದ್ಯ ಮುಖ್ಯವಾದುದು. ಇದನ್ನು ಹಿಡಿದು ಹಾಡಿ ಕುಣಿಯುವರು ಹಾಗೂ ಮಾದೇಶ್ವರನ ಕಥೆಯನ್ನು ನಿರೂಪಿಸುವರು. ಇವರು ಕರ್ನಾಟಕದಲ್ಲಿ ವಿಶೇಷವಾಗಿ ಮೈಸೂರು, ಮಂಡ್ಯ ಹಾಗೂ ಬೆಂಗಳೂರು ಜಿಲ್ಲೆಗಳಲ್ಲಿ ಇರುವುದನ್ನು ಕಾಣಬಹುದು.[೧೧] ಮಾದೇಶ್ವರನ ಬಗೆಗೆ ಜನಪದ ಕಾವ್ಯವನ್ನು ಪರಂಪರಾನುಗತವಾಗಿ ಕಾಪಾಡಿಕೊಂಡು, ಹಾಡಿಕೊಂಡು ಬಂದ ವಿಶಿಷ್ಟ ಗಾಯಕ ವರ್ಗದವರು ಮಾದೇಶ್ವರನ ದೇವರ ಗುಡ್ಡರು.

"ಹೆಣ್ಣು ಮಕ್ಕಳನ್ನು ಗುಡ್ಡಮ್ಮ ಅಥವಾ ಗುಡ್ಡಿ ಬಿಡುವ ಪದ್ಧತಿ ಹರಿಜನರಲ್ಲಿ ತೀರಾ ವಿರಳವಾಗಿ ನಡೆದುಕೊಂಡು ಬರುತ್ತಿದೆ. ಆದರೆ ಸೂತಕವಾಗುವ ಹೆಂಗಸನ್ನು ಗುಡ್ಡಿ ಬಿಡಲಾರರೆಂದು ಕೆಲವರು ಹೇಳುತ್ತಾರೆ. ಗುಡ್ಡಿ ಮಾದೇವನ ಸಿಸು ಮಗಳಾದ ಮೇಲೆ ಅವಳಿಗೆ ವಿವಾಹವಿಲ್ಲ. ಯಾವನಾದರೂ ಗುಡ್ಡ ಇಷ್ಟಪಟ್ಟರೆ ಅವನ ಸೇವೆಯನ್ನು ಗುಡ್ಡಿ ಮಾಡಬೇಕಾಗುತ್ತದೆ. ಹಬ್ಬ ಹರಿದಿನಗಳಲ್ಲಿ ಆಕೆಗೆ ಹೆಚ್ಚು ಗೌರವ, ಆದರಗಳು ಸಲ್ಲುತ್ತದೆ[6] ಎಂದು ಹೇಳಿ ಇತ್ತೀಚೆಗೆ ಈ ಪದ್ಧತಿ ಮರೆಯಾಗುತ್ತಿದೆ. ಗಂಡಸರು ಮಾತ್ರ ಗುಡ್ಡರಾಗುವುದು ಸರ್ವೇಸಾಮಾನ್ಯ ಎಂದು ಪಿ.ಕೆ. ರಾಜಶೇಖರ ಅವರು ಹೇಳಿದ್ದಾರೆ. ಆದರೆ ನಾನು ಸಂದರ್ಶಿಸಿದ ಬೆಂಗಳೂರಿನ ಸಿ. ಮಾದಪ್ಪ ಹಾಗೂ ಕಂಸಾಳೆ ಮಾದಯ್ಯ, ಮಾದೇಶ್ವರ ಬೆಟ್ಟದ ಪುರುಸೇಕಾರಿ ರಾಮಣ್ಣನವರೂ ಹೆಂಗಸರನ್ನು ಗುಡ್ಡಿಯರಾಗಿ ಬಿಡುವುದಿಲ್ಲ ಎಂದರು.

ಮಾದೇಶ್ವರನ ಸಂಪೂರ್ಣ ಜೀವನ ಚರಿತ್ರೆಯನ್ನು ದೇವರ ಗುಡ್ಡರು ಹಾಡ ಬಲ್ಲರೇ ಹೊರತು ಮಹಿಳೆಯರು ಹಾಡಲಾರರು. ಅವರು ಬಿಡಿ ಹಾಡುಗಳನ್ನು ಮಾತ್ರ ಹಾಡುವುದನ್ನು ಕಾಣಬಹುದು. ಇವರೆಲ್ಲಾ ಪ್ರಮುಖವಾಗಿ ಮಾದೇಶ್ವರನ ಸೇವೆಯನ್ನು ಮಾಡುವ ಭಕ್ತರು. "ಮಾದೇಶ್ವರನಿಗೆ ಗುಡ್ಡರನ್ನು ಬಿಡುವುದು ವಂಶಪಾರಂಪರ್ಯವಾಗಿ ನಡೆದು ಬಂದ ಪದ್ಧತಿ."[18] ಮನೆಗೊಬ್ಬನನ್ನು ಗುಡ್ಡನಾಗಿ ಬಿಡುವುದು ಮಾದೇಶ್ವರನಿಗೆ ನಡೆದುಕೊಳ್ಳುವ ಗುಡ್ಡರಿಗೆ ಕಡ್ಡಾಯ. ಕುಟುಂಬದಲ್ಲಿ ಕಷ್ಟ ಪರಿಹಾರವಾಗಲೆಂದೂ ಗುಡ್ಡರನ್ನು ಬಿಡುತ್ತಾರೆ. ದೇವರ ಗುಡ್ಡರನ್ನು ಸಿರಿಯ ದೇವರಗುಡ್ಡರು ಅಲೆಮಾರಿ ಗುಡ್ಡರು ಎಂದು ಎರಡು ವಿಭಾಗವಾಗಿ ವಿಂಗಡಿಸಬಹುದು.

**ಸಿರಿಯದೇವರ ಗುಡ್ಡರು:**

ಮಾದೇಶ್ವರನ ಗುಡ್ಡರು ಕಂಚಿನ ತಟ್ಟೆಯಲ್ಲಿ ಊಟ ಮಾಡುವುದಿಲ್ಲ. ಕಾರಣ ಕಂಚು ಮಾದೇಶ್ವರನ ಶ್ರೇಷ್ಠ ಕಂಸಾಳೆ ಎಂಬ ದೃಷ್ಟಿಯಿಂದ. ಈ ಸಂಪ್ರದಾಯ ಅನುಸರಿಸುವವರಿಗೆ "ಸಿರಿಯ ದೇವರ ಗುಡ್ಡರು" ಎಂದು ಕರೆಯುತ್ತಾರೆ. ಇವರು ಕಾಲಿಗೆ ಪಾಪೋಸು ಮೆಟ್ಟುವುದಿಲ್ಲ, ಸೋಮವಾರ, ಶುಕ್ರವಾರ, ಅಮಾವಾಸ್ಯೆಯ ದಿನ ಕ್ಷೌರಣ್ಣ ಮಾಡುತ್ತಾರೆ. ಉಗಾದಿ, ಶಿವರಾತ್ರಿ, ನವರಾತ್ರಿ, ದೀಪಾವಳಿ ಹಬ್ಬಗಳಲ್ಲಿ ಬುತ್ತಿಯನ್ನಿಟ್ಟು ಹೆಗಲೋಸೆ (ಹಸುಬೆ, ಜೋಳಿಗೆ)ಯನ್ನು ತಲೆಯ ಮೇಲೋ, ಹೆಗಲ ಮೇಲೋ ಹಾಕಿಕೊಂಡು ಮಾದೇಶ್ವರ ಬೆಟ್ಟಕ್ಕೆ ಹೋಗಿ ಮಾದೇಶ್ವರನ ಸೇವೆಯನ್ನು ಮಾಡುತ್ತಾರೆ. ಈ ಗುಡ್ಡರು ಮದುವೆ ಆಗಬಹುದು. ಇವರ ಅಂತ್ಯ ಸಂಸ್ಕಾರ ಗುಡ್ಡರಿಂದಲೇ ಆಗಬೇಕು. ಸೋಮವಾರ ಶುಕ್ರವಾರ ಇವರು ಮಾಂಸ, ಮದ್ಯ, ತೆಗೆದುಕೊಳ್ಳುವುದಿಲ್ಲ, ಇವರು ಮಾದೇಶ್ವರನ ಕಥೆಯನ್ನು ಹಾಡುತ್ತಾರೆ.

**ಆಲೆಮಾರಿ ಗುಡ್ಡರು:**

ಮಾದೇಶ್ವರ ಗುಡ್ಡರಲ್ಲಿ ಅನೇಕರು ಮಾದೇಶ್ವರನ ಕಥೆಯನ್ನು ಸಂಪೂರ್ಣವಾಗಿ ಹಾಡುತ್ತಾರೆ. ಅವರು ನಾಲ್ಕು ಹಾಡುಗಳನ್ನಾದರೂ ಕಲಿತುಕೊಂಡು, ಕಂಸಾಳೆ ನುಡಿಸುತ್ತಾ, ಊರೂರು ಅಲೆಯುತ್ತಾ 'ಕ್ವಾರಣ್ಯ' ಮಾಡಿಕೊಂಡು ಮಾದೇಶ್ವರನ ಸೇವೆಯನ್ನು ಮಾಡುವರು. ಇವರಿಗೆ 'ಅಲೆಮಾರಿ ಗುಡ್ಡರು' ಎಂದು ಕರೆಯುವರು. ಇವರು ವಿಭೂತಿ, ರುದ್ರಾಕ್ಷಿಧಾರಣೆ ಮಾಡಿಕೊಂಡು ಕಂಸಾಳೆ ಹಿಡಿದು ಕಲಿತ ಹಾಡುಗಳನ್ನು ಹಾಡುತ್ತಾ, ಹೆಗಲೋಸೆಯಲ್ಲಿ ಬುತ್ತಿ ಇಟ್ಟುಕೊಂಡು, ಭಕ್ತಾದಿಗಳು ಕೊಟ್ಟ ಹಣ, ಧಾನ್ಯ, ಹರಕೆಯ ಕಾಣಿಕೆಗಳನ್ನು ತೆಗೆದುಕೊಂಡು ಹೋಗಿ ಮಾದೇಶ್ವರನ ಸೇವೆ ಮಾಡುವುದು ಪದ್ಧತಿ. ಕೆಲವು ವಿಶೇಷ ಸಂದರ್ಭಗಳಲ್ಲಿ ಅಂದರೆ ದೀಪಾವಳಿ, ಯುಗಾದಿ, ಶಿವರಾತ್ರಿ ವೇಳೆಗಳಲ್ಲಿ ಇವರು ಮಾದೇಶ್ವರ ಕ್ಷೇತ್ರಕ್ಕೆ ಹೋಗಿ ಮಾದೇಶ್ವರನ ಸೇವೆಯನ್ನು ಮಾಡುವರು.

**ಗುಡ್ಡರ ದೀಕ್ಷಾ ವಿಧಾನ:**

ಆಯಾ ಜಾತಿಗೆ, ಆಯಾ ಪ್ರದೇಶಕ್ಕೊಬ್ಬ 'ಪುರಸೇಕಾರಿ' ಎಂಬುವನು ಇರುತ್ತಾನೆ. 'ಪುರಸೇಕಾರಿ' ಎಂದರೆ ಮಾದೇಶ್ವರನ ದೇವರಗುಡ್ಡರಾಗಿ ಮಾಡಲು ದೀಕ್ಷೆಯನ್ನು ನೀಡುವಾತ. ಒಂದು ರೀತಿಯಲ್ಲಿ ಹೇಳುವುದಾದರೆ ದೀಕ್ಷಾ ಗುರು. ಪುರುಸೇಕಾರಿ ಮದುವೆ ಆಗಬಹುದು. ಮಾಂಸ, ಮದ್ಯ ತೆಗೆದುಕೊಳ್ಳುವಂತಿಲ್ಲ. ಪುರಸೇಕಾರಿ ಮನೆತನದಲ್ಲಿ ಎಲ್ಲರೂ ಗುಡ್ಡರಾಗಬೇಕು. ಈತ ಶಿವರಾತ್ರಿಯಲ್ಲಿ ಜಾಗರಣೆ ಉಪವಾಸ ಮಾಡುತ್ತಾನೆ. ಬಿಳಿ ಬಟ್ಟೆ ಪಂಚೆಯ ಸಾಮಾನ್ಯ ಉಡುಗೆಯಲ್ಲಿರುತ್ತಾನೆ. ಈತ ದೇವರಗುಡ್ಡರಿಂದ ಕಾಣಿಕೆಯನ್ನು ವಸೂಲು ಮಾಡಿ ಸಾಲೂರು ಮಠಕ್ಕೆ ತಂದೊಪ್ಪಿಸುತ್ತಾನೆ. ಈ ಕಾರ್ಯ ವಿಶೇಷವಾಗಿ ದೀಪಾವಳಿ, ಯುಗಾದಿ, ನವರಾತ್ರಿ ಹಬ್ಬಗಳಲ್ಲಿ ಜರುಗುತ್ತದೆ. ಪುರಸೇಕಾರಿಯು 'ಗುಡ್ಡರ ಬಿಡುವ' ಕಾರ್ಯವನ್ನು ನಿರ್ವಹಿಸುತ್ತಾನೆ. ಈ ಕಾರ್ಯ ಮಾದೇಶ್ವರ ಬೆಟ್ಟದಲ್ಲಾದರೆ ಯಾವ ಹೊತ್ತಾದರೂ ಆಗಬಹುದು. ಕೆಲವರು ಈ ಕಾರ್ಯವನ್ನು ತಮ್ಮ ತಮ್ಮ ಊರುಗಳಲ್ಲೇ ನಿರ್ವಹಿಸುತ್ತಾರೆ. ಬೆಟ್ಟದಲ್ಲಿ ಒಂದು ದಿನಕ್ಕೆ ಮೂರು ನಾಲ್ಕು ಜನ ಗುಡ್ಡರನ್ನು ಬಿಡುತ್ತಾರೆ. ಆಷಾಢಮಾಸ ಬಿಟ್ಟು ಶಿವರಾತ್ರಿ, ದೀಪಾವಳಿ, ಯುಗಾದಿ, ಕಾರ್ತೀಕ ಮಾಸದಲ್ಲಿ, ಜಾತ್ರೆಯಲ್ಲಿ ಗುಡ್ಡರನ್ನು ಬಿಡುತ್ತಾರೆ. ಮಾದೇಶ್ವರನ ಒಕ್ಕಲಿನವರು ತಮ್ಮ ಹಿರಿಯ ಮಗನನ್ನು ಗುಡ್ಡನಾಗಿ ಮಾಡಲು ಸೋಮವಾರ, ಶುಕ್ರವಾರದ ದಿನಗಳಲ್ಲಿ ಯಾವುದು ಮುಹೂರ್ತಕ್ಕೆ ಸರಿಯಾದ ದಿನವೆಂದು ಕೇಳಿ ನಿಶ್ಚಯಿಸಿಕೊಳ್ಳುತ್ತಾರೆ. ಮಂಟೇಸ್ವಾಮಿ, ಪಾರ್ವತಿ, ಮಾದೇಶ್ವರನ ಗುಡ್ಡರು, ಜೋಗಿಗಳು, ದಾಸರು ಈ ಐವರ ದರ್ಶನ

ಮಾಡುತ್ತಾರೆ. ಗುಡ್ಡನ ಮಾಡುವ ಹಿರಿಯರು ತಮ್ಮೂರ ಹತ್ತಿರದ ಭಾವಿ ಅಥವಾ ನದಿಯ ಹತ್ತಿರ ಮಾಡುತ್ತಾರೆ. ಹೆಚ್ಚಾಗಿ ಮಾದೇಶ್ವರನ ದೇವಸ್ಥಾನದಲ್ಲಿ ಮಾಡಿಸುತ್ತಾರೆ. ದೀಕ್ಷೆ ತೆಗೆದುಕೊಳ್ಳುವವನಿಗೆ ಮೊದಲು ಮಂಡೆ ತೆಗೆಸಿ, ಉಗುರು ಕತ್ತರಿಸಿ, ಉಡುದಾರವನ್ನು ಕಿತ್ತೆಸೆದು, ಅಂತರ ಗಂಗೆಗೆ ಕರೆತರುತ್ತಾರೆ. ಗುಡ್ಡರ ಕೈಯಲ್ಲಿ ನೀರು ಹಾಕಿಸಿ, ಹೊಸ ಉಡಿದಾರ, ಕಟ್ಟಿಪಾವುಡ ಕಟ್ಟಿಸಿ, ಭಸ್ಮವನ್ನು ಧರಿಸಿ, ಗುಡ್ಡರು ಕಂಸಾಳೆ ನಾದವನ್ನು ಮಾಡಿಕೊಂಡು, ಹಾಡುತ್ತಾ ಆತನನ್ನು ಕರೆದುಕೊಂಡು ಸಾಲೂರು ಮಠಕ್ಕೆ ಬರುತ್ತಾರೆ. ಅಲ್ಲಿ ಪುರಸೇಕಾರಿಗೆ ಹುಡುಗನನ್ನು ಒಪ್ಪಿಸಿ "ಈತ ನಮ್ಮ ಮಗನಲ್ಲ, ಮಾದೇಶ್ವರನ ಮಗ" ಎನ್ನುತ್ತಾರೆ. ಮತ್ತು "ಮಾದೇವಾ ನಿನ್ನೊಕ್ಕಲಾಯ್ತಿರೋ ಕಂದನ ಉದ್ಧಾರ ಮಾಡಪ್ಪಾ" ಎಂದು ಕೈ ಮುಗಿದು ನಿಂತುಕೊಳ್ಳುತ್ತಾರೆ. ಪುರಸೇಕಾರಿ, ಶಿಷ್ಯನ ಕಣ್ಣರೆಪ್ಪೆ, ಕಿವಿ, ತಲೆ, ಹಣೆ, ತೋಳು, ಎದೆ, ಬೆನ್ನು, ಕೈಕಾಲುಗಳಿಗೆ ಬ್ರಹ್ಮ, ವಿಷ್ಣು, ಮಹೇಶ್ವರ ಅಂತ ತ್ರಿಮೂರ್ತಿಗಳ ಹೆಸರನ್ನು ಹೇಳಿ, ವಿಭೂತಿ ಧರಿಸಿ, ಆತನನ್ನು ಕರಿಕಂಬಳಿಯ ಗದ್ದುಗೆಯ ಮೇಲೆ ಕುಳ್ಳರಿಸುತ್ತಾನೆ. ಐದು ಕಳಸಗಳನ್ನು ಗದ್ದುಗೆಯ ಮೇಲೆ ಇಟ್ಟು, ಅವುಗಳಿಗೆ ದಾರವನ್ನು ಸುತ್ತಿ ಆತನ ಕತ್ತಿಗೂ ಒಂದೆಳೆ ತೆಗೆದು, ರುದ್ರಾಕ್ಷಿ ಮಣಿಯೊಂದನ್ನು ಹೊಸ ದಾರದಲ್ಲಿ ಜೋಡಿಸಿ ಅಡ್ಡವಾಗಿ ಕಟ್ಟುತ್ತಾರೆ. ಮಂಟೇಸ್ವಾಮಿ, ಸಿದ್ದಪ್ಪಾಜಿ ಗುಡ್ಡರಿಗೆ ಮೇಲ್ಮುಖವಾಗಿ ತೂತು ಬರುವಂತೆ ಕಟ್ಟಿದರೆ, ಮಾದೇಶ್ವರನ ಗುಡ್ಡರಲ್ಲಿ ಅಡ್ಡವಾಗಿ ಬರುತ್ತದೆ. ಅರಿಸಿನದ ಬಟ್ಟೆಯಲ್ಲಿ ಅರಿಸಿನದ ಕೊನೆಯೊಂದನ್ನು ಹಾಕಿ, ಕಬ್ಬಿಣದ ಉಂಗುರವಿಟ್ಟು ಅದನ್ನು ಕಪ್ಪ ಉಡಿದಾರದಲ್ಲಿ ಕಟ್ಟಿ ಕರ್ಪೂರ ಹಚ್ಚಿ ಪೂಜೆ ಮಾಡಿ, ರುದ್ರಾಕ್ಷಿ, ಕಂಕಣಧಾರಣೆ ಮಾಡಿ ಎಲ್ಲರಿಂದಲೂ ಶರಣು ಮಾಡಿಸುವರು. ಕಳಸದ ಮುಂದೆ ಹಾಲನ್ನು ಮದುವೆಯ ಧಾರೆಯಲ್ಲಿ ಎರೆಯುವಂತೆ ಎರೆಯುತ್ತಾರೆ. ಗುಡ್ಡರ ಕೈಗೆ ಅಕ್ಕಿ, ಎಲೆ, ಅಡಿಕೆ, ಬೆಲ್ಲ, ಕಾಯಿ ಇಟ್ಟು ಪುರಸೇಕಾರಿ ಆತನಿಗೆ ಕಂಕಣವನ್ನು ಕಟ್ಟಿ, ಮೇಲೇಳಿಸಿ, ನಮಸ್ಕಾರ ಮಾಡಿಸಿ, "ಅಪ್ಪಾ ಮಗನೇ ಇಲ್ಲಿಯವರೆಗೆ ತಂದೆ-ತಾಯಿಯರ ಮಗನಾಗಿದ್ದೆ, ಇಲ್ಲಿಂದೀಚೆಗೆ ಮಾದಪ್ಪನ ಮಗನಾದೆ" ಎಂದು, ರುದ್ರಾಕ್ಷಿಧಾರಣೆ (ಲಿಂಗಧಾರಣೆ) ಆಗಬಹುದಾ? ಎಂದು ಕೇಳುತ್ತಾನೆ. 'ಆಗಲಿ' ಎಂದು ಎಲ್ಲರೂ ಹೇಳುತ್ತಾರೆ. ಆಗ ಅದನ್ನು ಎಲ್ಲರ ಕೈಯಿಂದಲೂ ಮುಟ್ಟಿಸಿ ಅರಿಸಿನದ ದಾರದಲ್ಲಿ ಅದನ್ನು ಜೋಡಿಸಿ ಆತನ ಕೊರಳಿಗೆ 'ಅಕ್ಷಯವಾಗಲಪ್ಪಾ' ಎಂದು ಹೇಳಿ ತಲೆಯ ಮೇಲೆ ಅಕ್ಷತೆ ಕಾಳುಗಳನ್ನು ಎರಚುತ್ತಾನೆ. ಪುರಸೇಕಾರಿಗೆ ಗುಡ್ಡರ ಮಾಡುವವರು, ಐದು ಪಾವು ಅಕ್ಕಿ, ಎರಡಚ್ಚು ಬೆಲ್ಲ, ಎಲೆ, ಅಡಿಕೆ, ಎರಡು ತೆಂಗಿನಕಾಯಿ, ಆರು, ಬಾಳೆಹಣ್ಣು, ಕಡ್ಡಿ ಕರ್ಪೂರ, ಒಂದು ಕೊನೆ ಅರಿಶಿನ, ಕಂಕಣಕ್ಕೆ ಬಟ್ಟೆ, ಕಬ್ಬಿಣದ ಉಂಗುರ, ಗೋತೀರ್ಥ, ಗೋರಂಜನ, ಕಸ್ತೂರಿ,

ಸಾಲೂರು ಮಠದ ಸ್ವಾಮಿಗಳಿಗೆ ‴ ೧/೨ ರೂಪಾಯಿಗಳ ಕಾಣಿಕೆ ಎಲ್ಲವನ್ನೂ ಇಟ್ಟು ಕೊಡುತ್ತಾರೆ. ಹಿಂದೆ ಐದು ಪಾವಲಿಗಳನ್ನು ಇಡುತ್ತಿದ್ದರು. ಇಂದು ಇಪ್ಪತ್ತು ಮೂವತ್ತು ರೂಪಾಯಿಗಳನ್ನು ಕೊಡುತ್ತಾರೆ. ಹಣವಂತರು ಪುರಸೇಕಾರರಿಗೆ ಬಟ್ಟೆಯನ್ನೂ ಸಹ ಕೊಡುತ್ತಾರೆ. ಪುರಸೇಕಾರಿ ಹುಡುಗನ ಕೊರಳಿಗೆ ರುದ್ರಾಕ್ಷಿಯನ್ನು ಕಟ್ಟುತ್ತಾನೆ. ಆಗ ಅಲ್ಲಿ ನೆರೆದ ಗುಡ್ಡರು "ಶರಣಾರ್ತಿ" ಎಂದು ಕಂಸಾಳೆ ನುಡಿಸಿಕೊಂಡು "ಲಿಂಗಧಾರಣೆಗೆ ಶರಣಾರ್ತಿ" ಎಂದು ಹೇಳುತ್ತಿರುತ್ತಾರೆ. ಎಲ್ಲರೂ ಆತನಿಗೆ ಅಕ್ಷತೆ ಕಾಳನ್ನು ತಲೆಯ ಮೇಲೆ ಹಾಕುತ್ತಾರೆ. ಆ ಮೇಲೆ ಪುರುಸೇಕಾರಿ ಶಿಷ್ಯನನ್ನುದ್ದೇಶಿಸಿ-

"ನೀನ್ಯಾರ ಮಗನಪ್ಪಾ?" ಎಂದು ಕೇಳುತ್ತಾನೆ. ಅದಕ್ಕೆ ಆತ "ನಾನು ಮಾದೇವನ ಮಗ ಸ್ವಾಮಿ" ಅನ್ನುತ್ತಾನೆ.

"ಅಂಗಂದ್ ಮ್ಯಾಲೆ ತಕ್ಕಳಪ್ಪಾ ಮಾದೇವನ ಜೋಳಿಗೇನ ಮುಂಗೈಗೆ ಬೆತ್ತಾನ" ಎಂದು ಕೊಟ್ಟು ಮತ್ತೆ ಪ್ರಶ್ನಿಸುತ್ತಾನೆ.

"ಇದನ್ನು ಏನು ಮಾಡ್ತೀಯಾ?"

"ಏನು ಮಾಡ್ಲಿ ಗುರುಗಳೇ?"

"ಈಗ ಮುಖ್ಯಸ್ಥರ ಮನೇಲಿ ಕ್ವಾರಣ್ಯ ಮಾಡ್ಕಂಡು ಬಾ. ಆಮ್ಯಾಲೆ ಸೋಮವಾರ ಶುಕ್ರವಾರ ಮನೆ ಮನೆಗೆ ಹೋಗಿ ಕ್ವಾರಣ್ಯ ಸಾರಬೇಕಪ್ಪಾ ಸೋಮವಾರ ಶುಕ್ರವಾರ ಇದಕ್ಕೆ ಪೂಜೆ ಮಾಡ್ತೀಯಾ ನಿಚ್ಚಯವಾಗಿ?"

"ನಿಚ್ಚಯವಾಗಿ ಮಾಡ್ತೀನಿ" ಅನ್ನಾನೆ. ಆಮೇಲೆ ತಂದೆ ತಾಯಿಯವರು ಗುಡ್ಡನ ಪಾದ ಪೂಜೆ ಮಾಡಿ ಐದು ಸೇರು ಅಕ್ಕಿ, ಒಂದು ಅಚ್ಚು ಬೆಲ್ಲ, ಒಂದು ತೆಂಗಿನಕಾಯಿ, ಎಲೆ, ಅಡಿಕೆ, ಹಣ್ಣುಗಳನ್ನು ಜೋಳಿಗೆಗೆ ಹಾಕಿ ಭಿಕ್ಷೆಗೆ ಕಳುಹಿಸುತ್ತಾರೆ. ನಾಲ್ಕಾರು ಮನೆಗಳಲ್ಲಿ ಭಿಕ್ಷೆ ತೆಗೆದುಕೊಂಡು ಬರುತ್ತಾನೆ. ಆ ಮೇಲೆ ಆತನಿಗೆ ರತನೀರು ತೆಗೆದು ಕಾಲು ತೊಳೆದು ಮನೆಗೆ ಕರೆದುಕೊಳ್ಳುತ್ತಾರೆ. ಹೊಂಬಾಳೆ ಗೊನೆಯನ್ನು ಮನೆಯ ಸೂರಿಗೆ ಕಟ್ಟಿ ಧೂಪ ಹಾಕಿ ಕೈ ಮುಗಿಯುವರು. ಮತ್ತೆ ಪುರುಸೇಕಾರಿ-

"ಹಾಗಂದ್‌ಮ್ಯಾಕೆ ದುರುಸ್ಸಿಕರು ದೇವರ ದರ್ಶನಕ್ಕೆ ಬಂದಿರುವವರು ಬಂದವ್ರಲ್ಲಾ ಅವರೆಲ್ಲಾ ಹೇಳಿದವಂಗೆ ನಡೀತೀನಿ ಅಂತ ಅವರ ಪಾದಕ್ಕೆ ಬೀಳು". ಎಂದಾಗ ಆತ ಪುರುಸೇಕಾರಿಗೆ ನಮಸ್ಕರಿಸಿ, ಅನಂತರ ಅಲ್ಲಿ ನೆರೆದ ಹಿರಿಯರಿಗೆ ನಮಸ್ಕರಿಸುತ್ತಾನೆ. "ನಿಮ್ಮ ಪಾದ ಸಾಕ್ಷಿಯಾಗಿ ಹೇಳಿದಂಗೆ ನಡ್ಕೊಂತೀನಿ" ಅಂತ ಪ್ರತಿಜ್ಞೆಯನ್ನು ಮಾಡುತ್ತಾನೆ.

"ಗುರುಗಳ ಕಂಡರೆ ಶರಣು ಅನ್ನೀಯ?"
"ಗುರುಗಳ ಕಂಡರೆ ಶರಣು ಅನ್ನೀನಿ"
"ಜೋಗಿ ಕಂಡ್ರೆ ಆದೇಸಿ (ಶರಣು) ಅನ್ನೀಯಾ?"
"ಜೋಗಿ ಕಂಡ್ರೆ ಆದೇಸಿ ಅನ್ನೀನಿ"
"ತಂದೆ ತಾಯಿಗೆ ಅನ್ನ ಹಾಕೀಯಾ?"
"ತಂದೆ ತಾಯಿಗೆ ಅನ್ನ ಹಾಕ್ತೀನಿ"

"ಅತಿಥಿಗಳು ಬಂದ್ರೆ ಸೋಮವಾರ ಶುಕ್ರವಾರ ಸ್ನಾನ ಮಾಡಿ ಪೂಜೆ ಮಾಡಿ, ಬಿಕ್ಷೇನಾದರೂ ಮಾಡಿ ತಂದು ಹಾಕ್ತೀಯಾ?"

"ತಂದು ಹಾಕ್ತೀನಿ"

"ವರ್ಷಕ್ಕೊಂದು ಸಾರಿ ಒಂದೂಕಾಲು ರೂಪಾಯಿ ಕಾಣಿಕೆಯನ್ನು ಗುರುಮಠಕ್ಕೆ ತಂದುಕೊಡ್ತೀಯಾ?"

"ತಂದು ಕೊಡ್ತೀನಿ"

ಹೀಗೆ ಗುಡ್ಡನಿಗೆ ಹಲವಾರು ನಿಬಂಧನೆಗಳನ್ನು ಹಾಕುತ್ತಾನೆ. ಅವಕ್ಕೆಲ್ಲಾ ಶಿಷ್ಯ ಒಪ್ಪುತ್ತಾನೆ. ಮುಂದೆ ಹಾಗೆ ಮಾಡುತ್ತೇನೆ ಎಂಬ ಸಂಕಲ್ಪ ಮಾಡುತ್ತಾನೆ. ಆ ಮೇಲೆ ಆತನ ಕಿವಿಯಲ್ಲಿ "ಪಂಚಾಕ್ಷರಿ" ಮಂತ್ರವನ್ನು ಉಪದೇಶಿಸುತ್ತಾನೆ ಪುರುಸೇಕಾರಿ.

ಮನೆಯಲ್ಲಿ ಅಡಿಗೆ ಮಾಡಿ ಗುಡ್ಡನಿಗೆ ಒಂದು ತಟ್ಟೆ ಕೊಡುತ್ತಾರೆ. ಹಿಂದೆ ಮಣ್ಣಿನ ಬಟ್ಟಲಿನಲ್ಲಿ ಊಟಮಾಡುತ್ತಿದ್ದರು. ಕುಂಬಾರ ಒಂದೇ ಕೆರೆಯ ಮಣ್ಣನ್ನು ತಂದು ಎಂಜಲು ಮೈಲಿಗೆ ಇಲ್ಲದೇ ಮಾಡುತ್ತಿದ್ದ, ಅದು ಬಿಸಿಲಿನಲ್ಲಿ ಒಣಗಬೇಕಾಗಿತ್ತು. ಈಗ ಹಿತ್ತಾಳೆ, ಬೆಳ್ಳಿ, ಸ್ಟೀಲ್ ತಟ್ಟೆಗಳನ್ನು ಉಪಯೋಗಿಸುತ್ತಾರೆ. ಕಂಚಿನ ತಟ್ಟೆಯನ್ನು ಮಾತ್ರ ಉಪಯೋಗಿಸುವುದಿಲ್ಲ, ಕಾರಣ ಅದು ಕಂಸಾಳೆ ಎಂಬ ಭಾವನೆಯಿಂದ. ಗುಡ್ಡರಿಗೆ ತಾವು ಮಾಡಿದ ಕಡಬು, ಕಜ್ಜಾಯ ಅನ್ನ ಸಾರು ಎಲ್ಲವನ್ನೂ ಹಾಕಿ, ಗುಡ್ಡನ ಕೈಯಲ್ಲಿ ಒಂದು ಮುತ್ತುಗದ ಎಲೆಯನ್ನು ಕೊಡುತ್ತಾರೆ. ಆತ ಅದನ್ನು ಹಿಡಿದುಕೊಂಡು "ಕಂತೆ ಭಿಕ್ಷೆ ನೀಡಿ ಸ್ವಾಮಿ" ಅಂತ ಹೋಗುವನು. ಆಗ ಗುಡ್ಡರೆಲ್ಲಾ ಒಂದೊಂದು ಹಿಡಿ ಅನ್ನ ಹಾಕುತ್ತಾರೆ. ಅದನ್ನು ತೆಗೆದುಕೊಂಡು ಪಂಕ್ತಿಯಲ್ಲಿ ಕುಳಿತು ಊಟ ಮಾಡುತ್ತಾನೆ. ಅಂದಿನಿಂದ ಆತ ಗುಡ್ಡರ ಗುಂಪಿಗೆ ಸೇರಿದವ ಎಂದಂತಾಗುತ್ತದೆ. ಇದಕ್ಕೆ ಗುಡ್ಡನ ಬಿಟ್ಟು ಅಂತ ಹೇಳುತ್ತಾರೆ. ಅಂದಿನಿಂದ ಇವನು ಯಾರ ಎಂಜಲನ್ನೂ ತಿನ್ನುವಂತಿಲ್ಲ ಎಂಬ ನಿಯಮವಿದೆ. ಸೋಮವಾರ ಶುಕ್ರವಾರ ಸ್ನಾನ ಪೂಜೆ ಮಾಡಿಕೊಂಡು ಉಪಾದಾನ (ಭಿಕ್ಷೆ) ಮಾಡಬೇಕು. ತ್ರಿಕಾಲದಲ್ಲಿ ಮುಖ ತೊಳೆದು

ಭಸ್ಮ ಧರಿಸಿಕೊಂಡು, ಪೂಜೆ ಮಾಡಬೇಕು. ಆಗ ಪಂಚಾಕ್ಷರಿ ಮಂತ್ರವನ್ನು ಜಪಿಸಬೇಕು. ನೆರೆದ ಗುಡ್ಡರಿಗೆಲ್ಲಾ ಊಟ ಮಾಡಿದ ಮೇಲೆ ಅಕ್ಕಿ, ಐದು ಪಾವಲಿಗಳನ್ನು ಕೊಡುತ್ತಾರೆ. ಅವರು "ಅಕ್ಷಯವಾಗಲಿ" ಎಂದು ಹರಸಿ ಹೊರಡುವರು. ಅಲ್ಲಿಂದ ಗುಡ್ಡನ ಜೀವನ ಆರಂಭವಾಗುತ್ತದೆ. ಹನ್ನೆರಡು ವರ್ಷಗಳವರೆಗೆ ತಂದೆ ತಾಯಿಯರ ಮಗನಾಗಿದ್ದವನು, ಗುಡ್ಡನಾದ ಮೇಲೆ ಗುರುಗಳ ಮಗನಾಗುತ್ತಾನೆ. ಹಿಂದೆ ಗುಡ್ಡರಾದವರು ಕಾಲಿಗೆ ಪಾದರಕ್ಷೆಯನ್ನು ಹಾಕುವಂತಿರಲಿಲ್ಲ (ಆದರೆ ಇಂದು ಹಾಕುತ್ತಾರೆ). ಗುಡ್ಡನಾದವನು ಸೋಮವಾರ ಎಲ್ಲೇ ಇದ್ದರೂ ಸ್ನಾನ ಮಾಡಿಕೊಂಡು ಎಣ್ಣೆ ದೀಪ ಹಚ್ಚಿ, ಮಾದೇಶ್ವರನ ಹೆಸರು ಹೇಳಿ ಧೂಪಹಾಕಿ ಕೈ ಮುಗಿಯುವನು. ಹುಣ್ಣಿಮೆ, ಶಿವರಾತ್ರಿ, ದೀಪಾವಳಿ, ಯುಗಾದಿ, ಗೌರಿ, ಪೌರ್ಣಮಿ, ಹಬ್ಬಗಳಲ್ಲಿ ಗುಡ್ಡ ಕಂಕುಳಲ್ಲಿ ಜೋಳಿಗೆ ಹಾಕಿಕೊಂಡು, ಬೆತ್ತ ಹಿಡಿದು, ಕಂಸಾಳೆ ನುಡಿಸಿಕೊಂಡು, ನಾಲ್ಕಾರು ಮನೆಗಳಿಗೆ ಹೋಗಿ ಭಿಕ್ಷೆಯನ್ನು ತರುತ್ತಾನೆ. ಅದನ್ನು ಮನೆಯವರೆಲ್ಲಾ ಹಂಚಿಕೊಂಡು ಊಟ ಮಾಡುತ್ತಾರೆ. ದೀಕ್ಷೆಯಾದ ಮೇಲೆ ಬೇರೆಯವರ ಜೊತೆಯಲ್ಲಿ ಒಂದೇ ತಟ್ಟೆಯಲ್ಲಿ ಊಟ ಮಾಡಬಾರದು.

"ಕೆಲವು ಸಣ್ಣ ಪುಟ್ಟ ವ್ಯತ್ಯಾಸಗಳನ್ನು ಬಿಟ್ಟರೆ, ಮಂಟೇಸ್ವಾಮಿಯ ನೀಲಗಾರರು, ಗೊರವರು, ಎಲ್ಲಮ್ಮನ ಗುಡ್ಡರನ್ನು ಮಾಡುವಲ್ಲಿ ಮಾದೇಶ್ವರ ಗುಡ್ಡರನ್ನು ಬಿಡುವಂತೆಯೇ ದೀಕ್ಷಾಕ್ರಮ ನಡೆಯುವುದನ್ನು ನಾವು ಗುರುತಿಸಬಹುದು."೧೪

ಗುಡ್ಡನಾದ ಮೇಲೆ ಮಾದೇಶ್ವರನ ಬಗೆಗೆ ಕಥೆಯನ್ನು ಕಲಿತು ಹಾಡುವುದು ಮುಂದಿನ ಕೆಲಸ. ಗುರುಗಳು ಸೋಮವಾರ ಗುಡ್ಡನಿಗೆ ಕಥೆ ಹೇಳಿಕೊಡಲು ಆರಂಭಿಸುತ್ತಾರೆ. ಆಗ ಅವನ ಬಾಯಿಂದ ಒಂದೇ ಸಮನೆ "ತಿಮ್ಗಡದುಂಡಿ ಬಡಬ್ರಾಮ್ಹಣ್ನಯ್ಯ" ಎಂದು ಹೇಳು ಎನ್ನುತ್ತಾರೆ. ಅವನು ಸರಾಗವಾಗಿ ತಪ್ಪದೆ ಹೇಳಿದರೆ ಅವನ ನಾಲಿಗೆ ಚನ್ನಾಗಿ ಓಡುತ್ತದೆ ಎಂದು ನಿರ್ಧರಿಸುತ್ತಾನೆ. ಆಗ ಅವನ ಧ್ವನಿ ಹದಕ್ಕೆ ಬರಲು ಅವನು ಅವನ ತಲೆ ತೂರುವಷ್ಟು ಅಗಲ ಬಾಯಿರುವ ಹೊಸ ಮಡಿಕೆಯನ್ನು ತರಿಸಿ ಅವನು ಆ ಮಡಿಕೆಯೊಳಗೆ ತನ್ನ ತಲೆಯನಿಟ್ಟುಕೊಂಡು ಬಾಯಿಗೆ ಬರುವ ಹಾಡನ್ನು ಹೇಳಿಸುತ್ತಾರೆ. ಹೀಗೆ ಒಂದು ತಿಂಗಳು ಮಾಡಿದ ಮೇಲೆ ರಾಗ ಚೆನ್ನಾಗಿದೆ ಎಂದು ತಿಳಿದರೆ ಕಥೆಯನ್ನು ಕಲ್ಪಿಸುತ್ತಾರೆ. ಇಲ್ಲದಿದ್ದರ ಸೊಲ್ಲು ಕೂಡಲೋ ಅಥವಾ ದಮ್ಮಡಿ ಹೊಡೆಯಲೋ ನೇಮಿಸಿಕೊಳ್ಳುತ್ತಾರೆ ಎಂದು ಪಿ.ಕೆ. ರಾಜಶೇಖರ ಅವರು ಹೇಳಿದ್ದಾರೆ. ಆದರೆ, ನಾನು ಸಂದರ್ಶಿಸಿದ ಬೆಂಗಳೂರಿನ ಕಂಸಾಳೆ ಗುಡ್ಡರಾದ ಕಂಸಾಳೆ ಮಾದಪ್ಪ, ಹಾಗೂ ಸಿ. ಮಾದಪ್ಪ ಅವರನ್ನು ಕೇಳಲಾಗಿ, "ಆ ನಿಯಮಗಳೇನೂ ಇಲ್ಲ, ಹಾಡಲು ಶಕ್ತಿ ಇದ್ದರೆ ಆತನಿಗೆ ಪೂರ್ತಿ ಕಥೆಗಳನ್ನು ಕಲಿಸುತ್ತೇವೆ. ಇಲ್ಲದಿದ್ದರೆ ಕಂಸಾಳೆ ನುಡಿಸಿಕೊಂಡು ಕೆಲವು ಬಿಡಿ ಹಾಡುಗಳನ್ನಾದರೂ ಹಾಡುವಂತೆ

ಹೇಳಿಕೊಡುತ್ತೇವೆ. ಇಲ್ಲವಾದರೆ ಹಿಮ್ಮೇಳಕ್ಕೆ ದನಿಗೂಡಿಸಲು, ದಮ್ಮಡಿ ಹೊಡೆಯಲೋ ಕಂಸಾಳೆ ತಾಳ ಹೊಡೆಯಲೋ ಸೇರಿಸಿಕೊಳ್ಳುತ್ತೇವೆ. ಗುಡ್ಡರು ಕಥೆ ಕಲಿಸುವ ಗುರುವಿಗೆ ವರ್ಷಕ್ಕೊಂದು ಸಾರಿ 'ಗುರುಮನೆ ಹಣ' ಎಂದು ಐದು ಹಣವನ್ನು ಕೊಡಬೇಕು. ಇದನ್ನು ಆ ಪುರಸೇಕಾರಿ ಸಾಲೂರು ಮಠಕ್ಕೆ ಒಪ್ಪಿಸುತ್ತಾನೆ. ದೀಕ್ಷೆ ಪಡೆದ ಮಾದೇಶ್ವರನ ಗುಡ್ಡ 'ಕ್ವಾರಣ್ಯ' ಕಾರ್ಯವನ್ನು ಮಾಡುತ್ತಾ ತನ್ನ ಗುರುವು ಹೇಳಿದಂತೆ ಗುರು, ಜಂಗಮ ಗುಡ್ಡ, ಜೋಗಿಗಳನ್ನು ಆದರಿಸುತ್ತಾ, ಮಾದೇಶ್ವರನ ಚರಿತ್ರೆಯನ್ನು ಹಾಡಿ ಹೊಗಳುತ್ತಾ, 'ಗುಡ್ಡನ' ಜೀವನವನ್ನು ಸಾರ್ಥಕ-ಪಡಿಸಿಕೊಳ್ಳುತ್ತಾನೆ." ಇಲ್ಲಿಗೆ ಪೂಜೆಗೆ ಬಿಟ್ಟ ಗುಡ್ಡ ಶ್ರೇಷ್ಠವಾದ ಎಂದು ಅರ್ಥ.

ಮಾದೇಶ್ವರನಿಗೆ ಹರಕೆ ಹೊತ್ತ ಭಕ್ತರು ಸೋಮವಾರ, ದೀಪಾವಳಿ, ಶಿವರಾತ್ರಿ ಮುಂತಾದ ಹಬ್ಬಗಳಲ್ಲಿ ಐದು ಜನ ಗುಡ್ಡರನ್ನು ಕರೆಯಿಸಿ, ಕಜ್ಜಾಯ ತುಪ್ಪ ಮಾಡಿಸಿ ಬಡಿಸುತ್ತೇನೆ ಎಂದು ಹೇಳಿ ತಮ್ಮ ಕಷ್ಟಪರಿಹಾರವಾದ ಮೇಲೆ ಗುಡ್ಡರನ್ನು ಕರೆಯಿಸಿ ಸಂತೃಪ್ತಿ ಪಡಿಸುತ್ತಾರೆ. ಗುಡ್ಡರು ಸ್ನಾನಮಾಡಿ ಮಡಿಯುಟ್ಟು, ವಿಭೂತಿ ಗಟ್ಟಿ, ರುದ್ರಾಕ್ಷಿ ಸರಗಳನ್ನು ಗದ್ದುಗೆ ಊಡಿ (ಪೂಜೆ ಮಾಡಿ) ಆ ಮೇಲೆ ಕುಳಿತು ಕಂಸಾಳೆಯಲ್ಲಿ "ನೆನವಾರ್ತೆ" ಮಾಡಲು ತೊಡಗುವರು. ಬಡವರ ಮನೆಗೆ ಒಳ್ಳೆಯದಾಗಲಿ ಎಂದು ಹೀಗೆ ಹರಸುವರು-

"ಹರ ಹರ ಹರಲಿಂಗ ಗುರುಲಿಂಗ  
ಗುರು ಶಾಂತಲಿಂಗ ನಂಜುಂಡಲಿಂಗ  
ನಡುಮಲೆಯಲಿಂಗ, ನಡುಲಿಂಗ  
ಮಡಿಲಿಂಗ ಸಾಕ್ಷಾತ್‌ಲಿಂಗ,  
ಭಾರಿ ಕಂತೆ ಲಿಂಗ ಭಸ್ಮಾದಿ ಲಿಂಗ  
ನಿಮ್ಮವರುಂಟಾಗಿ ವಾರ ವಾರ  
ತುಂಬಿದ ಸೋಮವಾರ ದಿವಸ  
ಬಡವರ ಮನೆ ಒಳಗೆ ನೀಡಿ ನೀಡಿ  
ಮಾಡಿದಂಥ ಹಾಲು ಅನ್ನ ಪಾಲು ಪಂಚಾಮೃತ  
ಮೇಲಾದಂತ ವಡೆ ಒಬ್ಬಟ್ಟು ಕಜ್ಜಾಯ ತುಪ್ಪಗಳು  
ನೀಡಿ ಮಾಡಿದಂಥ ಭಕ್ತಿ  
ಅವರ ಮನ ಸ್ವಾಮಿ, ಕುಲ ಸ್ವಾಮಿ  
ಭಾಗ್ಯಸ್ವಾಮಿ ಪ್ರೀತಿಯಾಗಿ  
ಆನೆಮಲೆಗರಿವಾಗಿ, ಜೇನುಮಲೆಗರಿವಾಗಿ  
ವಜ್ರಮಲೆ, ಗುಂಜಮಲೆ  
ಗುಲಗಂಜಿ ಮಲೆ ಎಪ್ಪತ್ತೇಳು ಮಲೆ ಕೈಲಾಸಕರಿವಾಗಿ"

ಎಂದು ಹೇಳಿ ಗುಡ್ಡರು ಎಡೆ ಊಟ ಮಾಡುತ್ತಾರೆ. ಮನೆಯವರು ಕೊಟ್ಟಂತ ವೀಳ್ಯ, ಕಾಣಿಕೆಯನ್ನು ತೆಗೆದುಕೊಂಡು ಹೊರಡುತ್ತಾರೆ.

ಯಾರಾದರೊಬ್ಬ ಗುಡ್ಡ ಸತ್ತರೆ, ಮಾದೇಶ್ವರನ ಗುಡ್ಡರನ್ನು ಕರೆಯಿಸಿ, ಅವರಿಗೆ ಸ್ನಾನ ಮಾಡಿಸಿ, ಜೋಳಿಗೆಗೆ ಎಡೆ ಇಕ್ಕುತ್ತಾರೆ. ಹಣವನ್ನು ತೆಗೆದುಕೊಂಡು ಹೋಗಲು, ಚಟ್ಟ ಅಥವಾ ಕುರ್ಜು (ಹೆಣವನ್ನು ಕುಳ್ಳಿರಿಸಿ ತೆಗೆದುಕೊಂಡು ಹೋಗುವ ಗುಡಿಸಿಲಿನಾಕಾರದ ಚಟ್ಟ) ಮಾಡುತ್ತಾರೆ. ಹಳ್ಳ ತೆಗೆದು ಗೂಡುಗಳನ್ನು ಮಾಡಿ, ಒಳಗೆಲ್ಲಾ ಮಣ್ಣಿನ ದೀಪಗಳನ್ನಿಟ್ಟು, ಸತ್ತ ಗುಡ್ಡನನ್ನು ಕುಳ್ಳಿರಿಸಿ, ಉಪ್ಪು ತುಂಬಿ, ಕೆಲವು ಮಾದೇಶ್ವರರ ಗುಡ್ಡರು ಸಮಾಧಿಯನ್ನು ಪೂಜೆ ಮಾಡಿ, ಮಾದೇಶ್ವರನ ಕಥೆಯನ್ನು ಹಾಡುತ್ತಾ ಸಮಾಧಿಯ ಕೆಲಸವನ್ನು ಮುಗಿಸುತ್ತಾರೆ. ತಿಥಿಯ ಸಂದರ್ಭದಲ್ಲೂ ಗುಡ್ಡರುಗಳನ್ನು ಆಹ್ವಾನಿಸಿ ಸಂತರ್ಪಣೆಯನ್ನು ನಡೆಸುತ್ತಾರೆ.

**ಶಿಷ್ಟ ಸಾಹಿತ್ಯದಲ್ಲಿ:**

"ಮಾದೇಶ್ವರ ಸಾಂಗತ್ಯ"[೧೧]ದಲ್ಲಿ ಕವಿ, ಮಾದೇಶ್ವರರು ಬೇಡಗಂಪಣ ರಾಜ್ಯದ ಆಲಂಬಾಡಿಗ ಬಂದು ನೆಲೆಸಿದರು ಎಂಬ ಸ್ಥಾನ ನಿರ್ದೇಶನ ಮಾಡುತ್ತಾನೆಯೇ ಹೊರತು, ಅವರು ಮೊದಲು ಎಲ್ಲಿಂದ ಬಂದರು, ಹುಟ್ಟಿದರು, ಎಂಬುದರ ಬಗ್ಗೆ ಮಾಹಿತಿಯನ್ನು ನೀಡಿಲ್ಲ.

ಮಾದೇಶ್ವರರು ಶ್ರೀಶೈಲದಿಂದಲೇ ಬಂದರು ಎಂಬ ವಾದವನ್ನು ನಂಜುಂಡಾರಾಧ್ಯರು ಎತ್ತಿಹಿಡಿದಿದ್ದಾರೆ.[೧೨] ಕಲ್ಯಾಣದ ಮುಸುಡಿ ಚೌಡಯ್ಯ ಶ್ರೀಶೈಲಕ್ಕೆ ಬಂದಾಗ ಸುತ್ತೂರು ಶಿವಾಚಾರ್ಯರ ಪ್ರಭಾವವನ್ನು ಕೇಳಿ ಆ ಊರಿಗೆ ದಾರಿ ಯಾವ ಕಡೆ ಎಂದು ಕೇಳುತ್ತಿರಲು, ಬಾಲಜಂಗಮ ಮಾದೇಶ್ವರ ಅವರನ್ನು ಕರೆದುಕೊಂಡು ಸುತ್ತೂರಿಗೆ ಬರುತ್ತಾನೆ. ಸಂಗಪ್ಪ ಶಾಸ್ತ್ರಿಗಳು ಮಾದೇಶ್ವರರ ಹುಟ್ಟಿನ ಬಗೆಗೆ ತಮ್ಮ ಕೃತಿಯಲ್ಲಿ-

> "ಪರಶಿವನ ಪರಮಾಂಶಮಂದ್ಯೆ
> ತರುತ ಬಾಲಕ ರೂಪಿನಿಂದವ
> ತರಿಸಿ ಮಾದೇಶ್ವರನ ನಾಮದಿ ನಿಂದುದರ್ಶಿಯಲಿ"[೧೩]

ಎಂದಿದ್ದಾರೆ.

ಶಿಷ್ಟ ಸಾಹಿತ್ಯ ಮಾದೇಶ್ವರನ ಹುಟ್ಟಿನ ಬಗೆಗೆ ಖಚಿತತೆಯನ್ನು ವ್ಯಕ್ತಪಡಿಸಿಲ್ಲ. ಶಿಷ್ಟ ಸಾಹಿತ್ಯದಲ್ಲಿ ಬರುವ ಕೆಲವು ವಿಚಾರಗಳು 'ಸುತ್ತೂರು, ಶ್ರೀಶೈಲದಲ್ಲಿ ಮೊದಲು ಕಾಣಿಸಿಕೊಂಡರು, ಅಯೋನಿಜರಾಗಿ ಜನ್ಮಿಸಿದರು, ಉತ್ತರಾಜಮ್ಮನ ಕಣ್ಣಿನಲ್ಲಿ ಜನ್ಮಿಸಿದರು, ವ್ಯಾಘ್ರಾನಂದರ ಉಪದೇಶದ ಮಂತ್ರದಿಂದ ಉತ್ತರಾಜಮ್ಮ ಶಿವದಾಸರ

ಹಸ್ತದಲ್ಲಿ ಉದ್ಭವಿಸಿದರೆಂದು ಹೇಳುವುದರಲ್ಲಿ ಕಲ್ಪನೆ ಎಷ್ಟು ಎಂಬುದನ್ನು ವ್ಯಕ್ತಪಡಿಸುತ್ತದೆ.

ಹರದನಹಳ್ಳಿಯ ಹಾಗೂ ಹೈದರಾಲಿಯ ತಾಮ್ರ ಶಾಸನಗಳು ಮಾದೇಶ್ವರರ ಹುಟ್ಟಿನ ಬಗೆಗೆ ಮೌನ ತಾಳಿವೆ.

**ಜನಪದ ಸಾಹಿತ್ಯದಲ್ಲಿ**

"ಮಲೆಯ ಮಾದಯ್ಯ ನೆಲೆಯ ಬಲ್ಲವರ್ಯಾರು?
ಮಲೆ ಮಂಜುರದಲ್ಲಿ ತಿರುಗಪ ಮಾದಯ್ಯ
ನೆಲೆಯ ಬಲ್ಲರು ಶರಣಾರು?"[೧೮]

ಎಂದು ಹೇಳುವಲ್ಲಿ ಶರಣರ ಹುಟ್ಟು ಐಕ್ಯ ಗೋಪ್ಯ ಎಂದು ಅದಕ್ಕೆ ಏನೋ ಹೇಳುವುದು.

ಇನ್ನೊಂದು ಜನಪದ ಪದ್ಯದಲ್ಲಿ-

"ಹುಟ್ಟಿದ್ದು ಉತ್ತರ ದೇಸ
ಬೆಳೆದದ್ದು ಕತ್ತಲ ರಾಜ್ಯ
ಬಂದುದು ಒಂದು ಬಾಳಲಿ ಸೀಮೆ
ಕುಂತೂರು ಮಠವ ಸೇರಿ ಮಾದೇವ
ಪಂಚೇಳು ದೀಕ್ಷೆ ಆದರಂತೆ"[೧೯]

ಈ ಪದ್ಯದಲ್ಲಿ ಮಾದೇಶ್ವರರು ಬೆಳೆದುದು ಕತ್ತಲು ರಾಜ್ಯ ಎಂದರೆ, ಮತ್ತೊಂದೆಡೆ ಕತ್ತಲು ರಾಜ್ಯದಲ್ಲಿ ನೆಲೆಯಾಗಲು ಹೊರಡುವರು. ಏನೂ ಅರಿಯದ ಕಾಡು ಜನರು, ಸೋಲಿಗರಿದ್ದ ಬೆಟ್ಟವೇ ಕತ್ತಲು ರಾಜ್ಯವಿರಬೇಕು ಅಥವಾ ಅಂಧಕಾರದಲ್ಲಿದ್ದ ಕತ್ತಲು ರಾಜ್ಯದಲ್ಲಿ ಬೆಳೆದು ಇದು ಬೇಡವೆಂದು ಈಗಿನ ಮಾದೇಶ್ವರ ಕ್ಷೇತ್ರದತ್ತ ಪಯಣ ಬೆಳೆಸಿದರೋ? ಅವರ ಹುಟ್ಟಿನ ನೆಲೆ ಯಾವುದೆಂದು ತಿಳಿಯಲು ಕಷ್ಟವಾಗಿದೆ.

ಮಾದೇಶ್ವರರು ಮೊದಲು ದಕ್ಷಿಣ ಕರ್ನಾಟಕದ ಭೀಮನಕೊಲ್ಲಿಯಲ್ಲಿ ಕಾಣಿಸಿಕೊಂಡು ಆ ಮೇಲೆ ತಮ್ಮ ಪಯಣವನ್ನು ಮುಂದುವರಿಸಿರಬೇಕು.

"ಭೀಮನಕೊಲ್ಲಿಯಲ್ಲಿ ಹಲಗೇಗೌಡ, ಮಾದಮ್ಮ ಎಂಬ ದಂಪತಿಗಳು ಹೊಲದಲ್ಲಿ ಕೆಲಸವನ್ನು ಮಾಡುತ್ತಿದ್ದರು. ಅಲ್ಲಿಗೆ ಮಾದೇಶ್ವರರು ಬಂದು ಮಾದಮ್ಮನನ್ನು ಊಟಕ್ಕೆ ಬಡಿಸು ಎಂದು ಕೇಳಿದಾಗ, ಆಕೆ ಗಂಡನ ಜೊತೆ ಮಾದೇಶ್ವರರಿಗೆ ಊಟಕ್ಕೆ ಬಡಿಸಿದಳು. ಊಟವೆಲ್ಲಾ ಮುಗಿದುದನ್ನು ನೋಡಿ ಮಾದೇಶ್ವರರು ಪರೀಕ್ಷಿಸಲು "ನನಗೆ ಇನ್ನು ಸ್ವಲ್ಪ ಬೇಕಲ್ಲವ್ವ" ಎಂದರು. ಮಾದಮ್ಮ ಗಾಬರಿಯಿಂದ ಬುಟ್ಟಿಯನ್ನು ನೋಡಿದಳು. ಆಗ ಅದರೊಳಗೆ ಇನ್ನೂ ಇದ್ದುದು ಕಂಡಿತು. ಸಂತೋಷದಿಂದ ಅದನ್ನು ತೆಗೆದು ಬಡಿಸಿದಳು.

ಮಾದೇಶ್ವರರು ಅಷ್ಟಕ್ಕೇ ಬಿಡದೆ ಮನೆಗೂ ಬಂದು ಮಾದಮ್ಮನನ್ನು 'ಊಟ ಬಡಿಸು' ಎಂದು ಕೇಳಿದರು. ಮಾದಮ್ಮ "ಗಂಡ ಮನೆಯಲ್ಲಿಲ್ಲ , ಬಂದರೆ ಗತಿ ಏನು?" ಎಂದು ಯೋಚಿಸಿ "ನನ್ನ ಗಂಡ ಬಂದ ಮೇಲೆ ಬನ್ನಿ" ಎಂದು ಹೇಳಿದಳು. ಆಗ ಮಾದಪ್ಪ ಎಳೆನಾಗರಾಗಿ ಒಲೆಯಲ್ಲಿ ಅಡಗಿಕೊಂಡು, ಮಾದಮ್ಮ ಬೂದಿಗೆ ಕೈ ಹಾಕಿದಾಗ, ಆಕೆಯ ಕೈಯನ್ನು ಕಚ್ಚಿ ಬಿಟ್ಟರು. "ನಿನ್ನ ಕೈ ಕಚ್ಚಿದವನು ಮಾದಪ್ಪ, ನಾನು ಈ ಒಲೆಯಲ್ಲಿ ನೆಲೆಸಿದ್ದೇನೆ. ಇಲ್ಲಿ ಗದ್ದುಗೆ ಮಾಡಿ ಪೂಜಿಸಿರಿ" ಎಂದು ಹೇಳಿ ಹಲಗೇಗೌಡ, ಮಾದಮ್ಮ ದಂಪತಿಗಳನ್ನು ತನ್ನ ಒಕ್ಕಲಾಗಿ ಮಾಡಿಕೊಂಡರು"[೨೦]

ಅಲ್ಲಿಂದ ಮಾದೇಶ್ವರರು ಮಾಲಂಗಿಯ ಹತ್ತಿರದ ಕಲ್ಲೂರು ತೋಪಿಗೆ ತಮ್ಮ ಪಯಣವನ್ನು ಮುಂದುವರಿಸಿದರು. ಅಲ್ಲಿ ಹುಡುಗರ ಹತ್ತಿರ ಲಗ್ಗೆ ಚೆಂಡಾಟ ಆಡಿ, ಗೆದ್ದರು. ಹುಡುಗರು ಶಿಕ್ಷೆ ಅನುಭವಿಸಬೇಕಾಯಿತು. ಕೋಪಗೊಂಡ ಹುಡುಗರು "ತಂದೆ ತಾಯಿ ಇಲ್ಲದವ" ಎಂದು ಆಡಿಕೊಂಡರು. ಹುಡುಗರಿಗೆ ಹೊಟ್ಟೆಬಾಧೆ ಉಂಟಾಯಿತು. ಆಗ ಹುಡುಗನೊಬ್ಬನಿಗೆ ಮೈದುಂಬಿದರು ಮಾದೇಶ್ವರರು. ಹೀಗಾಗಲು ಕಾರಣ ಮಾದಪ್ಪನನ್ನು ಬೈದುದೇ. ಆದ್ದರಿಂದ ಕಲ್ಲೂರು, ಮುಳ್ಳೂರು, ಮಾಲಂಗಿಯ ಮಕ್ಕಳು ವರ್ಷಕ್ಕೊಮ್ಮೆ ಮಾದೇಶ್ವರನ ಜಾತ್ರೆ ಮಾಡಲು ಒಪ್ಪಿಕೊಂಡರು. ಆಗ ಅವರ ಸಂಕಟ ಪರಿಹಾರವಾಯಿತು. ಮಾದೇಶ್ವರನ ದೃಷ್ಟಿ ಉತ್ತರದೇಶದ ಉತ್ತರಾಜಮ್ಮ, ಚಂದ್ರಶೇಖರಮೂರ್ತಿ ಎಂಬ ದಂಪತಿಗಳ ಮೇಲೆ ಬಿತ್ತು. ಅವರಿಗೆ ಮುಪ್ಪದರಿದ್ದರೂ ಮಕ್ಕಳಾಗಿರಲಿಲ್ಲ. ಅವರಿಗೆ ಮಗನಾಗಿ ಅವತರಿಸಬೇಕು ಎಂದು ಮನಸ್ಸು ಮಾಡಿ, ಇನಿಮಾವಿನ ಹಣ್ಣಾಗಿ ಆಕೆಗೆ ದೊರಕಿ ಅದನ್ನು ಸೇವಿಸಲು ಮಾದೇಶ್ವರರು ಆಕೆಯ ಗರ್ಭಸೇರಿದರು. ಆಕೆ ಗರ್ಭಿಣಿ ಆದ ವಿಷಯ ಬಿಜ್ಜಳನಿಗೆ ತಿಳಿದು ಆಕೆಯನ್ನು ಕರೆಸಿದ. ಆಕೆಗೆ ಮಾದೇಶ್ವರರು ಕರಡಿಗೆಯನ್ನು ನಡುಮನೆಯ ಗೂಟಕ್ಕೆ ತಗಲಿ ಹಾಕಿ ಹೋಗುವಂತೆ ಆಜ್ಞಾಪಿಸಿದರು. ಆಗ ಉತ್ತರಾಜಮ್ಮ ಹಾಗೆಯೇ ಮಾಡಲು, ಬಸುರಿಯಾಗದಂತೆ ಕಂಡಳು. ಉತ್ತರಾಜಮ್ಮನನ್ನು ಬಿಜ್ಜಳರಾಜ ಹಿಂದಕ್ಕೆ ಕಳುಹಿಸಿದ. ಪುನಃ ಉತ್ತರಾಜಮ್ಮ ಮನೆಗೆ ಬಂದು ಕರಡಿಗೆಯನ್ನು ಧರಿಸಲು ಮತ್ತೆ ಗರ್ಭಿಣಿಯಾದಳು. ಒಂಬತ್ತು ತಿಂಗಳಾದ ಮೇಲೆ ತಾಯಿಯ ಬೆನ್ನಿನ ಮೂಲಕ ಅವತರಿಸಿದರು ಮಾದೇಶ್ವರ. ಎದೆಹಾಲು ಕುಡಿಯಲಿಲ್ಲ, ಏಳುಮಲೆಯಲ್ಲಿ ನೆಲೆಸಿದಾಗ ಭಕ್ತರು ಬರುತ್ತಾರೆ. ಅವರಿಗೆ ಪ್ರಸಾದವಾಗುವಂತೆ ಎದೆಹಾಲಿನಲ್ಲಿ ಮೊಸಲು ಬುತ್ತಿ ಕಟ್ಟುವಂತೆ ತಿಳಿಸಿ, ಕಟ್ಟಿಸಿಕೊಂಡು ಮಾದೇಶ್ವರರು ದಕ್ಷಿಣದ ಕಡೆಗೆ ಹೊರಟರು."[೨೧]

'ಉತ್ತರಾಜಮ್ಮ ಶಿವದಾಸಪ್ಪ ಎಂಬ ವೀರಶೈವ ದಂಪತಿಗಳು ಉತ್ತರದೇಶದಿಂದ ಬಂದು ಅರಣ್ಯದಲ್ಲಿ ವಾಸವಾಗಿದ್ದರು. ಹತ್ತಿರದಲ್ಲಿನ ಕೊಳದಲ್ಲಿ ಬೆಳೆದಿದ್ದ ತಾವರೆ

ಹೂಗಳನ್ನು ನೂರೊಂದು ಜಂಗಮರು ಉತ್ತರಾಜಮ್ಮನ ಪಾದಪೂಜೆಗೆ ತಂದೊಪ್ಪಿಸುತ್ತಿದ್ದರು. ಒಂದು ದಿನ ಆ ಕೊಳದಲ್ಲಿ ಒಂದೇ ಒಂದು ತಾವರೆ ಹೂವು ಬಿಟ್ಟಿತ್ತು. ಅದನ್ನು ಕೀಳಲು ಎಷ್ಟು ಪ್ರಯತ್ನಪಟ್ಟರೂ ಜಂಗಮರಿಗೆ ಸಿಗಲಿಲ್ಲ. ಆ ವಿಚಾರವನ್ನು ಉತ್ತರಾಜಮ್ಮನಿಗೆ ಬಂದು ತಿಳಿಸಿದರು. ಉತ್ತರಾಜಮ್ಮನೇ ಹೋಗಿ ಕೀಳಬೇಕೆಂದು ಕೊಳಕ್ಕೆ ಇಳಿಯಲು ಒಳಗೆ ಮುಳುಗಿದಳು. ಆಗ ಆಕೆ ಪರಮಾತ್ಮಾ ಎಂದು ಬಾಯಿ ಬಿಟ್ಟಾಗ, ಗಂಗೆ ಬಾಯಿ ಹೊಕ್ಕಳು. ಆದರ ಜೊತೆ ಮಾದೇಶ್ವರರು ಆಕೆಯ ಗರ್ಭವನ್ನು ಸೇರಿ ಬೆನ್ನ ಮೂಲಕ ಹೊರಬಂದರು."[೨೨] ಇಲ್ಲಿ ಅರಣ್ಯ ಎಂದಿದೆಯೇ ಹೊರತು ಯಾವ ಅರಣ್ಯ ಎಂದು ಸ್ಪಷ್ಟಪಡಿಸಿಲ್ಲ, ಮಹಾಪುರುಷರು ಬೆನ್ನು ಸೀಳಿಕೊಂಡು ಬರುವುದು ಜಾನಪದ ನಂಬಿಕೆಯಾಗಿ ಬೆಳೆದುಕೊಂಡು ಬಂದಿದೆ. "ಕಾಡು ಜುಂಜಪ್ಪನ ಜನವೂ ಹೀಗೆಯೇ ಆಗಿರುವುದನ್ನು ಕಾಣಬಹುದು."[೨೩]

ಮಾದೇಶ್ವರರು ಸಾಮಾನ್ಯ ಮನುಷ್ಯನಂತೆ ಯೋನಿಯಲ್ಲಿ ಜನಿಸುವಂತಿಲ್ಲ ಜನಪದ ದೃಷ್ಟಿಯಲ್ಲಿ ಅವರು ಹುಟ್ಟಬೇಕಾದರೆ "ಅಂಟಾಗಿರಲಿಕ್ಕಿಲ್ಲ, ಮುಟ್ಟಾಗಿರಲಿಕ್ಕಿಲ್ಲ."[೨೪]

ಇದೇ ಬಗೆಯ ನಿರೂಪಣೆಯನ್ನು ಬೇರೆ ಬೇರೆ ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಕೆಲವು ಬದಲಾವಣೆಗಳೊಡನೆ ಕಾಣಬಹುದು.

ಕುಂತೂರಿನ ಬೀರೇಗೌಡರು ಹಾಡಿದ ಜನಪದ ಗೀತೆಗಳಲ್ಲಿ, "ಶ್ರೀಶೈಲದ ಚುಂಚ ದಂಪತಿಗಳಾದ ಉತ್ತರಾಜಮ್ಮ ಲಿಂಗಮಾರಣ್ಣ ದಂಪತಿಗಳು ಮಲ್ಲಿಕಾರ್ಜುನನ ಪೂಜೆ ಮಾಡುತ್ತಿರುವಾಗ ನಿಂಬೇ ಹಣ್ಣಾಗಿ ಮಾದೇಶ್ವರರು ಪಾತ್ರೆಯನ್ನು ಸೇರಿದರೆಂದೂ, ಆನಂತರ ಆ ಹಣ್ಣನ್ನು ಸೀಳಿಕೊಂಡು ಹೊರಬಂದರು" ಎಂದಿದೆ.

ಜೀ.ಶಂ. ಪರಮಶಿವಯ್ಯನವರು ಸಂಗ್ರಹಿಸಿರುವ ಕಥೆಗಳಲ್ಲಿ[೨೫] ಮಾದೇಶ್ವರನ ಹುಟ್ಟಿನ ಬಗೆಗೆ,

"ಉತ್ತರ ದೇಶದಲ್ಲಿ ಮಲ್ಲೇಶ್ವರ, ಮಹೇಶ್ವರ, ಮಾದೇಶ್ವರ ಮೂವರೂ ಸೃಷ್ಟಿಯಾದರು. ಮಾದೇಶ್ವರರು, ಮಲ್ಲೇಶ್ವರ, ಮಹೇಶ್ವರರನ್ನು ತೊರೆದು ತೆಂಕಣ ನಾಡಿಗೆ ಹೋದರು. ತಪಸ್ಸಿನ ನೆಲೆಗಾಗಿ ಕತ್ತಲ ರಾಜ್ಯದೆಡೆಗೆ ಕಣ್ಣಿಟ್ಟರು. ಮಗ್ಗ ಮರಳಿ, ಹೆಗ್ಗಡದೇವನಕೋಟೆಗಳ ಮೂಲಕ, ಭೀಮನಕೊಲ್ಲಿಗೆ ನಡೆದು ಬಂದು, ಕಲ್ಯಾಣ ಪಟ್ಟಣದ ಸಮೀಪದ ಕಾಡಿಗೆ ಬಂದರು. ಆ ಗಿರಿಯಲ್ಲಿ ತಪೋನಿಷ್ಠರಾದ ಚಂದ್ರಶೇಖರಮೂರ್ತಿ ಉತ್ತರಾಜಮ್ಮನವರನ್ನು ಕಂಡರು. ಮಾದೇಶ್ವರರಿಗೆ, ತಾವು ಇವರಿಗೆ ಶಿಶುವಾಗಬೇಕೆಂಬ ಆಸೆಯಾಯಿತು. ಅಲ್ಲಿ ಮಾದಪ್ಪ ಮೂರು ತಿಂಗಳ

ಶಿಶುವಾಗಿ ಕಾಣಿಸಿಕೊಂಡರು. ಉತ್ತರಾಜಮ್ಮ ತೋಳು ಚಾಚಲು ಮಗು ಮರೆಯಾಯಿತು. ಕೊಳದಲ್ಲಿ ತಾವರೆ ಹೂವಾಗಿ ಕಾಣಿಸಿಕೊಂಡರು. ಉತ್ತರಾಜಮ್ಮ ಆ ಹೂವನ್ನು ಕಣ್ಣಿಗೆ ಒತ್ತಿಕೊಳ್ಳಲು ಮಾದೇಶ್ವರರು ಆಕೆಯ ಹೃದಯವನ್ನು ಸೇರಿದರು. ಉತ್ತರಾಜಮ್ಮ ಗರ್ಭಿಣಿ ಆದಳು. ಮಾದೇಶ್ವರರು ಆಕೆಯ ಬೆನ್ನು ಮಚ್ಚೆಯನ್ನು ಸೀಳಿಕೊಂಡು ಹೊರಬಂದರು" ಎಂದು ಹೇಳಿದ್ದಾರೆ.

ಹಲವು ಜನಪದ ಕಥೆಗಳ, ಗ್ರಂಥಗಳ ಅಧ್ಯಯನದಿಂದ ಮಾದೇಶ್ವರರು ಕಲ್ಯಾಣದಿಂದ ಬಂದವರೆಂದೂ, ಶ್ರೀಶೈಲದಿಂದ ಬಂದವರೆಂದೂ ಎರಡು ಸರಣಿಯಲ್ಲಿ ನಮಗೆ ಉತ್ತರ ದೊರೆಯುತ್ತದೆ. ಮೊದಲು ಮಾದೇಶ್ವರರು ಭೀಮನ ಕೊಲ್ಲಿಯಲ್ಲಿ ಕಾಣಿಸಿಕೊಂಡು ಶ್ರೀಶೈಲ ಕಲ್ಯಾಣಗಳ ಕಡೆಗೆ ಹೋಗಿರಬೇಕು. ಉತ್ತಮಾಪುರ ಕಲ್ಯಾಣದ ಹತ್ತಿರವಿದ್ದಿರಬಹುದು. ಮಾದೇಶ್ವರರ ತಂದೆ ತಾಯಿಯ ಬಗ್ಗೆ, ಅವರು ಚರಿಸಿದ ಊರುಗಳ ಬಗ್ಗೆ ಅನೇಕ ಜನಪದ ಕವಿಗಳು ಅನೇಕ ರೀತಿಯಲ್ಲಿ ಹೇಳಿರುವುದನ್ನು ನೋಡಿದರೆ ಈ ವಿಷಯಗಳ ಬಗ್ಗೆ ನಿಖರವಾಗಿ ಹೇಳುವಂತಿಲ್ಲವಾಗಿದೆ. ಉತ್ತರಾಜಮ್ಮನ ಹೆಸರು ಅನೇಕ ಜನಪದ ಕಾವ್ಯಗಳಲ್ಲಿ ಬಂದಿದೆ. ಮಾದೇಶ್ವರರು ಉತ್ತರಾಜಮ್ಮ 'ಹಡೆದ ಮಗ' ಎಂದು ಕೆಲವರು ಹೇಳಿದರೆ, 'ಪಡೆದಮಗ' ಎಂದು ಕೆಲವರು ಹೇಳುತ್ತಾರೆ. ತಾಯಿ ಮಕ್ಕಳನ್ನು ಹಡೆದರೇನು? ಪಡೆದರೇನು? ಹಡೆದ ಮಕ್ಕಳಿಗಿಂತ ಪಡೆದ ಮಕ್ಕಳೇ ಹೆಚ್ಚು ಎಂದು ಅನೇಕರು ಹೇಳುತ್ತಾರೆ. ವಿವಿಧ ಕಂಸಾಳೆಯ ಕಲಾವಿದರು ಮಾದೇಶ್ವರರ ತಂದೆ ಚಂದ್ರಶೇಖರಮೂರ್ತಿ, ಮಾದಯ್ಯ, ಮಲ್ಲಪ್ಪ, ಶಿವದಾಸಪ್ಪ, ಕಲ್ಯಾಣದೇವರು, ಲಿಂಗಮಾರಣ್ಣ ಎಂಬ ನಾನಾ ಹೆಸರುಗಳನ್ನು ತಂದಿದ್ದಾರೆ. ಚಂದ್ರಶೇಖರಮೂರ್ತಿ ಎಂಬ ಹೆಸರನ್ನು ಅನೇಕರು ಹೇಳಿದ್ದಾರೆ. ಇವುಗಳ ಆಧಾರಗಳಿಂದ ಮಾದೇಶ್ವರರ ತಂದೆ ಚಂದ್ರಶೇಖರಮೂರ್ತಿ, ತಾಯಿ ಉತ್ತರಾಜಮ್ಮ ಎಂದು ಇಟ್ಟುಕೊಳ್ಳಬಹುದು.

**ಮಾದೇಶ್ವರರ ಕಾಲ ನಿರ್ಣಯ:**

ಮಾದೇಶ್ವರರ ಕಾಲದ ಬಗೆಗೆ ಕಾವ್ಯಗಳಲ್ಲಿ ಉಲ್ಲೇಖವಿಲ್ಲ. "ಮಾದೇಶ್ವರ ಸಾಂಗತ್ಯ"ದಲ್ಲಿ ಕುಂತೂರು ಮಠದ ಸ್ವಾಮಿಗಳಿಂದ ಬಿಲ್ಲಯ್ಯನಿಗೆ ಮಾದೇಶ್ವರರು ದೀಕ್ಷೆ ನೀಡಿಸುತ್ತಾರೆ ಎಂಬ ಪ್ರಸ್ತಾಪವಿದೆ. ಸಾಲೂರು ಮಠಕ್ಕೂ ಮಾದೇಶ್ವರರಿಗೂ ನಿಕಟ ಸಂಬಂಧವಿದೆ. ಸಾಲೂರು ಮಠದ ಮೂಲ ಗುರುಗಳನ್ನು ತಿಳಿದರೆ ಮಾದೇಶ್ವರರ ಕಾಲನಿರ್ದೇಶನ ಮಾಡಬಹುದು. ಆದರೆ ಅದು ಲಭ್ಯವಿಲ್ಲ.

ಶಾಸನಗಳು ಕಾಲವನ್ನು ತಿಳಿಯಲು ಸಾಮಗ್ರಿಯಾಗಿರುತ್ತವೆ. ಇದರಲ್ಲಿ ಶಿಲಾಶಾಸನಗಳು ನಂಬಲು ಹೆಚ್ಚು ಅರ್ಹವಾದುವು. ಆದರೆ ಮಾದೇಶ್ವರರ ಬಗ್ಗೆ

ಶಿಲಾಶಾಸನಗಳಲ್ಲಿ ಉಲ್ಲೇಖವಿಲ್ಲ. ಹರದನಹಳ್ಳಿ ತಾಮ್ರಶಾಸನ ಹಾಗೂ ಹೈದರಾಲಿ ತಾಮ್ರ ಶಾಸನಗಳು ಮಾತ್ರ ದೊರೆಯುತ್ತವೆ.

ಕುಂತೂರಿನ ಬಸವೇಶ್ವರ ದೇವಸ್ಥಾನದ ಮುಂದಿರುವ ೭ನೇ ಶಾಸನದಲ್ಲಿ (೧೫೧೨)[೩೬] ನಂಜರಾಜ ಒಡೆಯನ ಹೆಸರು ಪ್ರಸ್ತಾಪಿಸಲ್ಪಟ್ಟಿದೆ. ಈತ ಉಮ್ಮತ್ತೂರು ಪಾಳೆಯಗಾರನಿರಬೇಕು. ಈತ ೧೪೮೨-೧೫೦೪ರಲ್ಲಿ ಇದ್ದವನು.[೩೭]

ಹನುಮಪ್ಪೊಡೆಯ (?)

|

ಇಮ್ಮಡಿ ರಾಯ ಒಡೆಯ (ಸೋಮರಾಯ) (?)

| |

ದೇವಣ್ಣೊಡೆಯ (ಕ್ರಿ.ಶ. ೧೪೮೮-೧೫೦೪) — ನಂಜರಾಜ (ಕ್ರಿ.ಶ. ೧೪೮೨-೧೫೦೪)

ಗೋಪಣ್ಣೊಡೆಯ | (ಕ್ರಿ.ಶ. ೧೫೦೪) — ಚಿಕ್ಕರಾಯ (ಮಲ್ಲರಾಜ) (೧೫೦೫-೧೫೧೨) — | ಇಮ್ಮಡಿಯ ಚಿಕ್ಕರಾಜ ಒಡೆಯರು

"ಹದಿನಾಡು ಗ್ರಾಮವನ್ನಾಳುತ್ತಿದ್ದ ನಂಜರಾಜ ಒಡೆಯರು ತಮ್ಮ ಚತುರಂಗ ಬಲ ಸಮೇತ ಹರದನಹಳ್ಳಿಗೆ ಮೂಗೂರು ಮಾರ್ಗವಾಗಿ ಹೋಗುವಾಗ ಸೈನಿಕರಿಗೆ ಬಾಯಾರಿಕೆಯಾಗಲು ರಾಜನು ಬಂದು ಮಾದೇಶ್ವರರಲ್ಲಿ ಬೇಡಲು, ಸೋರೆ ಬುರುಡೆಯಲ್ಲಿರುವ ನೀರನ್ನು ಎಲ್ಲರಿಗೂ ನೀಡಿ ತೃಪ್ತಿ ಪಡಿಸಿದರು."[೩೮] ಇದಕ್ಕೆ ಆಧಾರ ಜನಪದ ಸಾಹಿತ್ಯ. ಈ ಪ್ರಸಂಗ ಬಿ. ಪುಟ್ಟಮಲ್ಲಪ್ಪನವರ ಪುಸ್ತಕದಲ್ಲೂ ಉಲ್ಲೇಖಿಸಿದೆ.[೩೯] ನಂಜರಾಜ ಒಡೆಯ ಶಾಂತಮಲ್ಲಿಕಾರ್ಜುನ ಮಠವನ್ನು ಕಟ್ಟಿಸಿದ. "ಸೋರೆ ಬುರುಡೆ ನೀರ ಚತುರಂಗ ಬಲಕೆ ನೀಡಿದ ಮಾದೇಶ್ವರರ ಪಾದಕ್ಕೆ ಒಂದು ಸಲ ಉಘೇ ಅನ್ನಿ" ಎಂದು ಪರುಸೆಗಳು ಹಾಡುವುದನ್ನು ಗಮನಿಸಬಹುದು. ೧೪೮೨-೧೫೦೪ರಲ್ಲಿ ಆಳುತ್ತಿದ್ದ ನಂಜರಾಜ ಒಡೆಯ ಈತನೇ ಇರಬೇಕು. ಕುಂತೂರು ಶಾಸನದಲ್ಲಿ ಉಮ್ಮತ್ತೂರಿನ ಚಿಕ್ಕರಾಯ ಒಡೆಯ ಮಾದೇಶ್ವರ ಬೆಟ್ಟದಲ್ಲಿರುವ ಸಾಲೂರು ಮಠದ ಸ್ವಾಮಿಗಳಿಗೆ ದಾನಕೊಟ್ಟ ಬಗೆಗೆ ಉಲ್ಲೇಖ ಇದೆ. ದೇವಚಂದ್ರನ ರಾಜಾವಳಿ ಕಥೆಯಲ್ಲೂ ನಂಜರಾಜ ಒಡೆಯರ ಪ್ರಸ್ತಾಪವಿದೆ.[೪೦]

ಜನಪದ ಸಾಹಿತ್ಯದ ಆಧಾರದ ಮೇಲೆ ಮಾದೇಶ್ವರರ ಕಾಲವನ್ನು ನಿರ್ಧರಿಸುವುದಾದರೆ, ಮಾದೇಶ್ವರರು ಸುತ್ತೂರು, ಕುಂತೂರು ಮಠಕ್ಕೆ ಬಂದಿರುವ ಪ್ರಸ್ತಾಪವಿದೆ. ಆದಕ್ಕೆ ಐತಿಹ್ಯ ಸಾಕ್ಷಿಯಾದ ಸುತ್ತೂರು ಮಠದಲ್ಲಿನ ರಾಗಿ ಕಲ್ಲು,

ಕುಂತೂರು ಮಠದಲ್ಲಿ ಮಾದೇಶ್ವರರು ಹೂವನ್ನು ಮಾಡುತ್ತಿದ್ದ ಕೊಳ, ಮಂಡಿ ಊರಿದ ಸ್ಥಳ, 'ಸುತ್ತೂರು ಮಠ ಸುಖಿ ಅಂದ್ರೆ ಕುಕ್ಕೇಲಿ ತುಂಬಿತ್ತು ರಾಗಿ' ಎಂಬ ಗಾದೆ ಜನಜನಿತವಾಗಿ ಬಂದಿದೆ.

ಮಂಟೇಸ್ವಾಮಿ, ಮಾದೇಶ್ವರ ಎರಡು ಕಾವ್ಯಗಳಲ್ಲೂ ಬಸವೇಶ್ವರರ ದೃಢಭಕ್ತಿಯನ್ನು ಪರೀಕ್ಷಿಸುವ ಸಂದರ್ಭಗಳು ಬರುತ್ತವೆ. ಕಂಸಾಳೆಯವರು ನೀಲಗಾರರು ಇಬ್ಬರೂ ಒಂದೇ ಪ್ರದೇಶದಲ್ಲಿ ಹರಡಿಕೊಂಡಿರುವುದರಿಂದ ಈ ಪ್ರಸಂಗವನ್ನು ಕಾವ್ಯಕ್ಕೆ ಸೇರಿಸಿಕೊಂಡಿರುವುದು ಸ್ಪಷ್ಟವಾಗಿದೆ. ಆದರೆ ಇದು ಅಪ್ರಸ್ತುತ ಎನಿಸದೇ ಇರದು. ಪ್ರಭುದೇವರು ಸ್ಥಾಪಿಸಿದ ಶೂನ್ಯ ಸಿಂಹಾಸನದ ಆರನೇ ಪಟ್ಟಾಧಿಕಾರಿ ಇವರು ಎಂದು ವೀರಶೈವ ಕಾವ್ಯಗಳು ಸಾರುವುದರಿಂದ ಮಾದೇಶ್ವರರು ಬಸವಣ್ಣನವರಿಗಿಂತ ಮುಂದಿನವರಾಗುತ್ತಾರೆಯೇ ಹೊರತು ಅವರ ಸಮಕಾಲೀನರೇ ಆಗಲೀ, ಅವರ ಹಿಂದಿನವರೇ ಆಗಲೀ ಆಗಿರಲಿಕ್ಕಿಲ್ಲ.

ಕಂಸಾಳೆ ಕಥಾ ಸಂಪ್ರದಾಯ ೨ರಲ್ಲಿ ಮಾದೇಶ್ವರರು ಕೃತಯುಗದ ಪುರುಷ ಎಂದು ಹೇಳುವುದರಲ್ಲಿ ಹುರುಳಿಲ್ಲ.

ಮಾದೇಶ್ವರರು ಉತ್ತರದೇಶದಿಂದ ಮೊದಲು ಸುತ್ತೂರು ಮಠಕ್ಕೆ ಬಂದರು ಎಂದು ಜನಪದ ಕಾವ್ಯಗಳು ನಿರೂಪಿಸುತ್ತವೆ. ಆದರೆ ಆಗ ಆ ಮಠದಲ್ಲಿ ಯಾವ ಗುರುಗಳಿದ್ದರೆಂಬುದರ ಉಲ್ಲೇಖವಿಲ್ಲ. ಮಾದೇಶ್ವರರ ಗದ್ದುಗೆ, ಅವರ ಜೋಳಿಗೆ, ನಾಗಬೆತ್ತ, ತ್ರಿಶೂಲ, ಈಗಲೂ ಸುತ್ತೂರು ಮಠದಲ್ಲಿದ್ದು ಅವಕ್ಕೆ ಪೂಜೆ ನಡೆಯುತ್ತಿದೆ. ಈ ದೃಷ್ಟಿಯಿಂದ ಮಾದೇಶ್ವರರು ಕೆಲವು ಕಾಲ ತಮ್ಮ ಬಾಲ್ಯವನ್ನು ಸುತ್ತೂರಿನಲ್ಲಿ ಕಳೆದಿರಬೇಕು. ಕುಂತೂರು ಮಠದಲ್ಲಿ ಪ್ರಭುದೇವರಿದ್ದರು ಎಂಬುದನ್ನು ಹೇಳುತ್ತಾರೆ ಇನ್ನು ಕೆಲವು ಜನಪದ ಸಾಹಿತ್ಯದಲ್ಲಿ ಮಾದೇಶ್ವರರು ಮೊದಲು ಶ್ರೀಶೈಲದಲ್ಲಿದ್ದ ವ್ಯಾಘ್ರಾನಂದರಲ್ಲಿ ವಿದ್ಯೆ ಕಲಿತರು ಎಂದು ಹೇಳಿರುವುದನ್ನು ನೋಡಿದರೆ, ಇದರ ಬಗೆಗೆ ಯಾವ ಐತಿಹಾಸಿಕ ಆಧಾರಗಳಿಲ್ಲದಿರುವುದರಿಂದ ಕಾಲವನ್ನು ನಿರ್ಧರಿಸುವುದು ಕಷ್ಟವಾಗಿದೆ. ಜನಪದ ಐತಿಹ್ಯಗಳು ಪ್ರಬಲವಾದ ಆಧಾರಗಳಾಗುವುದಿಲ್ಲ.

ಜಾನಪದ ಕಾವ್ಯಗಳಲ್ಲಿ ಬರುವ ವಿವರಗಳು ಹಾಗೂ ಆ ಪ್ರದೇಶದ ಜನರ ನಂಬಿಕೆಗಳು, ಶಾಸನಾಭಿಪ್ರಾಯಗಳು ವಿರೋಧವಾಗುವವರೆಗೂ ಸ್ವೀಕಾರಾರ್ಹ ವಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಮಾದೇಶ್ವರರು ಶಾಸನಗಳಲ್ಲಿಯು ಐತಿಹಾಸಿಕ ವ್ಯಕ್ತಿಯಾಗಿರುವುದಕ್ಕಿಂತ ಪೌರಾಣಿಕ ಹಾಗೂ ದೈವಿಕ ವ್ಯಕ್ತಿಯೇ ಆಗಿರುವುದ ವಿಷಯವನ್ನು ಇನ್ನೂ ತೊಡಕಾಗಿಸುತ್ತದೆ. ಆಧಾರಗಳು ದೊರಕುವವರೆಗೂ ಶಾಸನೋ ಅಭಿಪ್ರಾಯಗಳನ್ನು ಜಾನಪದ ನಂಬಿಕೆ ಮತ್ತು ಅಭಿಪ್ರಾಯಗಳಿಗೆ ವಿರೋಧವಾಗ

ಇದ್ದಾಗ ಮಾನ್ಯ ಮಾಡಬಹುದು ಎಂದು ತೋರುತ್ತದೆ. ಮಾದೇಶ್ವರರ ಕಾಲ ಕೃತಯುಗದಿಂದ ಆರಂಭಿಸಿ ೧೦-೧೬ನೇ ಶತಮಾನದವರೆಗೂ ತೂಗುಯ್ಯಾಲೆ-ಯಾಡುತ್ತದೆ.

ಕುಂತೂರು ಶಿಲಾಶಾಸನ, ಉಮ್ಮತ್ತೂರು ಪಾಳೆಯಗಾರರು, ಜನಪದ ಸಾಹಿತ್ಯ ಹಾಗೂ ಶಿಷ್ಟಸಾಹಿತ್ಯದ ಆಧಾರದ ಮೇಲೆ ಮಾದೇಶ್ವರರ ಕಾಲವನ್ನು ನಿರ್ಧರಿಸಬೇಕಾಗಿದೆ.

ಚನ್ನವೀರಕವಿ ೧೫೦೦ರಲ್ಲಿ ಮಾದೇಶ್ವರನ ಹೆಸರನ್ನು ಉಲ್ಲೇಖಿಸಿರುವುದನ್ನು ನೋಡಿದರೆ ಮಾದೇಶ್ವರರು ೧೫೦೦ಕ್ಕೂ ಹಿಂದೆ ಇದ್ದರೆಂದು ಹೇಳಬಹುದು. ಇಲ್ಲಿ ಬರುವ ಮಾದೇಶ್ವರರು, ಜನಪದದಲ್ಲಿ ಉಕ್ತವಾಗಿರುವ ಮಾದೇಶ್ವರರು ಇಬ್ಬರೂ ಏಕವ್ಯಕ್ತಿಯಾಗಿದ್ದರೆಂದು ಭಾವಿಸಬಹುದು. ಸಾ.ಶಿ. ಮರುಳಯ್ಯನವರು ತಮ್ಮ 'ಕೆಳದಿಯ ಅರಸರು'[೧೧] ಮಹಾಪ್ರಬಂಧದಲ್ಲಿ 'ಶಿವತತ್ತ್ವ ರತ್ನಾಕರದಲ್ಲಿ ಕೊಟ್ಟಿರುವ ಗುರುಪರಂಪರೆಯ ಹಾದಿ ಹಿಡಿದು ಹೊರಟರೆ ಮೊದಲನೇ ಚನ್ನವೀರ, ನಾವು ಹೇಳುತ್ತಿರುವ ಪ್ರಸಿದ್ಧ ವೈಯಾಕರಣ ದೊಡ್ಡ ಸಂಕಣ್ಣನ ಕಾಲಕ್ಕೆ ಬರುತ್ತಾನೆ. ಈತನ ಕಾಲ ಕ್ರಿ.ಶ. ೧೫೪೫-೫೮ ಎಂದಿದ್ದಾರೆ. ಕವಿ ಚರಿತ್ರೆಕಾರರು ಗುರುತಿಸಿದ ಕ್ರಿ.ಶ. ೧೫೦೦ನ್ನೇ ಇಟ್ಟುಕೊಂಡರೂ ಮಾದೇಶ್ವರರು ೧೫೦೦ರ ಹಿಂದಕ್ಕೆ ಹೋಗುತ್ತಾರೆ. ಮಾದೇಶ್ವರರು ಕುಂತೂರು ಮಠಕ್ಕೆ ಬಂದಿರುವುದು ಹೈದರಾಲಿಖಾನನ ಶಾಸನದಲ್ಲಿ, ಜನಪದ ಸಾಹಿತ್ಯದಲ್ಲಿದೆ. ಕುಂತೂರು ಮಠದ ಇತಿಹಾಸದ ಬಗೆಗೆ ಕುಂತೂರು ಶಿಲಾಶಾಸನದಲ್ಲಿ ಇರುವುದರಿಂದ ಮಾದೇಶ್ವರರು ಕ್ರಿ.ಶ. ೧೫೦೦ಕ್ಕಿಂತ ಹಿಂದೆ ಇದ್ದರೆಂದು ಹೇಳಬಹುದು.

### ಬಾಲ್ಯ

ಗುರುಮಠಗಳಲ್ಲಿ ಮಾದಪ್ಪನ ಬಾಲಲೀಲೆಗಳು ನಿಜಕ್ಕೂ ಒಂದೊಂದು ರೀತಿಯ ಪವಾಡಗಳು. 'ಬೆಳೆಯುವ ಪೈರು ಮೊಳಕೆಯಲ್ಲೇ' ಎಂಬಂತೆ ಮಾದಪ್ಪ ಮುಂದೆ ಮಹಾಪುರುಷನಾಗುತ್ತಾನೆ ಎಂಬುದನ್ನು ತೋರಿಸಿಕೊಟ್ಟನು. ಮಾದಪ್ಪನ ಮೊದಲ ಹೆಸರು ಕಂಸಾಳೆಯವರ ಪ್ರಕಾರ ಮರಿದೇವರು.

ಬಾಲಕನಾಗಿರುವಾಗಲೇ ಮರಿದೇವರು ಶ್ರೀಶೈಲದಲ್ಲಿ ದನಗಳನ್ನು ಕಾಯುತ್ತಾ ಹುಲಿಗಳೊಡನೆ ಆಟವಾಡುತ್ತಿದ್ದನಂತೆ.

"ಶ್ರೀಶೈಲದಲ್ಲಿ ಶರಣರೊಬ್ಬರು ಸುತ್ತೂರು ಮಠವನ್ನು ನೋಡಬೇಕಲ್ಲಾ ದಾರಿ ಯಾವ ಕಡೆ? ಎಂದು ಚಿಂತಿಸುತ್ತಿರಲು ಮಾದಪ್ಪ ಅವನನ್ನು ಕರೆದುಕೊಂಡು ಬಂದ.

ಅಂದು ಸುತ್ತೂರು ಮಠದ ಮುಂದೆ ರೇಣುಕಾಚಾರ್ಯರ ಉತ್ಸವ ಮೂರ್ತಿಯನ್ನು ರಥಾರೋಹಣಗೊಳಿಸಿ, ರಥವನ್ನು ಎಳೆಯಲು ಅದು ಮುಂದೆ ಹೋಗಲಿಲ್ಲ. ಏಕೆ ಹೀಗಾಯಿತು? ಎಂದು ಚಿಂತಿಸಿ, ನಡೆದ ವಿಚಾರವನ್ನು ಶಿಷ್ಯವೃಂದ ಗುರು ಸಿದ್ದನಂಜದೇಶಿಕರಲ್ಲಿ ಹೇಳಿದರು. ಅವರೂ ಬಂದು ಪ್ರಯತ್ನಪಟ್ಟರು. ರಥ ಮುಂದೆ ಜಗ್ಗಲಿಲ್ಲ. ಸಿದ್ಧನಂಜದೇಶಿಕರು ಗುಹೆಗೆ ಹೋಗಿ ರೇಣುಕರಿಗೆ ನಮಸ್ಕರಿಸಿ ಬಂದು ಗೋಷ್ಠಿಯಲ್ಲಿ ಕುಳಿತರು. ಆಗ ಶಿಷ್ಯರು ಬಂದು ಯಾತ್ರಾರ್ಥಿಗಳೊಬ್ಬರಿಗೆ ಹಾವು ಕಚ್ಚಿ ಸತ್ತಿರುವುದಾಗಿ ತಿಳಿಸಿದರು. ಗುರುಸಿದ್ಧನಂಜದೇಶಿಕರು ಅಲ್ಲಿಗೆ ಬಂದರು. ಮಾದಪ್ಪ ಯಾತ್ರಾರ್ಥಿಗೆ ಮಂತ್ರೋದಕ ಹಾಕಿದ ಕೂಡಲೇ ಆತ ಬದುಕಿಕೊಂಡನು ಮಾದಪ್ಪ ಇನ್ನು ರಥವನ್ನು ಎಳೆಯಬಹುದು ಎಂದು ಹೇಳಿದನು. ಕೂಡಲೇ ರಥ ಚಲಿಸಿತು. ಗುರುಗಳಿಗೆ ಆಶ್ಚರ್ಯವಾಯಿತು. ಒಂದೆರಡು ದಿನಗಳ ಅನಂತರ ದನಗಳಿಗೆ ರೋಗ ತಗುಲಿತು. ಗುರುಗಳು ಮಾದೇಶ್ವರರಿಗೆ ಹೇಳಲು, ಮಾದೇಶ್ವರ ಗುರುವಿನ ಪಾದೋದಕವನ್ನು ತಂದು ದನಗಳಿಗೆ ಪ್ರೋಕ್ಷಿಸಲು ಅವುಗಳ ರೋಗಗಳೆಲ್ಲಾ ನಿವಾರಣೆಯಾದವು.[೩೨]

ಮುಂದೆ ಮಾದೇಶ್ವರರು ಸುತ್ತೂರು ಮಠಕ್ಕೆ ಬಂದರು. ಅಲ್ಲಿನ ಸ್ವಾಮಿಗಳು ಮೂರು ತೊಂಬೆ (ಧಾನ್ಯ ತುಂಬಲು ಬಿದಿರಿನಿಂದ ಹೆಣೆದುದು) ರಾಗಿಯನ್ನು ಕೊಟ್ಟು "ಮೂರು ಸುತ್ತಿಗೆ ತಿರುವಬೇಕು, ಆ ಮೇಲೆ ನಿನಗೆ ವಿದ್ಯೆ ಬುದ್ಧಿ ಕಲಿಸುತ್ತೇನೆ" ಎಂದರು. ಅದಕ್ಕೆ ಮಾದೇಶ್ವರರು ಒಪ್ಪಿ ಮಾರಿ ಮಸಣೆಯರನ್ನು ಕರೆದು ರಾಗಿ ಬೀಸಿಸಿದರು. ಈ ಮಠವು ನನಗೆ ತರವಲ್ಲ "ಸುತ್ತೂರು ಮಠ ಸುಖ ಅಂದ್ರೆ ಕುಕ್ಕೇಲಿ ತುಂಬಿತ್ತು ರಾಗಿ" ಎಂದು ಹೇಳಿ ಹೊರಟರು.[೩೩]

ಮಾದೇಶ್ವರರು ಮುಂದೆ ಬದನಾಳು ಮಠಕ್ಕೆ ಬಂದರು. ಅಲ್ಲಿನ ಸ್ವಾಮಿಗಳು ವಿದ್ಯೆ ಕಲಿಯಬೇಕಾದರೆ ಬದನೇ ಗಿಡಗಳಿಗೆ ನೀರನ್ನು ಹೊಯ್ಯುವ ಕೆಲಸ ಮಾಡಬೇಕು ಎಂದು ಹೇಳಿದರು. ಆಗಲೆಂದು ಮಾದಪ್ಪ ಒಪ್ಪಿ ಗಂಗಾದೇವಿಯನ್ನು ಕರೆದರು. ಆಗ ತೋಟವೆಲ್ಲಾ ನೀರಿನಿಂದ ತುಂಬಿ ಹೋಯಿತು. 'ಬದನಾಳು ಮಠದಲ್ಲಿ ಹಾಕಿದ ಬದನೆ ಗೊಡ್ಡಾಗಲಿ, ಈ ಮಠವೂ ನನಗೆ ತರವಲ್ಲ' ಎಂದು ಹೇಳಿ ಹೊರಟರು.

ಆ ಮೇಲೆ ಮಾದೇಶ್ವರರು ವಾಟಾಳು ಮಠಕ್ಕೆ ಬಂದು 'ಹೊಟ್ಟೆ ಹಸಿವು' ಎಂದು ಗುರುಗಳಲ್ಲಿ ನಿವೇದಿಸಿಕೊಂಡರು. ಗುರುಗಳು ಹೊಟ್ಟೆ ತುಂಬಾ ಅಂಬಲಿಯನ್ನು ಕೊಡಿಸಿದರು. ಆನಂದದಿಂದ ಕುಡಿದ ಮಾದಪ್ಪ 'ಈ ಮಠದಲ್ಲಿ ಅಂಬಲಿ ತುಂಬೇಸೊಪ್ಪು ತುಪ್ಪ ಅನ್ನವಾಗಲಿ' ಎಂದು ಹೇಳಿ ಹೊರಟರು.



ಕುಂತೂರು ಮಠದ ಪ್ರಭುಲಿಂಗಸ್ವಾಮಿಗಳಲ್ಲಿ ಮಾದೇಶ್ವರರು ಕೆಲಸವನ್ನು ಕೇಳಲು, ಹೂವಿನ ಊಳಿಗದ ಕೆಲಸವನ್ನು ಕೊಟ್ಟರು. ಇಲ್ಲಿ ಲಗ್ಗೆ ಚೆಂಡು, ಗೆಜ್ಜುಗದ ಆಟ ಆಡಿಕೊಂಡು, ಸಾಯಂಕಾಲವಾಗುತ್ತಿದ್ದಂತೆಯೇ ಗೂಡ್ದೆ ಗೋಸುಂಬೆಗಳನ್ನೆಲ್ಲಾ ಕುಕ್ಕೆಗೆ ತುಂಬಿಕೊಂಡು ತಿಪ್ಪೇಹಳ್ಳಕ್ಕೆ ಅದ್ದಿದಾಗ ಅವು ಘಮಘಮಿಸುವ ಹೂಗಳಾದುವು. ಅವುಗಳನ್ನು ಗುರುವಿನ ಪೂಜೆಗೆ ತೆಗೆದುಕೊಂಡು ಹೋದ. ಗುರುಗಳು ಇವನು ತಂದ ಪುಷ್ಪಗಳನ್ನೂ ನೋಡಿದರು. ಮಿಕ್ಕ ಶಿಷ್ಯರನ್ನು ನೀವೇಕೆ ಮಾದೇಶ್ವರ ತಂದಂಥ ಹೂಗಳನ್ನು ತಂದಿಲ್ಲ ಎಂದು ಬಯ್ದರು. ಆಗ ಅವರು ಮರುದಿನ ಮಾದೇಶ್ವರರು ಮಾಡುವಂತೆ ಮಾಡುತ್ತಾರೆ. ಅಂದು ಹಾವು ಚೇಳುಗಳು ಗುರುಮಠದಲ್ಲಿ ಓಡಾಡಿದವು. ಗುರುಗಳು ಇದೇನೆಂದು ಕೇಳಲು ಅವರು ನಿಜವಾಗಿ ನಡೆದ ವಿಷಯವನ್ನು ಗುರುಗಳಲ್ಲಿ ತಿಳಿಸಿದರು. ಗುರುಗಳಿಗೆ ಶಿಷ್ಯನ ವಿಚಾರ ಕೇಳಿ ಸಂತೋಷವಾಯಿತು. ಗುರುಗಳು ಮಾದಪ್ಪನಿಗೆ ದೀಕ್ಷೆ ನೀಡಿ ಬರಗನ ಮೇಲೆ ಕುಳ್ಳಿರಿಸಿ ಕಳುಹಿಸಿದರು.

ಕೆಲವು ಮಾರ್ಪಾಟುಗಳೊಂದಿಗೆ ಬೇರೆ ಬೇರೆ ಕಂಸಾಳೆ ಕಥಾ ಸಂಪ್ರದಾಯಗಳಲ್ಲೂ ಈ ರೀತಿಯ ಬಾಲಲೀಲೆಗಳ ವರ್ಣನೆಗಳಿರುವುದನ್ನು ಕಾಣಬಹುದು.

"ಶಿವಶರಣ ಕಥಾ ರತ್ನಕೋಶ"[8] "ದಲ್ಲಿ ಮಾದೇಶ್ವರರ ಲೀಲೆಗಳನ್ನು ಚಿತ್ರಿಸುತ್ತಾ ಮಾದೇಶ್ವರರು ಹಾವು ಕಡಿದವರನ್ನು ಬದುಕಿಸಿದರು. ಬರಡು ಹಸುಗಳನ್ನು ಆಶೀರ್ವದಿಸಿ ಹಾಲು ಹಿಂಡುವಂತೆ ಮಾಡಿದರು, ಕಲ್ಲು ಹರಳುಗಳನ್ನು ಪುಷ್ಪವನ್ನಾಗಿ ಮಾಡಿದರು" ಎಂದು ಹೇಳಿರುವುದನ್ನು ನೋಡಿದರೆ ಜನಪದ ಸಾಹಿತ್ಯ, ನಿರಂಜನವಂಶರತ್ನಾಕರದ ಆಧಾರದ ಮೇಲೆ ಈ ವಿಷಯಗಳನ್ನು ಸಂಗ್ರಹಿಸಿದ್ದಾರೆ ಎನ್ನಿಸುತ್ತದೆ.

ಮಾದೇಶ್ವರರು ತಲಕಾಡು ಮಠಕ್ಕೆ ಬಂದಾಗ ಅಲ್ಲಿನ ಗುರುಗಳು ತೋಟದಲ್ಲಿ ಬಾಳೆ ಗಿಡಗಳನ್ನು ನೆಡುವ ಕೆಲಸಕ್ಕೆ ಒಪ್ಪಿಸಿದರು. ಅಲ್ಲಿ ಮಾದೇಶ್ವರರು ಬುಡಮೇಲಾಗಿ ಗಿಡಗಳನ್ನು ನೆಟ್ಟರು. ಇದನ್ನು ನೋಡಿದ ಮಿಕ್ಕ ಆಳುಗಳು ನಕ್ಕರು. ನಾಳೆ ಗುರುಗಳು ಬಂದು ನೋಡಿದರೆ ಸರಿಯಾಗಿ ಮಾಡುತ್ತಾರೆಂದು ಎಲ್ಲಾ ಮಾತನಾಡಿಕೊಂಡು ಹೊರಟರು. ಮರುದಿನ ಮಾದಪ್ಪ ಮಾಡಿರುವುದನ್ನು ತೋರಿಸಲು ಗುರುಗಳನ್ನು ಕರೆದುಕೊಂಡು ಬಂದರು. ಗುರುಗಳು ನೋಡಿದಾಗ ಆ ಗಿಡಗಳೆಲ್ಲಾ ಚೆನ್ನಾಗಿ ಬೆಳೆದು ನಿಂತಿದ್ದವು. ಮಾದಪ್ಪ ಈ ಮಠವೂ ನನಗೆ ತರವಲ್ಲ ಎಂದು ಹೊರಟರು.[9]

ಉತ್ತರಾಜಮ್ಮನವರ ಮಗನಾಗಿ ಹುಟ್ಟಿದರು ಮಾದಪ್ಪ. ಮಾದೇಶ್ವರರು ಭಿಕ್ಷೆ ಮಾಡಿಕೊಂಡು ಬರಲು ಉತ್ತರಾಜಮ್ಮನವರ ಕಣಜವೆಲ್ಲಾ ತುಂಬಿ ಹೋಯಿತು.

ಆಗ ತಾಯಿ ಮಗನನ್ನುದ್ದೇಶಿಸಿ "ಎರಡು ಸೇರಿನ ಮೇಲೆ ತರಬೇಡಪ್ಪಾ, ನೀನು ತಂದದ್ದನ್ನೆಲ್ಲಾ ಎಲ್ಲಿ ತುಂಬಿಕೊಳ್ಳಲಿ?" ಎಂದು ಹೇಳಿದಳು.[೩೬]

ಕಂಸಾಳೆ ಕಥಾ ಸಂಪ್ರದಾಯ ಆರರಲ್ಲಿ ಕುಂತೂರಿನ ಸ್ವಾಮಿಗಳ ಹೆಂಡತಿ ರಾಗಿ ಬೀಸುವ ಕಾರ್ಯವನ್ನು ಕೊಡುತ್ತಾರೆ. ಆಗ ಮಾದೇಶ್ವರರು ಮೂವರನ್ನು ಕರೆದು ರಾಗಿ ಬೀಸಿಸುತ್ತಾರೆ. ಆದರೆ ಮಾದೇಶ್ವರರು ರಾಗಿ ಬೀಸುವ ಕಾಯಕ ಮಾಡುವುದು ಸುತ್ತೂರಿನಲ್ಲಿ. ಸ್ವಾಮಿಗಳು ವಿರಕ್ತರು. ಅವರಿಗೆ ಹೆಂಡತಿ ಎಲ್ಲಿ ಬರಬೇಕು? ಕಂಸಾಳೆ ಕಥಾ ಸಂಪ್ರದಾಯ '೧'ರಲ್ಲಿ ಸುತ್ತೂರು ಮಠದಲ್ಲಿ ರಾಗಿಕಲ್ಲು ಯಂತ್ರದಂತೆ ತಿರುಗಿ ರಾಗಿ ಬೀಸುವಂತೆ ಮಾಡಿದರು ಎಂದಿದೆ. ಕಂಸಾಳೆ ಕಥಾ ಸಂಪ್ರದಾಯ ೨ರಲ್ಲಿ ಇದರ ಪ್ರಸ್ತಾಪವಿಲ್ಲ.

ಕಲ್ಲು ಬಸವನಿಗೆ ಪೂಜೆ ಮಾಡಲು ಕುಂತೂರಿನ ಪ್ರಭುದೇವರು ಮಾದೇಶ್ವರರಿಗೆ ನಿಯಮಿಸಿದ್ದರು. ಇವರ ಬಗ್ಗೆ ಕಂಸಾಳೆ ಕಥಾ ಸಂಪ್ರದಾಯಗಳು ಅನೇಕ ರೀತಿಯ ಪವಾಡಗಳನ್ನು ಚಿತ್ರಿಸಿವೆ.

ಮಾದೇಶ್ವರರು ನಾಗರಬೆತ್ತವನ್ನು ತೆಗೆದು ಏಟು ಹೊಡೆದು, ಕಲ್ಲು ಬಸವ ಎದ್ದು ತಳಿಗೆ ಅನ್ನವನ್ನು ತಿನ್ನುವಂತೆ ಮಾಡಿದರು. ಖಾಲಿ ತಾಮ್ರದ ಬಟ್ಟಲನ್ನು ತೆಗೆದುಕೊಂಡು ಹೋಗಿ ಮಠದಲ್ಲಿ ಗುರುಗಳ ಹೆಂಡತಿಗೆ ಕೊಟ್ಟರು. ಅವರು, "ತಳಿಗೆ ಅನ್ನ ಎಲ್ಲಿ?" ಎಂದು ಕೇಳಿದಾಗ ಮಾದಪ್ಪ, "ಬಸವ ತಿಂದಿತು" ಎಂದರು. ಎಲ್ಲರಿಗೂ ಆಶ್ಚರ್ಯವಾಯಿತು. ಆಗ ಕಡಲೆಯನ್ನು ಇವರ ಎದುರಿಗೇ ತಿನ್ನಿಸಿದರು.[೩೭]

"ಮಾದೇಶ್ವರರು ಬಸವಣ್ಣನಿಗೆ ಉಕ್ಕಿನ ಕಡಲೆಯನ್ನು ತಿನ್ನಿಸಿದಾಗ ಅದರ ಹಲ್ಲುಗಳೆಲ್ಲಾ ಉದುರಿ ಹೋದವು. ಆಗ ಬಸವಣ್ಣ ಈತನ ತಮ್ಮಡಿತನ ಬೇಡ ಎಂದು ಕುಂತೂರು ಪ್ರಭುಸ್ವಾಮಿಗಳಿಗೆ ಹೇಳಿದ."[೩೮]

"ಸಿಂಗಾನಲ್ಲೂರು ಬಸವನಿಗೆ ಊರಿನಲ್ಲಿ ಪ್ರತಿಯೊಬ್ಬರೂ ಅನ್ನವನ್ನು ತೆಗೆದುಕೊಂಡು ಹೋಗಬೇಕಾಗಿತ್ತು. ಆ ಬಸವ, ಊಟ ತೆಗೆದುಕೊಂಡು ಹೋಗುವವನನ್ನೂ, ಅನ್ನವನ್ನೂ ತಿನ್ನುತ್ತಿತ್ತು. ಮಾದಪ್ಪ ಆ ಕಡೆ ಬರುತ್ತಿದ್ದಾಗ ಅಂದು ಒಬ್ಬ ವಿಧವೆಯ ಮಗನ ಸರದಿ ಬಂದಿತ್ತು. ಆಕೆ ಗೋಳಾಡಿಕೊಂಡು ಅಳುತ್ತಿದ್ದಾಗ ಮಾದಪ್ಪ ಆಕೆಯನ್ನು ಸಮಾಧಾನಿಸಿ ತಾವೇ ಹೋಗುತ್ತೇವೆಂದು ಹೋಗುವರು."[೩೯] ಉಕ್ಕಿನ ಕಡಲೆಯನ್ನು ಮಾಡಿಸಿಕೊಂಡು ಹೋಗಿ, ಆ ಬಸವನಿಗೆ ನಾಗಬೆತ್ತದಲ್ಲಿ ಎಳೆತ ಎಳೆದು ಉಕ್ಕಿನ ಕಡಲೆಯನ್ನು ತಿನ್ನಿಸಿದರು.

ಮತ್ತೊಂದು ಕಂಸಾಳೆ ಕಥಾ ಸಂಪ್ರದಾಯ[೪೦] ಉಕ್ಕಿನಹಳ್ಳಿ ಬಸಪ್ಪನಿಗೆ ಉಕ್ಕಿನ ಕಡಲೆ ತಿನ್ನಿಸುತ್ತಾರೆ ಎಂದಿದೆ.

ಜೀ.ಶಂ. ಪರಮಶಿವಯ್ಯ ಅವರು ಸಂಗ್ರಹಿಸಿದ ಕಂಸಾಳೆ ಸಾಹಿತ್ಯದಲ್ಲಿ ಬಂಡಳ್ಳಿ ಬಸವಣ್ಣನಿಗೆ ನೆನೆಯಕ್ಕಿ, ನೆಲೆಗಡಲೆ, ಗೂನೆಬಾಳೆಹಣ್ಣು, ತಿನ್ನಿಸಿ ಮಾದೇಶ್ವರರು ಬಂದರು ಎಂದಿದೆ."[೪೧]

ಮಾದೇಶ್ವರರು ಕುಂತೂರು ಮಠದಲ್ಲಿ ಎಸಗಿದ ಪವಾಡಗಳು ಹಲವಾರು. ಕುಂತೂರು ಮಠದಲ್ಲಿ ಸ್ವಾಮಿಗಳ ಆದೇಶದ ಮೇರೆಗೆ ಮಾದಪ್ಪ ಪ್ರತಿದಿನವೂ ಹಸುಗಳನ್ನು ಮೇಯಿಸಿಕೊಂಡು ಬರುತ್ತಿದ್ದರು. ದನಗಳನ್ನು ಬಿಟ್ಟು ಮಾದಪ್ಪ ಲಗ್ಗೆ ಚೆಂಡು, ಗೆಜ್ಜುಗ ಆಟ ಆಡುತ್ತಾ, ಸಾಯಂಕಾಲವಾದಂತೆ ದನಗಳನ್ನು ಅಟ್ಟಿಕೊಂಡು ಬರುವ ಪದ್ಧತಿ. ಒಂದು ದಿನ ಆ ಊರಿನ ಶ್ಯಾನುಭೋಗರು ಗುರು ಮಠಕ್ಕೆ ಬಂದು, "ಮಾದಪ್ಪ ಮಠದ ಹಸುವನ್ನು ನಮ್ಮ ಹೊಲಕ್ಕೆ ಬಿಟ್ಟು ಮೇಯಿಸಿಬಿಟ್ಟಿದ್ದಾನೆ" ಎಂದು ಹೇಳಿದರು. ಮಾದೇಶ್ವರರನ್ನು ಗುರುಗಳು ವಿಚಾರಿಸಲಾಗಿ ಅವರು, ನಾನು ಹಸುಗಳನ್ನು ಅವರ ಹೊಲಕ್ಕೆ ಬಿಟ್ಟಿಲ್ಲ , ನಾಳೆ ಬೇಕಾದರೆ ಹೋಗಿ ನೋಡಿ ಎಂದರು. ಆಗಲೆಂದು ಮರುದಿನ ಶಾನುಭೋಗರು ಮತ್ತು ಗುರುಗಳು ಹೋಗಿ ನೋಡಿದರು. ಬೆಳೆ ಮೊದಲು ಹೇಗಿತ್ತೋ ಹಾಗೆಯೇ ಇತ್ತು. ದನಗಳು ಹೊಲವನ್ನು ಮೇಯ್ದಿರಲಿಲ್ಲ. ಜಹಗೀರುದಾರರು ತಾವು ಮಾಡಿದ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡು ಆ ಮಠಕ್ಕೆ ತಮ್ಮ ಹೊಲವನ್ನು ದಾನವಾಗಿ ಬರೆದುಕೊಟ್ಟರು."[೪೨]

ಒಮ್ಮೆ ಮಾದೇಶ್ವರರು ಆಟವಾಡುವಾಗ ಚೆಂಡನ್ನು ಹೊಡೆದ ರಭಸಕ್ಕೆ ಅದು ಚೂರುಚೂರಾಗಿ, ಒಂದು ಚೂರು ಬಂಡಳ್ಳಿದುರ್ಗಕ್ಕೆ ಬಿದ್ದಿತು, ಒಂದು ಸುಂಡನ ಕಣಿವೆಯಲ್ಲಿ, ಮತ್ತೊಂದು ಅಗರಕ್ಕೆ ಹೋಗಿ ಬಿತ್ತು, ಇನ್ನೊಂದು ಸಾರಿ ಹೊಡೆಯಲು ಐದು ಚೂರುಗಳಾಗಿ ತಲಕಾಡಿನ ಮರಳಮೇಲೆ ಬಿದ್ದುವು. ಇವು ಐದು ಲಿಂಗಗಳಾದುವು. ಐದು ಸೋಮವಾರ ಶುಕ್ರವಾರ, ಶನಿವಾರಗಳು ಬಂದರೆ ಇಲ್ಲಿ ಪಂಚಲಿಂಗದರ್ಶನವಾಗಲಿ ಎಂದು ಹೇಳಿ ಹೊರಟರು."[೪೩]

"ಕಲ್ಲೂರು, ಮುಳ್ಳೂರು ಹುಡುಗರ ಜೊತೆ ಲಗ್ಗೆ ಚೆಂಡಾಟ ಆಡುವಾಗ ಮಾದಪ್ಪನೇ ಗೆದ್ದ. ಸೋತವರಿಗೆ ಶಿಕ್ಷೆಯಾಯಿತು. ಆಗ ಅವರಲ್ಲೊಬ್ಬ ಹುಡುಗ ಈತನಿಗೆ ತಂದೆ ತಾಯಿ ಗುರುಗಳಿದ್ದರೆ ಈ ರೀತಿ ಶಿಕ್ಷೆ ಕೊಡುತ್ತಿರಲಿಲ್ಲ ಎಂದ ಕೂಡಲೇ ಆತನಿಗೆ ಹೊಟ್ಟೆಬಾಧೆ ಬಂತು. ಅವನ ಮೈದುಂಬಿ 'ವರ್ಷಕ್ಕೊಮ್ಮೆ ಇಲ್ಲಿ ನನ್ನ ಜಾತ್ರೆ ಆಗಬೇಕು' ಎಂದರು. ಅದಕ್ಕೆ ಎಲ್ಲರೂ ಒಪ್ಪಿದರು. ಆಗ ಆ ಹುಡುಗನ ಸಂಕಟ ಪರಿಹಾರವಾಯಿತು."[೪೪]

ಕುಂತೂರಿನಲ್ಲಿದ್ದಾಗ ಮಾದೇಶ್ವರರು ಜಿಂಕೆಯ ಮೊಲೆಯ ಹಾಲನ್ನು ಕುಡಿಯುತ್ತಾರೆ, ಹಾವಿನೊಡನೆ ಸರಸವಾಡುತ್ತಾ, ಹುಲಿ ಚಿರತೆಗಳೊಡನೆ

ಆಟವಾಡುತ್ತಾರೆ. ಒಮ್ಮೆ ತಲಕಾಡಿನ ಮಲ್ಲಮ್ಮನ ತೋಟಕ್ಕೆ ಮಾದಪ್ಪ ಹಾಗೂ ಮಿತ್ರರು ಹೂವನ್ನು ತರಲು ಹೋಗಿ ಹೂವನ್ನು ಆರಿಸುವಾಗ, ಕಾವಲುಗಾರ ಅವರನ್ನು ಹಿಡಿದು ತಂದು ಮಲ್ಲಮ್ಮನ ಹತ್ತಿರ ನಿಲ್ಲಿಸಿದರು. ಮಾದೇಶ್ವರರನ್ನು ನೋಡಿ ಮಲ್ಲಮ್ಮ ಮೋಹಗೊಳ್ಳುತ್ತಾಳೆ. ಆಕೆ "ಆತನನ್ನು ಒಂದು ಕೋಣೆಯಲ್ಲಿ ಕೂಡಿಹಾಕು" ಎಂದು ತನ್ನ ಆಳಿಗೆ ಹೇಳುತ್ತಾಳೆ. ಅವರು ಹಾಗೆಯೇ ಮಾಡಿದರು. ಮಲ್ಲಮ್ಮ ಆತುರದಲ್ಲಿ ಅಲ್ಲಿಗೆ ಬರಲು ಮಾದೇಶ್ವರರು ಅಲ್ಲಿಂದ ಅದೃಶ್ಯರಾಗಿರುತ್ತಾರೆ. ಮಲ್ಲಮ್ಮ ಹೂವನ್ನೆಲ್ಲಾ ಕೀಳಿಸಿಕೊಂಡು ಪ್ರಭುದೇವರ ಮಠಕ್ಕೆ ಬಂದು ನಡೆದ ವಿಚಾರಗಳನ್ನೆಲ್ಲಾ ತಿಳಿಸಿ ಕ್ಷಮೆಯನ್ನು ಯಾಚಿಸಿದಳು."[೪೮]

"ರಾಜಾವಳಿ ಕಥೆ"ಯಲ್ಲಿ ಮಾದೇಶ್ವರರು ಬಡಗು ಸೀಮೆಯಿಂದ ಕುಂತೂರು ಮಠದ ನಂಜಯ್ಯನೆಂಬ ಜೋಳಿಗೆ ಒಡೆಯರಲ್ಲಿಗೆ ಬಂದು ದನ ಕುರಿ ಕಾಯ್ದುಕೊಂಡು ಚೆಂಡು ಮೊದಲಾದ ಆಟಗಳನ್ನು ಆಡುತ್ತಿದ್ದು, ಸಿಕ್ಕಿದ ಪ್ರಾಣಿಗಳನ್ನು ಹೂವು ಮಾಡಿ ಕೊಂಡು ಬರುತ್ತಿದ್ದ"[೪೯] ಎಂಬ ಪ್ರಸ್ತಾಪವಿದೆ.

ಶಾಂತಮಲ್ಲಿಕಾರ್ಜುನರು ಹಾಗೂ ಮಾದೇಶ್ವರರು ಒಂದು ದಿನ ಕುಂತೂರು ಮಠದಿಂದ ಮೂಗೂರಿನ ಕಡೆ ಬರುತ್ತಿದ್ದರು. ಹದಿನಾಡಿನ ನಂಜರಾಜ ಒಡೆಯರ ಸೈನ್ಯ ಯುದ್ಧದಲ್ಲಿ ನೀರಿಲ್ಲದೆ ಬಳಲುತ್ತಿರಲು, ನಂಜರಾಜ ಒಡೆಯರು ಕುಂತೂರಿನತ್ತ ಹೊರಟರು. ಮಾದೇಶ್ವರರು ಮತ್ತು ಶಾಂತಮಲ್ಲಿಕಾರ್ಜುನರು ಬರುವುದನ್ನು ನೋಡಿ, ಸಂತೋಷಗೊಂಡು ಅವರಿಗೆ ನಮಸ್ಕರಿಸಿ, ತಮ್ಮ ದುಃಖವನ್ನು ತೋಡಿಕೊಂಡರು. ಆಗ ಶಾಂತಮಲ್ಲಿಕಾರ್ಜುನರು ಮಾದೇಶ್ವರರತ್ತ ಕೈ ತೋರಿದರು. ಮಾದೇಶ್ವರರು ಸೋರೆಬುರುಡೆಯಲ್ಲಿದ್ದ ನೀರನ್ನು ಚತುರಂಗ ಬಲಕ್ಕೆ ನೀಡಿದರು. ಎಲ್ಲರೂ ನೀರು ಕುಡಿದು ಸಂತೃಪ್ತರಾದರು. ರಾಜ ಶಾಂತಮಲ್ಲಿಕಾರ್ಜುನರಿಗೆ ಒಂದು ಮಠವನ್ನು ಕಟ್ಟಿಸಿದ.[೫೦]

ಹೀಗೆ ಅನೇಕ ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಹಾಗೂ ಗ್ರಂಥಗಳಲ್ಲಿ ಮಾದೇಶ್ವರನ ಬಾಲಲೀಲೆಗಳನ್ನು ಕವಿಗಳು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

### ಶರಣ ಮಠಗಳಲ್ಲಿ ಮಾದೇಶ್ವರ

ಮಾದೇಶ್ವರು ಗುರುಮಠಗಳನ್ನು ಸುತ್ತಾಡಿದ ಉದ್ದೇಶ, ವಿದ್ಯೆ ಬುದ್ಧಿಯನ್ನು ಕಲಿತು, ಗುರುಕಾರುಣ್ಯದಿಂದ ದೀಕ್ಷೆ ಪಡೆದು ಮೋಕ್ಷ ಹೊಂದುವುದು. ಅಂತೆಯೇ ಕರ್ನಾಟಕದ ಹಲವಾರು ಶರಣ ಮಠಗಳಲ್ಲಿ ಮಾದೇಶ್ವರರು ಶಿಕ್ಷಣ ಪಡೆದು

ಜ್ಞಾನಾರ್ಜನೆ ಮಾಡಿಕೊಂಡರು. ರಾಗಿ ಬೀಸುವುದು, ಹೂವಿನ ಊಳಿಗ, ತೋಟದ ಕೆಲಸ ಮುಂತಾದ ಕಾಯಕಗಳಿಂದ ಶರಣ ಮಠಗಳ, ಗುರುಗಳ ಸೇವೆಯನ್ನೆಸಗಿದರು. ಮಾದೇಶ್ವರರ ಗುರುಗಳಾರು? ದೀಕ್ಷೆ ನೀಡಿದವರಾರು? ಎಂಬುದರ ಬಗೆಗೂ ಹಲವಾರು ವಾದ ವಿವಾದಗಳಿವೆ. ಮಾದೇಶ್ವರರು ಯಾವ ಯಾವ ಮಠಮಾನ್ಯಗಳನ್ನು ಸುತ್ತಿದ್ದರು ಎಂಬುದನ್ನು ಈಗ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಪರಿಶೀಲಿಸಬಹುದು.

**ಶಿಷ್ಟಸಾಹಿತ್ಯ:**

"ಮಾದೇಶ್ವರರು ಮೊದಲು ಸುತ್ತೂರು ಮಠಕ್ಕೆ ಬರುತ್ತಾರೆ. ಗುರು ಸಿದ್ಧನಂಜದೇಶಿಕರು ಶಿಷ್ಯವೃತ್ತಿಯನ್ನು ವಹಿಸುತ್ತಾರೆ. ಆಮೇಲೆ ಪ್ರಭುಲಿಂಗನ ಬೆಟ್ಟದಲ್ಲಿ ಆದಿಗಣೇಶ್ವರರ ಶಿಷ್ಯತ್ವವನ್ನು ಪಡೆಯುತ್ತಾರೆ. ಕಲ್ಯಾಣದಲ್ಲಿ ಬಸವೇಶ್ವರರು ಸ್ಥಾಪಿಸಿದ ಶೂನ್ಯ ಸಿಂಹಾಸನದ ಆರನೇ ಜಗದ್ಗುರುಗಳಾಗುತ್ತಾರೆ."[೮]

"ಕುಂತೂರಿನ ಪೀಠದ ಆದಿಗುರು ಶಾಂತಾರ್ಯ" ಎಂದು ನಂಜುಂಡಾರಾಧ್ಯರು 'ಮಾದೇಶ್ವರ ಸುಪ್ರಭಾತ'ದಲ್ಲಿ ಹೇಳಿದ್ದಾರೆ.[೯]

"ಶಿವರಾತ್ರಿ ಶಿವಾಚಾರ್ಯ" ಹೊತ್ತಗೆಯ ಮುನ್ನುಡಿಯನ್ನು ಬರೆಯುತ್ತಾ ಶಿ.ಚಿ. ನಂದಿಮಠರು "ಸುತ್ತೂರು ಮಠದ ನಾಲ್ಕನೆಯ ಗುರುಗಳಾದ ಸಿದ್ಧನಂಜ ದೇಶಿಕೇಂದ್ರರ ಸಮಕಾಲದವರಾದ ಮಾದೇಶ್ವರರೂ ರೇಣುಕ ಸಂಪ್ರದಾಯದ ಸುತ್ತೂರು ಪೀಠಾಧಿಪತಿಗಳಾದ ಸಿದ್ಧನಂಜದೇಶಿಕರೂ ಪರಸ್ಪರ ವಿಶ್ವಾಸ ಗೌರವಗಳಿಂದ ಇದ್ದರು"[೧೦] ಎಂದಿದ್ದಾರೆ.

ಮಾದೇಶ್ವರರ ಗುರುಪರಂಪರೆಯನ್ನು ತೋಟದ ಸಿದ್ಧಲಿಂಗಶಿವಯೋಗಿಗಳ-

> "ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ
> ಆದಿಗಣೇಶ್ವರನ ಶಿಷ್ಯ ನಿರ್ಮಾಯ ಗಣೇಶ್ವರ"

ಎಂದು ನಮೂದಿಸಿದ್ದಾರೆ.[೧೧]

"ಮಾದೇಶ್ವರರ ಬಾಲ್ಯ ಗುರುಗಳು ಸುತ್ತೂರು ಮಠದ ಬಸವಾರಾಧ್ಯರು. ಅನಂತರ ಪ್ರಭುಲಿಂಗಾರಾಧ್ಯರಿಂದ ದೀಕ್ಷೆ ಪಡೆದರು"[೧೨] ಎಂದಿದ್ದಾರೆ ವಿ. ಮಾದಯ್ಯನವರು.

"ಮಾದೇಶ್ವರರ ಮೊದಲ ಗುರು ಶ್ರೀ ಶೈಲದಲ್ಲಿದ್ದ ವ್ಯಾಘ್ರಾನಂದ ಮಹರ್ಷಿಗಳು. ಇವರು ಮಾದೇಶ್ವರರಿಗೆ ನಾನಾ ವಿದ್ಯೆಗಳನ್ನು ಕಲಿಸಿದರು. ಆ ಮೇಲೆ ಸುತ್ತೂರು ಮಠದ ಗುರುಗಳು"[೧೩] ಎಂದು ನಂಜಪ್ಪನವರು ಹೇಳಿದ್ದಾರೆ. ಇದಕ್ಕೆ ಜನಪದ ಸಾಹಿತ್ಯವೇ ಆಧಾರವಿರಬೇಕೆನ್ನಿಸುತ್ತದೆ.

ಕುಂತೂರು ಸಿದ್ದಪ್ಪಶಾಸ್ತ್ರಿಗಳು ಮಾದೇಶ್ವರರ ಗುರುಗಳ ಬಗೆಗೆ ಹೀಗೆ ಹೇಳಿದ್ದಾರೆ: "ಶ್ರೀಶೈಲದಲ್ಲಿ ಅಲ್ಲಮಪ್ರಭು, ಮಚ್ಛೀಂದ್ರಸಿದ್ಧ ಹಾಗೂ ಗೋರಕನಾಥರಿಗೆ ಜ್ಞಾನೋಪದೇಶ ಮಾಡುತ್ತಿದ್ದರು. ಮಾದೇಶ್ವರರಿಗೆ ಶ್ರೀಶೈಲ ಮಲ್ಲಿಕಾರ್ಜುನನು ಸ್ವರೂಪನು ನಿಮಗೆ ಗುರುವಾಗುವನು" ಎಂದು ಹೇಳಿದ್ದ, ದನಗಳನ್ನು ಕಾಯುತ್ತಿದ್ದ ಮಾದೇಶ್ವರರು ಅಲ್ಲಮಪ್ರಭುಗಳನ್ನು ನೋಡಿ ಅವರನ್ನು ಮೊರೆ ಹೊಕ್ಕರು.[೫೪]

'ಮಂಜುಳಾದೇವಿಯವರು ನಂಜಪ್ಪನವರ ವಾದವನ್ನೇ ಎತ್ತಿ ಹಿಡಿದಿದ್ದಾರೆ.'[೫೫]

'ಮಾದೇಶ್ವರರು ಕುಂತೂರು ಪ್ರಭುದೇವರಿಂದ ದೀಕ್ಷೆ ಪಡೆದರು' ಎಂದು ಕಲಿರಾಯರು ಹೇಳಿದ್ದಾರೆ.[೫೬] ಇದಕ್ಕೆ ಜನಪದ ಸಾಹಿತ್ಯವೇ ಆಧಾರವೆನ್ನಿಸುತ್ತದೆ.

'ಪ್ರಭುದೇವರಿಂದ ಆರಂಭವಾದ ಶೂನ್ಯಪೀಠದ ಆರನೆಯ ಗುರು ಮಾದೇಶ್ವರರು' ಎಂದು ಲೇಖಿಕೆ ಅಭಿಪ್ರಾಯಪಟ್ಟಿದ್ದಾರೆ.[೫೭]

ಮಾದೇಶ್ವರರು ಶೂನ್ಯಸಿಂಹಾಸನದ ಆರನೇ ಪಟ್ಟದವರು. ಏಳನೆಯ ಪಟ್ಟವನ್ನು ನಿರಂಜನ ಗಣೇಶ್ವರರಿಗೆ ಕೊಟ್ಟು ೧೦೧ ವಿರಕ್ತರೊಡನೆ ಬಂದು ಮಾದೇಶ್ವರರು ನೂರೊಂದು ಸ್ವಾಮಿ ಬೆಟ್ಟದಲ್ಲಿ ನೆಲೆಸಿದರು. ಈ ಬೆಟ್ಟ ಕರ್ನಾಟಕ ರಾಜ್ಯದ ಆಗ್ನೇಯ ಅಂಚಿನಲ್ಲಿದೆ. ಅದೇ ಈಗಿನ ಮಾದೇಶ್ವರ ಬೆಟ್ಟ. "ನಾಲ್ಕನೇ ಪಟ್ಟದ ಅದಿಗಣನಾಥರು ಕಂಚಿ ಕಾಳಹಸ್ತಿ, ಚಿದಂಬರ, ತಿರುವಣ್ಣಾಮಲೈ, ಕುಂಭಕೋಣಗಳಲ್ಲಿ ಮಠಗಳನ್ನು ಸ್ಥಾಪಿಸಿದರು"[೫೮] ಎಂದು ದೇಗುಲ ಮಠದ ಪರಂಪರೆಯಲ್ಲಿ ನಮೂದಿಸಿದ್ದಾರೆ.

ಹರದನ ಹಳ್ಳಿಯ ತಾಮ್ರಶಾಸನದಲ್ಲಿ ಮಾದೇಶ್ವರರು ಕುಂತೂರು ಮಠದಲ್ಲಿದ್ದು ಲಿಂಗಧಾರಣೆ ಮಾಡಿಸಿಕೊಂಡರೆಂಬ ಪ್ರಸ್ತಾಪವಿದೆ.

ನೀಲಾಂಬಿಕಾ ಅವರು ಸಂಗ್ರಹಿಸಿರುವ ಜನಪದ ಪದ್ಯವೊಂದರಲ್ಲಿ-

"ಆದಿಮಠವು ಯಾವುದು ಎಂದು
ಸೋದಿಸಿ ನೋಡಿದ ಮಾದೇವ
ಕಪಿಲಾ ತೀರದಿ ಗುಂಪಿತದೊಳಿದಿರುವ
ಜಪತಪ ನಿಷ್ಠೆಯೊಳಾ ಮಠವು"[೫೯]

ಸುತ್ತೂರು ಮಠಕ್ಕೆ ಮೊದಲು ಬಂದ ಪ್ರಸ್ತಾಪವಿದೆ. ಆದರೆ ಕಂಸಾಳೆ ಕಥಾ ಸಂಪ್ರದಾಯ ೧,೨,೩,೪,೫,೬,೭,೮ ರಲ್ಲಿ ಮಾದೇಶ್ವರರಿಗೆ ದೀಕ್ಷೆ, ವಿದ್ಯಾಭ್ಯಾಸ ನೀಡಿದವರು ಪ್ರಭುದೇವರು ಎಂದು ಹೇಳಿದೆ. ಮಾದೇಶ್ವರರ ಬೆಟ್ಟದಲ್ಲಿ ಸಾಲೂರು ಮಠದ ಸ್ಥಾಪನೆಗೆ ಇವರೇ ಕಾರಣ ಕರ್ತರು. ಅವರು ನೆಟ್ಟ ಮುಹೂರ್ತಕಂಬ ಇನ್ನೂ ಸಾಲೂರು ಮಠದಲ್ಲಿ ಐತಿಹ್ಯವಾಗಿ ಇರುವುದನ್ನು ಕಾಣಬಹುದು. ಇಲ್ಲಿ ಹಲವಾರು

ಗಿರಿಜನರಿಗೆ ದೀಕ್ಷೆ ಮಾಡಿಸಿ ಮಾದೇಶ್ವರರು ಧರ್ಮೋಪದೇಶ ಮಾಡಿದುದರಲ್ಲಿ ಅನುಮಾನವಿಲ್ಲ.

ಜನಪದ ಕವಿಗಳು ಹೇಳುವಂತೆ ಶ್ರೀಶೈಲದಲ್ಲಿ ವ್ಯಾಖ್ಯಾನಂದರು ಗುರುಗಳಾದರೆ ಆಮೇಲೆ ಸುತ್ತೂರು, ಕುಂತೂರು, ತಲಕಾಡು, ಬದನಾಳು, ವಾಟಾಳುಮಠದ ಸ್ವಾಮಿಗಳು. ಆದರೂ ವಿವಿಧ ಕಂಸಾಳೆ ಕಥಾ ಸಂಪ್ರದಾಯಗಳು ಈ ಮಠಗಳ ಸ್ವಾಮಿಗಳ ಹೆಸರನ್ನು ಹೇಳಿಲ್ಲ, ಕುಂತೂರುಮಠದ ಪ್ರಭುಲಿಂಗಸ್ವಾಮಿಗಳ ಹೆಸರನ್ನು ಮಾತ್ರ ಪ್ರಸ್ತಾಪಿಸಿದ್ದಾರೆ. ಬದವನಾಳು ಎಂಬ ಊರು ನಂಜನಗೂಡಿನ ತಾಲ್ಲೂಕಿಗೆ ಸೇರಿದ್ದು. ಅಲ್ಲಿ ಯಾವ ಮಠವೂ ಇಲ್ಲ, ಈ ಬದವನಾಳ ಸೌಲಭ್ಯಾಕಾಂಕ್ಷೆಗೆ ಬದನಾಳು ಆಗಿರಬೇಕು. ಜನಪದ ಕವಿಗಳು ಕಥೆ ಕಟ್ಟಿ ಹಾಡಿರಬೇಕು. ಹಾಗೆಯೇ ತಲಕಾಡಿನಲ್ಲಿಯೂ ಇದೆ. ವಾಟಾಳಿನಲ್ಲೂ ಮಠವಿದೆ. ಮಿಣ್ಯದ ಗುರು ಸಿದ್ಧಕವಿಯ ಗುರುಗಳು ಈ ಮಠದ ಸಿದ್ಧಲಿಂಗ ಯತಿಗಳೇ ಆದುದರಿಂದ ಅದು ಪ್ರಾಚೀನ ಮಠವಾಗಿದ್ದು ಅಲ್ಲಿಗೆ ಮಾದೇಶ್ವರರು ಹೋಗಿ ಅಂಬಲಿ ಕುಡಿದು ಹರಸಿ ಬಂದುದು ನಿಜವಿರಬೇಕೆನ್ನಿಸುತ್ತದೆ.

ಒಟ್ಟಿನಲ್ಲಿ ಮಾದೇಶ್ವರರು ಈಗ ಪ್ರಸ್ತಾಪಿಸಿದ ಮಠಗಳಲ್ಲೆಲ್ಲಾ ಸುತ್ತಾಡಿ, ಸೇವೆ ಸಲ್ಲಿಸಿ ಅಲ್ಲಿನ ಗುರುಗಳಿಂದ ವಿದ್ಯೆಬುದ್ಧಿ ಕಲಿತರು. ಕುಂತೂರು ಮಠದ ಪ್ರಭುದೇವರಿಂದ ದೀಕ್ಷೆಯನ್ನು ಪಡೆದು ಆ ಮಠದ ಅಧಿಕಾರ ವಹಿಸಿಕೊಂಡರು.

**ಜಾತಿ**

"ಯಾರು ಬೇಕಾದರೂ ಶರಣ ಧರ್ಮವನ್ನು ಪಡೆಯಬಹುದೆಂಬುದು ಶರಣ ಸಿದ್ಧಾಂತ. ಶರಣ ಧರ್ಮ ಪರಿಪಾಲಿಸಲು ಶೂನ್ಯಸಿಂಹಾಸನ ಹುಟ್ಟಿತು. ಶರಣ ಧರ್ಮದಲ್ಲಿ ಭಿನ್ನ ಭೇದಗಳಿರುವಂತಿಲ್ಲ, ಶೂನ್ಯಸಿಂಹಾಸನ ಶರಣ ಧರ್ಮ ಪೀಠ. ಶೂನ್ಯಸಿಂಹಾಸನ ಜಂಗಮ ಸಿಂಹಾಸನವಲ್ಲ, ಶರಣ ತತ್ವ ಸಿಂಹಾಸನ, ಧರ್ಮ ಸಿಂಹಾಸನ. ಲಿಂಗವಂತರೆಲ್ಲಾ ಸಮಾನರು ಎಂಬುದು ಶೂನ್ಯ ಸಿಂಹಾಸನದ ಅಂತರ್ವಾಣಿ. ಎಲ್ಲಾ ವಿರಕ್ತ ಮಠಗಳೂ ಶೂನ್ಯ ಸಿಂಹಾಸನ ಮಠಗಳೇ."[೬೦] ಮಾದೇಶ್ವರರು ಶೂನ್ಯ ಸಿಂಹಾಸನದ ಪಟ್ಟಾಧಿಕಾರಿಗಳಿಂದ ಮೇಲೆ ಅವರು ವೀರಶೈವರೇ ಆಗಿರಬೇಕು. ಮಾದೇಶ್ವರರ ಜಾತಿಯ ಬಗೆಗೆ ಶಿಷ್ಟ ಕಾವ್ಯಗಳು, ಶಾಸನಗಳು, ಜನಪದ ಸಾಹಿತ್ಯ ಮಾದೇಶ್ವರರನ್ನು ಲಿಂಗವಂತರೆಂದೇ ಎತ್ತಿ ಹಿಡಿಯುತ್ತವೆ.

'ಮಾದೇಶ್ವರ ಸಾಂಗತ್ಯ'ದಲ್ಲಿ ಮಾದೇಶ್ವರರು ಬಿಲ್ಲಯ್ಯ ಹಾಗೂ ಬೇಡರ ಗಂಪಣದವರಿಗೆ ಕುಂತೂರು ಮಠದ ಸ್ವಾಮಿಗಳಿಂದ ದೀಕ್ಷೆ ಮಾಡಿಸುವ ಪ್ರಸಂಗ

ಬರುತ್ತದೆ. ಮಾದೇಶ್ವರರು ವೀರಶೈವರಾಗಿರದಿದ್ದರೆ ಕಾಡಿನ ಜನರಿಗೆಲ್ಲಾ ಲಿಂಗ ದೀಕ್ಷೆಯನ್ನೇಕೆ ಮಾಡಿಸುತ್ತಿದ್ದರು?

ದೇವಚಂದ್ರನ ರಾಜಾವಳಿ ಕಥೆಯಲ್ಲಿ ಮಾದೇಶ್ವರರು ಮಾದಾರರ ಹುಡುಗ ಎಂಬ ಪ್ರಸ್ತಾಪ ಬರುತ್ತದೆ. "ಕುಂತೂರು ಮಠದೊಳು ನಂಜಯ್ಯನೆಂಬ ಜೋಳಿಗೆ ಒಡೆಯರಲ್ಲಿಗೆ ಬಡಗಣ ಸೀಮೆಯಿಂದೋರ್ವ ಮಾದಿಗರ ಹುಡುಗಂ ಪೂರ್ವಜನ್ಮದ ಸಂಸ್ಕಾರದ ವ್ಯಂತರ ದೇವತಾ ಒಲುಮೆಯಿಂದೇ ಶಾಂತಂಬಂದ ಮಠಮಂ ಸೇರಿದನ ಮರಿ ಕಾಯ್ದುಕೊಂಡಿರ್ದು..." ಆ ಕಾಲ ಜೈನ ಧರ್ಮವನ್ನು ಎತ್ತಿ ಹಿಡಿಯುವುದೇ ಆಗಿತ್ತು.

ಹಲವಾರು ಜನಪದ ಕಥಾ ಸಂಪ್ರದಾಯಗಳಲ್ಲಿ ಶ್ರವಣನ ಕಥೆ ಬರುತ್ತದೆ. ಮಾದೇಶ್ವರರು ಆತನ ಮರ್ದನಕ್ಕಾಗಿಯೇ ಉದಿಸಿ ಬಂದಿರುತ್ತಾರೆ. ಶ್ರವಣನ ಆರಮನೆಗೆ ಬಂದಾಗ, ಶ್ರವಣ ಮಾದೇಶ್ವರರನ್ನು "ನಿನ್ನ ಹೆಸರೇನು?" ಎಂದು ಕೇಳಲು, "ಮಾದೇಶ್ವರ" ಎನ್ನುತ್ತಾರೆ. ಅದು ಆತನ ಕಿವಿಗೆ 'ಮಾದಾರಿ' ಎಂದ ಹಾಗಾಗುತ್ತದೆ. ಆಗ ಶ್ರವಣ ತನ್ನ ಪಾದಗಳಿಗೆ ಸರಿಹೋಲುವ ಎರಡು ಚಮ್ಮಾವುಗೆಗಳನ್ನು ಮಾಡಿ ತರಲು ಹೇಳುತ್ತಾನೆ. ಅದಕ್ಕೇ ದೇವಚಂದ್ರ ಮಾದಿಗನೆಂದು ಪ್ರಸ್ತಾಪಿಸಿರಬೇಕು. ಇದೊಂದು ತಪ್ಪು ಕಲ್ಪನೆ. 'ರಾಜಾವಳಿ ಕಥೆ' ಪ್ರಾಮಾಣಿಕವಾದ ಇತಿಹಾಸ ಗ್ರಂಥ ಎನ್ನಲಾಗುವುದಿಲ್ಲ, ನಿರ್ದಿಷ್ಟವಾದ ಐತಿಹ್ಯವೆಂದಾದರೂ ಒಪ್ಪಲಾಗುವುದಿಲ್ಲ"[೮] ಎಂದು ಗೋವಿಂದಪೈಗಳು ಅಭಿಪ್ರಾಯಪಡುತ್ತಾರೆ. ಜೈನರಿಂದಲೇ ನಿರಾಧಾರಯುಕ್ತ ಗ್ರಂಥ ಎಂದು ಪರಿಗಣಿಸಿ ೧೫೦ ವರ್ಷಗಳಾದರೂ ಅದು ಇನ್ನೂ ಪ್ರಕಟವಾಗಿಲ್ಲ.

ಹರದನಹಳ್ಳಿ ತಾಮ್ರ ಶಾಸನದಲ್ಲಿ "ಪ್ರಭುಲಿಂಗಾರಾಧ್ಯರಿಂದ ಲಿಂಗಧಾರಣೆಯಂ ಮಾಡಿಕೊಂಡು" ಎಂದು ಬಂದಿರುವುದನ್ನು ನೋಡಿದರೆ ಮಾದೇಶ್ವರರು ಲಿಂಗಧಾರಿಗಳೆಂಬುದು ಖಚಿತವಾಗುತ್ತದೆ.

"ಸರ್ಪನಾದೀಲೆ ಇರುವುದ್ಕಾರ ಬರುವೋರು
ಲಿಂಗವಂತರ ಮಗ ಮಾದೇವ ಬತ್ತಾನೆಂದು
ನೀವ್ ಸರಸನಾಡೋರು ಬರಬೇಡಿ"[೨]

ಎಂದು ಒಂದು ಕಂಸಾಳೆ ಕಥಾ ಸಂಪ್ರದಾಯ ಹೇಳಿದರೆ, ಮತ್ತೊಂದು "ಉತ್ತರಾಜಮ್ಮ ಶಿವದಾಸಪ್ಪ ಎಂಬ ವೀರಶೈವ ದಂಪತಿಗಳು ಉತ್ತರ ದೇಶದಿಂದ ಬಂದು ಅರಣ್ಯದಲ್ಲಿ ವಾಸವಾಗಿದ್ದರು"[೩] ಎಂದು ಹೇಳುವುದು ಮಾದೇಶ್ವರರು ವೀರಶೈವರೆಂಬುದನ್ನು ಪುಷ್ಟೀಕರಿಸುತ್ತದೆ.

'ಉತ್ತರಾಜಮ್ಮನವರು ಗುರುಮಠಕ್ಕೆ ಹೋಗಿ ಶಿವಲಿಂಗಪೂಜೆ ಮಾಡಿಕೊಂಡು ಕರಡಿಗೆಯನ್ನು ಅಂಗೈ ಮೇಲಿಟ್ಟುಕೊಂಡು ಐದು ರೀತಿಯ ಪುಷ್ಪಗಳಿಂದ ಪೂಜಿಸುತ್ತಾಳೆ" ಎಂದು ಕಂಸಾಳೆ ಕಥಾ ಸಂಪ್ರದಾಯ 'ಳ' ಹೇಳುತ್ತದೆ. ಮತ್ತೊಂದರಲ್ಲಿ ಉತ್ತರಾಜಮ್ಮ "ಲಿಂಗ ಧರಿಸಿದ ಲಿಂಗದಂತೆ ಎಂದು ಹೇಳುತ್ತದೆ"[೬೪]

ಕಂಸಾಳೆ ಕಥಾ ಸಂಪ್ರದಾಯ 'ಱ'ರಲ್ಲಿ ಶಿವಜಂಗಮರೆಂಬ ಪ್ರಸ್ತಾಪವಿದೆ.

ಮಾದೇಶ್ವರರು ಸುತ್ತೂರು, ಕುಂತೂರು ಮುಂತಾದ ಮಠಗಳಲ್ಲಿ ಶಿಷ್ಯ ವೃತ್ತಿಯನ್ನು ಪಡೆಸಿದ್ದರೆಂದು ಬರುತ್ತದೆ. ಲಿಂಗಧಾರಣೆ ಇಲ್ಲದವರನ್ನು ವೀರಶೈವ ಮಠದ ಸ್ವಾಮಿಗಳು ತಮ್ಮ ಸೇವೆಗೆ ತೆಗೆದುಕೊಳ್ಳುವುದಿಲ್ಲ, ಅವರ ಪೂಜೆಗೆ ಹೂವು ತರುವಲ್ಲಿ, ಈ ಮರಿಗಳು ಸಹಾಯಕರಾಗುತ್ತಾರೆ. ಭವಿಗಳನ್ನು ಈ ಕೆಲಸಕ್ಕೆ ನಿಯಮಿಸುವಂತಿಲ್ಲ ಎಂದ ಮೇಲೆ ಮಾದೇಶ್ವರರು ವೀರಶೈವರೆಂಬುದು ಖಚಿತವಾಗುತ್ತದೆ.

'ಉತ್ತರಾಜಮ್ಮ ಎದೆಯ ಮೇಲೆ ಇರುವಂಥ ಚಿನ್ನದ ಕರಡಿಗೆ ಹಾಕಿಕೊಂಡು, ನೀರುಯ್ಕಂಡು, ಅರಮನೆಗೆ ಇನ್ನು ಬತ್ತವಳೆ'[೬೫] ಎಂಬ ಉಕ್ತಿಯೂ ಮಾದೇಶ್ವರರು ಲಿಂಗವಂತರೆಂಬುದನ್ನು ದೃಢೀಕರಿಸುತ್ತದೆ.

ಕಂಸಾಳೆ ಕಥಾ ಸಂಪ್ರದಾಯ 'ಳ'ರಲ್ಲೂ ಉತ್ತರಾಜಮ್ಮ ಕೊರಳಲ್ಲಿ ಕರಡಿಗೆಯನ್ನು ಹಾಕಿರುವ ಚಿತ್ರಣ ಬರುತ್ತದೆ. ಇನ್ನೊಂದು ಕಂಸಾಳೆ ಕಥಾ ಸಂಪ್ರದಾಯದ ಕಥೆಯಲ್ಲಿ ಉತ್ತರಾಜಮ್ಮ ಚಂದ್ರಸೇಖರಮೂರ್ತಿ ಲಿಂಗಪೂಜೆ ಮಾಡುತ್ತಿರುತ್ತಾರೆ.[೬೬] ಅಂದರೆ ಇಷ್ಟಲಿಂಗವನ್ನು ಪೂಜೆ ಮಾಡುತ್ತಿರುತ್ತಾರೆ. ಆದುದರಿಂದ ಮಾದೇಶ್ವರರು ವೀರಶೈವರೆಂಬುದು ನಿರ್ವಿವಾದ.

ಕಂಸಾಳೆ ಕಥಾ ಸಂಪ್ರದಾಯದಲ್ಲಿ-

"ಕುಂತೂರು ಮಠ ಸೇರಿ
ಪಂಚೇಳು ದೀಕ್ಷೆ ಆದರಂತೆ"

ಎಂಬಲ್ಲಿ ಮಾದೇಶ್ವರರಿಗೆ ಕುಂತೂರು ಮಠದ ಸ್ವಾಮಿಗಳು ದೀಕ್ಷೆ ಮಾಡಿರುವುದರ ಬಗೆಗೆ ಹೇಳಿದೆ.

ಮಾದೇಶ್ವರರು ಎಡಗೈ ಪಂಗಡಕ್ಕೆ ಸೇರಿದವರೆಂದು ಜನಪದರಿಂದ ತಿಳಿದು ಬರುತ್ತದೆ. ಇದನ್ನು ಕ್ರಿ.ಶ. ೧೮೩೮ರಲ್ಲಿದ್ದ ದೇವಚಂದ್ರನ "ರಾಜಾವಳಿ ಕಥೆ" ಸಮರ್ಥಿಸುತ್ತದೆ. ರಾಜಾವಳಿ ಕಥೆಯ ಕರ್ತೃ ದೇವಚಂದ್ರನು. ಅವನ ಕಾಲದ ಹಿರಿಯರಲ್ಲಿ ವಿಷಯವನ್ನು ಸಂಗ್ರಹಿಸಿ ಮಾದೇಶ್ವರನ ಬಗೆಗೆ ಬರೆದಿರಬಹುದಾದರೂ

ಅವನ ಎಲ್ಲಾ ಹೇಳಿಕೆಗಳೂ ಒಪ್ಪುವಂತಿಲ್ಲ ಎಂದು ಹೇಳಿದ ಇವರೇ ಮಾದೇಶ್ವರ ಮಾದಿಗರವನೆಂಬುದಕ್ಕೆ ಜನಪದ ಸಾಹಿತ್ಯದಲ್ಲೂ ಆಧಾರವಿರುವುದರಿಂದ ಈ ವಿಷಯದಲ್ಲಿ ಸಮಸ್ಯೆಯೇ ಇಲ್ಲ ಎಂದು ಇದೊಂದನ್ನು ಮಾತ್ರ ಒಪ್ಪಿದ್ದಾರೆ. ಇವರ ಹೇಳಿಕೆಗಳನ್ನು ಖಂಡಿಸಿ ಹ.ಜ. ಶಿವಶಂಕರಪ್ಪನವರು ತಮ್ಮ ನಿಲುವನ್ನು ನೀಡಿದ್ದಾರೆ. ದೇವಚಂದ್ರನ ರಾಜಾವಳಿ ಕಥೆಯಲ್ಲಿ 'ಸರಗೂರಿನ ಉಪ್ಪಲಿಗರು ಅವನಿಗೆ ಗುಡಿಕಟ್ಟಿಸಿದರು' ಎಂಬಂತಹ ನಂಬಲನರ್ಹವಾದ ಅನೇಕ ವಿಷಯಗಳು ಬಂದಿವೆ. ಪರಮತ ನಿಂದೆಯೇ ಮುಖ್ಯ ಗುರಿಯಾಗುಳ್ಳ ಈ ಜೈನ ಕವಿಯಿಂದ ರಚಿತವಾದ ಈ ಕಾವ್ಯ ಕಾಲ್ಪನಿಕ ಕಟ್ಟುಕತೆಗಳಿಂದ ತುಂಬಿದೆ. ಈ ಗ್ರಂಥವು ಜೈನರಿಂದಲೇ ನಿರಾಧಾರಯುಕ್ತವಾದ ಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ೧೫೦ ವರ್ಷಗಳಾದರೂ ಈ ಗ್ರಂಥ ಇನ್ನೂ ಪ್ರಕಟವಾಗದೆ ಉಳಿದಿದೆ. ವೀರಶೈವ ಪಾಲನೆ, ಕಟ್ಟಾಚರಣೆಯ ಗುರು ಮಠಗಳಲ್ಲಿ ಒಂದಾದ ಈ ಮಠದೊಳಕ್ಕೆ ಲಿಂಗವಂತರ ಹೊರತು ಉಳಿದವರಿಗೆ ಪ್ರವೇಶವಿತ್ತಿದ್ದೂ, ಪ್ರಸಾದಕ್ಕೆ ಉಪಯೋಗಿಸುವ ರಾಗಿಯನ್ನು ಬೀಸಿಸುವ ಕೆಲಸವನ್ನು ಇತರರಿಂದ ಮಾಡಿಸುತ್ತಿದ್ದರೆಂಬುದು ಊಹೆಗೂ ನಿಲುಕದ ಮಾತು. ಹೂವಿನ ಕಾಯಕಕ್ಕಂತೂ ಎಡಗೈ ಜಾತಿಯವನೊಬ್ಬನನ್ನು ನೇಮಿಸಿಕೊಳ್ಳುವುದೂ ನಂಬಲರ್ಹವಾದ ಮಾತಲ್ಲ. "ಎಡಗೈ ಬಲಗೈಯವರು ಹುಟ್ಟಿದ ಕವಟ್ಲು" ಹಾಡಿರುವ ಪುಟ್ಟಮಾದಯ್ಯನವರು ಮಾದೇಶ್ವರನ ಗುಡ್ಡರಲ್ಲಿ, ನೀಲಗಾರರು. ಈ ಲಾವಣಿ ರಚನೆಯಲ್ಲಿ ಅವರದೇ ಕೈವಾಡವಿದೆ ಎಂದು ಹೊಳೆಯದಿರದು ಎಂದು ಹೇಳಿ ಖಂಡಿಸಿ ಮಾದೇಶ್ವರರು ವೀರಶೈವರೆಂಬ ಅಭಿಪ್ರಾಯಕ್ಕೆ ಬರುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ ಪುಟ್ಟಮಾದಯ್ಯನವರು ನೀಲಗಾರರು. ಮಾದೇಶ್ವರನ ಕಥೆಯನ್ನು ಯಾರೋ ಗುಡ್ಡರಿಂದ ಕಲಿತುಕೊಂಡೆ ಎಂಬ ಹೇಳಿಕೆಯನ್ನು ನೋಡಿದರೆ ಈ ಕಥೆಯನ್ನು ತಾವೇ ಸೃಷ್ಟಿಸಿರುವ ಊಹೆಗೆ ಎಡೆಮಾಡಿಕೊಟ್ಟಿದ್ದಾರೆ. ಪುಟ್ಟಮಾದಯ್ಯನವರನ್ನು ಸಂದರ್ಶಿಸಿ ಕೇಳಲಾಗಿ "ನಾನು ಮಾದಿಗ ಅಂತ ಹೇಳ್ಲಿಲ್ಲ, ಅವರು ಒಂದಕ್ಷರವ ಮಾ....ದ್ಗಾ.... ಅಂತ ಬರೆದುಬುಟ್ರು. ಆದಿಜಾಂಬವ ಅಂತ ಹೇಳಿದೆ ಎಂದರು. 'ಆದಿಜಾಂಬವ ಅಂದ್ರೆ ಯಾವಜಾತಿ? ಎಂದಾಗ, ಆದಿವಂಸದವ್ರೂ ಅಂತ ಹೇಳಬಹುದು ಸಾರ್....." ಹೀಗೆ ಎರಡು ಸರಣಿಯಲ್ಲಿ ಅಳುಕಿನ ಉತ್ತರ ಹೇಳಿ ತಬ್ಬಿಬ್ಬಾದುದನ್ನು ನೋಡಿದರೆ ಈ ಕಥೆಯ ಸೃಷ್ಟಿ ಇವರದೇ ಎನಿಸದೆ ಇರದು. ಯಾರೂ ಹೇಳದ ಕಥೆಯನ್ನು ಇವರೊಬ್ಬರೇ ಹೇಳಿರಬೇಕಾದರೆ ಇವರದೇ ಕಲ್ಪನೆಯೇ ಹೊರತು, ಮೂಲ ಕಥೆಯಲ್ಲ ಎಂಬುದು ಖಚಿತವಾಗಿದೆ.

ನಾನು ಸಂದರ್ಶಿಸಿದ ನೂರಾರು ಕಂಸಾಳೆ ಕಲಾವಿದರೆಲ್ಲಾ ಮಾದೇಶ್ವರರು ಲಿಂಗಮತ ಶರಣರೆಂದೇ ಒಪ್ಪಿಕೊಂಡಿದ್ದಾರೆ. ಈ ಎಲ್ಲಾ ಆಧಾರಗಳಿಂದ ಮಾದೇಶ್ವರರು ವೀರಶೈವರೆಂದು ಖಚಿತವಾಗಿ ಹೇಳಬಹುದು.

## ದೇಶ ಪರ್ಯಟನೆ

"ದೇಶ ನೋಡು ಕೋಶ ಓದು" ಎಂಬ ಗಾದೆಯಂತೆ ದೇಶ ಸುತ್ತಿದಾಗಲೇ ಅನುಭವ ಪರಿಪಕ್ವವಾಗುವುದು, ಜ್ಞಾನ ವೃದ್ಧಿಯಾಗುವುದು. ಮಾದೇಶ್ವರರು ದೇಶವನ್ನು ಸುತ್ತಿ ಭಕ್ತರನ್ನು ಸಂಪಾದಿಸಿ ಆಸುರೀ ಶಕ್ತಿಯನ್ನು ನಾಶಮಾಡಿದರು. ಅವರು ಉದಿಸಿದುದೇ ಲೋಕ ಕಲ್ಯಾಣಕ್ಕಾಗಿ. ಆದಕ್ಕಾಗಿ ದೇಶ ಸಂಚಾರ ಕೈಗೊಂಡರು. ಮಾದೇಶ್ವರರು ಯಾವ ಯಾವ ಊರುಗಳನ್ನು ಸುತ್ತಿದರೋ ಯಾವ ಯಾವ ಊರುಗಳಲ್ಲಿ ಅನುಷ್ಠಾನ ಮಾಡಿದರೋ, ಎಷ್ಟೆಷ್ಟು ಭಕ್ತರನ್ನು ಸಂಪಾದಿಸಿದರೋ, ಎಷ್ಟು ಶಿಷ್ಯರನ್ನು ಕಾಪಾಡಿದರೋ, ದುಷ್ಟರನ್ನು ಶಿಕ್ಷಿಸಿದರೋ ತಿಳಿಯದು. ಆದರೂ "ನಮ್ಮ ಜನಪದ ಕವಿಗಳು ಇದರ ಬಗ್ಗೆ ಏನು ಹೇಳಿದ್ದಾರೆ ಎಂಬುದರ ಆಧಾರದ ಮೇಲೆ ಅವರು ಸುತ್ತಿದ ಸ್ಥಳಗಳ ಬಗೆಗೆ ಒಂದು ಅವಲೋಕನ ಮಾಡಬಹುದು."

"ಹುಟ್ಟಿದ್ದು ಉತ್ತರ ದೇಶ,  
ಬೆಳೆದದ್ದು ಕತ್ತಲು ರಾಜ್ಯ  
ಬಂದದ್ದು ಬಾಳಲ ಸೀಮೆ  
ಕುಂತೂರು ಮಠವ ಸೇರಿ ಮಾದೇವ  
ಪಂಚೇಳು ದೀಕ್ಷೆ ಆದರಂತೆ."

ಇದು ಕಂಸಾಳೆ ಕಥಾ ಸಂಪ್ರದಾಯ 'ಅ'ರಲ್ಲಿ ಬರುವ ಪದ್ಯ. ಮಾದೇಶ್ವರರು ಮಾಯೆಯೆಂಬ ಕತ್ತಲು ರಾಜ್ಯಕ್ಕೆ ಬಂದು, ಅಲ್ಲಿ ಬೆಳೆದು, ಬಾಳಿಲೆ ಸೀಮೆಯಿಂದ ಹೊರಟರು. ಮಾದೇಶ್ವರರು ಬಹುಶಃ ಮೈಸೂರು ಜಿಲ್ಲೆಯಲ್ಲಿ ಸುತ್ತಾಡುತ್ತಾ, ಕಬಿನಿ ಜಲಾಶಯದ ಹತ್ತಿರ ಭೀಮನ ಕೊಲ್ಲಿಯಲ್ಲಿ ಸ್ವಲ್ಪ ದಿನಗಳಿದ್ದು, ಅಲ್ಲಿ ಹೊನ್ನಲಗಪ್ಪ, ಮಾದಮ್ಮ ಎಂಬ ದಂಪತಿಗಳ ಭಕ್ತಿಯನ್ನು ಪರೀಕ್ಷಿಸಿ, ಅವರನ್ನು ಆಶೀರ್ವದಿಸಿ, ಅಲ್ಲಿಂದ ಮುಂದೆ ಸುತ್ತೂರಿಗೆ ತಮ್ಮ ಪಯಣವನ್ನು ಬೆಳೆಸಿರಬೇಕು. ಇಲ್ಲಿ ರಾಗಿ ಬೀಸುವ ಪವಾಡವೆಸಗಿ, ಕುಂತೂರಿನಲ್ಲಿ ಹೂವಿನ ಪವಾಡ ಮಾಡಿ, ಬೀರಂಬಳ್ಳಿ, ಹದಿನಾಡು, ಚಿಲಕವಾಡಿ, ಮೂಲಕ ಮೂಗೂರಿಗೆ ಬಂದು ಅಲ್ಲಿ ನಂಜುಂಡರಾಜ ಒಡೆಯನ ಸೈನ್ಯಕ್ಕೆ ಸೋರೆ ಬುರುಡೆಯಲ್ಲಿದ್ದ ನೀರನ್ನು ಚತುರಂಗ ಬಲಕ್ಕೆ ನೀಡಿ ಕಲ್ಲೂರು ಮುಳ್ಳೂರುಗಳಲ್ಲಿ ಹುಡುಗರ ಜೊತೆ ಚಂಡಾಟವಾಡಿ ಗೆದ್ದಾಗ, ಅಲ್ಲಿನ ಹುಡುಗರು "ತಂದೆ ತಾಯಿ ಇಲ್ಲದವನು" ಎಂದಾಗ ಕಲ್ಯಾಣಕ್ಕೆ ಬಂದು ಅಲ್ಲಿ

ಉತ್ತರಾಜಮ್ಮ ಕಲ್ಯಾಣ ದೇವರನ್ನು ತಾಯಿ - ತಂದೆಯರಾಗಿ ಸ್ವೀಕರಿಸಿ, ಶ್ರೀಶೈಲವನ್ನು ಸಂದರ್ಶಿಸಿ, ಮಾಲಂಗಿ, ಮುಡುಕು ತೊರೆಗಳನ್ನು ದಾಟಿ ಮಳವಳ್ಳಿಗೆ ಬಂದಿರಬೇಕು.

"ಮಾದಪ್ಪ ಹೊರಟಾರು ಮಳವಳ್ಳಿ ಸೀಮೆಗೆ
ಮಳೆ ಬಂದರಲ್ಲಿ ತಳಗೀರು ಮಾದಪ್ಪ
ಎಳೆಯ ಹೊಂಬಾಳೆ ಸುಳಿಯಲ್ಲಿ"[೬೭]

ಎಂದು ಹೇಳುವಲ್ಲಿ ಮಾದೇಶ್ವರರು ಮಳವಳ್ಳಿಗೂ ಬಂದಿದ್ದರು ಎಂಬುದನ್ನು ವ್ಯಕ್ತಪಡಿಸುತ್ತದೆ. ಆಮೇಲೆ ಮಂಡ್ಯದ ಕೆರೆಯಲ್ಲಿ ಸ್ನಾನವನ್ನು ಮಾಡಿ,

"ಮಂಜೀನ ಮಳೆ ಹುಯ್ದು ಮಂಡ್ಯದ ಕೆರೆ ತುಂಬಿ
ಅಲ್ಲಿ ಮಾದಯ್ಯ ಜಲನಾಡಿ ಹೋಗ್ವಾಗ
ಜಾತಿಗೊಂದ್ಹೂವ ಮುಡಿದಾನೋ"[೬೮]

ಅನಂತರ ರೇವಣ ಸಿದ್ಧೇಶ್ವರನ ಬೆಟ್ಟದ ಹತ್ತಿರ ತಪಸ್ಸನ್ನು ಮಾಡಿ, ಕೆಲವು ದಿನಗಳು ಕೊಳ್ಳೇಗಾಲದ ಮರಡೀ ಗುಡ್ಡದಲ್ಲಿ ಮಂಡಿಯೂರಿ ತಪವೆಸಗಿ ಅಲ್ಲಿಂದ ಮುಂದೆ ಸಿದ್ದಯ್ಯನಪುರ, ಮಧುವನಹಳ್ಳಿ, ಹಾಯ್ದು ಸಿಂಗಾನಲ್ಲೂರು ತೋಪಿನಲ್ಲಿ ಬಂದು ವಿಶ್ರಮಿಸಿಕೊಳ್ಳುವಾಗ, ಬಸವ ಬಂದು ಮಾದೇಶ್ವರರನ್ನು ತಡೆಯಲು, ಮಾದೇಶ್ವರರು ಬಸವನನ್ನು ಅಲ್ಲೇ ನೆಲೆಗೊಳ್ಳುವಂತೆ ಹೇಳಿ, "ಕಟ್ಟೆಬಸಪ್ಪ" ಎಂಬ ನಾಮಕರಣ ಮಾಡಿ ಕನಕಗಿರಿಯನ್ನು ಸಂದರ್ಶಿಸಿ "ಕಮಟಕಾಪುರಿ" (ಈಗಿನ ಕಾಮಗೆರೆ ಎಂಬ ಗ್ರಾಮದ ಹತ್ತಿರದ ಊರು)ಯಲ್ಲಿ ಗಂಗಾಧರ ಎಂಬ ಮುನಿಯ ಗರ್ವವನ್ನು ಮುರಿದು ಆತನಿಗೆ ಘಟ ಸರ್ಪವಾಗುವಂತೆ ಶಾಪವಿತ್ತು ಹೊರಟರು. ಅಜ್ಜೀಪುರ, ಹನೂರು, ಕೌದಳ್ಳಿ, ಮೂಲಕ ವಜ್ರಮಲೆಗೆ ಬಂದು,

"ಕರಡೀನ ಕಲ್ಮಾಡಿ ಹುಲಿಯನ್ನುತ್ತಾ ಮಾಡಿ
ಮಡಗಿದ್ದ ಬೆತ್ತಮರೆ ಮಾಡಿ ಮಾದೇವ
ಹೊರಟಾನೋ ಜೇನು ಮಾಲೆಗಾಗಿ"[೬೯]

ಬಂದು ಮಾದೇಶ್ವರರು ನಡುಮಲೆಯಲ್ಲಿ ನೆಲೆಸಿದರು.

ಅಲ್ಲಿಂದ ಸಂಕನಮಲೆಗೆ ಬಂದು ಸಂಕಮ್ಮನನ್ನು ಆಶೀರ್ವದಿಸಿ, ಬೇವಿನಕಾಳಿಯನ್ನು ಪರೀಕ್ಷಿಸಿ, ಕಾರಯ್ಯ ಬಿಲ್ಲಯ್ಯರಿಗೆ ಆಶೀರ್ವದಿಸಿದರು. ಬೇಡರ ಗಂಪಣದವರಿಗೆ ದೀಕ್ಷೆ ಕೊಡಿಸಿದರು. ವಡೆಯರ ಪಾಳ್ಯದ ಮೂಲಕ ಬಂಕಾಪುರಿಗೆ ಹೋಗಿ ಶ್ರವಣನನ್ನು ಮರ್ಧಿಸಿ, ಬೆಟ್ಟದ ಸುತ್ತಮುತ್ತಲಿನ ಆನೆಹೊಲ, ಕೊಂಬುದಿಕ್ಕಿ, ಕೊಕ್ಕವಾರ, ತೋಕೆರೆ, ಹಳೇ ಊರು, ಮಾರ್ಟಳ್ಳಿ, ಕಡಬೂರು, ಸುಳ್ವಾಡಿ, ಬಿದರಳ್ಳಿ,

ಎಳಸೀಕೆರೆ, ಕೀರನಮೊಲ, ತೊಳಸೀಕೆರೆ, ಇಂಡಿಗನತ್ತ, ನಾಗಮಲೆದೊಡ್ಡಿ, ಪಡಿಸನತ್ತ, ಕೊಂಡನೂರು, ಜಂಬೋಟಿ, ಆಲಂಬಾಡಿ, ದೇವರಹಳ್ಳಿ, ಬರಗೂರುಗಳನ್ನೆಲ್ಲಾ ತಿರುಗಾಡಿಕೊಂಡು ಕಾಡು ಸೋಲಿಗರನ್ನು ಉದ್ಧಾರ ಮಾಡಿದರು. ಆಲಂಬಾಡಿಯಲ್ಲಿ ಜುಂಜೇಗೌಡನ ಮನೆಯಲ್ಲಿ ಹಾಲರುವೆ ಸೇವೆಯನ್ನು ಪಡೆದರು.

"ಮಲೆಯ ಮಾದಯ್ಯ ಯಾರೀಗೆ ಒಲದೀಯೆ
ಆಲಂಬೋಡಿ ಗೌಡರಟ್ಟಿ ಒಳಗೆ
ಹಾಲರುವೆ ಸೇವೆ ಹಗಲಾದೋ"[೨೦]

ಮಾದೇಶ್ವರರು ಕನಕಪುರ, ಮಳಗಾಳು, ಸೋಮನಹಳ್ಳಿ, ಬೆಂಗಳೂರು, ರಾಯಚೂರು, ಚನ್ನಪಟ್ಟಣ, ನಂಜನಗೂಡು, ಚಾಮರಾಜನಗರ, ನಾಗಮಂಗಲ, ಗೇರುಮಾಳ, ಬರಗೂರು, ನರಸೀಪುರ, ಚುಂಚನಹಳ್ಳಿ, ಸರಗೂರು, ಪಿರಿಯಾಪಟ್ಟಣ, ಹುಣಸೂರು ಮುಂತಾದ ಊರುಗಳಿಂದ ಭಕ್ತರನ್ನು ಪಡೆದುಕೊಂಡರು.

ವಿವಿಧ ಕಂಸಾಳೆ ಕಥಾ ಸಂಪ್ರದಾಯದವರು ಮಾದೇಶ್ವರನ ಬೆಟ್ಟಕ್ಕೆ ಹೆಡ್ಗೇಳುಕೋಟಿ ಗುಂಡೇಳುಕೋಟಿ ಬರುತ್ತದೆಂದು ಹೇಳಿ ಕೆಲವು ಊರುಗಳನ್ನು ಪ್ರಸ್ತಾಪಿಸುತ್ತಾರೆ.

"ಮೂಡ, ಪಡುವ, ತೆಂಕ, ಬಡಗ ನಾಲ್ಕು ರಾಜ್ಯ, ಕುಂತೂರು, ಕೊಯಮತ್ತೂರು, ಗುಂತಕಲ್ಲು, ಪಿರಿಯಾಪಟ್ಟಣ, ಮಳವಳ್ಳಿ"[೨೧], ಮಗ್ಗ ಮರಳ್ಳಿ, ಹೆಗ್ಗಡದೇವನ ಕೋಟೆ, ಕಪ್ಪಡಿ, ತಿಪ್ಪೂರು, ಗುಬ್ಬಿ, ಧಾರವಾಡ, ನಾಗಗೆರೆ, ನಂಜನಗೂಡು, ಆರಕೆರೆ, ಬನ್ನೂರು, ಸಾಲಿಗ್ರಾಮ, ವಾರಳ್ಳಿ, ರಂಜಕಲ್ಲು, ಬಾದಾಮಿ, ಕೊಳ್ಳೇಗಾಲ[೨೨], ಸಂತೆಸರಗೂರು, ರಂಗದನ, ಜನವಳ್ಳಿ[೨೩] ಹುರ, ಹುಲ್ಲಳ್ಳಿ, ಔರಂಗಾಬಾದ್, ಪಟ್ಟದಕಲ್ಲು[೨೪], ಅಜ್ಜೀಪುರ, ಮಾವುಂಟಳ್ಳಿ, ಚುಚ್ಚಟ್ಟಿಕಾನಿ, ಎಳಂದೂರು, ದೇವರಳ್ಳಿಗಳಿಂದ ಭಕ್ತರು ಬರುತ್ತಾರೆ ಎಂಬುದನ್ನು ನೋಡಿದರೆ ಮಾದೇಶ್ವರರು ಆ ಸ್ಥಳಗಳಲ್ಲೆಲ್ಲಾ ಸುತ್ತಿ ಭಕ್ತರನ್ನು ಸಂಪಾದಿಸಿಕೊಂಡಿರುವುದು ವ್ಯಕ್ತವಾಗುತ್ತದೆ.

"ಕಲುಕೋಟೆ, ಕೌದಳ್ಳಿ, ಮುಳುಕೋಟೆ ಮೂಗೂರು
ಮಜ್ಜರಪೇಟೆ ದೇವುರಳ್ಳೀ ಬೀದಿಲಿ
ಮೆಟ್ಟಿ ಮಾದಪ್ಪ ಮೆರೆದಾರು"

ಎಂದಿದೆ ಕಂಸಾಳೆ ಕಥಾ ಸಂಪ್ರದಾಯ 'ಅ'ರಲ್ಲಿ.

ಮಾದೇಶ್ವರರು ಭವಾನಿ, ಸೇಲಂ, ಕೊಯಮತ್ತೂರು, ನೀಲಗಿರಿ ಮುಂತಾದ ಪ್ರದೇಶಗಳಲ್ಲಿ ಧರ್ಮಪ್ರಚಾರ ಮಾಡಿದರು. ಕೆಲವು ಕಂಸಾಳೆ ಕಥಾ ಸಂಪ್ರದಾಯಗಳು

ಔರಂಗಬಾದ್, ಗುಂತಕಲ್ ಎಂದು ಹೇಳಿರುವುದು ಮಾದೇಶ್ವರರು ಆಂಧ್ರಪ್ರದೇಶದಲ್ಲೂ ಸುತ್ತಾಡಿರಬೇಕು ಎಂಬ ಅನುಮಾನಕ್ಕೆ ಎಡೆಮಾಡಿಕೊಡುತ್ತದೆ. ಔರಂಗಾಬಾದ್ ಗುಂತಕಲ್ಲು ಹೆಸರುಗಳು ಇತ್ತೀಚಿನವು. ಇವನ್ನು ಗಮನಿಸಿದಾಗ ಕಂಸಾಳೆಯವರು ಇತ್ತೀಚೆಗೆ ಸೇರಿಸಿಕೊಂಡಿರಬೇಕೆನ್ನಿಸುತ್ತದೆ. ಕರ್ನಾಟಕದ ಮೈಸೂರು, ಬೆಂಗಳೂರು, ಮಂಡ್ಯ ಜಿಲ್ಲೆಗಳಲ್ಲಿ ತಿರುಗಾಡಿದುದಕ್ಕೆ ತೋರುಗದ್ದುಗೆಗಳು[೮] ಸಾಕ್ಷಿಯಾಗಿ ನಿಂತಿವೆ. ಜನಪದ ಸಾಹಿತ್ಯದಲ್ಲಿ ಬರುವ, ಮಗ್ಗ, ರಂಜಕಲ್ಲು, ರಂಗದನ, ಜನವಳ್ಳಿ, ಮಾವ್ತಂಟಳ್ಳಿ, ಚುಜ್ಜಟ್ಟಿಕಾನಿ, ಈ ಊರುಗಳು ಎಲ್ಲಿವೆ ಎಂಬುದು ಅಸ್ಪಷ್ಟವಾಗಿವೆ. ಇವೆಲ್ಲಾ ಆಗಿನ ಕಾಲದ ಹೆಸರುಗಳಿರಬೇಕೆನ್ನಿಸುತ್ತದೆ.

ಒಟ್ಟಿನಲ್ಲಿ ಮಾದೇಶ್ವರರು ತಮಿಳುನಾಡು, ತೆಲುಗುನಾಡು, ದಕ್ಷಿಣ ಕರ್ನಾಟಕದಲ್ಲಿ ವಿಶೇಷವಾಗಿ ಸಂಚಾರ ಮಾಡಿ ಧರ್ಮಪ್ರಚಾರವನ್ನು ಕೈಗೊಂಡಿರಬೇಕು.

**ಐಕ್ಯ**

ಮಾದೇಶ್ವರರು ಈಗಿನ ಪ್ರಸಿದ್ಧವಾದ ಮಾದೇಶ್ವರ ದೇವಾಲಯದಲ್ಲಿ ಐಕ್ಯವಾಗಿ ಭಕ್ತಾದಿಗಳಿಂದ ದೇವರೆಂದು ಪೂಜಿಸಿಕೊಳ್ಳುತ್ತಿದ್ದಾರೆ. ಈ ವಜ್ರಮಲೆ (ನಡುಮಲೆ)ಯೇ ಮಾದೇಶ್ವರರ ಐಕ್ಯಸ್ಥಳ ಎಂಬುದಕ್ಕೆ ಜನಪದ ಸಾಹಿತ್ಯ, ಶಿಷ್ಟ ಸಾಹಿತ್ಯ, ತಾಮ್ರ ಶಾಸನಗಳಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಈಗ ಅವುಗಳೊಂದೊಂದನ್ನೂ ಪರಿಶೀಲಿಸೋಣ.

**ಶಿಷ್ಟಸಾಹಿತ್ಯದಲ್ಲಿ :**

ಬಿ. ಶಿವಮೂರ್ತಿಶಾಸ್ತ್ರಿಗಳು ಮಾದೇಶ್ವರರು ಲಿಂಗರೂಪವಾಗಿ ಕಾಣಿಸಿಕೊಂಡ ಬಗೆಗೆ ಹೀಗೆ ವಿವರಿಸಿದ್ದಾರೆ:- "ಒಂದು ದಿನ ಬಿಲ್ಲಯ್ಯ ಸೌದೆಗಾಗಿ ಸೀಗೆ ಮೆಳೆಯನ್ನು ಕತ್ತರಿಸುವಾಗ ಮಚ್ಚಿನ ಏಟು ಅಲ್ಲಿದ್ದ ಶಿವಲಿಂಗಕ್ಕೆ ತಗುಲಿ ಆತ ಮೂರ್ಛಿತನಾದ. ಅನ್ನಸಾಲಮ್ಮ ಗಂಡನನ್ನು ನೋಡಿ ಗೋಳಿಡುತ್ತಿರಲು, ಕಣಿ ಹೇಳುವ ಹೆಂಗಸಿನ ರೂಪದಲ್ಲಿ ಮಾದೇಶ್ವರರು ಬಂದು; "ಅಮ್ಮ ನೀನು ಚಿಂತಿಸಬೇಡ, ಈತನಿಗೆ ಮಾದೇಶ್ವರರು ಒಲಿದಿದ್ದಾರೆ. ಜಂಗಮ ರೂಪಿಯಾದ ಮಾದೇಶ್ವರರು ಇಲ್ಲಿ ಲಿಂಗ ರೂಪವಾಗಿದ್ದಾರೆ. ಈ ಲಿಂಗಪೂಜೆಯನ್ನು ಮಾಡಿ ಧನ್ಯರಾಗಿ" ಎಂದು ಹೇಳಿ ಹೋದಾಗ ಎಚ್ಚರವಾಯಿತು. ಇದಕ್ಕೆ 'ಮಾದೇಶ್ವರ ಸಾಂಗತ್ಯ'ವೇ ಆಧಾರ. ಮಾದೇಶ್ವರ ಸಾಂಗತ್ಯದಲ್ಲಿ ಬೇಡಗಂಪಣವೆನಿಸುವ ನಡುಮಲೆಯಲ್ಲಿ ಚನ್ನಮಾದೇಶ ನೆಲೆಸಿದ ಎಂದು ಬರುತ್ತವೆ.[೨೬]

ಬಿ. ಪುಟ್ಟಮಲ್ಲಪ್ಪನವರು "ಮಾದೇಶ್ವರರು ಏಳು ಮಲೆಯಲ್ಲಿ ಯೋಗ ಮುದ್ರೆಯಲ್ಲಿ ಕುಳಿತುಕೊಳ್ಳುವರು"[೭೭] ಎಂದಿದ್ದಾರೆ.

'ಮಲೆ ಮಾದೇಶ್ವರ ನಿಜಪುರಾಣ'ದಲ್ಲಿ[೭೮] "ಲಿಂಗವಾಗುವ ಮುನ್ನ ಮಾದೇಶ್ವರರು ಅನ್ನಸಾಲಮ್ಮನನ್ನುದ್ದೇಶಿಸಿ, ನಾನು ಲಿಂಗೈಕ್ಯನಾಗುತ್ತಿದ್ದೇನೆ. ನಿನ್ನ ಮಗ ಶೇಶಣ್ಣೊಡೆಯ ನನ್ನನ್ನು ಪೂಜಿಸಲಿ, ಅನಂತರ ಕಂಪಣದ ನೂರೊಂದು ಒಕ್ಕಲು ಭಕ್ತರು ಪೂಜಲಿ. ನಾನು ಲಿಂಗವಾದ ಮೇಲೂ ನಿನ್ನ ಮಗನೊಡನೆ ಮಾತಾನಾಡುವೆ" ಎಂದರು. ಅನಂತರ ವಿಷಯವನ್ನು ಬಿಲ್ಲಯ್ಯನಿಗೆ ತಿಳಿಸಿ ಮಾದೇಶ್ವರರು ಅಂತರಗಂಗೆಯ ಸಮೀಪದ ಸೀಗೆ ಮೆಳೆಯೊಳಗೆ ನುಗ್ಗಿ ಅದರ ಮಧ್ಯದಲ್ಲಿ ಲಿಂಗರೂಪ ಹೊಂದಿದರು.

ವ್ಯಾಘ್ರವಾಹನ ಮುದ್ದು ಮಾದೇಶ್ವರ ಸ್ವಾಮಿ ಚರಿತ್ರೆಯಲ್ಲಿ "ಧ್ಯಾನಾಂತರ್ಮುಖಿಯಾದ ಮಾದೇಶ್ವರರು 'ಶಿವೋಹಂ' ಎಂದು ಹೇಳುತ್ತಿದ್ದಂತೆ ಮಹಾಮೂರ್ತಿ ಕಣ್ಣು ಕುಕ್ಕುವ ಬೆಳಕಿನ ಪುತ್ಥಳಿಯಾಯಿತು"[೭೯] ಎಂದಿದೆ.

ತಲಕಾಡು ವಿ. ಮಾದಯ್ಯನವರು ಜುಂಜೇಗೌಡ ಕಟ್ಟಿಸಿದ[೮೦] ವಿರಕ್ತ ಕಟ್ಟೆಯಲ್ಲಿ ಮಾದೇಶ್ವರರು ಲಿಂಗೈಕ್ಯರಾದರು ಎಂದಿದ್ದಾರೆ.

ನಂಜಪ್ಪನವರು "ಶಂಕರ ಪ್ರಿಯ ಕಾರಯ್ಯ, ಬಿಲ್ಲಯ್ಯರಿಗೆ ತನ್ನ ನಿಜರೂಪ ತೋರುತ್ತೇನೆ, ಮಿಕ್ಕ ಸೇವಾರ್ಥಿಗಳಿಗೆ ಕೃಷ್ಣಶಿಲೆಯ ಲಿಂಗಾಕಾರ ದರ್ಶನವಾಗುವುದು"[೮೧] ಎಂದಿದ್ದಾರೆ.

ಜೀ.ಶಂ. ಪರಮಶಿವಯ್ಯನವರು ಸಂಗ್ರಹಿಸಿರುವ ಜನಪದ ಕಥೆಗಳಲ್ಲಿ "ಎಡಬಲ ಕಾರಯ್ಯ ಬಿಲ್ಲಯ್ಯ, ಬೆನ್ನಿಂದೆ ಬೇಡರ ಕನ್ನಪ್ಪ, ಮುಂದುಗಡೆ ಬಂಡಳ್ಳಿ ಬಸವಣ್ಣ, ನೆತ್ತಿಯ ಮೇಲೆ ಜಡೆ ಶೇಷಣ್ಣ, ಗದ್ದಿಗೆ ವೀರಣ್ಣ, ಈ ಐದು ಮಂದಿ ಋಷಿಗಳ ಪಡೆದುಕೊಂಡು ಮಾದೇಶ್ವರರು ಇದ್ದಾರೆ"[೮೨] ಎಂದು ಪ್ರಸ್ತಾಪಿಸಿದ್ದಾರೆ.

**ಶಾಸನಗಳಲ್ಲಿ :**

"ಜಗಕ್ಕೆಲ್ಲ ತಾನೇ ದೇವರಾಗಿ ವಜ್ರಮಲೆಯಲ್ಲಿ ನೆಲೆಗೊಂಡು" ಎಂದು ಹೈದರಾಲಿಖಾನ್‌ನ ತಾಮ್ರ ಶಾಸನ ಮಾದೇಶ್ವರರ ಐಕ್ಯದ ಬಗೆಗೆ ಹೇಳಿದರೆ, ಹರದನ ಹಳ್ಳಿಯ ಶಾಸನವು "ಪ್ರಭುಲಿಂಗಾರಾಧ್ಯರಿಂದ ಲಿಂಗಧಾರಣೆಯಂ ಮಾಡಿಸಿಕೊಂಡು ವಜ್ರಮಲೆಯಲ್ಲಿ ನೆಲೆಗೊಂಡು ಜುಂಜೇಗೌಡನಿಂದ ಒಂದು ಅಂಕಣ ದೇವಾಲಯವನ್ನು ಕಟ್ಟಿಸಿಕೊಂಡ" ಎಂದು ಹೇಳಿದೆ.

ಜಾನಪದ ಸಾಹಿತ್ಯದಲ್ಲಿ :

ಮಾದೇಶ್ವರರ ಐಕ್ಯದ ಬಗೆಗೆ ಜನಪದ ಕವಿಗಳು ಹಲವಾರು ರೀತಿಯಲ್ಲಿ ಹೇಳಿರುವುದನ್ನು ಗಮನಿಸಬಹುದು.

"ನರಮಾನವರಿಗೆ ಕಾಣದಂತೆ ಭಕ್ತಿಯಿಂದ ಪೂಜಿಸುವವರಿಗೆ ಲಿಂಗರೂಪವಾಗಿ ಕಂಡು, ನಿಜರೂಪವಾಗಿ ಕಂಡು, ಲಿಂಗರೂಪವಾಗಿ ಮರೆಯಾದ ಮಾದೇಶ್ವರ."

"ಮಾದೇಶ್ವರರು ಕಾಡು-ಮೇಡು ಬೆಟ್ಟಗುಡ್ಡ ಇಂಥ ಸ್ಥಳ ಹುಡುಕಿಕೊಂಡು ಹೋದರು. ಎಪ್ಪತ್ತೇಳು ಸುತ್ತಿನ, ಬೆಟ್ಟದ ಮಧ್ಯೆ ಬಂದರು. ಆನೆ ಮರಿಗಳು ಬಂದು ಸ್ವಾಮಿಯವರಿಗೆ ಒರಗುದಿಂಬು ಆದುವು. ಏಳುತಲೆ ಸರ್ಪ, ಮಾದೇಶ್ವರರಿಗೆ ನೆರಳು ಮಾಡಿತು. ಹುಲಿಗಳು ಅವರ ಮುಂದೆ ಕುಳಿತುವು. ಈಗಿನ ಶ್ರೀಕ್ಷೇತ್ರಕ್ಕೆ "ವಜ್ರಗಿರಿ" ಎಂದು ನಾಮಕರಣ ಮಾಡಿ ಮತ್ತೆ ಪಶ್ಚಿಮರಾಜ್ಯದತ್ತ ನೋಡಿದರು. ಅಲ್ಲಿಗೂ ಬೆಟ್ಟವು ಕಾಣುತ್ತಿರಲು ಪಾದದಲ್ಲಿ ಜಗ್ಗಿಸಿದರು. ಇಲ್ಲಿ ಲಿಂಗರೂಪ ತಾಳಬೇಕು ಎಂದು ಹೊನ್ನೆಮರದ ಕೆಳಗೆ ಮಂತ್ರ ಜಪಿಸುತ್ತ ಕುಳಿತರು. ಅಲ್ಲಿಗೆ ಏಳು ಬಾಯಿ ಹೊನ್ನುತ್ತ ಬೆಳೆಯಿತು.[೬೩]

ಮತ್ತೊಂದು ಕಂಸಾಳೆ ಸಂಪ್ರದಾಯದ ಕಥೆ ಹೀಗೆ ಹೇಳುತ್ತದೆ. "ನಮ್ಮಪ್ಪಾಜಿ ಕೆಂಗಣ್ಣು ಮಲೆ ಮಾದೇಶ್ವರ ಕಾಣಬಾರದ ಕಾನೆ, ಕಾಡು ಗಾಳಿಮಳೆ ಸೀಗೆ ಸಿರಿಗಂಧ, ಏಳುಬಾಯಿ ಹೊನ್ನುತ್ತದಲ್ಲಿ ಪೋಗಿ ಸೇರಿಕೊಂಡು, ನಮ್ಮಪ್ಪಾಜಿ ಮಲೆ ಮಾದೇವ ಎಪ್ಪತ್ತೇಳು ಬೆಟ್ಟ ಹಾಸಿಕೊಂಡು, ಎಪ್ಪತ್ತೇಳು ಬೆಟ್ಟವನ್ನು ಪೊದ್ದುಗೆ ಮಾಡಿಕೊಂಡು ಎಪ್ಪತ್ತೇಳು ಬೆಟ್ಟಗಳ ಕಿತ್ತುಕೊಂಡು ತಲೆದಿಂಬು ಮಾಡಿಕೊಂಡು ಮಲಗವರೆ ಮಾಯಕಾರ ಮಾದೇವಾ"[೬೪]

ಕಂಸಾಳೆ ಕಥಾ ಸಂಪ್ರದಾಯ 'ಲ'ರಲ್ಲಿ-

ಸುತ್ತಮುತ್ತಾ ಶತ್ರುಗಳಿದ್ದಾರಲ್ಲ
ಇವರ ಮೊಕ ಹ್ಯೆಂಗೆ ನೋಡ್ಬೇಕು ನಾನು
ಕಾ ಅನ್ನೋ ಕಾಗೆ ಸಪ್ಪ
ಗೂ ಅನ್ನೋ ಗೂಗೆ ಸಪ್ಪ
ಕೊಕ್ ಅನ್ನೊ ಕೋಳಿ ಸಪ್ಪ ನನ್ನ ಕಿವಿ ಕರಣಕ್ಕೆ
ಕೇಳ್ದೋಗ್ಲಿ ಅಂತೇಳಿ ನನ್ನಪ್ಪಾಜಿ
ಕೆಂಜೆಡೆ ಪೊದ್ಗಂಡು ಕೆಂಜುರುಗಣ್ ಬುಟ್ಕಂಡು
ರೋಸವ್ವಾಸವನ್ನು ತಾಳ್ಕಂಡು ಲೆಂಗಣ್ಣೆ ಮ್ಯಾಗ್ನಿಂದ
ಅವರು ಝೇಂಕರಿಸಿ ತುಳುದವರೆ ಮಾದೇವ

ನೋಡಿ ನಮ್ಮ ಶಿವನಾ
ಝೇಂಕರಿಸಿ ತುಳುದೇಟ್ಗೆ
ಬೆಟ್ಟಗುಡ್ಡವೆಲ್ಲ ಸಮತಟ್ಟಾಗೋದೋ
ಅಡವಿ ಅರಣ್ಯ ಚದುರ ಮಧ್ಯದಲ್ಲಿ
ನಟ್ನು ನಡುರಾಜ್ಯ ಬ್ಯಾಡರ ಗಂಪಣಸೀಮೆ
ಕಿಕ್ಕೇರಿ ದೇಸ ಹಿಂದಕ್ಕುಟ್ಕೊಂಡ್ರು
ಅಲಂಬಾಡಿನಾ ಬಲಕ್ಕುಟ್ಕೊಂಡ್ರು
ನೂರೊಂದಯ್ಯನ ಗಿರಿ ಚಾರಂದಪ್ಪನ ಮಲೆ
ದ್ಯಾವರಳ್ಳಿ ನಡುರಾಜ್ಯ
ಅಂತರಗಂಗೆ ತೆಂಕ್ಹೊರಿ
ಸೀಗೆ ಸಿರಿಗಂಧ ಬಾಡ ಬಾಕಿನ್ಹೊತ್ತೆ
ಏಳು ಬಾಯಿ ಹೊನ್ನುತ್ತ
ನುಗ್ಗುಬಾರದ ಜ್ವಾಲೆ ಬಿದ್ರು ಸೀಗೆ
ಮದ್ದಾರಗುತ್ತಿ ಕೆಮ್ಮತ್ತಿ ಮರದಂಡು
ಅಲ್ಲಿ ಉದ್ಭವವಾಗವ್ರಲ್ಲ ಮಾದೇವ
ನೋಡಿ ನಮ್ಮ ಶಿವನಾ......"

ಎಂದು ಹೇಳಿದೆ.

ಕಂಸಾಳೆ ಕಥಾ ಸಂಪ್ರದಾಯ '೬'ರಲ್ಲಿ "ನಮ್ಮಪ್ಪ ಮಾಯಕ್ಕಾರ ಗಂಡ, ಕಾಣಬಾರದ ಕಾನೆ ಒಳಗೆ ಮಾದಯ್ಯ ಮೂಸಂಬೇಡಿದ ಮಗ್ಗಲೊಳಗೆ ಆ ಮಬ್ಬುತ್ತದಲ್ಲಿ ಒರಗವರೇ ಧೀರಾ ಮಾದಯ್ಯ" ಎಂದು ಹೇಳಿದರೆ, ಕಂಸಾಳೆ ಕಥಾ ಸಂಪ್ರದಾಯ '೫'ರಲ್ಲಿ ಇದರ ಬಗೆಗೆ ಪ್ರಸ್ತಾಪವಿಲ್ಲ.

ಇನ್ನೊಂದು ಕಂಸಾಳೆ ಕಥಾ ಸಂಪ್ರದಾಯದಲ್ಲಿ-

"ಮಾಯಕ್ಕಾರ ಮೂಡಲ ಕೈಲಾಸಕ್ಕೆ ಹೋಗುವಂಥ ಕಾಲದಲ್ಲಿ ಆನೆ ತಲೆದಿಂಬಿನಲ್ಲಿ ನಿಂತು ನೋಡಿದ ಮಾಯಕ್ಕಾರ ಚಾಮುಂಡೇಶ್ವರಿ ಬೆಟ್ಟ ಕಾಣ್ತಾಯ್ತಲ್ಲ ಸ್ವಾಮಿ, ಇವಳ ಬೆಟ್ಟ ಕಾಣಬಾರದು, ನಾನು ನೋಡಬಾರದು, ಅಂತೇಳಿ ಜಗ್ಗಿಸಿ ತುಳಿದರು. ಆಗ ಪಾತಾಳವಾಯಿತಲ್ಲೋ. ಸ್ವಾಮಿ ಅಲ್ಲಿ ಸೀಗೆ ಸಿರಿಗಂಧ, ಬಾಡಬಾಕಲ ಗುತ್ತಿ, ಅಲ್ಲಿ ಉತ್ತರಾಕಲ್ಲು ಬಂಡೆ, ಏಳು ಬಾಯಿ ಹೊನ್ನುತ್ತ, ಒಂಟಿಕ್ಬಾವಿಯಿಂದ ಜಲಕಂಡು ಒಡೆದುಮಾಡಿದ ಮಾಯಕ್ಕಾರ. ಉರಿಗದ್ದುಗೆಯ ಮ್ಯಾಲೆ ಭೂಲೋಕನೆಲ್ಲಾ ನೋಡುತ್ತಾ, ಮಾಯದಲ್ಲಿ ಒರಗಿದರಲ್ಲಾ ಮಾಯಕ್ಕಾರ ಮಹಾದೇವ."[೨೫]

ಕಂಸಾಳೆ ಕಥಾ ಸಂಪ್ರದಾಯ '೧'ರಲ್ಲೂ ಸಹ ಇದೇ ರೀತಿಯ ಚಿತ್ರಣ ಬಂದಿದೆ.

"ನಮ್ಮಪ್ಪಾಜಿಯವರು ಮೂಡಲ ಮಲೆ ಕೈಲಾಸದಲ್ಲಿ ಯಾವ ತರಪ್ಪ ಅಂತೇಳಿದ್ರೆ ಸೀಗೆ ಸಿರಿಗಂಧ, ಬಾಡಬಾಗಲಗತ್ತಿ, ನುಗ್ಗಲಾರದ ಜ್ವಾಲೆ ಒಳಗೆ ಹುಲಿ, ಕರಡಿ, ಎಲ್ಲಾ ವಾಸ ಮಾಡತಕ್ಕಂತ ದೇಶ. ಆ ಮಲೆ ಎತ್ತಯ್ಯನವರು ಹನ್ನೆರಡುದ್ದ ಜಲಕಂಡು ನಮ್ಮಪ್ಪಾಜಿಯವರು ಅಲ್ಲೆ ಕರಿಯ ಕಲ್ಲಾಗಿ ಒಡೆದು ಮೂಡವರೇ ಮಾದೇವ."

ಈ ಎಲ್ಲರ ಅಭಿಪ್ರಾಯಗಳನ್ನು ನೋಡಿದರೆ ಮಾದೇಶ್ವರರು ವಜ್ರಮಲೆ (ನಡುಮಲೆ) ಐಕ್ಯವಾಗಿರಬಹುದೆಂದು ಖಚಿತಪಡಿಸಬಹುದು. ಒಟ್ಟಿನಲ್ಲಿ ಮಾದೇಶ್ವರರು ಭೂಲೋಕದಲ್ಲಿ ತಮ್ಮ ಕರ್ತವ್ಯಗಳನ್ನು ಮುಗಿಸಿ ಶಿವಯೋಗ ಸಮಾಧಿಯಲ್ಲಿದ್ದು, ಲಿಂಗರೂಪಿನಿಂದ ಭಕ್ತಾದಿಗಳಿಂದ ಪೂಜಿಸಿಕೊಂಡು ದೇವ ಮಾನವರಾಗಿ ಎಪ್ಪತ್ತೇಳು ಮಲೆಗಳ ಮಧ್ಯೆ ನೆಲೆಸಿದ್ದಾರೆ, ಇಷ್ಟಾದರೂ ನಮ್ಮ ಜನಪದ ಕವಿಗಳು-

"ಮಾದಯ್ಯನ ಕೊಂಡ ಮಾಳದಲ್ಲಿ ಉದ್ದಂಡ
ಜೋಡಿ ತಿಟ್ಟಲ್ಲಿ ನೆಲೆಗೊಂಡ ಮಾದಪ್ಪ
ನಿನ್ನ ಮಾಯ ಒಬ್ಬರೀಗೂ ತಿಳಿಯದು"[೬೬]

ಎಂದು ಹೇಳುವಲ್ಲಿ ಮಾದೇಶ್ವರರ ಐಕ್ಯ ಗೌಪ್ಯವಾಗಿದೆ.

## ಮಾದೇಶ್ವರರ ಒಕ್ಕಲು

'ಮಾದೇಶ್ವರರ ಒಕ್ಕಲು' ಎಂದರೆ ಮಾದೇಶ್ವರರ ಭಕ್ತರು. ಮಾದೇಶ್ವರರು ತಪಮಾಡಿ ಲಿಂಗರೂಪ ತಾಳಿದ ಮೇಲೆ ತಮಗೆ ಪೂಜೆ ಮಾಡಿ ಧೂಪದಾರತಿಯನ್ನು ಎತ್ತಿ ಕೈ ಮುಗಿಯಲು ಕೆಲವು ಭಕ್ತರನ್ನು ಪಡೆಯಲು ತಮಿಳುನಾಡು, ಕರ್ನಾಟಕ ಎರಡು ಕಡೆಯೂ ದೃಷ್ಟಿಯನ್ನಿಟ್ಟು ಪಡೆದುಕೊಂಡರೆಂಬುದನ್ನು ವಿವಿಧ ಕಂಸಾಳೆ ಸಂಪ್ರದಾಯಗಳು ಹೇಳಿವೆ.

ಮಾದೇಶ್ವರ ಬೆಟ್ಟದಲ್ಲಿ ಆಲಂಬಾಡಿ ಎಂಬ ಊರಿದೆ. ಹಿಂದೆ ಇದನ್ನು 'ಬೇಡಗಂಪಣರಾಜ್ಯ' ಎಂದು ಕರೆಯುತ್ತಿದ್ದರು. ಅಲ್ಲಿ ಆಲಂಬಾಡಿ ಜುಂಜೇಗೌಡನಿದ್ದ. ಸರಗೂರಿನ ಮೂಗಯ್ಯ, ಜುಂಜೇಗೌಡ ಮಾದೇಶ್ವರನ ಒಕ್ಕಲಾಗಿ ಮಾದೇಶ್ವರನ ಸೇವೆಯನ್ನು ಮಾಡಿಕೊಂಡು ಬಂದಿದ್ದಾರೆ. ಸರಗೂರಿನ ಮೂಗಯ್ಯನ ವಂಶದವರು ಮಾದೇಶ್ವರನ ಒಕ್ಕಲಿನವರು. ಎಣ್ಣೆ ಮಜ್ಜನ ಸೇವೆಯನ್ನು ಮಾಡುತ್ತಿದ್ದರು. ಆಲಂಬಾಡಿ ಜುಂಜೇಗೌಡ, ಸರಗೂರ ಮೂಗಯ್ಯ ಇವರನ್ನು ತಮ್ಮ ಒಕ್ಕಲಾಗಿ ಮಾಡಿಕೊಳ್ಳಲು ಅವರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದರು. ಹಾಗೆಯೇ ಭೀಮನಕೊಲ್ಲಿಯ ಹಲಗೇಗೌಡ, ಮಾದಮ್ಮ ದಂಪತಿಗಳನ್ನು ಮಾದೇಶ್ವರರು ತಮ್ಮ ಒಕ್ಕಲು ಮಾಡಿಕೊಂಡ ಕಥೆಯೂ ಸಹ ಇದೆ.

ಮಾದೇಶ್ವರನ ಒಕ್ಕಲು ವಂಶಪಾರಂಪರ್ಯವಾಗಿ ಬಂದುದು ಒಂದಾದರೆ, ಹೊಸ ಹೊಸದಾಗಿ ಆಗುವುದು ಮತ್ತೊಂದು. ಭಕ್ತರು ತಮ್ಮ ಅಭೀಷ್ಟೆಯನ್ನು ಪೂರೈಸಿಕೊಳ್ಳಲು ಆತನಲ್ಲಿ ಹರಕೆ ಹೊತ್ತುಕೊಂಡು ತಮಗೆ ಒಳ್ಳೆಯದಾದ ಮೇಲೆ ಮಲೆಗೆ ಬಂದು ಒಪ್ಪಿಸಿ ಮಾದೇಶ್ವರರ ಸೇವೆಯನ್ನು ಮಾಡಿ ಆತನ ಒಕ್ಕಲಾಗುತ್ತಾರೆ. ಹೀಗೆ ಭಕ್ತರ ಸಂಖ್ಯೆ ಹೆಚ್ಚುತ್ತದೆ.

ಮಾದೇಶ್ವರನ ಹಿರಿಮೆ ಇಮ್ಮಡಿಯಾಗುತ್ತದೆ. ಎಲ್ಲೆಡೆ ಆತನ ಕೀರ್ತಿ ಹರಡುತ್ತದೆ. ಎಷ್ಟು ಜನರು ಒಕ್ಕಲಾದರು ಎಂದು ನೋಡಿ ಆತನಿಗೆ ಸಂತೋಷವಾಗುತ್ತದೆ; ಭಕ್ತರಿಗೆ ತೃಪ್ತಿಯಾಗುತ್ತದೆ. ಈಗಲೂ ಅನೇಕ ಜನ ಭಕ್ತರು ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಲು, ಮಾದೇಶ್ವರರನ್ನು ಪೂಜಿಸಿ, ಭಜಿಸಿ, ಸ್ತುತಿಸಿ, ನಲಿದು, ನರ್ತಿಸಿ ಮಾದೇಶ್ವರರ ಒಕ್ಕಲಾಗುವುದನ್ನು ಕಾಣಬಹುದು.

ಮಾದೇಶ್ವರರಿಗೆ ಎಷ್ಟು ಜನ ಭಕ್ತರನ್ನು ಒಲಿಸಿಕೊಂಡರೂ ಕಡಿಮೆಯೇ. ಎದುರ ಬೋಳಿಯಲ್ಲಿ ನಿಂತು ಜಾತ್ರೆಗೆ ಬರುವ ಪರಿಸೆಯನ್ನು ನೋಡಿ ಆನಂದಿಸುತ್ತಾರೆ. ಭಕ್ತರ ಮನದಾಸೆಯನ್ನು ಪೂರೈಸಿ ಮತ್ತೆ ಮತ್ತೆ ಅವರಿಂದ ಪೂಜೆಯನ್ನು ಹರಕೆಯನ್ನು ಸ್ವೀಕರಿಸಿ, ಅವರನ್ನೆಲ್ಲಾ ತಮ್ಮ ಒಕ್ಕಲಾಗಿ ಮಾಡಿಕೊಳ್ಳುತ್ತಾರೆ. ಆಮೇಲೆ ಅವರ ಮನೆ ದೇವರಾಗಿ ಮೆರೆದು ತಮ್ಮ ಪ್ರಸಿದ್ಧಿಯನ್ನು ವರ್ಧಿಸಿಕೊಳ್ಳುತ್ತಾರೆ. ಅದಕ್ಕೆ ಕಂಸಾಳೆಯವರು ಹೆಣ್ಣೇಳು ಕೋಟಿ, ಗಂಡೇಳು ಕೋಟಿ ಪರಿಸೆ ಬಂದರೂ ಸಾಲದುಎಂದು ಬಣ್ಣಿಸಿದ್ದಾರೆ. ಈಗಲೂ, ಕರ್ನಾಟಕ, ತಮಿಳುನಾಡುಗಳಿಂದ ಅನೇಕ ಭಕ್ತಾದಿಗಳು ಮಾದೇಶ್ವರರಿಗೆ ಹರಕೆ ಹೊತ್ತು ಬರುತ್ತಾರೆ. ಶಿವರಾತ್ರಿ, ಯುಗಾದಿ ವೇಳೆಯಲ್ಲಿ ರಥೋತ್ಸವ ಸಂದರ್ಭದಲ್ಲಿ ಹಸು, ಕುರಿ, ದನ, ಕೋಳಿ ಯಾವುದಾದರೂ ಪ್ರಾಣಿ ಖಾಯಿಲೆಯಿದ್ದರೆ ಅವು ಆರೋಗ್ಯವಾಗಲೆಂದು ಮಾದೇಶ್ವರರಲ್ಲಿ ಹರಕೆ ಹೊತ್ತುಕೊಳ್ಳುತ್ತಾರೆ. ಕೊನೆಗೆ ಅವುಗಳನ್ನೇ ತಂದು ಅರ್ಪಿಸುತ್ತೇವೆ ಎಂದು ಬೇಡಿಕೊಳ್ಳುತ್ತಾರೆ. ಅಂತೆಯೇ ಅವುಗಳನ್ನು ದೇವಸ್ಥಾನಕ್ಕೆ ತಂದುಬಿಡುತ್ತಾರೆ. ದೇವಸ್ಥಾನದ ಆಡಳಿತ ವಿಭಾಗದವರು ಅವುಗಳನ್ನು ಮಾರಿ ಅದರಿಂದ ಬರುವ ಹಣವನ್ನು ದೇವರ ಸೇವೆಗೆ ವಿನಿಯೋಗಿಸುತ್ತಾರೆ. ಭಕ್ತರು ಬೆಳೆ ಹೆಚ್ಚಾದರೆ, ಅದರ ಲಾಭದಲ್ಲಿ ನಿನಗಿಷ್ಟು ಒಪ್ಪಿಸುತ್ತೇನೆಂದು ಹರಕೆ ಹೊತ್ತು ಮಾದೇಶ್ವರ ದೇವಾಲಯದ ಗುಡಿ ಗೋಪುರದ ಮೇಲೆ ಹಾಗೂ ಸುತ್ತಮುತ್ತ ಭತ್ತ, ರಾಗಿ, ಕಡಲೇಕಾಯಿ, ಹರಳು, ಹೊಗೆಸೊಪ್ಪು, ಬೆಲ್ಲ ಮಾದಪ್ಪನ ಹುಂಡಿಗೆ ಹಣವನ್ನು ತುಂಬುತ್ತಾರೆ. ಅನೇಕರು ಖಾಯಿಲೆ ಬಿದ್ದು ಆರೋಗ್ಯ ಸರಿ ಹೋದರೆ ಉರುಳುಸೇವೆ, ಧೂಪ ಸೇವೆ, ಪಂಜಿನ ಸೇವೆ ಮಾಡುತ್ತೇವೆ, ಮಂಡೆ ಕೊಡುತ್ತೇವೆ, ಅದನ್ನು ಅರ್ಪಿಸುತ್ತೇವೆಂದು ಹರಸಿಕೊಂಡು

ಅದರಂತೆ ನಡೆಯುತ್ತಾರೆ. ಅನಂತರ ಮಾದೇಶ್ವರರನ್ನು ತಮ್ಮ ಇಷ್ಟ ದೇವರನ್ನಾಗಿ ಮಾಡಿಕೊಂಡು ದಿನವೂ ಅವರನ್ನು ನೆನೆಯುತ್ತಾ, ಪೂಜಿಸುತ್ತಾ ಒಕ್ಕಲಾಗುವರು. ಇಷ್ಟಾದರೂ ಮಾದೇಶ್ವರರಿಗೆ "ಮೂಲ ಒಕ್ಕಲು" ಯಾರು ಎಂಬುದು ನಿಗೂಢವಾಗಿಯೇ ಇದೆ. ಆದರೂ ಆಲಂಬಾಡಿಯ ಜುಂಜೇಗೌಡ, ಸರಗೂರಿನ ಮೂಗಯ್ಯ, ಭೀಮನಕೊಲ್ಲಿಯ ಹಲಗೇಗೌಡರ ಹೆಸರುಗಳನ್ನು ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಸೂಕ್ಷ್ಮವಾಗಿ ಗ್ರಹಿಸಬಹುದು. ಇವರಾದ ಮೇಲೆ ಅನೇಕರು ಒಕ್ಕಲಾಗುತ್ತಾ ಬಂದಿರುವುದನ್ನೂ ಕಾಣಬಹುದು. ಎಲ್ಲಮ್ಮ ಒರಂಗಲ್ಲು ದೊರೆಗೆ ಬುದ್ಧಿ ಕಲಿಸಿ ತನ್ನ ಒಕ್ಕಲು ಮಾಡಿಕೊಂಡಂತೆ, ಮಾದೇಶ್ವರರು ಅನೇಕ ಭಕ್ತರನ್ನು ಪಡೆದುಕೊಂಡರು. ವಿವಿಧ ಕಂಸಾಳೆ ಕಥಾ ಸಂಪ್ರದಾಯದ ಕಥೆಗಾರರು ಹೇಳಿರುವ ಕಥೆಗಳಲ್ಲಿ ಮೂಗಯ್ಯ, ಹಲಗೇಗೌಡ, ಜುಂಜೇಗೌಡರನ್ನು ಮಾದೇಶ್ವರರು ತಮ್ಮ ಒಕ್ಕಲು ಮಾಡಿಕೊಳ್ಳಲು ಹೇಗೆ ಪವಾಡವೆಸಗಿದರು, ಹೇಗೆ ಅವರ ಮನಗಳನ್ನು ಒಲಿಸಿಕೊಂಡರು ಎಂಬುದರ ಬಗೆಗಿರುವ ಹಲವಾರು ಕಥೆಗಳು ಸ್ವಾರಸ್ಯಪೂರ್ಣವಾಗಿವೆ.

### ಮಾದೇಶ್ವರ ಕ್ಷೇತ್ರದ ಆಚರಣೆಗಳು

ಮಾದೇಶ್ವರ ಕ್ಷೇತ್ರಕ್ಕೆ ಪ್ರತಿ ಅಮಾವಾಸ್ಯೆಗಳಲ್ಲೂ ಯಾತ್ರಾರ್ಥಿಗಳು, ಕಂಸಾಳೆ ಗುಡ್ಡರು ಬಂದು ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಸೋಮವಾರ ಶುಕ್ರವಾರದ ದಿನಗಳಲ್ಲೂ ಭಕ್ತರು ಬರುತ್ತಾರೆ. ಯುಗಾದಿಯಲ್ಲಿ ರಥೋತ್ಸವ, ಮಾದೇಶ್ವರರ ಉತ್ಸವಗಳು ಮೂರು ದಿನಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಕರ್ನಾಟಕದಿಂದ ಮತ್ತು ತಮಿಳುನಾಡಿನಿಂದ ಇಲ್ಲಿಗೆ ಭಕ್ತರು ವಿಶೇಷವಾಗಿ ಬರುತ್ತಾರೆ. ಮಹಾನವಮಿ ಆಚರಣೆ ಅಂದರೆ ದಸರಾ ಆರಂಭಕ್ಕೆ ಮುಂಚೆ ಒಂಭತ್ತು ದಿನಗಳು ಮಾದೇಶ್ವರನ ಪೂಜೆ ಉತ್ಸವಗಳು ನಡೆಯುತ್ತವೆ. ಹತ್ತನೆಯ ದಿನ ದಸರಾ ಹಬ್ಬ. ಇದಕ್ಕೆ "ಗಣತಿ ತಿಂಗಳು" ಎಂದು ಕರೆಯುತ್ತಾರೆ. ಮಾದೇಶ್ವರರು ಎದುರು ಬೋಳಿಯಲ್ಲಿ ಕುಳಿತು ಮೂಡಲು, ಪಡುವಲು, ತೆಂಕ, ಬಡಗ ಕಾಡುಗಳಿಂದ ಎಷ್ಟು ಪರುಸೆ ಬರುತ್ತಾರೆಂಬುದನ್ನು ಲೆಕ್ಕ ಹಾಕುತ್ತಾರೆ, ಅದೇ ಗಣತಿ ತಿಂಗಳು. ಈ ಸಂದರ್ಭದಲ್ಲಿ ಮನೆಗೊಂದು ಆಳು ಬರಬೇಕು ಎಂಬ ನಿಯಮವಿರುತ್ತದೆ. ಇದನ್ನು ಮಾದೇಶ್ವರರು "ಎದುರು ಬೋಳಿ" (ಎದುರು ಬೆಟ್ಟ)ಯಲ್ಲಿ ನಿಂತು ನೋಡುತ್ತಾರೆ ಎಂಬ ಪ್ರತೀತಿ. ದೇವರನ್ನು ಅಮಾವಾಸ್ಯೆಯಾದ ಮೂರನೇ ದಿನಕ್ಕೆ ಪಟ್ಟಕ್ಕೆ ಕೂರಿಸುತ್ತಾರೆ. ಒಂಭತ್ತು ದಿನಗಳ ಪೂಜೆಯಾದ ಮೇಲೆ ಹತ್ತನೇ ದಿನ ಅಂದರೆ ದಸರಾದ ದಿನ ದೇವರು ಬನ್ನಿ ಮರಕ್ಕೆ ಹೋಗುವುದು. ಆಮೇಲೆ "ತೆಪ್ಪೋತ್ಸವ". ವಿಜಯ ದಶಮಿ ಬಹಳ ಮುಖ್ಯವಾದ ಹಬ್ಬದ ಆಚರಣೆ.

ದೀಪಾವಳಿ ಹಬ್ಬದಲ್ಲಿ ಮಾಡುವ "ಹಾಲರುವೆ ಸೇವೆ" (ಅರುವೆ=ಮಣ್ಣಿನ ಪಾತ್ರ) ಬಹಳ ಪ್ರಸಿದ್ಧವಾದುದು. ಮಾದೇಶ್ವರರು ಜುಂಜೇಗೌಡನನ್ನು ತಮ್ಮ ಒಕ್ಕಲು ಮಾಡಿಕೊಂಡು ಹಾಲರುವೆಯ ಸೇವೆಯನ್ನು ಮಾಡಿಸಿಕೊಂಡರು. ಇದು ಆತನ ವಂಶಪಾರಂಪರ್ಯದಿಂದ ನಡೆದು ಬಂದ ಸೇವೆಯಾಗಿದೆ. ಹಿಂದಿನ ದಿನ ಹಸಿದುಕೊಂಡು, ಮಣ್ಣನ್ನು ಎಂಜಲು ಮಾಡದ ಬಿಸಿಲಿನಲ್ಲೇ ಒಣಗಿಸಿ ಜಲಗೊಂಬಿನ ಬಿಳಿ ಹಸುವಿನ ಹಾಲನ್ನು ತೆಗೆದುಕೊಂಡು ಬಂದು ಆನೆ ತಲೆದಿಂಬಿನಲ್ಲಿ ಇಡುತ್ತಿದ್ದರು. ಹಿಂದೆ ಹನ್ನೆರಡು ಮೈ ನೆರೆಯದ ಬಾಲಕಿಯರು ಹಾಲು ಹಳ್ಳದಿಂದ ತೀರ್ಥ ತಂದು ಮಾದೇಶ್ವರನ ಪೂಜೆಗೆ, ಮಜ್ಜನಕ್ಕ ನೀಡುತ್ತಿದ್ದರು. ಈರ ಮಕ್ಕಳು (ವೀರ ಮಕ್ಕಳು) ಕತ್ತಿ, ದೊಣ್ಣೆವರಸೆ ಮಾಡಿಕೊಂಡು ಹೋಗಿ ಲಿಂಗದ ಮೇಲೆ ಹಾಲೆರೆಯಲು ಯೊರಡುತ್ತಿದ್ದರು. ಈಗ ಬಾಲಕಿಯರ ಸಂಖ್ಯೆ ೧೦೧ಕ್ಕೆ ಏರಿದೆ. ಈ ಪೂಜೆಯ ಸಂದರ್ಭದಲ್ಲಿ ಸಾಲೂರು ಮಠದ ಸ್ವಾಮಿಗಳಿರುತ್ತಾರೆ. ಹಾಲು ಹಳ್ಳದಿಂದ ಕತ್ತಿ ಪವಾಡದ ಕೊಳದ ಮೂಲಕ ಬಾಲಕಿಯರು ಹಾಲು ಹಳ್ಳದ ತೀರ್ಥವನ್ನು ಮಣ್ಣಿನ ಗಡಿಗೆಯಲ್ಲಿ ತೆಗೆದುಕೊಂಡು ಬರುತ್ತಾರೆ. ಒಂದೊಂದು ರೂಪಾಯಿನ ಕಾಣಿಕೆ ಕೊಟ್ಟು, ಭಕ್ತಾದಿಗಳು ರಸ್ತೆಯಲ್ಲಿ ಸಾಲಾಗಿ ಮಲಗಿಕೊಳ್ಳುತ್ತಾರೆ. ಆಗ ಸಾಲೂರು ಮಠದ ಸ್ವಾಮಿಗಳು ಅವರ ಮೇಲೆ ಹಾಯ್ದು ಬರುತ್ತಾರೆ. ಇದು ಮಾದೇಶ್ವರ ದೇವಾಲಯದವರೆಗೂ ನಡೆಯುವುದು. ಆ ದಿನವೆಲ್ಲಾ ಬಾಲಕಿಯರು ಉಪವಾಸವಿರುತ್ತಾರೆ.

ಕಾರ್ತೀಕ ಸೋಮವಾರ ಭಕ್ತಾದಿಗಳು ವಿಶೇಷವಾಗಿ ಮಾದೇಶ್ವರರ ಗಿರಿಗೆ ಬಂದು ದರ್ಶನ ಪಡೆದು ಪೂಜೆ ನಡೆಸುತ್ತಾರೆ. ಮಣ್ಣಿನ ಹಣತೆಯ ದೀಪಾಲಂಕಾರ, ಕೊನೆಯ ಕಾರ್ತೀಕದಲ್ಲಿ ತೆಪ್ಪೋತ್ಸವ ನಡೆಯುತ್ತದೆ. ಕೊನೆಯ ಕಾರ್ತೀಕ ಬಹಳ ಮುಖ್ಯ. ಆಗ ಹೆಚ್ಚಿಗೆ ಜನರು ಬರುತ್ತಾರೆ. ಶಿವರಾತ್ರಿಯಲ್ಲಿ ೩,೪ ದಿನಗಳು ಉತ್ಸವಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಹೆಚ್ಚಾಗಿ ತಮಿಳು ನಾಡಿನಿಂದ ಭಕ್ತರು ಬಂದು ತಮ್ಮ ಹರಕೆಯನ್ನು ಒಪ್ಪಿಸುತ್ತಾರೆ.

ಗೌರಿಹಬ್ಬದ ದಿನ ಗೌರಮ್ಮನನ್ನು ಗಂಗೆಗೆ ಬಿಡುವಾಗ ಮೂರು ನಾಲ್ಕು ದಿನಗಳಲ್ಲಿ ಕುಂಭಾಭಿಷೇಕ ಮಾಡುತ್ತಾರೆ. ಈ ಸಂದರ್ಭದಲ್ಲಿ ಮತ್ತು ಶಿವರಾತ್ರಿ ವೇಳೆಯಲ್ಲಿ ನಾಗಮಲೆ, ತಬಸರೆ, ಎದುರು ಬೋಳಿ, ಹಿಂಡಿಬಸಪ್ಪ, ಪಾದದರೆ, ಕಾರಯ್ಯನ ಬೋಳಿ, ಬಳಪದ ಕಲ್ಲಿನ ಬಸವೇಶ್ವರ, ಗೌಜಲಕ್ಕಿ ಬಸವೇಶ್ವರ, ಕಣಿವೆ ಬಸವೇಶ್ವರ, ಬಂಡೇಹಳ್ಳಿ ಬಸಪ್ಪ, ಆದಿಮಾದಪ್ಪನ ಬೆಟ್ಟಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ.

ಮಾದೇಶ್ವರರಿಗೆ ತಳಿಗೆ ಅನ್ನವನ್ನು ಎಡೆ ಮಾಡುವಾಗ ಜೊಲ್ಲು ಬಿದ್ದೀತೆಂದು ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡು ಮಾಡುತ್ತಾರೆ. ಸಾಲೂರು ಮಠದ ಶ್ರೀಗಳವರ ಆದೇಶದ ಮೇಲೆ ಮಾದೇಶ್ವರ ದೇವಾಲಯದ ಪೂಜೆ ಪುರಸ್ಕಾರಗಳು ನಡೆಯುತ್ತವೆ. ಮಾದೇಶ್ವರರಿಗೆ ನೈವೇದ್ಯ ನೀಡುವಾಗ ಲಿಂಗದ ಮುಂದೆ ಸಾಲೂರು ಮಠದ ಸ್ವಾಮಿಗಳು ಇರುತ್ತಾರಲ್ಲದೆ, ಏಕಕಾಲದಲ್ಲಿ ಪ್ರಸಾದವನ್ನು ಸ್ವೀಕರಿಸುತ್ತಾರೆ. ಇದು ಜಂಗಮ ಲಿಂಗ ತೃಪ್ತಿಗೆ ಉದಾಹರಣೆ. ನಿತ್ಯೋತ್ಸವ, ಮಾಸೋತ್ಸವ, ಸರ್ವಪೂಜೆಗಳಲ್ಲೂ ಸಾಲೂರು ಮಠದ ಸ್ವಾಮಿಗಳು ಇದ್ದೇ ಇರಬೇಕು. ಈ ಸಮಯಗಳಲ್ಲಿ ಛತ್ರಿ, ಬಿರುದು ಬಾವಲಿಗಳು, ವಾದ್ಯ ಸಮೇತ, ಶ್ರೀಯವರು ದೇವಾಲಯಕ್ಕೆ ದಯಮಾಡಿಸುತ್ತಾರೆ.

ಹನ್ನೆರಡು ವರ್ಷಕ್ಕೊಮ್ಮೆ ಶೇಷಣ್ಣೊಡೆಯರ ಜಾತ್ರೆ ನಡೆಯುತ್ತದೆ. ಈ ಉತ್ಸವಕ್ಕೆ ಅನ್ನದ ಎಡೆಮಾಡುತ್ತಾರೆ. ಅಗರದ ಗಂಗಡಕಾರ ಒಕ್ಕಲಿಗರ ಗದ್ದೆಯ ಗೊನೆಯ ಮೇಲಿನ ಬತ್ತ, ಆಲೆಮನೆಯ ಕೊಪ್ಪರಿಗೆಯಲ್ಲಿ ಆಗತಾನೇ ಅರೆಯಿಸಿ ಮಾಡಿಸಿದ ಹೊಸ ಬೆಲ್ಲ, ಯಳಂದೂರು ತಂಗಿನಕಾಯಿ, ತಮಿಳುನಾಡಿನ ಮಲ್ಲಮ್ಮನ ದುರ್ಗದ ಬಾಳೆಹಣ್ಣು, ಮೈಸೂರಿನ ನೂರೆಂಟು ಮೊಳ ಚಂದ್ರಗಾವಿ, ಇವೆಲ್ಲವನ್ನೂ ಅಣಿಮಾಡಿಕೊಳ್ಳುತ್ತಾರೆ. ದೇವಸ್ಥಾನದ ಹತ್ತಿರ ಹೊಸದಾಗಿ ಮರದ ಒರಳು, ಮರದ ಒನಕೆ ಮಾಡಿ, ಹಸಿಬತ್ತವನ್ನು ಕುಟ್ಟಿ ಉಪವಾಸದಲ್ಲಿರುವ ಪೂಜಾರಿ ಅಂತರ ಗಂಗೆ ನೀರು, ಹಾಲಿನಲ್ಲಿ ಅನ್ನ ಮಾಡುತ್ತಾರೆ. ಹಿಂದೆ ಕುದಿಯುವ ಅಕ್ಕಿಯನ್ನು ಕೈ ಹಾಕಿ ಸೌಟಿನಲ್ಲಿ ತಿರುವುವಂತೆ ತಿರುವುತ್ತಿದ್ದರಂತೆ. ಅದರಿಂದ ಆತನಿಗೆ ಏನೂ ಬಿಸಿ ತಟ್ಟುತ್ತಿರಲಿಲ್ಲವೆಂಬ ಪ್ರತೀತಿ ಇದೆ. ಆ ಅನ್ನವನ್ನು ಶೇಷಣ್ಣೊಡೆಯರಿಗೆ ಎಡೆ ಮಾಡಿ, ನೂರೆಂಟು ಸಾರಿ ಪೂಜೆ ಮಾಡಿ, ಕುಂಭಾಭಿಷೇಕ ಮಾಡುತ್ತಾರೆ. ಶೇಷಣ್ಣೊಡೆಯ ದನ ಕಾಯುತ್ತಿದ್ದ ಎಂಬ ಪ್ರತೀತಿ ಇರುವುದರಿಂದ ಅವನ ಪೂಜಗೆ ಒಂದು ಕೊಳಲು, ಕತ್ತಿ, ಕೂಡಲಿಗಳನ್ನು ಗದ್ದಿಗೆ ಮೇಲಿಟ್ಟು ಪೂಜಿಸುತ್ತಾರೆ. ಆ ದಿನ ತಮ್ಮಡಿ ಹಾಗೂ ಸಾಲೂರು ಮಠದ ಸ್ವಾಮಿಗಳು ಉಪವಾಸವಿರುತ್ತಾರೆ. ಪೂಜೆಯಾದ ಹದಿನೈದು ದಿನಗಳು ತೀರ್ಥಯಾತ್ರೆಗೆ ಹೋಗುವ ಪದ್ಧತಿ ಇದೆ.

ಮಿಣ್ಣದ ಗುರುಸಿದ್ಧಕವಿ ಜಾತ್ರೆಯ ವೈಭವವನ್ನು ಒಂದು ಸಂಧಿಯಲ್ಲಿ ಹೃದಯಂಗಮವಾಗಿ ಬಣ್ಣಿಸಿದ್ದಾನೆ. ಕೆಲವೆಡೆ ಉತ್ಪ್ರೇಕ್ಷೆ ಎಂದರೂ ಮಿಕ್ಕ ಭಾಗ ಸಹಜವಾಗಿ ಮೂಡಿಬಂದಿದೆ. ಕವಿ ಪ್ರತ್ಯಕ್ಷವಾಗಿ ಜಾತ್ರೆ ನೋಡಿದವನು. ಜಾತ್ರೆಗೆ ತ್ರಿಮೂರ್ತಿಗಳೂ, ಅಷ್ಟದಿಕ್ಪಾಲಕರೂ ಬಂದಿದ್ದರು ಎಂಬುದು ಅತಿಶಯೋಕ್ತಿ-ಯಾದರೂ, ರಾಜಾಧಿರಾಜರುಗಳು, ವಿದ್ವಾಂಸರುಗಳು, ಪತಾಧಿಪತಿಗಳು, ಅಸಂಖ್ಯಾತ ವಿರಕ್ತರು ಆಗಮಿಸಿದ್ದರೆಂಬುದರಲ್ಲಿ ಅನುಮಾನವಿಲ್ಲ.

## ಎಣ್ಣೆ ಮಜ್ಜನ:

ಮೊದಲು ಮಾದೇಶ್ವರರು ತಮ್ಮ ಎಣ್ಣೆ ಮಜ್ಜನವನ್ನು ಸರಗೂರಿನ ಮೂಗಯ್ಯನಿಂದ ಮಾಡಿಸಿಕೊಂಡು ತಮ್ಮ ಒಕ್ಕಲನ್ನಾಗಿ ಮಾಡಿಕೊಂಡರು. ಅದು ವಂಶ ಪಾರಂಪರ್ಯವಾಗಿ ಮುಂದುವರಿಯಿತು. ಸರಗೂರಿನ ಮೂಗಯ್ಯನ ವಂಶಜರು (ಸರಗೂರು ಸ್ವಾಮಿಗಳು) ಮೂರು ಹೋಳು ಎಳ್ಳನ್ನು ಬೂದುಗಂಬಳಿಯಲ್ಲಿ ಗಂಟು ಹಾಕಿಕೊಂಡು, ಅಡ್ಡ ರುಮಾಲು ಸುತ್ತಿಕೊಂಡು, ತುಂಬಿದ ಅಮಾವಾಸ್ಯೆಯ ದಿನ ಶಿವರಾತ್ರಿಯಂದು ಅವರೊಬ್ಬರೇ ಸಪ್ಪಟ ಸರಿ ರಾತ್ರಿಯಲ್ಲಿ ಬಂದು, ಅಂಗೈ ಮೇಲೆ ಎಳ್ಳುಹಾಕಿಕೊಂಡು ಮೊಳಸಂದಿನಲ್ಲಿ ಎಣ್ಣೆ ತೆಗೆದು ಸ್ವಾಮಿಯ ಮಸ್ತಕದ ಮೇಲೆ ಒತ್ತಿ ಅಭಿಷೇಕ ಮಾಡುತ್ತಿದ್ದರು. ಕೆಲವೊಮ್ಮೆ ಭಕ್ತಾದಿಗಳ ಖರ್ಚಿನಲ್ಲೂ, ಕೆಲವೊಮ್ಮೆ ಸ್ವಂತ ಖರ್ಚಿನಿಂದಲೂ ಇವರು ಬರುತ್ತಿದ್ದರು. ಹಬ್ಬ, ಜಾತ್ರೆ, ಸಮಯಗಳಲ್ಲಿ ದೇವಸ್ಥಾನದ ಮುಂದೆ ಗುಡಾರ ಹಾಕಿಕೊಂಡು ಭಕ್ತಾದಿಗಳಿಂದ ಕಾಣಿಕೆಯನ್ನು ಸ್ವೀಕರಿಸುತ್ತಿದ್ದರು. ಮೂಗಯ್ಯನ ವಂಶಸ್ಥರ ಮೂರು ಮನೆ ಸರಗೂರಿನಲ್ಲಿದೆ. ಇವರು ಆರಂಭ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಚಿನ್ನಸ್ವಾಮಿಯವರಿಗೆ ಮೂವತ್ತೈದು ವರ್ಷ, ದಾಸಪ್ಪನವರಿಗೆ ಎಪ್ಪತ್ತು ವರ್ಷ, ಮೂಗಪ್ಪನವರು ಐವತ್ತು ವರ್ಷದವರು. ಎರಡು ವರ್ಷದಿಂದ ದಾಯಾದಿಗಳ ಕಲಹದ ಕಾರಣ ಎಣ್ಣೆ ಮಜ್ಜನ ನಿಂತು ಹೋಗಿದೆ.

ಈಗ ತಿಂಗಳಿಗೊಮ್ಮೆ ಎಣ್ಣೆ ಮಜ್ಜನ ನಡೆಯುತ್ತದೆ. ಎಳ್ಳನ್ನು ಒಳಕಲ್ಲಿನಲ್ಲಿ ಆಡಿಸಿ ಎಣ್ಣೆ ತೆಗೆದು ಆ ಎಣ್ಣೆಯನ್ನು ಸಾಲೂರು ಮಠದ ಗುರುಗಳ ಸಮ್ಮುಖದಲ್ಲಿ ದೇವರ ಮಂಡೆಗೆ ಒತ್ತಿ ಪೂಜಿಸುತ್ತಾರೆ. ಆದಿನ ದೇವರಿಗೆ ವಿಶೇಷ ಪೂಜೆ, ನೈವೇದ್ಯಗಳು ನಡೆಯುತ್ತವೆ. ಈ ಕಾರ್ಯವು ವರ್ಷದ ಪ್ರತಿ ತಿಂಗಳೂ ಶ್ರೀ ಸಾಲೂರು ಮಠದ ಗುರುಗಳ ಆದೇಶದ ಮೇರೆಗೆ ನಡೆಯುತ್ತದೆ. ಎಣ್ಣೆ ಮಜ್ಜನ ಪ್ರಸಾದವನ್ನು ಭಕ್ತಾದಿಗಳಿಗೆ ಹಂಚುವರು.

## ಕುಂತೂರು ಪ್ರಭುದೇವರ ಪಾದತೀರ್ಥ ಮಜ್ಜನ:

ಕುಂತೂರು ಪ್ರಭುಲಿಂಗಸ್ವಾಮಿಗಳ ಪಾದ ತೊಳೆದ ತೀರ್ಥವನ್ನು ತಿಂಗಳಿಗೊಂದು ಸಾರಿ ತುಂಬಿದ ಅಮಾವಾಸ್ಯೆಯ ದಿನ ತೆಗೆದುಕೊಂಡು ಬಂದು ಮಾದೇಶ್ವರ ಲಿಂಗದ ಮಸ್ತಕದ ಮೇಲೆ ಅಭಿಷೇಕವನ್ನು ಹಿಂದೆ ಮಾಡುತ್ತಿದ್ದರು. ಕುಂತೂರು ಮಠದ ಲಿಂಗಾಯಿತ ಭಕ್ತ ಇದನ್ನು ರಾತ್ರಿ ಹೊತ್ತು ತೆಗೆದುಕೊಂಡು, ಯಾರೂ ಮುಟ್ಟದಂತೆ ಜಾಗ್ರತೆ ವಹಿಸಿ ಎಲ್ಲೂ ಇಡದೆ ಹೊರಡುತ್ತಿದ್ದ. ಆತನ ತಲೆಯ ಮೇಲೆ ತೀರ್ಥವನ್ನು ಇಟ್ಟ ಕೂಡಲೇ ಆತ ಜ್ಞಾನವಿಲ್ಲದೆ ನಡೆದುಕೊಂಡು ಹೊರಡುತ್ತಿದ್ದ. ಮಾದೇಶ್ವರ

ದೇವಸ್ಥಾನಕ್ಕೆ ಹೋದ ಕೂಡಲೇ ಈ ತೀರ್ಥವನ್ನು ತೆಗೆದುಕೊಂಡು ತಮ್ಮಡಿಗಳು ಮಜ್ಜನ ಮಾಡಿಸುತ್ತಿದ್ದರು.

ಹಿಂದೆ ಪ್ರಭುದೇವರ ಬೆಟ್ಟದಲ್ಲಿ ಹಾಲರುವೆ, ಆದ ನಂತರ ಕುಂತೂರಿನ ಪ್ರಭುದೇವರ ಗದ್ದುಗೆಯಿಂದ ಪಾದ ತೀರ್ಥವನ್ನು ತಂದು ಮಾದೇಶ್ವರ ಬೆಟ್ಟದಲ್ಲಿ ಹಾಲರುವೆ ಉತ್ಸವ ಮಾಡುತ್ತಿದ್ದರು. ಅದನ್ನು ತರುವಾಗ ಶುಚಿರ್ಭೂತವಾಗಿರ ಬೇಕಾದುದರಿಂದ ಇಂದು ಅದು ಸಾಧ್ಯವಾಗುತ್ತಿಲ್ಲ. ಆದ ಕಾರಣ ಪ್ರಭುದೇವರ ಗದ್ದುಗೆಯಿಂದ ಪಾದತೀರ್ಥಕ್ಕೆ ಬದಲಾಗಿ ಎಳನೀರನ್ನು ತಂದು ಹಾಲರುವೆ ಉತ್ಸವ ಮಾಡುತ್ತಾರೆ.

**ಮಾದೇಶ್ವರ ಕಾವ್ಯದ ಸ್ವರೂಪ:**

**ವಸ್ತು:**

'ಮಾದೇಶ್ವರ ಕಾವ್ಯ'ದ ವಸ್ತು ಮಾದೇಶ್ವರರ ಜೀವನವನ್ನು ಪ್ರತಿ ಬಿಂಬಿಸುವುದು. ಚಾರಿತ್ರಿಕ ವ್ಯಕ್ತಿ ಮಹಾದೇವನಾದ ಬಗೆಯನ್ನು ಬಣ್ಣಿಸುವುದು.

ಮಲೆಯ ಮಾದೇಶ್ವರ ಕ್ಷೇತ್ರ, ಮಂಟೇಲಿಂಗಸ್ವಾಮಿ ಕ್ಷೇತ್ರ, ಸೌದತ್ತಿ ಎಲ್ಲಮ್ಮನ ಕ್ಷೇತ್ರ, ಜುಂಜಪ್ಪನ ಕ್ಷೇತ್ರ, ಮೈಲಾರ ಕ್ಷೇತ್ರ, ಈ ಐದೂ ದಕ್ಷಿಣ ಕರ್ನಾಟಕದ ಧಾರ್ಮಿಕ ಕಾವ್ಯಗಳು ಪರಂಪರೆಯ ವಿಶಿಷ್ಟ ಸ್ವರೂಪಗಳಲ್ಲಿ ಬೆಳೆದು ಬಂದಿದೆ. ಆಯಾ ದೈವಕ್ಕೆ ಸಂಬಂಧಿಸಿದಂತೆ ಉಳಿದುಕೊಂಡು ಬಂದಿವೆ.

"ಧಾರ್ಮಿಕ ದೃಷ್ಟಿಯಿಂದಲೂ ಮಾದೇಶ್ವರ ಕಾವ್ಯ ಒಂದು ಗಮನಾರ್ಹವಾದ ಗಣ್ಯಸ್ಥಾನವನ್ನು ಪಡೆದುಕೊಂಡು ಬಂದಿದೆ. ಈ ಜನಪದ ಕಾವ್ಯವನ್ನು ಗುಡ್ಡರು ಉಳಿಸಿಕೊಂಡು ಕಂಠಸ್ಥ ಮಾಡಿಕೊಂಡು ಕಾಪಾಡಿಕೊಂಡು ಬಂದಿರುವುದು ಒಂದು ಮಹತ್ವದ ವಿಷಯ."[೬೭]

ಮಾದೇಶ್ವರರು ಜನತೆಯ ಕಂಟಕಪ್ರಾಯವಾಗಿದ್ದ ಪ್ರಬಲ ಶಕ್ತಿಗಳನ್ನೆಲ್ಲಾ ಮುರಿದು ನೆನೆದವರ ಮನೆಗೊಲಿದು ಹೇಗೆ ಮಹಾನ್ವಿತರಾಗಿ ಮೆರೆದರು ಎಂಬುದನ್ನು ಕುರಿತು ಏಳು ಖಂಡಕಾವ್ಯಗಳು ಚಿತ್ರಿಸುತ್ತವೆ. ಸಾತ್ವಿಕ ಮೂರ್ತಿಯಾಗಿ, ತೇಜಸ್ವಿಯಾಗಿ, ಅನ್ಯಾಯ ಅಕ್ರತ್ಯದ ವಿರುದ್ಧ ಸಿಡಿದೇಳುವ ಅಗ್ನಿಜ್ವಾಲೆಯಾಗಿ ಲೋಕ ಕಲ್ಯಾಣ ಸಾಧಿಸಿದ ಬಗ್ಗೆ ಜನಪದ ಕಾವ್ಯದಲ್ಲಿ ಉಜ್ವಲವಾಗಿ ಮೂಡಿ ಬಂದಿವೆ.

ಮಾದೇಶ್ವರ ಕಾವ್ಯ ಪವಾಡಗಳ ಮೇಲೆ ಹೆಚ್ಚಿಗೆ ಹಬ್ಬಿದ್ದರೂ ಅವೆಲ್ಲವನ್ನು ಪ್ರತಿಮಾ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ. "ಆಸುರೀ ಶಕ್ತಿಗಳ ವಿರುದ್ಧ ದೈವಿಕ

ಶಕ್ತಿ ನಡೆಸುವ ಹೋರಾಟ, ಈ ಹೋರಾಟಕ್ಕೆ ಮುನ್ನ ದೈವ ನೀಡಬಹುದಾದ ಅವಕಾಶಗಳು, ನಡೆಸಬೇಕಾದ ಪರೀಕ್ಷೆಗಳು ಮುಗಿದ ಮೇಲೆ ಅನಿವಾರ್ಯವಾಗಿ ದೈವೀಶಕ್ತಿ ಮೇಲಾಗಿ ಅಸುರೀ ಶಕ್ತಿ ಕುಸಿಯುವುದು, ಆ ಅಸುರೀ ಶಕ್ತಿ ದೈವದ ಸನ್ನಿಧಿಯಲ್ಲಿ ಆಶ್ರಯ ಪಡೆಯುವುದು ಇಲ್ಲಿನ ಜಾಯಮಾನ. ಸಮಗ್ರ ಭಾರತೀಯ ಪುರಾಣ ಕಥೆಗಳೆಲ್ಲವೂ ಇಂಥ ಸಮಾನ ಸೂತ್ರದಲ್ಲಿ ಕೋದುವುಗಳಾಗಿವೆ."[೮೮]

ದೀನ ದಲಿತರನ್ನು ಕಂಡಾಗ ಕರಗುವುದು, ಬೀಗುವವರನ್ನೂ, ತೂಗುವವರನ್ನೂ ಕಂಡಾಗ ಮುನಿಯುವ, ಭಕ್ತರನ್ನು ಸತ್ಯಸಂಧರನ್ನು ಕಂಡಾಗ ಒಲಿಯುವ, ಅವನ ಎಲ್ಲಾ ದಿವ್ಯ ಗುಣಗಳೂ ಒಂದೊಂದು ಕಥೆಯಲ್ಲಿ ಒಂದೊಂದು ರೀತಿಯಲ್ಲಿ ಮೂಡಿಬಂದಿವೆ.

ಮಾದೇಶ್ವರರ ಬಗೆಗೆ ತಿಳಿದುಕೊಳ್ಳಲು ಜನಪದ ಸಾಹಿತ್ಯಕ್ಕೇ ನಾವು ಶರಣು ಹೋಗಬೇಕು. ಮಾದೇಶ್ವರರ ಬಗೆಗೆ ಬಿಡಿ ಬಿಡಿ ಪದ್ಯಗಳೂ ಕಾವ್ಯವೂ ಸೃಷ್ಟಿಯಾಗಿವೆ. ಈ ಕಂಸಾಳೆ ಕಥಾ ಸಂಪ್ರದಾಯ ಕಾವ್ಯ ಮೂಲತಃ ಒಂದೇ ಆಗಿದ್ದರೂ, ಅದು ಕಂಸಾಳೆಯವರ ಪ್ರತಿಭೆಗೆ ತಕ್ಕಂತೆ ಭಿನ್ನ ಭಿನ್ನ ರೂಪ ತಾಳಿರುವುದನ್ನು ಗಮನಿಸಬಹುದು. ಈ ವಿಶಿಷ್ಟವಾದ ಕಂಸಾಳೆ ಕಥಾ ಸಂಪ್ರದಾಯದಲ್ಲಿ ಮಾದೇಶ್ವರರ ವ್ಯಕ್ತಿ ಚಿತ್ರ ಮೂಡಿಬಂದಿರುವುದನ್ನು ಕಾಣಬಹುದು. ಮೈಸೂರು ಜಿಲ್ಲೆಯಲ್ಲಿ "ಕಂಸಾಳೆಗುಡ್ಡರ ಕಲಾ ತಂಡಗಳು" ಮಾದೇಶ್ವರರ ಕಾವ್ಯವನ್ನು ಹಾಡುತ್ತಾರೆ. ಇದರಿಂದ ಇತ್ತೀಚೆಗೆ ಅನೇಕ ಸಾಹಿತ್ಯ ಕೃತಿಗಳು ಸೃಷ್ಟಿಯಾಗಿವೆ ಎನ್ನಿಸುತ್ತದೆ.

ಮಾದೇಶ್ವರರು ಕಾವ್ಯಕ್ಕೆ ಕೇಂದ್ರ ಬಿಂದುವಿದ್ದಂತೆ. ಮಿಕ್ಕ ಪಾತ್ರಗಳು ಸನ್ನಿವೇಶಗಳು, ಆತನ ಮಹಿಮೆಯನ್ನು ಎತ್ತಿ ಹಿಡಿಯಲು ಪೂರಕವಾಗಿ ಬಂದಿರುವುವು. ಕಂಸಾಳೆ ಕಥೆಗಳ ಕಂಸಾಳೆ ಕಲಾವಿದರ ಪ್ರತಿಭೆ, ಸಂಸ್ಕಾರ ವ್ಯುತ್ಪತ್ತಿ, ಸಮಯ ಸ್ಫೂರ್ತಿ, ಇವುಗಳ ಕಾರಣಗಳಿಂದ ಭಿನ್ನ ಪೌರಾಣಿಕ ಕಥೆಗಳು ಸೇರಿ ಪ್ರಾದೇಶಿಕವಾಗಿ ಕೆಲವು ವ್ಯತ್ಯಾಸಗಳಾಗಿರುವುದನ್ನು ಗಮನಿಸಬಹುದು. ಮೈಸೂರು ಜಿಲ್ಲೆಯಲ್ಲಿ ಪ್ರಚಲಿತವಾಗಿರುವ ಈ ರೀತಿಯ ಕೆಲವು ಕಂಸಾಳೆ ಕಥೆಗಳನ್ನು 'ಕಂಸಾಳೆ ಕಲಾವಿದರಿಂದ ಧ್ವನಿ ಮುದ್ರಿಸಿಕೊಂಡು" ಅಧ್ಯಯನ ನಡೆಸಲಾಗಿದೆ. ಕಂಸಾಳೆಯವರು ಹಾಡುವ ಮಾದೇಶ್ವರ ಕಾವ್ಯವನ್ನು ಮೊದಲು ಜೀ.ಶಂ. ಪರಮಶಿವಯ್ಯನವರು ತಾಳುಗತೆ (ಹುಟ್ಟಿ ಬೆಳೆದ ಸಾಲು), ಶ್ರವಣ, ಜುಂಜೇಗೌಡ, ಸಂಕಮ್ಮ, ಇಕ್ಕೇರಿ ದೇವಮ್ಮ , ಬೇವಿನ ಕಾಳಿ, ಸರಗೂರಯ್ಯನ ಕಥೆಗಳೆಂದು ಏಳು ಭಾಗಗಳಾಗಿ ಮಾಡಿಕೊಂಡಿದ್ದಾರೆ. ಮಾದೇಶ್ವರನ ಗುಡ್ಡರು ಏಳು ಕವಲುಗಳನ್ನು ಏಳು ರಾತ್ರಿಯವರೆಗೆ ಹಿಗ್ಗಿಸಿ ಹಾಡಿ, ಜನರ ಮನವನ್ನು ತಣಿಸುವುದು ಗಮನಾರ್ಹ.

ಪಿ.ಕೆ. ರಾಜಶೇಖರ ಅವರು ಹಲವಾರು ಕಥೆಗಳನ್ನು ತಮ್ಮ ಮಲೆಯ ಮಾದೇಶ್ವರ ಕಾವ್ಯದಲ್ಲಿ ಸೇರಿಸಿ ಹದಿನಾಲ್ಕು ಸಾಲುಗಳಾಗಿ ಮಾಡಿ ಅವುಗಳ ಜೊತೆಗೆ ಹಲವಾರು ಬಿಡಿ ಪದ್ಯಗಳನ್ನು ಸಂಗ್ರಹಿಸಿದ್ದಾರೆ.

ಸಾಮಾನ್ಯವಾಗಿ ಗುಡ್ಡರು ಏಳು ಸಾಲುಗಳನ್ನೇ ಹಾಡುವರು. ಆದರೆ ಅವರಿವರ ಬಾಯಿಂದ ಕೇಳಿದ, ಪೌರಾಣಿಕ ಕಥೆಗಳನ್ನು ಸೇರಿಕೊಂಡು, ಹೊಸ ಕಥೆಗಳನ್ನು ಹೆಣೆದು, ಸಂಖ್ಯೆಯನ್ನು ಹೆಚ್ಚಿಸುವುದು ಸಹಜ. ಏಕೆಂದರೆ ಅವರು ವೃತ್ತಿ ಗಾಯಕರು. ಹೊಸ ಹೊಸ ಕಥೆಗಳನ್ನು ಸೇರಿಸಿ ಹಾಡಿ ಜನರ ಮನವನ್ನು ಸೂರೆಗೆಯ್ಯಬೇಕು, ರಂಜಿಸಬೇಕು ಎಂಬ ದೃಷ್ಟಿಯಿಂದ ಹಲವಾರು ಕಥೆಗಳನ್ನು ಬೆರೆಸಿ, ಹಿಗ್ಗಿಸಿ ಹಿರಿದು ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಬಂದಿದ್ದಾರೆ ಎಂದರೆ ತಪ್ಪಾಗಲಾರದು.

ನೂರಾರು ಕಂಸಾಳೆ ಕಲಾವಿದರನ್ನು ಸಂದರ್ಶಿಸಿ, ಧ್ವನಿ ಮುದ್ರಿಸಿಕೊಂಡಾಗ ದೊರೆತದ್ದು ಜೀ.ಶಂ. ಪರಮಶಿವಯ್ಯನವರು ಹೇಳಿರುವ ಏಳು ಸಾಲುಗಳು ಮಾತ್ರ.

ಮಾದೇಶ್ವರರ ಕಥೆಗಳನ್ನು ನಾನು ಧ್ವನಿ ಮುದ್ರಿಸಿಕೊಳ್ಳಲು ಹೋದಾಗ ಕೆಲವು ಕಲಾವಿದರನ್ನು ಪಿ.ಕೆ. ರಾಜಶೇಖರ ಅವರು ಸಂಗ್ರಹಿಸಿರುವ ಕಥೆಗಳು ಬರುವುವೇ? ಎಂದು ಕೇಳಿದರೆ 'ಇಲ್ಲ' ಎಂದವರೇ ಹೆಚ್ಚು. ಇಲ್ಲಿನ ಕಥೆಗಳನ್ನು ಗಮನಿಸಿದಾಗ ಕೆಲವು ಕಥೆಗಾರರು ಹಣದಾಸೆಗೋಸ್ಕರವಾಗಿ ಚಿಕ್ಕಪುಟ್ಟ ಕಥೆಗಳನ್ನು ಕೇಳಿ ತಿಳಿದು ಹಿಗ್ಗಿಸಿ, ಅದಕ್ಕೊಂದು ಹೊಸ ತಿರುವು ಕೊಟ್ಟು ಹಾಡಿರಬೇಕು ಎನ್ನಿಸುತ್ತದೆ. ಆದರೆ ಏಳು ಕಥೆಗಳು ಮಾತ್ರ ಅಚ್ಚಳಿಯದಂತೆ ಉಳಿದುಕೊಂಡು ಬಂದಿವೆ. ಈ ಏಳು ಕವಲುಗಳೂ ಒಂದೊಂದು ಖಂಡ ಕಾವ್ಯದ ವ್ಯಾಪ್ತಿಯನ್ನು ಹೊಂದಿವೆ. ಮಾದೇಶ್ವರರ ಬಗೆಗೆ ಸಂಪೂರ್ಣ ಏಳು ಕವಲುಗಳನ್ನೂ ಹಾಡುವ ಒಬ್ಬರೇ ಕಲಾವಿದರು ಬೆರಳೆಣಿಸುವಷ್ಟು. ಇಬ್ಬರಾದರೆ ನಿರಾಯಾಸವಾಗಿ ಬೆಳಕು ಹರಿಯುವವರೆಗೆ ನಿಭಾಯಿಸಿಕೊಂಡು ಹಾಡಿ ಮುಗಿಸುತ್ತಾರೆ.

"ಮಂಟೇಲಿಂಗಸ್ವಾಮಿ ಕಾವ್ಯ"ದಲ್ಲಿ ಧರೆಗೆ ದೊಡ್ಡವರ ಸಾಲು, ಸಿದ್ದಪ್ಪಾಜಿ ಸಾಲು, ರಾಚಪ್ಪಾಜಿ ಸಾಲು ಎಂದು ವಿಂಗಡಿಸಿರುವಂತೆ, ಮಾದೇಶ್ವರರ ಕಥೆಗಳನ್ನು ಸಾಲು, ಪಲ್ಲವಿ, ಕವಟ್ಲು, ಕಥೆ, ಕವಲು ಎಂದು ವಿಂಗಡಿಸಲಾಗಿದೆ. ಬೇವಿನಕಾಳಿ, ಸಂಕಮ್ಮ, ಇಕ್ಕೇರಿದೇವಮ್ಮ, ಜುಂಜೇಗೌಡ, ಸರಗೂರಯ್ಯ, ಶ್ರವಣ, ಯಟ್ಟಿ ಬೆಳೆದ ಸಾಲುಗಳೆಂದು ವಿಂಗಡಿಸಿರುವುದನ್ನು ಕಾಣಬಹುದು.

ಪ್ರಾರ್ಥನೆಯೊಡನೆ ಕಾವ್ಯ ಆರಂಭವಾಗುತ್ತದೆ. ಮಂಗಳಮೈಮೆ ಮಾದೇವ ವಿಭಾಗದಲ್ಲಿ ಜನಪದ ಕವಿಗಳು ಮಾದೇಶ್ವರರನ್ನು ನಾನಾ ವಿಧವಾಗಿ ಸ್ತುತಿಸಿರುವುದನ್ನು

ಕಾಣಬಹುದು. ಆದಿಶಕ್ತಿ ಮಾದಪ್ಪನ ಸಾಲಿನಲ್ಲಿ ಮಾದೇಶ್ವರನ ಸೃಷ್ಟಿಯ ಬಗೆಗೆ ಇದೆ. ಜೀವಕೋಟಿಯ ತ್ರಿಷ್ಟಿಯಾದ ಕವಟ್ಲು ಲೋಕದ ಸೃಷ್ಟಿಯ ಕಾರ್ಯ ಹೇಗಾಯಿತು ಎಂಬುದನ್ನು ಚಿತ್ರಿಸುತ್ತದೆ. ಎಡಗೈ ಬಲಗೈಯವರು ಹುಟ್ಟಿದ ಕವಟ್ಲಿನಲ್ಲಿ ಹೊಲೆಯರು ಮಾದಿಗರ ಸೃಷ್ಟಿಯ ವಿಚಾರ ಬಂದಿದೆ. ಶ್ರವಣಯ್ಯನಿಗೆ ವರವನ್ನು ಕೊಟ್ಟ ಕವಟ್ಲಿನಲ್ಲಿ ಈಶ್ವರನ ಕುರಿತು ಶ್ರವಣ ತಪಸ್ಸು ಮಾಡಿ, ಸಾವಿಲ್ಲದ ವರವನ್ನು ಪಡೆದುಕೊಳ್ಳುವುದಿದೆ. ಮಾದೇವ ಭೂಮಿಗೆ ಬಂದ ಕವಟ್ಲಿನಲ್ಲಿ ಮಾದೇಶ್ವರ ಭೂಲೋಕಕ್ಕೆ ಬರುವ ಮುಂಚೆ ಮೂಗಯ್ಯನನ್ನು, ಭೂಲೋಕದಲ್ಲಿ ತನಗೆ ಎಣ್ಣೆ ಮಜ್ಜನ ಸೇವೆಗೆ ಬರಬೇಕೆಂದು ಹೇಳಿ ಬರುವ ಪ್ರಸಂಗವಿದೆ. ಬಂಗಾರ ಗಿರಿಬೆಟ್ಟ ಕವಟ್ಲಿನಲ್ಲಿ ನಾರಾಯಣ, ಲಕ್ಷ್ಮೀದೇವಿಯರಿಗೆ ಪಾರ್ವತಿ ಜಾಗಕೊಡಲು ಅದನ್ನು ಅವರೇ ಆಕ್ರಮಿಸಿಕೊಳ್ಳುವರು. ಆಗ ಶಿವ ಅಲ್ಲಿಂದ ಹೊರಡುವ ಸನ್ನಿವೇಶದ ಚಿತ್ರಣವಿದೆ. ಚಾಮುಂಡಿಯ ಕವಟ್ಲಿನಲ್ಲಿ ಮಹಿಷಾಸುರನನ್ನು ಚಾಮುಂಡಿ ಮರ್ಧನ ಮಾಡಿದ ಪ್ರಸಂಗ ಇದೆ. ಮಾದೇಶ್ವರನು ಕಲ್ಲೂರು ತೋಪಿನಲ್ಲಿ ಲಗ್ಗೆ ಚೆಂಡಾಡಿದುದು, ಹಿಡಿಂಬಿ ಕವಟ್ಲಿನಲ್ಲಿ ಮಕ್ಕಳಿಲ್ಲದೆ ತಪಸ್ಸು ಮಾಡಿದಾಗ ಮಾದೇಶ್ವರ ವಿಕಾರವಾದ ಮಗುವಾಗಿ ಹುಟ್ಟುವುದು, ಆಗ ಆಕೆ ಜನರು ಆಡಿಕೊಳ್ಳುತ್ತಾರೆಂದು ಬಗೆದು ಅದನ್ನು ಬಿಸಾಡುವುದರ ಬಗೆಗೆ ಇದೆ. ತಂದೆ ತಾಯಿ ಪಡೆದ ಕವಟ್ಲಿನಲ್ಲಿ ಕಲ್ಯಾಣ ಪಟ್ಟಣದಲ್ಲಿ ಉತ್ತರಾಜಮ್ಮ ಕಲ್ಯಾಣದೇವರನ್ನು ತಂದೆ ತಾಯಿಯರನ್ನಾಗಿ ಪಡೆದುದರ ಸಚಿತ್ರ ವಿವರವಿದೆ. ಉತ್ತಮಾತ್ತರದಿಂದ ಹೋದ ಕವಟ್ಲಿನಲ್ಲಿ ಮಾದೇಶ್ವರರ ತಾಯಿ ಉತ್ತರಾಜಮ್ಮನಿಂದ ಬುತ್ತಿ ಕಟ್ಟಿಸಿಕೊಂಡು ಮನೆಯನ್ನು ಬಿಡುವ ಪ್ರಸಂಗವಿದೆ. ಕಲ್ಯಾಣದಲ್ಲಿ ಪವಾಡಗಳನ್ನು ಮರೆದ ಕವಟ್ಲಿನಲ್ಲಿ ಸೀಲಮ್ಮ, ಬಸವಣ್ಣನವರ ದೃಢ ಭಕ್ತಿಯನ್ನು ಮಾದೇಶ್ವರರು ಪರೀಕ್ಷಿಸಲು ಅಲ್ಲಿ ಅನೇಕ ಪವಾಡಗಳನ್ನು ಎಸಗುವರು. ಪುರದ ಲಿಂಗಯ್ಯನ ಕವಟ್ಲಿನಲ್ಲಿ ಸಾಲಿಗ್ರಾಮ ದಾಟಿ ಕಾವೇರಿ ದಂಡೆಯಲ್ಲಿ ಪುರದ ಲಿಂಗಯ್ಯನಾಗಿ ಒಡಮೂಡುತ್ತಾರೆ. ಮಾದೇಶ್ವರ, ನೂರೊಂದಯ್ಯನ ಕವಟ್ಲಿನಲ್ಲಿ ಪಿರಿಯಾಪಟ್ಟಣದಲ್ಲಿ ಪೀರಖಾನ್ ಸಾಬಿ ಬಸವನ ಕೊಳ್ಳಲು ಬಂದಾಗ ಅವೆಲ್ಲಾ ನೂರೊಂದು ಲಿಂಗವಾದುದು, ಕೆಂಡಗಣ್ಣ ಸ್ವಾಮಿ ಕವಟ್ಲಿನಲ್ಲಿ ಬಸವನ ಹಳ್ಳಿಯಲ್ಲಿ ಮಾದೇಶ್ವರರು ಕೆಂಡಗಣ್ಣ ಸ್ವಾಮಿಯಾಗಿ ನೆಲೆಯಾಗುವುದು, ಬೀರಂಕೊಲ್ಲಿ ಹಲಗೇಗೌಡನ ಕವಟ್ಲಿನಲ್ಲಿ ಭೀಮನ ಕೊಲ್ಲಿಯಲ್ಲಿ ಹಲಗೇಗೌಡ, ಮಾದಮ್ಮ ಇಬ್ಬರಿಗೆ ಒಲಿದು, ಅಲ್ಲಿ ಮಾದೇಶ್ವರರು ನೆಲೆಯಾಗುವ ಚಿತ್ರಣ ಇದೆ. ಮಲಾರು ಬಸಮ್ಮ ಕವಟ್ಲಿನಲ್ಲಿ ಸೂಳೆ ಮಲ್ಲಮ್ಮ ಮಾದೇಶ್ವರನ ಮೇಲೆ ಮೋಹ ಬಿದ್ದ ನಾಶವಾಗುವುದಿದೆ. ಬಿದನಾಳು ಮಠದ ಕವಟ್ಲಿನಲ್ಲಿ ಬದನೆಗಿಡಗಳಿಗೆ ನೀರು ಹೊಯ್ಯುವುದು, ಸುತ್ತೂರು ಮಠದ ಕವಟ್ಲಿನಲ್ಲಿ ರಾಗಿ ಬೀಸುವ ಪವಾಡ, ಸಾಂಬುಲಿಂಗ ಸ್ವಾಮಿ ಕವಟ್ಲಿನಲ್ಲಿ ಬಾಳೆ ಗಿಡ ನೆಡುವ ಪ್ರಸಂಗ, ಕುಂತೂರು

ಮಠದ ಕವಟ್ಲೆನಲ್ಲಿ ಹೂವಿನ ಪವಾಡ, ಮಾದಪ್ಪನಾಗಿ ಏಳು ಮಲೆಯಲ್ಲಿ ನೆಲೆಗೊಂಡ ಕವಟ್ಲೆನಲ್ಲಿ ಅನೇಕ ಊರುಗಳನ್ನು ಸುತ್ತಿ ಶ್ರೀ ಕ್ಷೇತ್ರಕ್ಕೆ ಬರುವವರೆಗಿನ ಚಿತ್ರಣ, ಬೇಡರ ಕನ್ನಯ್ಯನ ಪಡೆದ ಕವಟ್ಲೆನಲ್ಲಿ ಬೇಟೆಯಾಡುವಾಗ ಮಾದೇಶ್ವರ ತನ್ನ ಕಣ್ಣು ಹೋಯಿತೆಂದು ಹೇಳಿದಾಗ ಬೇಡರ ಕನ್ನಯ್ಯ ತನ್ನ ಕಣ್ಣನ್ನೇ ಕೊಡುವ ಪ್ರಸಂಗಗಳು ಬರುತ್ತವೆ. ಚಮ್ಮಾಳಿಗೆ ಇಳ್ಳೀವು ಪಡುದ ಕವಟ್ಲೆನಲ್ಲಿ ಮಾದೇಶ್ವರರು ಶ್ರವಣನ ಭೇಟಿ ಮಾಡಿ, ಚಮ್ಮಾಳಿಗೆ ಮಾಡುವಂತೆ ಒಪ್ಪಿಕೊಂಡು ಹೋಗುವುದು, ಹರಳಯ್ಯ ನರ ಚಮ್ಮಾಳಿಗೆ ಮಾಡಿದ ಕವಟ್ಲೆನಲ್ಲಿ ತನ್ನ ಹೆಂಡತಿಯ ಚರ್ಮದಿಂದ ಚಮ್ಮಾಳಿಗೆಯನ್ನು ಮಾಡಿ ಮಾದೇಶ್ವರರಿಗೆ ನೀಡುವುದು, ಕಲ್ಯಾಣದಲ್ಲಿ ಚಮ್ಮಾಳ್ಗೆ ಮಾರಿದ ಕವಟ್ಲೆನಲ್ಲಿ ಬಿಜ್ಜಳ ಹರಳಯ್ಯ ಮಾಡಿದ ಚಮ್ಮಾಳಿಗೆಯನ್ನು ಮೆಟ್ಟಿ ಪಡುವ ವೇದನೆ, ಶ್ರವಣ ದೊರೆಯ ಸಂಹಾರದ ಕವಟ್ಲೆನಲ್ಲಿ ಶ್ರವಣ ಚಮ್ಮಾಳಿಗೆಯನ್ನು ಮೆಟ್ಟಿ ಭಸ್ಮವಾಗುವುದು, ಇಕ್ಕೇರಿದೇವಮ್ಮನ ಮನೆಗೆ ಭಿಕ್ಷೆಗೆ ಹೋದ ಕವಟ್ಲೆನಲ್ಲಿ ದೇವಮ್ಮನನ್ನು ನಾಶಮಾಡಿದುದು ಇವೆಲ್ಲಾ ಮೊದಲನೇ ಸಂಪುಟಗಳಲ್ಲಿ ಬರುವ ಕಥೆಗಳು.

ಮಾದೇಶ್ವರ ಕಾವ್ಯದ ಎರಡನೆಯ ಸಂಪುಟವು- ಮಂಗಳಾರ್ತಿ ಮಾದೇವನಿಗೆ ಎಂಬ ವಿಭಾಗದಿಂದ ಆರಂಭವಾಗುತ್ತದೆ. ಇದರಲ್ಲಿ ಮಾದೇಶ್ವರರ ಬಗೆಗೆ ಕೆಲವು ಬಿಡಿ ಪದ್ಯಗಳ ಸಂಗ್ರಹವಿದೆ. ಇದರಲ್ಲಿ ಕಿಲಿಲಿಯೋ ಪದಗಳು, ವಾಲುಗೆ ಪದಗಳು, ನೆನೆವಾರ್ತೆಗಳು, ಮಂಗಳಾರ್ತಿ ಪದಗಳು ಸಮಾವೇಶಗೊಂಡಿವೆ. ಆಲಂಬಾಡಿ ಜುಂಜೇಗೌಡನ ಸಾಲಿನಲ್ಲಿ ಕಲ್ಲುಗಿಡಿ ಕಟ್ಟಲು ಒಪ್ಪಿಕೊಂಡ ಕವಟ್ಲು, ಗುಡಿ ಕಟ್ಟಿಸಿದಯ್ಯನ ಕವಟ್ಲು, ಬೇಡರ ಕನ್ನಯ್ಯ ಬ್ರಾಹ್ಮಣ ಪೂಜಾರಿ ಕವಟ್ಲು, ಇವುಗಳಲ್ಲಿ ಜುಂಜೇಗೌಡ ಮಾದೇಶ್ವರನ ಒಕ್ಕಲಾದುದು ಹೇಗೆ ಎಂಬುದರ ಕಥೆಗಳಿವೆ. ಸಂಕಮ್ಮನ ಸಾಲಿನಲ್ಲಿ ಸಂಕಮ್ಮ ನೀಲಯ್ಯರ ಮದುವೆ, ದಟ್ಟದರಣೆ ಹುಟ್ಟು ಬಂಜೆಯ ಚಿತ್ರಣ, ಕುಲದವರು ಬ್ಯಾಟೆಗೆ ಹೊರಟದ್ದು, ಸಂಕಮ್ಮ ಬಲಗೈ ಭಾಷೆ ಕೊಟ್ಟದ್ದು, ಸಂಕಮ್ಮನ ಕಣ್ಣೀರು ಏಳು ಮಲೆಗೆ ಅರುವಾದದ್ದು, ಸಂಕಮ್ಮನ ಸೆರೆ ತಪ್ಪಿಸಿದುದು, ಕಂದನ ಭಾಗ್ಯ ಕರುಣಿಸಿದುದು, ಸಂಕಮ್ಮನ ಸತ್ಯಪರೀಕ್ಷೆ, ಕಾರಯ್ಯ ಬಿಲ್ಲಯ್ಯ ಹುಟ್ಟಿದ್ದು, ಮಾದೇವನಿಗೆ ಮಕ್ಕಳ ಭಿಕ್ಷೆ ಕೊಟ್ಟು, ಮಕ್ಕಳನ್ನು ಪರೀಕ್ಷಿಸಿದುದು ಬಂಜೆತನ ಅನುಭವಿಸಿ ಮಾದೇಶ್ವರನ ಕರುಣೆಯಿಂದ ಬಿಲ್ಲಯ್ಯ ಕಾರಯ್ಯರನ್ನು ಪಡೆಯುವವರೆಗಿನ ಚಿತ್ರಣವಿದೆ. ದುಂಡಮ್ಮನ ಸಾಲಿನಲ್ಲಿ ಕೊಂಗರಸರನ್ನು ಕಲ್ಮಾಡಿ ದುಂಡಮ್ಮನನ್ನು ಹೇಗೆ ಮಾದೇಶ್ವರರು ರಕ್ಷಿಸಿದರೆಂಬುದಿದೆ. ಬೇವಿನ ಹಟ್ಟಿ ಕಾಳಮ್ಮನ ಸಾಲಿನಲ್ಲಿ ಮಾದಪ್ಪ ಬೇವುನಟ್ಟಿಗೆ ಹೊರಟದ್ದು, ಬೇವಿನ ಕಾಳಿ ದರಬಾರು, ದ್ಯಾವಾಜಮ್ಮನ ಭಕ್ತಿ, ಕಾಳಮ್ಮನ ಹಟಮಾರಿತನ, ಸತ್ಯಶರಣೆ ದೇವಾಜಮ್ಮನ ಪ್ರಕರಣ, ಬೇವಿನ ಕಾಳಿ ಧೂಳಿ

ಪಟವಾದುದು, ದೇವಾಜಮ್ಮನನ್ನು ಮಾದೇಶ್ವರ ಉದ್ಧಾರ ಮಾಡಿದ್ದು ಇವುಗಳನ್ನೊಳಗೊಂಡಿವೆ. ಸರಗೂರಯ್ಯರ ಸಾಲಿನಲ್ಲಿ ಭೂಮಿ ತೂಕದ ಮೂಗುದ್ಯಾವರು, ಗೌರಮ್ಮ ಒಕ್ಕಲಾಗಲು ಒಪ್ಪಿದುದು, ಶನಿವಾರ ಲಗ್ನಕ್ಕೆ ವಿಘ್ನ ತಂದದ್ದು, ಸರಗೂರಪ್ಪನ ಒಗ್ಗಾನ, ಮೂಗಪ್ಪ ಮಾದಪ್ಪನ ಒಕ್ಕಲಾಗಲು ಒಪ್ಪಿಸಿದ್ದು, ಮೂಗಯ್ಯನಿಂದ ಮಾದೇಶ್ವರರು ಎಣ್ಣೆ ಮಜ್ಜನವನ್ನು ಮಾಡಿಸಿಕೊಂಡುದುದು ಈ ಸಾಲಿನಲ್ಲಿ ಸೇರಿದೆ. ಪಂಚಲಿಂಗ ಮಾದಪ್ಪನ ಸಾಲಿನಲ್ಲಿ ಹಲಗೇಗೌಡನ ಮಕ್ಕಳ ಕವಟ್ಲು, ಭೀಮನ ಕೊಲ್ಲಿಯ ಹಲಗೇಗೌಡರನ್ನು ಮಾದೇಶ್ವರ ಪರೀಕ್ಷೆ ಮಾಡಿದುದು ಇದೆ. ಕಾರಯ್ಯ ಬಿಲ್ಲಯ್ಯರ ಸಾಲಿನಲ್ಲಿ ಸಿಸು ಮಕ್ಕಳ ಸತ್ವ ಪರೀಕ್ಷೆ, ಕಾರಯ್ಯ ಬಿಲ್ಲಯ್ಯರಿಗೆ ದೀಕ್ಷೆ ಮಾಡಿದ ವಿಚಾರಗಳಿವೆ. ನಾಗಮಲೆಯಲ್ಲಿ ನೆಲೆಗೊಂಡ ಸಾಲಿನಲ್ಲಿ ಮಾಲಂಗಿ ಮಡುಕಮ್ಮನನ್ನು ಮಲೆಗೆ ಬರಮಾಡಿಕೊಂಡಿದುದು, ಅಲ್ಲೋಡು ಪರ್ಸೆಗೆ ಶಾಪಕೊಟ್ಟದ್ದು, ನಾಗಮಲೆಯಲ್ಲಿ ನೆಲೆಗೊಂಡದ್ದು, ಕಾರಯ್ಯ ಬಿಲ್ಲಯ್ಯ ಕೂಗೋ ಕವಟ್ಲುಗಳನ್ನು ಒಳಗೊಂಡಿದೆ. ದುರ್ಗದ ಮಲ್ಲಮ್ಮನ ಸಾಲಿನಲ್ಲಿ, ಅತ್ತೆ ತಾಬುನ ಸೊಸೆ ಮಲ್ಲಮ್ಮನ ಕವಟ್ಲು, ಗಣ್ತೆ ತಿಂಗ ಬರಲೊಪ್ಪಿದ್ದು, ಮೂಕಳ್ಳಿ ಮಾರಮ್ಮನ ಸೊಸೆಮಲ್ಲಮ್ಮನಾಗಿ ಬಂದದ್ದು, ಶರಣೆ ಸೊಸೆಮುದ್ದಿ ಕವಟ್ಲು, ಕಲಿ ಸಾರಿದ ಕವಟ್ಲು, ಪರಂಜ್ಯೋತಿ ಕವಟ್ಲುಗಳನ್ನು ಒಳಗೊಂಡಿವೆ. ಇದಲ್ಲದೆ ಅನುಬಂಧದಲ್ಲಿ ತಮಿಳು ಗೀತೆಗಳು, ಟಿಪ್ಪಣಿಗಳು, ಕೆಲವು ಮುಖ್ಯ ಸ್ಥಳಗಳ ಪರಿಚಯ, ಅರ್ಥಕೋಶ, ಮಲೆಯ ಮಾದೇಶ್ವರ ಮಹಾಕಾವ್ಯವನ್ನು ಕುರಿತು ಬೇರೆಯವರ ಅಭಿಪ್ರಾಯಗಳು ಮೂಡಿಬಂದಿದೆ. ಪ್ರಥಮ ಬಾರಿಗೆ ಮಾದೇಶ್ವರ ಮಹಾಕಾವ್ಯವಾಗಿ ಹೊರಬಂದಿದೆ.

ಪಿ.ಕೆ. ರಾಜಶೇಖರ ಅವರು ಸಂಗ್ರಹಿಸಿರುವ 'ಮಾದೇಶ್ವರ ಕಾವ್ಯ'ದಲ್ಲಿ ಸಾಮಾನ್ಯವಾಗಿ ಕಂಸಾಳೆಯವರು ಹಾಡುವ ಏಳು ಸಾಲುಗಳ ಜೊತೆಗೆ ಹಲವಾರು ಬೇರೆ ಕಥೆಗಳನ್ನು ತಿಣುಕಿ ಹಾಡಿದವುಗಳನ್ನು ಸೇರಿಸಿದಂತೆ ಕಾಣುತ್ತದೆ. ಆದಿಶಕ್ತಿಯ ಕಥೆ, ಜೀವಕೋಟಿಯ ಸೃಷ್ಟಿ, ಬಂಗಾರ ಗಿರಿ ಕವಟ್ಲು, ಹಿಡಿಂಬಿ ಕವಟ್ಲು, ಬಸವಣ್ಣ ನೀಲಮ್ಮನವರ ದೃಢ ಪರೀಕ್ಷೆ, ಇವುಗಳನ್ನು ನೋಡಿದಾಗ, ಈ ಕಂಸಾಳೆಯ ಕಲಾವಿದರಿಗೆ ಪೌರಾಣಿಕ ಶಿಷ್ಟ ಸಾಹಿತ್ಯವೇ ಸ್ಫೂರ್ತಿ ನೀಡಿ ಅದಕ್ಕೆ ಮಾದೇಶ್ವರನ ಕಥೆಯನ್ನು ಕೊಂಡಿ ಹಾಕಿರುವಂತೆ ಕಾಣುತ್ತದೆ. ಎಡಗೈ ಬಲಗೈ ಸೃಷ್ಟಿ, ನೂರೊಂದು ಲಿಂಗಯ್ಯನಪುರದ ಲಿಂಗಯ್ಯನ ಕವಟ್ಲು, ದುಂಡಮ್ಮನ ಕಥೆಗಳು, ಬೇಡರ ಕನ್ನಯ್ಯನ ಪ್ರಸಂಗ ಇವುಗಳನ್ನು ಹೇಳುತ್ತೀರಾ ಎಂದಾಗ ಇಲ್ಲ ಎಂಬ ಉತ್ತರವೇ ನೂರಾರು ಕಲಾವಿದರುಗಳ ಬಾಯಿಂದ ಬಂದುವು. ಈ ಸಂಗ್ರಹದಲ್ಲಿ ಬಂದಿರುವ ಈ ಕಥೆಗಳನ್ನು ನೋಡಿದರೆ ಹಣದಾಸೆಗೆ ಕೆಲವು ಪೌರಾಣಿಕ, ಕಾಲ್ಪನಿಕ ಕಥೆಗಳನ್ನು ಕಲಾವಿದರು ಸೇರಿಸಿಕೊಂಡು ಹಾಡಿರಬೇಕೆನ್ನಿಸುತ್ತದೆ. ಅಥವಾ ಇವುಗಳ ಸೃಷ್ಟಿಯ ಹಿನ್ನೆಲೆಯಲ್ಲಿ

ಸಂಪಾದಕರ ಕಲ್ಪನೆಯೇ ಕೆಲಸ ಮಾಡಿರಬಹುದು. ದುರ್ಗದ ಮಲ್ಲಮ್ಮನ ಕಥೆ ಕೆಲವು ಬದಲಾವಣೆಗಳೊಡನೆ ಇಕ್ಕೇರಿ ದೇವಮ್ಮನ ಕಥೆಯ ಸಾಮ್ಯವನ್ನೇ ಹೊಂದಿದೆ. ಕೆಂಡಗಣ್ಣ ಸ್ವಾಮಿಯ ಕವಟ್ಟು, ಸೂಳೆ ಮಲ್ಲಮ್ಮ , ಕಲಿಸಾರಿದ ಕವಟ್ಟು, ಪರಂಜ್ಯೋತಿ ಕವಟ್ಟು ಇವುಗಳನ್ನೆಲ್ಲಾ ನೋಡುತ್ತಾ ಹೋದಾಗ 'ಮಾದೇಶ್ವರ ಕಾವ್ಯವು' ಫಿನ್‌ಲೆಂಡಿನ 'ಕಲೇವಾಲ' ಕಾವ್ಯಕ್ಕಿಂತ ದೊಡ್ಡದಾಗಬೇಕೆಂದು ಸಂಗ್ರಹಿಸಿ ಹೊರತಂದಿರುವ ಎಂಬ ಹುರುಪಿನಿಂದ ಸೇರಿಸಿದ ಅಸಂಬದ್ಧ ಭಾಗಗಳು ಎನ್ನಿಸದೇ ಇರದು. ಏಳು ಸಾಲುಗಳನ್ನು ಏಳು ರಾತ್ರಿ ಕಥೆಯನ್ನು ಹಿಗ್ಗಿಸಿ ಹಾಡಿದರೂ ಐದು ನೂರು ಪುಟಗಳಷ್ಟು ಸಾಹಿತ್ಯವಾಗಬಹುದು. ಇಲ್ಲಿ ವಚನವನ್ನೂ ಪದ್ಯದಂತೆಯೇ ಬರೆದುಕೊಂಡು ಹೋಗಿರುವುದರಿಂದ ಕಾವ್ಯದ ಗಾತ್ರ ಹಿರಿದಾಗಿ ೧೮೦೦ಪುಟಗಳಷ್ಟು ವ್ಯಾಪಿಸಿದೆ.

**ಕಾವ್ಯದ ಗಾತ್ರ**

ಮಾದೇಶ್ವರ ಕಾವ್ಯ ಒಂದು ದಿನದಲ್ಲಿ ಸೃಷ್ಟಿಯಾದುದಲ್ಲ. ಅದು ಸಮಷ್ಟಿಯ ಸೃಷ್ಟಿ. ಈ ಕಾವ್ಯ ಕಾಲಕಾಲಕ್ಕೆ ಬದಲಾವಣೆಗಳಾಗುತ್ತಾ ಬೆಳೆಯುತ್ತಾ ವಿಸ್ತಾರವಾಯಿತು. ಈ ಕಾವ್ಯ ಇಂದು ಹಾಡುವವರ ಸಂಪೂರ್ಣ ಸೃಷ್ಟಿಯೂ ಅಲ್ಲ, ಇದು ಪರಂಪರೆಯಿಂದ ಬಂದುದು. ಮಾದೇಶ್ವರರು ಐತಿಹಾಸಿಕ ವ್ಯಕ್ತಿಯಾದುದರಿಂದ ಈ ಕಾವ್ಯದಲ್ಲಿ ಪ್ರಾಚೀನತೆಯ ಧ್ವನಿ ಅತಿಯಾಗಿ ಕಾಣಿಸುತ್ತದೆ. ಕ್ರಮೇಣ ಮಾದೇಶ್ವರರು ಪುರಾಣ ಪುರುಷರಾಗಿದ್ದಾರೆ.

ಕರ್ನಾಟಕದ ವ್ಯಾಪ್ತಿಗೆ ಒಳಪಡುವ ಕಾವ್ಯಗಳಲ್ಲಿ ಅತ್ಯಂತ ಪ್ರಮುಖವಾದ ಅವಳೀ ಕಾವ್ಯಗಳೆಂದರೆ ಮಲೆಯ ಮಾದೇಶ್ವರ ಕಾವ್ಯ ಮತ್ತು ಮಂಟೇಸ್ವಾಮಿ ಕಾವ್ಯ. ಇವುಗಳನ್ನು ರಾಷ್ಟ್ರೀಯ ಮಹಾಕಾವ್ಯಗಳ ಸಾಲಿನಲ್ಲಿಡಲು ಸಾಧ್ಯವಿಲ್ಲದಿದ್ದರೂ ಸ್ಥಳೀಯ ಜನಪದ ಮಹಾಕಾವ್ಯಗಳೆಂದು ಒಪ್ಪಬಹುದು. ಹರಿಹರನ ಗಿರಿಜಾಕಲ್ಯಾಣವನ್ನೇ ಪಂಡಿತರು ಮಹಾಕಾವ್ಯದ ಸಾಲಿಗೆ ಸೇರಿಸಲಿಲ್ಲ ಪಂಡಿತರು. ಮಾದೇಶ್ವರ ಕಾವ್ಯ ಮಹಾಕಾವ್ಯವೇ? ಎಂದು ಮೂಗು ಮುರಿಯುವುದೂ ಉಂಟು. ಪಾಮರರ, ಅನಕ್ಷರಸ್ಥರ ಕಾವ್ಯ ಮಹಾಕಾವ್ಯವಾಗಲಾರದು ಎಂದು ವಾದಿಸುವವರಿಗೇನೂ ಕಡಿಮೆ ಇಲ್ಲ. ಮಾದೇಶ್ವರ ಕಾವ್ಯ ಮಂಟೇಲಿಂಗಸ್ವಾಮಿ ಕಾವ್ಯಕ್ಕಿಂತಲೂ ಹಿರಿದು. "ಮಂಟೇಸ್ವಾಮಿ ಕಾವ್ಯ" ಏಕ ಸೂತ್ರಕ್ಕೆ ಒಳಪಡುವ ಕಾವ್ಯ. "ಅದು ನಿರ್ದಿಷ್ಟ ನೆಲೆಯಿಂದ ಹೊರಟು ತನ್ನತನದಲ್ಲಿ ಹರಿದು ಅಂತ್ಯವನ್ನು ಸಾಧಿಸಿಕೊಳ್ಳುವ ವಿಶಿಷ್ಟ ಕಾವ್ಯವಾದರೆ ಮಾದೇಶ್ವರ ಕಾವ್ಯ ಹಲವು ದಿಕ್ಕುಗಳಲ್ಲಿ ಹರಿಯುವ ವಿಸ್ತಾರವಾದ ಕಾವ್ಯ".[೮]

ಮಾದೇಶ್ವರ ಕಾವ್ಯದಲ್ಲಿ ಒಂದೊಂದು ಸಾಲೂ ಒಂದೊಂದು ಖಂಡಕಾವ್ಯದ ವ್ಯಾಪ್ತಿಯನ್ನು ಹೊಂದಿದೆ. ಮಾದೇಶ್ವರ ಕಾವ್ಯ ಗಾತ್ರದಲ್ಲಿ ಹೆಚ್ಚು ಕಡಿಮೆ ಫಿನ್‌ಲೆಂಡಿನ

ಕಲೇವಾಲದಷ್ಟೇ ಇದೆ."[5] ಇದನ್ನು ಲಾವಣಿ ಕಾವ್ಯ ಎಂದು ಅಭಿಪ್ರಾಯ ಪಡುವವರು ಕೆಲವರು. ಮಂಟೇಲಿಂಗಸ್ವಾಮಿ ಕಾವ್ಯ ವಿಸ್ತಾರ ವೈವಿಧ್ಯತೆಗಳಿಂದ ಕೂಡಿಲ್ಲ. ಆದರೆ ಮಾದೇಶ್ವರ ಕಾವ್ಯ ಭಿನ್ನ ಭಿನ್ನ ಪಾತ್ರಗಳಿಂದಲೂ, ವೈವಿಧ್ಯತೆಗಳಿಂದಲೂ ವಿಸ್ತಾರ ಪಡೆದು ಮಹಾಕಾವ್ಯದ ಗುಣಗಳನ್ನು ಪಡೆದುಕೊಳ್ಳುತ್ತದೆ.

ಕಂಸಾಳೆಯವರು ಏಳು ಸಾಲುಗಳನ್ನೂ, ಕೆಲವರು ಕೆಲವು ಸಾಲುಗಳನ್ನು ಹಾಡುತ್ತಾರೆ. ಈ ಏಳು ಸಾಲುಗಳಲ್ಲಿ ಕೆಲವು ಸುದೀರ್ಘ, ಕೆಲವು ಸಂಕ್ಷಿಪ್ತ. ಮೂಲ ಕಥೆಗಳು ಒಂದೇ ಆದರೂ ಅವು ಬೇರೆ ಬೇರೆ ಕಲಾವಿದರ ಕೈಗೆ ಸಿಕ್ಕಿ ಕೆಲವು ಹೊಸ ಹೊಸ ಮಾರ್ಪಾಟುಗಳಾಗಿರುವುದನ್ನು ಗಮನಿಸಬಹುದು. ಆದ್ದರಿಂದ ಕಥೆಗಳಲ್ಲಿ ಅಲ್ಪ ಸ್ವಲ್ಪ ವೈವಿಧ್ಯತೆ ಮೂಡಿದೆ. ಈ ಹಾಡುಗಾರಿಕೆ, ಕಲಾವಿದನ ಪ್ರತಿಭೆ, ಕಂಠ ಚೈತನ್ಯ, ಸಾಮರ್ಥ್ಯಗಳ ಮೇಲೆ ಅವಲಂಬಿಸಿದೆ. ಮಾದೇಶ್ವರ ಕಾವ್ಯದಲ್ಲಿ ಹುಟ್ಟಿ ಬೆಳೆದ ಸಾಲು, ಸಂಕಮ್ಮ, ಬೇವಿನಕಾಳಿ, ಶ್ರವಣನ ಸಾಲುಗಳು ವಿಸ್ತಾರವಾಗಿದ್ದು ಇಕ್ಕೇರಿದೇವಮ್ಮ, ಜುಂಜೇಗೌಡ, ಸರಗೂರಯ್ಯನ ಸಾಲುಗಳು ಸ್ವಲ್ಪ ಚಿಕ್ಕದಾಗಿದೆ.

ಕೆಲವು ಜನಪದ ಕಾವ್ಯಗಳಲ್ಲಿ ಒಬ್ಬ ದೇವನ ಸುತ್ತ ಹೆಣೆದ ಕಥೆ ಇರುತ್ತದೆ. ಆದರೆ ಮಾದೇಶ್ವರ ಕಾವ್ಯದಲ್ಲಿ ಮಾದೇಶ್ವರನ ಸುತ್ತ ಹಲವಾರು ಕಥೆಗಳು ಹೆಣೆದಿರುವುದನ್ನು ಕಾಣಬಹುದು. ಈ ಕಾವ್ಯದ ಕಥಾನಾಯಕ ಮಾದೇಶ್ವರನಾದರೂ ಮೋಹಕವಾಗಿ ಬರುವ ಪಾತ್ರಗಳು ತಮ್ಮದೇ ಆದ ವ್ಯಕ್ತಿತ್ವವನ್ನು ಹೊಂದಿವೆ. ಮಾದೇಶ್ವರ ಕಾವ್ಯ ಹುಟ್ಟಿಬೆಳೆದ ಸಾಲಿನಿಂದ ಆರಂಭವಾಗಿ ಶ್ರೀಕ್ಷೇತ್ರದಲ್ಲಿ ಐಕ್ಯವಾಗುವುದರ ಮೂಲಕ ಮುಕ್ತಾಯವಾಗುತ್ತದೆ.

ಮಾದೇಶ್ವರ ಮಹಾಪುರುಷನಾಗಿ ಹುಟ್ಟಿ ಮಾನವತ್ವದಿಂದ ದೈವತ್ವವನ್ನು ಪಡೆಯುತ್ತಾನೆ ಅಥವಾ ಅನಿರೀಕ್ಷಿತವಾಗಿ ಉದ್ಭವವಾದ ಶಕ್ತಿಯಾಗಿ ಬರುತ್ತಾನೆ.

"ಹಾಡುಗಳನ್ನೇ ಆಗಲೀ, ಕಥೆಯನ್ನೇ ಆಗಲಿ ಬೇಗ ಮುಗಿಸುವುದಂತೂ ಸಾಧ್ಯವಿಲ್ಲ. ಅಕ್ಕಪಕ್ಕದ ಊರವರು ಊಟ ಮುಗಿಸಿ ಕುಳಿತರೆ ಬೆಳಗಾಗುವವರೆಗೂ ಕೇಳಬೇಕು. ಆಗಲೇ ಅದಕ್ಕೊಂದು ಮೆರುಗು. ಆ ದೃಷ್ಟಿಯಿಂದ ಕಥೆಗಳು ಹಿಗ್ಗಿ ಹಿರಿದಾದವು. ಹಳ್ಳಿಗರ ದೃಷ್ಟಿಯಲ್ಲಿ ಇದು ಪುಣ್ಯ ಕಥೆ. ಆದುದರಿಂದಲೇ ಇದು ಕಾಲಕ್ಷೇಪದಂತೆ ಉಳಿದುಕೊಂಡು ಬಂದಿದೆ. ರಾತ್ರೋ ರಾತ್ರಿ ಹಾಡುವಾಗ ಬೇಜಾರಾಗದಿರಲೆಂದು ಮಧ್ಯ ಮಧ್ಯೆ ಉಪಕಥೆಗಳನ್ನು ಬೆರಸಿ ಕಥಾಕಾಲಕ್ಷೇಪದ ಕಾಲವನ್ನು ಮತ್ತಷ್ಟು ವಿಸ್ತರಿಸುತ್ತಾರೆ.

"ಕಾವ್ಯ ಸ್ವರೂಪದ ದೃಷ್ಟಿಯಿಂದಲೂ, ಪ್ರಾದೇಶಿಕ ಭಾಷಾ ದೃಷ್ಟಿಯಿಂದಲೂ ವಿಸ್ತಾರದ ದೃಷ್ಟಿಯಿಂದಲೂ, ವೈವಿಧ್ಯದ ಸೊಗಸಿನಿಂದಲೂ ಮಾದೇಶ್ವರ ಕಾವ್ಯ ನಮ್ಮ ಜನಪದ ಕಾವ್ಯಗಳ ಒಂದು ಅನರ್ಘ್ಯ ರತ್ನ ಎಂಬುದರಲ್ಲಿ ಸಂದೇಹವೇ ಇಲ್ಲ."[11]

ಪಂಡಿತ ಕವಿ ಸ್ಫೂರ್ತಿ ಬಂದಾಗ ಶಾಸ್ತ್ರೀಯ ದೃಷ್ಟಿಯಲ್ಲಿ ಮಹಾಕಾವ್ಯವನ್ನು ರಚಿಸುವಂತೆ ಜನಪದ ಕವಿಗಳು ಸ್ಫೂರ್ತಿಬಂದಾಗ ಮಾದೇಶ್ವರರ ಬಗೆಗೆ ಲೀಲಾಜಾಲವಾಗಿ ಮಹಾಕಾವ್ಯವನ್ನೇ ಇಡೀ ರಾತ್ರಿ ಹಾಡಿ ಮುಗಿಸುವ ಜಾಯಮಾನವನ್ನು ಹೊಂದಿರುತ್ತಾರೆ. ಒಂದೇ ಸಾಲನ್ನು ಏಳು ರಾತ್ರಿ ಎಳೆದು ಹಿಗ್ಗಿಸಿ ಹಾಡುವ ಕಲೆಯನ್ನು ಇವರು ಕರತಲಾಮಲಕವಾಗಿ ಮಾಡಿಕೊಂಡಿದ್ದಾರೆ. ಪಾಂಡಿತ್ಯಕ್ಕಿಂತ ಕಂಸಾಳೆಯವರ ವಾಕ್ ಪ್ರತಿಭೆ ಒಂದು ಕೈಮೇಲು ಎಂಬುದಕ್ಕೆ ಸಾಕ್ಷಿಯಾಗಿದೆ.

**ಕಥಾ ತಂತ್ರ:**

"ಮಾದೇಶ್ವರ ಕಾವ್ಯ" ಕಥೆಯ ನಿರೂಪಣೆ ಕೆಲವೊಮ್ಮೆ ನೇರ, ಸರಳ ಮತ್ತೆ ಕೆಲವು ಕಡೆ ವಿಶಿಷ್ಟ ಪಾತ್ರಗಳಿಂದ ಜನರನ್ನು ರಂಜಿಸುತ್ತದೆ. ಕಥಾ ತಂತ್ರ ಕೆಲವೊಮ್ಮೆ ಕುತೂಹಲ, ಮತ್ತೆ ಕೆಲವೊಮ್ಮೆ ಆಸಕ್ತಿಗಳನ್ನು ಕೆರಳಿಸುವುದು. ಕಂಸಾಳೆಯವರು ಮಾದೇಶ್ವರರು ಹೇಗೆ ಹುಟ್ಟಿದರು ಎಂಬ "ಹುಟ್ಟು ಬೆಳೆದ ಸಾಲು" ಆರಂಭಿಸಿ ಮಾದೇಶ್ವರರ ಹುಟ್ಟು ಬಾಲ್ಯ, ಮಠ ಮಾನ್ಯಗಳಲ್ಲಿ ಹೇಗೆ ಮೆರೆದರು, ದುಷ್ಟರನ್ನು ಸಂಹಾರ ಮಾಡಿ ಶಿಷ್ಟರನ್ನು ಹೇಗೆ ರಕ್ಷಿಸಿ ಮಹಾದೇವರಾದರೆಂದು ಹೇಳುವ ವೈಖರಿ ಬಲು ಸೊಗಸು. ಮತ್ತೆ ಕೆಲವರು ಮಾದೇಶ್ವರರು ಐಕ್ಯವಾದ ಕ್ಷೇತ್ರದಿಂದ ಹತ್ತು ದಿಕ್ಕುಗಳು, ಹತ್ತು ಪ್ರದೇಶಗಳಲ್ಲಿ ಹೇಗೆ ಮೆರೆದು ಮಹಾನ್ವಿತರಾದರು ಎಂದು ಚಿತ್ರಿಸುವುದು ಮತ್ತೊಂದು ವಿಧಾನ. ತಾವು ಕೇಳಿ ತಿಳಿದ ಪುರಾಣ ಪುಣ್ಯಕಥೆಗಳನ್ನು ಕಲಾತ್ಮಕವಾಗಿ ಮಧ್ಯೆ ಮಧ್ಯೆ ಬೆರಸಿ ಜನರಲ್ಲಿ ಭಕ್ತಿಯ ವಾತಾವರಣವನ್ನು ಸೃಷ್ಟಿಸಲು ಪ್ರಯತ್ನಿಸುತ್ತಾರೆ.

ಮಾದೇಶ್ವರರ ಗುಡ್ಡರಲ್ಲಿ ಪ್ರಚಲಿತವಾದ ಕಂಸಾಳೆ ಕಥೆಗಳು ಮೂಲತಃ ಒಂದೇ ಆಗಿದ್ದರೂ ಪ್ರಾದೇಶಿಕ ಪ್ರಾತಿನಿಧ್ಯದ ಆಧಾರದ ಮೇಲೆ ಕೆಲವು ಮಾರ್ಪಾಟುಗಳಾಗಿರುವುದನ್ನು ಗುರುತಿಸಬಹುದು. ಮೈಸೂರು, ಮಂಡ್ಯ, ಬೆಂಗಳೂರು, ಜಿಲ್ಲೆಗಳ ಕೆಲವು ಗುಡ್ಡರುಗಳಿಂದ ಸಂಗ್ರಹಿಸಿದ ಕಥೆಗಳನ್ನು ಅವಲೋಕಿಸಿ, ಸಮೀಕ್ಷೆ ನಡೆಸಿದ ಮೇಲೆ ಕಾವ್ಯದ ಗುಣಲಕ್ಷಣಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಪ್ರಾಚೀನವಾದುದು ಯಾವುದು ಎಂಬುದರ ಬಗ್ಗೆ ಹೇಳುವುದು ಬಹಳ ಕಷ್ಟವಾಗಿದೆ. ಇದನ್ನು ಆರಿಸುವುದು ಜನಪದ ಮೂಲವನ್ನು

ತೋರಿಸುವಷ್ಟೇ ಕಷ್ಟ ಸಾಧ್ಯವಾದುದು. ಕಂಸಾಳೆ ಕಾವ್ಯದ ಮೂಲ ಆದನ್ನು ರಚಿಸಿ ಹಾಡಿದವರು. ಈ ಬಗೆಗೆ ವಿಷಯಗಳು ಇನ್ನೂ ಕತ್ತಲಲ್ಲೇ ಇದೆ. ಕಂಸಾಳೆಯವರು ಒಂದು ಊರಿನಿಂದ ಮತ್ತೊಂದು ಊರಿಗೆ, ಒಂದು ತಾಲ್ಲೂಕಿನಿಂದ ಮತ್ತೊಂದು ತಾಲ್ಲೂಕಿಗೆ ಹೋಗಿರುವುದನ್ನು ಕಾಣಬಹುದು. ಹೊಸದಾಗಿ ಕಲಿಯುವವರು ಕಲಾವಿದರನ್ನು ತಮ್ಮ ಊರಿಗೆ ಕರೆದೊಯ್ದು ಅಥವಾ ಅವರಲ್ಲಿಗೇ ಹೋಗಿ ಕಲಿತಿದ್ದಾರೆ. ಅದರ ಜೊತೆಗೆ ಬೇರೆ ಕಲಾವಿದರು ಹಾಡುವ ಕಥೆಗಳನ್ನು ಕೇಳಿ ಕೆಲವು ಪುಸ್ತಕಗಳ ಸಾಹಿತ್ಯವನ್ನು ತಿಳಿದು, ಹಲವಾರು ಮಾರ್ಪಾಟುಗಳನ್ನು ಮಾಡಿಕೊಂಡಿದ್ದಾರೆ. ತಮ್ಮದೇ ಆದ ಪ್ರಾದೇಶಿಕತೆಯ ಸೊಗಡು, ಗಾದೆಗಳು, ಉಪಕಥೆಗಳು ಮುಂತಾದವುಗಳನ್ನು ಬೆರಸಿ, ಹೊಸತನ ತುಂಬಿ ಜನರ ಮನ ರಂಜಿಸಲು ಪ್ರಯತ್ನಿಸುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ ಈ ಕಾವ್ಯದ ಸೃಷ್ಟಿಕರ್ತರು ಹಲವಾರು ರೀತಿಯ ಜನಪದ ಕವಿಗಳು. ಕಥೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಒಂದು ಬಾಯಿಂದ ಮತ್ತೊಂದು ಬಾಯಿಗೆ ಬರುವಾಗ ಹಲವಾರು ವೈವಿಧ್ಯ ಮಾರ್ಪಾಟುಗಳಾಗುವುದನ್ನು ಗಮನಿಸಬಹುದು. ಮೂಲ ಗುರುಗಳು ಹೇಳಿದ ಶುದ್ಧ ಜನಪದ ಸಾಹಿತ್ಯ ಕಾಲಕ್ಕೆ ತಕ್ಕಂತೆ ಅನಿವಾರ್ಯವಾಗಿ ಬದಲಾಗುತ್ತಾ ಬಂದಿದೆ.

ಮೂಲ ಕಂಸಾಳೆ ಕಥಾ ಸಂಪ್ರದಾಯ ಪ್ರಕಟವಾಗಿದ್ದರೆ ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಯಾವುದು ಪ್ರಾಚೀನವಾದುದು ಎಂದು ಕೇಳುವ ಪ್ರಶ್ನೆಯೇ ಬರುತ್ತಿರಲಿಲ್ಲ. ಮಾದೇಶ್ವರ ಕಾವ್ಯದ ಕೆಲವು ಸಾಲುಗಳನ್ನು ಕೆಲವರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಆದರೆ ೧೯೭೦ರಲ್ಲಿ ಪಿ.ಕೆ. ರಾಜಶೇಖರ ಅವರು ಸಂಪೂರ್ಣ ಕಾವ್ಯವನ್ನು ಪ್ರಕಟಿಸಿದ್ದಾರೆ. ಮಾದೇಶ್ವರ ಕಾವ್ಯ ಜಾನಪದ ಪರಂಪರೆ ಆಗಿರುವುದರಿಂದ ಇದರಲ್ಲಿ ಕಲಾವಿದರು ಸನ್ನಿವೇಶಕ್ಕೆ ತಕ್ಕಂತೆ ಬದಲು ಮಾಡಿಕೊಂಡು ಹಾಡುವುದರಿಂದ ಮೂಲವನ್ನು ಗ್ರಹಿಸುವುದು ತೊಡಕಾಗಿದೆ. ಈಗಾಗಲೇ ಪ್ರಕಟವಾಗಿರುವ ಕಾವ್ಯಗಳ ಜೊತೆಗೆ ಕೆಲವು ಕಂಸಾಳೆಯವರಿಂದ ಖಚಿತ ರೂಪಕ್ಕೆ ಬಂದಿರುವ ಕಥೆಗಳನ್ನು ಸ್ವಲ್ಪ ಧ್ವನಿ ಮುದ್ರಿಸಿಕೊಂಡು, ಬೇರೆ ಬೇರೆ ತಾಲ್ಲೂಕಿನ, ಜಿಲ್ಲೆಯ ಕಲಾವಿದರ ಕಥಾ ಸಂಪ್ರದಾಯಗಳನ್ನು ವಿವೇಚಿಸಲಾಗಿದೆ.

ಕಂಸಾಳೆ ಕಥಾ ಸಂಪ್ರದಾಯಗಳು ಸಾಮಾನ್ಯವಾಗಿ ದೇವಾದಿ ದೇವತೆಗಳಾದ ಗಣಪತಿ, ಸರಸ್ವತಿ, ಮಾದೇಶ್ವರ ಮೊದಲಾದ ದೇವರ ಸ್ತುತಿಯಿಂದ ಆರಂಭವಾಗುತ್ತದೆ. ಕಂಸಾಳೆ ಕಥಾ ಸಂಪ್ರದಾಯ ಮೂರರಲ್ಲಿ "ಶ್ರೀಮದ್ ರಮಾರಮಣ ಗೋವಿಂದಾ..... ಗೋವಿಂದಾ......." "ಮಹಾ ಪಾರ್ವತೀ ಪತೇ ಹರಹರ ಮಹಾದೇವ ಸಂಭೋ" ಎಂದು ಪ್ರಾರ್ಥಿಸುವುದನ್ನು ನೋಡಿದರೆ "ದೇವನೊಬ್ಬ ನಾಮ ಹಲವು" ಎಂಬ ವಿಶಾಲ ಮನೋಭಾವ ಕಂಸಾಳೆಯವರದು. ಮಾದೇಶ್ವರನಿಗೂ ಅಷ್ಟೇ,

ಜಾತಿಭೇದವಿಲ್ಲ. ಎಲ್ಲರನ್ನೂ ಭಕ್ತರನ್ನಾಗಿ ಸ್ವೀಕರಿಸುತ್ತಾನೆ. ಭಿನ್ನ ಭಿನ್ನ ಪರಂಪರೆಯವರು ಆತನಿಗೆ ಭಕ್ತಿಯನ್ನು ಸಲ್ಲಿಸುತ್ತಾರೆ. ಈಶ್ವರನ ಭಕ್ತರಂತೆಯೇ ವಿಷ್ಣು ಭಕ್ತರೂ ಸಹಾ ಮಾದೇಶ್ವರರನ್ನು ಪೂಜಿಸುತ್ತಾರೆ.

"ಮಲೆಯೋ ಮಾದಪ್ಪ ಬರುವ ಚಂದಾವ।
ಹಾಂ ನೋಡಿ ನಮ್ಮ ಶಿವನಾ॥"

ಎಂದು ಕಂಸಾಳೆಯವರು ಆರಂಭಿಸುವ ಪಲ್ಲವಿಗೆ ಒಂದು ಅರ್ಥವಿದೆ. ಈಶ್ವರ ಪಾರ್ವತಿ ಮಲಗಿದ್ದು ಬೆಳಗಾಗುತ್ತಿದ್ದಂತೆಯೇ ಪಾರ್ವತಿ ಮೊದಲು ಎದ್ದು ಬರಲು, ಮಾದೇಶ್ವರರು ಅಲ್ಲಿಗೆ ಬರುತ್ತಾರೆ. ಮಾದೇಶ್ವರರ ವಿಷಯವನ್ನು ಪಾರ್ವತಿ ಗಂಡನಿಗೆ ತಿಳಿಸುವಾಗ ಈ ಪಲ್ಲವಿಯನ್ನು ಹೇಳಿದಳು. ಅದೇ ಮಾದೇಶ್ವರ ಕಾವ್ಯದ ಪಲ್ಲವಿ ಆಯಿತು ಎಂದು ಬೆಂಗಳೂರಿನ ಕಂಸಾಳೆ ಮಾದಪ್ಪನವರು ಹೇಳಿದ್ದಾರೆ. ಕಥೆಯು ಮಂಗಳದೊಡನೆ ಮುಕ್ತಾಯವಾಗುತ್ತದೆ.

**ಕಂಸಾಳೆ ಕಥಾ ಸಂಪ್ರದಾಯಗಳ ಸಾಮ್ಯ-ವೈಷಮ್ಯಗಳು:**

ಒಂಭತ್ತು ಕಂಸಾಳೆ ಕಥಾ ಸಂಪ್ರದಾಯಗಳನ್ನೂ ಸೂಕ್ಷ್ಮವಾಗಿ ಅವಲೋಕಿಸಿದಾಗ ಅವುಗಳ ಕೆಲವು ಸಾಮ್ಯ-ವೈಷಮ್ಯಗಳನ್ನು ಗುರುತಿಸಬಹುದು. ಕಥೆಗಳ ಹಂದರ ಒಂದೇ ಆದರೂ ಮಾದೇಶ್ವರರು ಹುಟ್ಟಿದ ಊರು, ತಂದೆ-ತಾಯಿ, ದೀಕ್ಷೆ ಮಾಡಿದ ಗುರುಗಳು, ಅವರು ಸುತ್ತಾಡಿದ ಮಠಮಾನ್ಯಗಳ ವಿವರಣೆಗಳಲ್ಲಿ ವ್ಯತ್ಯಾಸಗಳಿರುವುದನ್ನು ಕಾಣಬಹುದು. ಹಾಗೆಯೇ ಶ್ರವಣನ ಊರು, ಆತನ ಹೆಂಡತಿಯರು, ಹರಳಯ್ಯ, ಹರಳಯ್ಯನ ಹೆಂಡತಿ, ಜುಂಜೇಗೌಡ, ಆತನ ಹೆಂಡತಿ ಮಕ್ಕಳು, ಬೇವಿನ ಕಾಳಿಯ ಗಂಡ, ಸೊಸೆಯರು, ಮಕ್ಕಳು, ಮೊಮ್ಮಕ್ಕಳು, ಮೂಗಯ್ಯನ ಹೆಂಡತಿ, ತಂದೆ ತಾಯಿ, ಇಕ್ಕೇರಿ ದೇವಮ್ಮ, ಆಕೆಯ ತಂಗಿ, ಇಕ್ಕೇರಿ ದೇವಮ್ಮನ ಜಾತಿ, ಸಂಕಮ್ಮ, ನೀಲಯ್ಯನ ಮಕ್ಕಳು, ನೀಲಯ್ಯ ಸಂಕಮ್ಮನಿಗೆ ಕೊಡುವ ಶಿಕ್ಷೆಗಳು, ನೀಲೇಗೌಡ, ಸಂಕಮ್ಮನ ತಂದೆ-ತಾಯಿಯರು, ಭೀಮನಕೊಲ್ಲಿಯಲ್ಲಿ ಮಾದೇಶ್ವರರು ಮಾಡಿದ ಪವಾಡಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳನ್ನು ಗುರುತಿಸಬಹುದು. ದುರ್ಗದ ಮಲ್ಲಮ್ಮ ಹಾದರದ ಮಲ್ಲಮ್ಮ, ದುಂಡಮ್ಮ, ಬ್ಯಾಡರ ಕನ್ನಯ್ಯ, ಚಾಮುಂಡೇಶ್ವರಿ, ಮಾದೇಶ್ವರರು ಭೂಮಿಗೆ ಬಂದುದು, ಜೀವಕೋಟಿ ಸೃಷ್ಟಿ...... ಮುಂತಾದ ಪ್ರಸಂಗಗಳು ಕಂಸಾಳೆ ಕಥಾ ಸಂಪ್ರದಾಯ 'ಅ'ರಲ್ಲಿ ಮಾತ್ರ ಇವೆಯೇ ಹೊರತು ಎಲ್ಲದರಲ್ಲೂ ಬರುವುದಿಲ್ಲ.

**ಕಾವ್ಯದ ಭಾಷೆ**

"ಮಾದೇಶ್ವರ ಕಾವ್ಯವು" ಭಾಷಾ ದೃಷ್ಟಿಯಿಂದ ವೈವಿಧ್ಯಪೂರ್ಣವಾಗಿದೆ. ಜನಪದ ಕವಿಗಳ ರಚನೆಯಲ್ಲಿ ಸಹಜತೆ, ಸರಳತೆ, ಆಡಂಬರವಿಲ್ಲದ ಭಾವ ತುಂಬಿದೆ. ಪ್ರಾದೇಶಿಕ

ಬನಿ, ಆಡು ಮಾತಿನ ಸೊಗಡು, ಆಶುಕವಿತೆಗಳು ಆಗಾಗ ಉದ್ಭವಿಸಿ, ಜನರ ಮನ ಮುಟ್ಟಿ, ತಟ್ಟಿ ಎಬ್ಬಿಸುವ ಭಾಷೆ ಬಳಕೆಯಾಗಿದೆ. ಕಾವ್ಯದುದ್ದಕ್ಕೂ ಬೆಳಕಿದೆ. ಅಪೂರ್ವ ಶಬ್ದಗಳು ಮಿಂಚಿವೆ. ಸುಡಿಗಟ್ಟುಗಳು ಗಾದೆಗಳು, ಒಗಟುಗಳು, ನಾಣ್ಣುಡಿಗಳು, ಅಲ್ಲಲ್ಲಿ ಪ್ರಕಟಗೊಂಡಿವೆ. ಸಾಹಿತ್ಯದ ಪ್ರಮುಖವಾದ ಅಂಗವೇ ಭಾಷೆ. ಬರೇ ಶಬ್ದಗಳನ್ನು ಇಟ್ಟರೆ ಅದು ಭಾಷೆಯಾಗದು. ಅದಕ್ಕೊಂದು ಸಾಹಿತ್ಯಕ ಗುಣ ಇರಬೇಕು. ಇಲ್ಲಿನ ಪದ್ಯ ಗದ್ಯಗಳಲ್ಲಿ ಕೆಲವೆಡೆ ವಾಚ್ಯ, ಮತ್ತೆ ಕೆಲವೆಡೆ ಸೂಚ್ಯವಾಗಿ ಅರ್ಥವಿಟ್ಟು ಕವಿ ನುಡಿದಿದ್ದಾನೆ. ಜನಪದ ಕವಿ ತನ್ನ ಆರಾಧ್ಯ ದೈವವಾದ ಮಾದೇಶ್ವರರ ಕಥೆ ಹೇಳುವಾಗ ಸಂದರ್ಭಕ್ಕೆ ತಕ್ಕ ಹಾಗೆ ಹಾಡುತ್ತಾನೆ. ಇವು ಒಂದು ರೀತಿಯಲ್ಲಿ ಆಶುಕವಿತೆಗಳಾಗಿ ಸುಲಲಿತವಾಗಿ, ಸರಾಗವಾಗಿ, ಆತನ ಗಮನಕ್ಕೆ ಬಾರದಂತೆ ಪ್ರತಿಭೆ, ವ್ಯುತ್ಪತ್ತಿಯಿಂದ ಪ್ರಕಟವಾಗುವುವು. ಇವು ಬರೇ ಪದ ಗುಚ್ಛಗಳಾಗಿರದೆ ಅದಕ್ಕೊಂದು ಸುಂದರ ಅರ್ಥವಿರುವುದು ವ್ಯಕ್ತವಾಗುವುದು. ಕೆಲವರು ಹೆಚ್ಚು ಹಾಡುಗಳನ್ನು ಹಾಡುವುದೂ ಉಂಟು, ಗದ್ಯದ ವಿವರಣೆ ಹೆಚ್ಚು ಕೊಡುವವರೂ ಕೆಲವರುಂಟು. ನಾಟಕೀಯ ಸಂಭಾಷಣಾ ಶೈಲಿಯನ್ನು ಅಳವಡಿಸಿಕೊಂಡು ಭಕ್ತಿಯ ವಾತಾವರಣವನ್ನು ಮೂಡಿಸುತ್ತಾರೆ. ಈ ಸಂದರ್ಭದಲ್ಲಿ ಭಾಷೆ, ಶೈಲಿ ಸ್ವಲ್ಪ ಸಡಿಲವಾಗುವುದು ಅನಿವಾರ್ಯವೆನಿಸುತ್ತದೆ.

ಮಾದೇಶ್ವರ ಕಾವ್ಯವು ಮೈಸೂರು, ಬೆಂಗಳೂರು, ಮಂಡ್ಯ ಜಿಲ್ಲೆಗಳ ಪ್ರಾದೇಶಿಕ ಭಾಷೆಯ ಗತ್ತು, ಸೊಬಗುಗಳನ್ನು ತುಂಬಿಕೊಂಡು ಕಾವ್ಯ ಉತ್ತುಂಗ ಶಿಖರಕ್ಕೆ ಏರಿದೆ, ರಮ್ಯವಾಗಿದೆ. ಇದು ಹೆಪ್ಪುಗೊಂಡ ಘನವಾದ ಕಾವ್ಯವಲ್ಲ. ಕಾಲಕಾಲಕ್ಕೆ ಹೊಸ ರೂಪ ತಾಳುವ ಕಾವ್ಯ. ಕಂಸಾಳೆಯ ಕಾವ್ಯದಲ್ಲಿ ಇಂಗ್ಲೀಷು, ಉರ್ದು, ಮುಂತಾದ ಭಾಷೆಯ ಪದಗಳು ನುಸುಳಿರುವುದನ್ನೂ ಕಾಣಬಹುದು. ಕಂಸಾಳೆಯವರು ನಾಗರೀಕ ವಾತಾವರಣಕ್ಕೆ ಹೊಂದಿಕೊಂಡವರು. ಇದು ಅವರ ಸಾಮಾಜಿಕ ಪ್ರಜ್ಞೆಗೆ, ಸಮಕಾಲೀನ ಪ್ರಜ್ಞೆಗೆ ಉದಾಹರಣೆ. ಷೋಕಿ, ಲಾಯರ್, ಜಹಗೀರು, ಏಕ್‌ದಂ, ರೋಡು, ಡಾಕ್ಟರ್, ಸ್ಕೂಲು, ಅರ್ಜೆಂಟ್, ಡಿಕ್ರಿ, ಸ್ಟೇಷನ್, ಕಲೆಕ್ಟರು, ಟೈಮು, ಫರ್ಲಾಂಗ್, ಮಿಷಿನ್, ಟಾಂಟಾಂ, ಛೇರಮೆನ್, ಅರೇಂಜ್‌ಮೆಂಟ್, ಪೋಲೀಸು, ಜೈಲು, ಅರು ಕಾಸು, ಮೂರು ಕಾಸು, ರೂಪಾಯಿ, ಪಡಿ, ಸೇರು, ಅಚ್ಚೇರು..... ಮೊದಲಾದ ಪದಗಳನ್ನು ಕಾಣಬಹುದು. ಹಳ್ಳಿಯಲ್ಲಿ ಹುಟ್ಟಿ ಬೆಳೆದ ಕಂಸಾಳೆ ಕಲಾವಿದರು ಅಲ್ಲಿನ ಭಾಷೆ, ಬೈಗಳು, ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತಾರೆ. ಮಾತಾಡುವ ಆಡುಗದ್ಯ ಈ ಕಾವ್ಯದ ಭಾಷೆ.

ಆಗಾಗ ಬರುವ, ಗದ್ಯ ಮುಗಿಯುತ್ತಿದ್ದಂತೆ ತನ್ನದೇ ಆದ ಪದ್ಯ ಧಾಟಿಯಲ್ಲಿ ರಾಗವಾಗಿ ಹಾಡುವ ಈ ಪದಗಳು ಕೇಳುವವರಿಗೆ ಒಂದು ರೀತಿ ಆನಂದ ಕೊಡುತ್ತವೆ.

"ಸುದ್ದ ನಡಮಲ್ಕೊ, ಕ್ಯಾಕಾಕ್ತಾನೋ, ದೀರಾ ಮಾದಯ್ಯಾ, ಒಡ್ಡಣ್ಣೋ, ದರವೊಳ್ಗೇ......, ಗುರುಗಾಳು........, ಮಿಣಮಿಣನೆ ಕಣ್ಣು ಬಿಡ್ತಾವ್ರೆ, ಹುಸಿನಗೆ ನಗ್ತಾನಲ್ಲೋ ಮಾದೇವಾ......", ಈ ಚಾಳಿ ಕಾವ್ಯಕ್ಕೆ ಹೊಸ ಶೈಲಿಯಾಗಿ ಪರಿಣಮಿಸುವುದು. ಕಥೆ ಹೇಳುವವರು ಕಥೆಗಾರನ ಜೊತೆಯಲ್ಲಿ ಸಾಮೂಹಿಕವಾಗಿ ಹೋಗುವುದರ ಒಂದು ಸೂಚನೆ ಹಾಗೂ ಕಂಸಾಳೆ ಕಲಾವಿದ ಕೇಳುಗರೊಡನೆ ಭಾಗವಹಿಸುವ ಒಂದು ತಂತ್ರ ಇದು. ಜಾನಪದದಲ್ಲಿ ಹಲವಾರು ಪದಗಳು, ವಾಕ್ಯಗಳು, ಯಾವಾಗ, ಆವಾಗಲೀಗ, ಗುರುವೇ ಗುರುಪಾದ್ವೇ, ಶಿವಶಿವಾ, ಸಭಾಸ್ ನನ್ನ ಕಂದಮ್ಮ, ಅಯ್ಯೋ..... ಸಿವಸಿವಾ, ಆದರೆ ಅಚ್ಚ ಹನ್ನೆರಡು ಬಳ್ಳ ಎತ್ತಿ ನನ್ನ ಮುತ್ತಿನ ಜೋಳಿಗೆಗೆ ಹಾಕಿ ಪಟ್ಟಾಭಿಷೇಕ ಮಾಡಿ, ನನ್ನ ಏಳು ಮಲೆ ಕೈಲಾಸಕ್ಕೆ ಎಣ್ಣೆ ಮಜ್ಜನಕೆ ಕಳಿಸವ್ವಾ, ದಗ್ಗನೆ ಕತ್ತಿ ದಿಗ್ಗನುರುದೋಯ್ತಂತೆ, ಸೀಗೆ ಸಿರಗಂಧ, ಬಾಡ ಬಾಕಲ ಗುತ್ತಿ ವಿಷಂಪಾರಿ ಗುತ್ತಿ, ಅರಿವಿಲ್ಲದಮಲೆ, ಕೆಚ್ಚು ಮುರುದು ಒಕ್ಕಲಾಗಿ, ಈ ರೀತಿಯ ಪ್ರಯೋಗಗಳು ಕಾವ್ಯದಲ್ಲಿ ಹಲವಾರು ಬಾರಿ, ಪುನರಾವರ್ತನೆಯಾಗುವುದನ್ನು ಗಮನಿಸಬಹುದು.

ಕಾವ್ಯದಲ್ಲಿ ಜಾನಪದ ಗಾದೆಗಳು ಪ್ರಯೋಗವಾಗಿರುವುದು ಸಮಯೋಚಿತ, ಸಂದರ್ಭೋಚಿತವಾಗಿವೆ. ಸುತ್ತೂರು ಮಠದಲ್ಲಿ ರಾಗಿ ಬೀಸುವ ಕಾರ್ಯ ನಿರ್ವಹಿಸಿದ ಮಾದೇಶ್ವರರು "ಸುತ್ತೂರು ಮಠ ಸುಖಿ ಅಂದ್ರೆ, ಕುಕ್ಕೇಲಿ ತುಂಬಿತ್ತು ರಾಗಿ" ಎಂದು ನುಡಿದ ನುಡಿ, ಗಾದೆಯ ಮಾತಾಗಿದೆ. ಹಾಗೆಯೇ "ವಾಟಾಳು ಮಠದಲ್ಲಿ ಅಂಬಲಿ ತುಂಬೆಸೊಪ್ಪು ತುಪ್ಪ ಅನ್ನವಾಗಲಿ" "ಕೆಟ್ಟಾಗ ನೆಂಟರಿಲ್ಲ ತಿರ್‍ಕಂಡು ತಿನ್ನುವಾಗ ದೇವ್ರಿಲ್ಲ" ಎಂದು ಬೇವಿನಕಾಳಿಯ ಬಾಯಿಯಲ್ಲಿ ಹೇಳಿಸಿದ್ದಾನೆ. "ಅಟ್ಟಮೇಲ ಒಲೆ ಉರೀತು ಕೆಟ್ಟ ಮೇಲೆ ಬುದ್ಧಿ ಬಂತು", "ಹೂವಿನಿಂದ ನಾರು ಸ್ವರ್ಗಕ್ಕೆ ಸೇರ್‍ತಂತೆ." "ರುಸಿ ಸೇರದ್ಕಿಂತ ಇಸ ಕಡಿದು ಪ್ರಾಣ ಬಿಡೋದು ಲೇಸು", "ಹೆಣ್ಣಿನ ಬುದ್ಧಿ ಮೊಣಿನ ಬುದ್ಧಿ ಒಂದೇ", ಬೇವಿನ ಕಾಳಿಯ ಗುಣವನ್ನು ಜನಪದ ಕವಿ ಈ ಗಾದೆಯಲ್ಲೇ ಚಿತ್ರಿಸಿದ್ದಾನೆ." "ಬೆಂದಿಟ್ಟೆ ಬೆರಳ ಕತ್ತರಿಸ್ತಿದ್ದು, ಎಂಜಲ ಕೈಲಿ ಕಾಗೆ ಬಡೀತಿದ್ದು." "ಹುಟ್ಟುತ್ತಾ ಹುಟ್ತಾ ಅಣ್ಣಾತಮ್ದೀರು, ಬೆಳೆವಾಗ ದಾಯಾದಿಗಳು." "ಮುಂಗೈ ಮುರಿಬೇಕು, ಅಂಗೈ ಉಣ್ಬೇಕು" ಇಂಥ ಪ್ರಯೋಗಗಳನ್ನು ಕಾಣಬಹುದು.

ಜನಪದ ಕವಿ ಕಾವ್ಯದಲ್ಲಿ ಕೆಲವು ಒಗಟುಗಳನ್ನೂ ಪದ್ಯರೂಪದಲ್ಲಿ ತಂದಿದ್ದಾನೆ. ಉತ್ತರಾಣಿಗೆ ಹೇಳುವ ಒಗಟು ಇದು-"ಓಣೇಲಿ ಹುಟ್ಟಿದವಳೆ, ಓಣೇಲಿ ಬೆಳೆದವಳೆ, ಪೋಗುವವರ ಸೆರಗ ಹಿಡಿಯುವವಳೆ ಶಿವಪೂಜೆಗೆ ಬಾ." ಹಾಗೆಯೇ ಸೂರ್ಯಕಾಂತಿ ಹೂವಿಗೆ ಹೇಳಿರುವುದು "ಹಿತ್ತಲಲ್ಲಿ ಹುಟ್ಟಿದವಳೇ ಹಿತ್ತಲಲ್ಲಿ ಬೆಳೆದವಳೆ, ನೀನು ಸೂರ್ಯನಿಗೆ ಮುಖವ ತೋರುವಳೆ" ಎಂಬುದು.

ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ನುಡಿಗಟ್ಟುಗಳ ಬಂಧ ಬಂಧುರವಾಗಿ ಸೃಷ್ಟಿಯಾಗಿದೆ.

ಪ್ರಭುದೇವರು ಮಾದೇಶ್ವರನ ಜಾಣತನವನ್ನು ನೋಡಿ 'ಬೆರಳು ತೋರಿದ್ರೆ ಹಸ್ತ ನುಂಗುವವನು' ಎಂದು ಹೇಳುತ್ತಾರೆ. ಜುಂಜೇಗೌಡನ ಹಸುವು ಮಾದೇಶ್ವರ ಲಿಂಗಕ್ಕೆ 'ನೆತ್ತಿಯ ಮೇಲೆ ಅವು ಜೊರ್‍ರೆಂಬ ಹಾಲ ಕರೆದಾವು' ಜುಂಜೇಗೌಡನ ಸ್ವಪ್ನಕ್ಕೆ ಮಾದೇಶ್ವರರು ಬಂದುದು 'ಸಪ್ಪಟ ಸರ ರಾತ್ರಿ ಒಳ್ಗೆ, ಕಲ್ಲು ನೀರು ಕರ್ಗ್ಗೋ ಹೊತ್ತಿನಲ್ಲಿ' ಮಾದಪ್ಪನನ್ನು 'ಬೂದಿಮುಚ್ಚಿದ ಕೆಂಡ, ಭೂಲೋಕದ ಗಂಡ ಮಾದೇಶ್ವರರು ಬೇವಿನ ಕಾಳಿಯನ್ನು ಹೊಗಳಲು ಆಕೆ "ಉಪಾಯ ಮಾಡಿ ಉಪ್ಪರಿಕೆ ಮೇಲೆ ಕುಂಡಿಸ್ತಾನೆ, ಬೆಲ್ಲದ ಮಾತಾಡಿ ಬೆಟ್ಟದ ಮೇಲೆ ಕುಂಡುಸ್ತಾನೆ" ಅಂತಾಳೆ. ಶ್ರವಣನರಮನೆಯ ಮಾರಿಯರು "ಮೂಗ್ಗೆ ಬಾಯ್ಗೆ ಕವಡೆ ಕಟ್ಕಂಡು" ದುಡಿಯುತ್ತಿದ್ದರು. ಮಾದಪ್ಪನವರು ಪ್ರಪಂಚಕ್ಕೆ ಬಂದ ಮೇಲೆ "ಆಕಾಸ ಅಂತು ನೋಡುದ್ರಂತೆ ಭೂಮಿ ಬಗ್ಗಿ ನೋಡಿದ್ರಂತೆ" ಎಂದು ಹೇಳುವ ಭಾಷೆಯಲ್ಲಿ ಸಹಜತೆಯ ಸಾಕಾರ ರೂಪವಿದೆ.

ಮಾದೇಶ್ವರರು ಲಿಂಗವಾದುದನ್ನು ಕವಿ ಹೇಳುವ ಭಾಷೆಯಲ್ಲಿ ಕೇಳಿದರೆ ಸೊಗಸು. "ಒಡೆದು ಹೊಂಬಾಳೆ ಪ್ರಕಾರ ಉದ್ಭವಿಸಿದ್ದಾರೆ." ಮಾದೇಶ್ವರರು ಬರುವ ಹೊತ್ತು, "ಸಂಟ್ಲಂ ಸಂಬ್ರಾತ್ರೆ, ಕಾಡೆಮ್ಮೆ ಕಡಿದಾಡೋ ಹೊತ್ತು, ಮುನಿಗಳು ಎದ್ದು ಸಿವಪೂಜೆ ಮಾಡೋ ಹೊತ್ತು." ಸಂಕಮ್ಮನ ಬಂಜೆತನ ಚಿತ್ರಣದ ಭಾಷೆಯ ಸೊಗಸು ನೋಡಿ: "ಮಂಡೆ ಮಾಸಿ ಹನ್ನೆರಡು ತುಂಬೋಗ್ತುದ್ತು." ನೀಲಯ್ಯ ಸಂಕಮ್ಮನನ್ನು ಕೈಯ ಭಾಷೆಕೊಡು ಎಂದಾಗ ಆಕೆ ಹೇಳುವ ಉತ್ತರದ ಧಾಟಿ ಇದು- "ಹುಟ್ಟು ಬಂಜೆ ಸ್ವಾಮಿ, ನನ್ನ ಕೈನ ಬಾಸೆ ಕೊಟ್ಟಿದ್ದೆ ಉಂಟಾದ್ರೆ ಕಾಮ ಕರ್‍ಯೋಲ್ಲ ಭೂಮಿ ಬೆಳೆಯೋಲ್ಲ." ಹೀಗೆ ಹಲವಾರು ನುಡಿಗಟ್ಟುಗಳು ಕಾವ್ಯದಲ್ಲಿ ನುಸುಳಿವೆ.

ಕಾವ್ಯದಲ್ಲಿ ಕೆಲವು ವಿಶೇಷ ಶಬ್ದಗಳ ಬಳಕೆಯನ್ನು ಗುರುತಿಸಬಹುದು. ಪ್ರಭುದೇವರು ಸರಿಯಾದ ಪುಷ್ಪಗಳನ್ನು ತಂದಿಲ್ಲವೆಂದು ಶಿಷ್ಯರನ್ನು "ಕೀನಕಟ್ಟವಾಗಿ" ಬೈದರು. ಬೇವಿನ ಕಾಳಿಯ ಚಿತ್ರಣ ಕೊಡುವಾಗ ಜನಪದ ಕವಿ ಉಪಯೋಗಿಸುವ ಭಾಷಾ ವೈವಿಧ್ಯತೆಯನ್ನು ಕಾಣಬಹುದು. "ಅವಳು ಐಸ್ವರ್ಯದಲ್ಲಿ ಒರಗವಳಲ್ಲಪ್ಪಾ" "ದೊಳ್ಳು ಮುರ್‍ದು ಮುಂಗ್ಯೆ ಮೇಲೆ ಮಡಿಕ್ಕಂಡು ಕುಂತಿದ್ಲು". ಅಚ್ಚ ಮುಂಡೆ ನಿಚ್ಚ ಮುಂಡೆ, ತಾಳಿಕಿತ್ತು ಬೇಲಿಗೆ ಬೀಸಾಕ್ಬುಟ್ಟು, ಕಾಸಿನ ದೂಪ ಹಾಕಿ ಕರವೆತ್ತಿ ಕೈ ಮುಗಿಯವರಿಲ್ಲ, ಉಡಿದು ಜಡಿದು ಹಿಡಿದವಳೇ. ನೀಲಯ್ಯ ಬರುವುದನ್ನು ಹೇಳುವಾಗ "ದಾಕು ದೂಕನ ಬರ್‍ತವ್ನೆ" ಎಂಬ ಪದಗಳನ್ನು ಬಳಸುತ್ತಾನೆ. ಮಾದೇಶ್ವರರು "ಹೊಟ್ಟೆ

ಒಳಗೆ ಒಡೆದು ಮಾತಾಡ್ತವ್ರೆ." ಹುಲಿಯ ಚರ್ಯೆಯನ್ನು ಗಮನಿಸಿದ ಜನಪದ ಕವಿ ಬಣ್ಣಿಸುವ ಬಗೆ ಇದು "ಕಣ್ಣು ಮಿಣ ಮಿಣಸೆ ಬಿಡ್ತಂತೆ, ಕಿವಿನ ಲಪ್ ಲಪ್ ಅಂತ ಬಡೀತಂತೆ, ತಣಾರ್ನೆ ನೆಗೀತ್ತಂತೆ." ಇದರಲ್ಲಿ ಸಹಜತೆ, ಅನುಪ್ರಾಸಗಳ ಮೋಡಿ ಸೇರಿ ಕೇಳುಗರಿಗೆ ಹಿತವೆನಿಸುತ್ತದೆ. ಮಾದೇಶ್ವರರು "ಹನ್ನೆರಡು ಆಳುದ್ದ ಜಲಕಂಡು ಒಡಮೂಡಿ ಲೋಲಾಪತಿಯಾಗಿ ಒರಗವ್ರೇ" ಎಂಬುದು ಅವರು ಐಕ್ಯವಾದರು ಎಂಬುದನ್ನು ತೋರುತ್ತದೆ. ಹರಳಯ್ಯ ತನ್ನ ಹೆಂಡತಿಯನ್ನು ಕತ್ತರಿಸುವಾಗ "ಹಿಡಿದು, ಉಡಿದು, ಜಡಿದು ಕೆಳಕ್ಕಾಕಂಡು ಕತ್ತು ಕೂದವ್ನೇ." ಗಾಳ ಗೋಳ ಮಾಡವ್ರೆ, ಧಡಾರ್ನೆ ಮೇಲಕೆದ್ದ, ಹರನಿಗೆ ದುಃಖ ಶಿವನಿಗೆ ಸೋಕ ಮಾಡವ್ರೆ. ತುಂಬಿದ ಸೋಮವಾರ, ಮಟ ಮಂಗಳವಾರ ಡಗ್‌ಡಗ್ ಅಂತ ಎದೆ ಪೊಡ್ಕಂತು, ಆಕಾಶಕ್ಕೂ ಭೂಮಿಗೂ ಕೀಲುಕೊಟ್ಟಂತೆ ಮಾದೇಶ್ವರರು ನಿಂತುಕೊಂಡ್ರು. ಪಕ್ಕನೆ ಪ್ರಾಣ ಬಿಟ್ಟುಬಿಟ್ಟ. ತತ್ರಬಿತ್ರಿ, ಈಬೂತಿ ಬಡಗ, ಮೂರು ಕೂಡಿದಕೋವು. ಟಣಾರ್ ಅಂತ ರಥ ಏರ್ದ. ಕೆಚ್ಚು ಮುರಿದು ಒಕ್ಕಲಾಗಿ, ಹುಟ್ಟು ಬಂಜೆ ದಟ್ಟ ಧರಣಿ, ಸಂಬ್ರಾತ್ರೆ, ಕಡ್ಡಾಡೋವೊತ್ತು, ಮುನಿಗಳೆದ್ದು ಶಿವ ಪೂಜೆ ಮಾಡವೊತ್ತು, "ಪುಸ್ಪದಳದಳನ ದರಮ್ಮಾಲೆ ಆಡೋಗ್ಬುಡ್ತು.. ನಂಬ್ಲಾರೆ, ನೆಚ್ಚಲಾರೆ, ದೇವಮ್ಮ ಮಾದೇಶ್ವರರಿಗೆ ಅತ್ತೆಯ ಬಗೆಗೆ" "ಕಿವಿಕಿತ್ತು ಉಂಗುರ ಮಾಡ್ತಾಳೆ. ಮುಂದಲೆ ಕಿತ್ತು ಮೂರು ಬತ್ತಿ ಮಾಡ್ತಾಳೆ ದಾನಕೊಟ್ರೆ" ಅನ್ನುತ್ತಾಳೆ. ಮಾದೇಶ್ವರನ ಚಿತ್ರ ಕೊಡುವಾಗ ಉಪಯೋಗಿಸುವ ಶಬ್ದಗಳು ಅದೆಷ್ಟು ಸೊಗಸಾಗಿವೆ. "ಗಂಡುಗಲಿಗೆ ಗಂಡ, ಹಿಂಡುಗಲಿಗೆ ಮೋಸಗಾರ, ಪುಂಡುಗಾರ ಈರತ್ತ ಮುನಿ." ಮಾದೇಶ್ವರರು "ಕಿರುಗಣ್ಣಲ್ಲಿ ಅರೆಗಣ್ಣು ಬಿಟ್ಟು ನೋಡವ್ರೆ". ಮೂಗಯ್ಯ ಮೊಣಕೈನಿಂದ ಎಣ್ಣೆ ತೆಗೆದ ಬಗೆಯನ್ನು ಕವಿಯ ಮಾತುಗಳಲ್ಲೇ ಗಮನಿಸಬೇಕು, "ಮೊಳ ಮೊಳನೆ ಎಣ್ಣೆ ಏಳ್ತಿದೆ" ಮೂಗಯ್ಯ ಎಂಥವ ಎಂದು ಹೇಳುವಾಗ "ಮುಂದೆ ಬಿದ್ರೆ ಹಾಯೋನಲ್ಲ ಹಿಂದೆ ಬಂದ್ರೆ ಒದೆಯೋನಲ್ಲ." ಥಕಥೈನೆ ಕುಣೀತಾರೆ ಮಾರೀರು, ಹಸುಕಾಲ್ನ ಪತರ್ಲಿ ಬಿಡ್ತು, ಗಟಾಗಟ್ನೆ ಕುಡಿದ, "ಹಳೇ ಕಂಬಳಿ ಜೋಳಿಗೆ ಮಾಡ್ಕಂಡು ಕಡ್ಡಿನ ಬೆತ್ತ ಮಾಡ್ಕಂಡು ಎಕ್ಕದಕಾಯಲಿಂಗ ಮಾಡ್ಕಂಡು, ಬೂರುಗದ ಕಾಯಿ ಚಟ್ಟೆ ಮಾಡಿ ಕಂಡು, ಕಲ್ಲು ಕೈತಾಳ ಮಾಡ್ಕಂಡು, ಮೂಡಲು ಕೆಬ್ಬೆ ಹೊಲಕ್ಕೆ ಬತ್ತ ಅವ್ರೆ ಮಾದೇವ." ನಿಶಬ್ದ ವಾತಾವರಣದ ಚಿತ್ರಣ ಕೊಡುವಾಗ ಕಾ ಅನ್ನೋಕ್ಕಾಗಿಲ್ಲ, ಗೂ ಅನ್ನಕ್ಕೆ ಗೂಬಿಲ್ಲ ಎನ್ನುತ್ತಾನೆ. ಹೀಗೆ ಹಲವಾರು ಸ್ವಾರಸ್ಯಕರ ಸನ್ನಿವೇಶಗಳಲ್ಲಿ ಈ ಪದಗಳ, ಪದಗುಚ್ಛಗಳ, ವಾಕ್ಯಗಳ ಪ್ರಯೋಗಗಳಾಗಿದ್ದು ಕಾವ್ಯದ ಮೆರುಗನ್ನು ಹೆಚ್ಚಿಸಿ, ಭಾಷೆಯನ್ನು ಶ್ರೀಮಂತಗೊಳಿಸಿದೆ.

ಹಲವೆಡೆ ದ್ವಿರುಕ್ತಿ ಪ್ರಯೋಗಗಳೂ ಆಗಿವೆ. ಗುಳಗುಳನೆ ದುಃಖ, ಹರನಿಗೆ ದುಃಖ ಶಿವನಿಗೆ ದುಃಖ, ಅಮ್ಮಿ ಅಮ್ಮಿ, ಕಪ್ಪಡಿಸಿ ಕಪ್ಪಡಿಸಿ, ಜಲಜಲನೆ, ದುಃಖ ಸೋಕಮಾಡ್ಕಂಡು, ಮುಂತಾದುವು.

ಕೆಲವು ಪದ್ಯಗಳಲ್ಲಿ ಶಬ್ದಗಳ ಬಂಧಗಳು ಸರಳ, ಸಹಜವಾಗಿದೆ. ಅಂಥ ಕೆಲವು ಗದ್ಯಗಳನ್ನು ಕಂಸಾಳೆ ಕಥಾ ಸಂಪ್ರದಾಯ 'ಓ'ರಲ್ಲಿ ನೋಡಬಹುದು. ಅದರಲ್ಲಿ ಮಾದೇಶ್ವರರು ಬರುವ ಚಿತ್ರಣ ಹೀಗಿದೆ-

"ಇಳಿದಾರು ಇಳಿದಾರು ಮಾದೇವ
ಬಂಗಾರು ಪಟ್ಟ ತೇಜಿಯ ಮೇಲೆ
ಗಿರಿಯಿಂದ ಇಳಿದಾರು"

ಸಂಕಮ್ಮ ತಾನು ಅನಾಥೆಯಲ್ಲ ಎಂಬುದನ್ನು ಕವಿ ಹೀಗೆ ಚಿತ್ರಿಸುತ್ತಾನೆ,

"ಅಕ್ಕ ತಂಗಿ ಉಳ್ಳವಳು
ಅತ್ತೆ ಮಾವ ಉಳ್ಳವಳು
ಮೈದ ಬಾವ ಉಳ್ಳವಳು"
"ಅಯ್ಯ ಪಟ್ಟ ಗುದ್ಗಿ ತೆಗೆದವನೆ
ಗರಿಕೆ ಮಾಳ ತೆಗೆದವ್ನೆ
ಕಗ್ಗಲಿ ಕರಾಚಿ ತೆಗೆದವ್ನೆ"

ಇದು ನೀಲಯ್ಯ ಕಾಡಿಗೆ ಬಂದಾಗ ತನ್ನ ಗುಡಿಸಲನ್ನು ಕಟ್ಟಿಸುವ ಮೊದಲು ಹೇಗೆ ಆನೆಯಾದ ಎಂಬುದನ್ನು ಆಡು ಮಾತಿನಲ್ಲೇ ಕವಿ ಹೇಳುತ್ತಾನೆ. ಮಾದೇಶ್ವರರು ಎಂಥವರು ಎಂಬುದನ್ನು ಪದಗಳಲ್ಲಿ ಸೆರೆ ಹಿಡಿದ ವೈಖರಿ ಇದು-

"ನೆನೆದವರ ಮನೆಯೊಳಗಿದ್ದು
ಮರೆತವರ ಮನೆಯ ಮುರುದು
ನಂಬಿದವರ ಮನೆಯಲಿ ಗುರುವೆ
ತುಂಬಿ ತುಳುಕಾಡುತವೆ."

ಹೀಗೆ ಪದ್ಯ ಮತ್ತು ಗದ್ಯಗಳಲ್ಲಿ ಭಾಷೆಯ ಪ್ರಯೋಗ ವೈವಿಧ್ಯಮಯವಾಗಿ ಮೂಡಿಬಂದಿದೆ.

ಇನ್ನು ಮಾದೇಶ್ವರ ಕಾವ್ಯದಲ್ಲಿ ಬಳಕೆಯಾಗಿರುವ ಕೆಲವು ಅಪೂರ್ವ ಶಬ್ದಗಳ ವೈವಿಧ್ಯವನ್ನು ಗಮನಿಸೋಣ-

ಅಟ್ಟಿ (ಮನೆ), ಅಮ್ಮಿ (ಪ್ರೀತಿಗೆ ಹೆಣ್ಣು ಮಕ್ಕಳನ್ನು ಕರೆಯುವುದು), ಆತ್ರಿಸಿ (ಆತುರ-ಇಸು), ಈರತ್ಕಟ್ಟೆ (ವಿರಕ್ತ ಕಟ್ಟೆ), ಈಳ್ಯ (ವೀಳ್ಯ), ಉಪಾದಾನ (ಮೆಚ್ಚಿಕೊಡುವ

ದಾನ), ಉರುಳಗ (ಉಳಿಗ) ಊಬತ್ತಿ (ವಿಭೂತಿ), ಐಲು (ಹುಚ್ಚು), ಐಕ್ಳು (ಐಕಳು), ಒಗ್ಗ (ಒಗಟು), ಒಗ್ತಾನ (ಒಗೆತನ), ಕುರ್ಜನ (ಕುರುಜು, ತೇರಿನ ಮಾಳ), ಕೊಟಾರ (ಕಣ), ಕೌದಿ (ಸಣ್ಣ ಸಣ್ಣ ಬಟ್ಟೆಯಿಂದ ಹೊಲಿದ ಹೊದಿಕೆ), ಗುಲ್ಲು (ಗುಡಿಸಲು), ಚಕ್ರ (ತೋಟಿ), ಚಮ್ಮಾಳಿಗೆ, (ಚಮ್ಮಾವುಗೆ), ಚಚ್ಚೆಲಿಂಗ (ಸಜ್ಜೆ ಲಿಂಗ), ಚಿಟುಗರು (ಶಿಷ್ಯರು), ಚೀಜಿ (ತೇಜಿ), ಚೊಳ್ಳೆಸರು (ನೀರಾದ ಸಾರು), ಚಂಚಗಾರ (ಸಂಚಕಾರ, ಮುಂಗಡ), ಪಳ್ಳಿಮನೆ (ಪಾಠಶಾಲೆ) ಪಾದ್ರಾಕ್ಷಿ (ಪಾದರಕ್ಷೆ), ಬರಗ (ಬರ್ಗ, ವ್ಯಾಘ್ರ), ಮಸದೀಪು (ಪಂಜು), ಮುಕ್ಕಾಲು ಮಂಚ (ಮೂರು ಕಾಲುಳ್ಳ ಮಂಚ), ದುಡುಕು (ತೊಡಗು), ವೇಗದ್ರುಷ್ಟಿ (ಯೋಗದೃಷ್ಟಿ), ರವಸು (ರಭಸ), ವಾಕ್ಷ (ವಾಕ್ಯ), ವೀರತ್ತಮುನಿ (ವಿರಕ್ತ ಮುನಿ), ವೆಚ್ಚಾಳ (ಹೆಚ್ಚಳ), ವ್ಯಾಗ (ಯಾಗ), ಸರಸ್ವತಿ (ರಾಗಿಕಲ್ಲು), ಸಬ್ಬ (ಶಬ್ದ), ಶಿವಸೆರಗು (ಮಂಗಳ ವಸ್ತ್ರ), ಸಿವಕಂತೆ (ಶರಣರ ಮೈಲಿಗೆ ಬಟ್ಟೆ), ಸೀತಾಳ ಚಪ್ಪರ (ಹೊಂಗೆ, ಬಸರಿ, ಮಾವಿನಸೊಪ್ಪಿನ ಚಪ್ಪರ, ಹಸಿರುವಾಣಿ ಚಪ್ಪರ), ಸ್ಯೆಗೆ (ನೇರವಾಗಿ), ಹುಟ್ಟರೆಕಲ್ಲು (ತಾನಾಗಿ ಉದ್ಭವಿಸಿದ ಬಂಡೆ), ಹಿಂಚರಿ (ಹಿಂದುಗಡೆ), ಇಷ್ಟೆಲ್ಲಾ ನೋಡಿದ ಮೇಲೆ ಮಾದೇಶ್ವರ ಕಾವ್ಯ ಭಾಷಾ ಶಾಸ್ತ್ರದ ದೃಷ್ಟಿಯಿಂದ ಬಹಳ ಪರಿಣಾಮಕಾರಿಯಾದುದೆಂದು ಹೇಳಬಹುದು.

### ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಪವಾಡಗಳು ಮತ್ತು ಆಶಯಗಳು

ಜನರು ನಂಬಿಕೆಯ ಪ್ರತೀಕವಾಗಿ ಅಥವಾ ಕೇಳಿದ ಅದ್ಭುತ ಸಂಗತಿಗಳನ್ನು ಪವಾಡ ಕಥೆಗಳಂತೆ ಉತ್ಪ್ರೇಕ್ಷೆ ಮಾಡಿ ಹೇಳುವುದುಂಟು. ಇದು ಎಲ್ಲ ದೇಶಗಳಿಗೂ, ಕಾಲಗಳಿಗೂ ಅನ್ವಯವಾಗುವುದು. ಶರಣರ ಬದುಕು ಕಾವ್ಯಕ್ಕೆ ವಸ್ತುವಾದಾಗ ಕವಿಗಳು ಹಾಗೂ ಜನಸಾಮಾನ್ಯರಲ್ಲಿ ಪ್ರತೀತಿಯಲ್ಲಿರುವ ಐತಿಹ್ಯಗಳನ್ನು ಕಲೆ ಹಾಕಿ ಅದಕ್ಕೊಂದು ರೂಪು ಕೊಡುವರು. ಇದು ಪರಂಪರೆಯಲ್ಲಿ ಬಂದಾಗ ಅನೇಕ ಬದಲಾವಣೆಗಳಾಗಿ ಜನರನ್ನು ಭಕ್ತಿ ಮಾರ್ಗಕ್ಕೆಳೆಯಲು ಸಹಾಯವಾಗುವುದು. ವೀರಶೈವ ಕೃತಿಗಳಲ್ಲಿ 'ಪವಾಡ' ಎಂಬ ಪದಕ್ಕೆ ಪ್ರತ್ಯಕ್ಷ ಸಾಮರ್ಥ್ಯ, ದೃಷ್ಟ, ಮಹಿಮೆ ಎಂಬ ಅರ್ಥಗಳುಂಟು. ಪವಾಡ ಬರೆಹ ರೂಪಕ್ಕಿಳಿಯದೇ ಜನಪದರಲ್ಲಿ ಒಬ್ಬರ ಬಾಯಿಂದ ಮತ್ತೊಬ್ಬರಿಗೆ ಬರುವಾಗ ವ್ಯತ್ಯಾಸಗಳಾಗುವುದು ಸಹಜ.

ಪವಾಡ ಮನುಷ್ಯನನ್ನು ಸುಲಭವಾಗಿ ಆಕರ್ಷಿಸುತ್ತದೆ. ಯೋಗಿಗಳು, ಮಹಾತ್ಮರು, ಆಧ್ಯಾತ್ಮ ಗುರುಗಳು ವಿಶೇಷವಾಗಿ ಇದನ್ನು ದೂರವಿರಿಸಲು ಪ್ರಯತ್ನಿಸಿದ್ದಾರೆ. ಆದರೆ ಕೆಲವೊಮ್ಮೆ ಅನಿವಾರ್ಯವಾದಾಗ ಮಾತ್ರ ಬಳಸುತ್ತಾರೆ. ಮಾದೇಶ್ವರರೂ ಅನಿವಾರ್ಯವಾದಾಗ ಮಾತ್ರ ಪವಾಡಗಳನ್ನು ಎಸಗಿದ್ದಾರೆ ಎಂಬುದನ್ನು ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಗುರುತಿಸಬಹುದು. ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಮಾದೇಶ್ವರನ ಸುತ್ತ ಹಲವಾರು ಪವಾಡಗಳು ಹೆಣೆದುಕೊಂಡಿವೆ.

ಒಂದೊಂದು ಪವಾಡದಲ್ಲೂ ಹಲವಾರು ಆಶಯಗಳು ಹಾಸುಹೊಕ್ಕಾಗಿ ಬಂದಿವೆ. ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ಬರುವ ಪವಾಡಗಳನ್ನು ಒಂದು ರೀತಿಯ ಪ್ರತಿಮೆಗಳಾಗಿ ಜನಪದ ಕವಿ ಚಿತ್ರಿಸಿರುವುದನ್ನು ಕಾಣಬಹುದು. ಕಲ್ಪನೆಯನ್ನು ತೋರಿಸಲು ಜನಪದ ಕವಿಗೆ ಪವಾಡವೇ ಒಂದು ಮುಖ್ಯ ಸಾಧನವಾಗುತ್ತದೆ. ಮಾದೇಶ್ವರ ಕಾವ್ಯದಲ್ಲಿ ಬರುವ ಪವಾಡಗಳು ಒಂದು ರೀತಿಯಲ್ಲಿ ಮಾದೇಶ್ವರರ ವ್ಯಕ್ತಿತ್ವವನ್ನು ಗುರುತಿಸಲು ಸಹಾಯಕವಾಗಿದೆ. ಈ ಪವಾಡಗಳನ್ನು ಅವಲೋಕಿಸಿದ ಮೇಲೆ ಮಾದೇಶ್ವರರಿಗೆ ಮಾನವೀಯ ಕಳಕಳಿ, ಪ್ರೇಮ, ಎಷ್ಟೆತ್ತೆಂಬುದು ವ್ಯಕ್ತವಾಗುವುದು. ಕಾಯಕದ ಕಡೆ ಮಾದೇಶ್ವರರು ಹೆಚ್ಚಿಗೆ ಗಮನವನ್ನು ಕೊಟ್ಟವರು. ಗಿರಿಜನ ಉದ್ಧಾರಕ್ಕೆ ಶ್ರಮಿಸಿದವರು. ನಾಸ್ತಿಕರನ್ನು ಮಾಡಲು ದುಡಿದವರು. ಮಾದೇಶ್ವರರು ಮಾಡಿದ ಸಮಾಜ ಸೇವೆಯೇ ಒಂದು ರೀತಿಯಲ್ಲಿ ಪವಾಡ ಎಂದರೆ, ಹೆಚ್ಚು ಸಮಂಜಸವಾದೀತು. ಇವರು ಮಾಡಿದ ಸಮಾಜ ಸುಧಾರಣೆ, ಧರ್ಮದ ಉತ್ಥಾನ, ಇವು ಅದರ ಸಂಸ್ಕೃತಿಯ ಪ್ರತೀಕವಾಗಿ ನಿಲ್ಲುತ್ತವೆ. ಯಾವುದೇ ವ್ಯಕ್ತಿ ಮಹಾತ್ಮನಾಗುವುದು ಪವಾಡದಿಂದಲ್ಲ , ಆತನು ಮಾಡುವ ಸೇವೆಯಿಂದ. ಪುರಾಣ ಪ್ರಸಿದ್ಧರಾದ ಐತಿಹಾಸಿಕ ವ್ಯಕ್ತಿಯನ್ನು ಪುರಾಣ ವ್ಯಕ್ತಿಯಾಗಿ ಮಾರ್ಪಡಿಸುವಾಗ ಪವಾಡಗಳು ಅದರ ಅಂಗಗಳಾಗುತ್ತವೆ. ಕಥಾ ವಸ್ತುವಿಗೆ ಒಂದು ಆಯಾಮ ಏರ್ಪಡುತ್ತದೆ. ಏನೇ ಆಗಲೀ ಪವಾಡಗಳ ಹಿನ್ನೆಲೆಯಲ್ಲಿ ಒಂದು ತಾತ್ವಿಕ ನೆಲೆ ಇರಬೇಕು. ಆಗಲೇ ಅದಕ್ಕೆ ಒಂದು ತೂಕ ಬರುತ್ತದೆ. ಜಾನಪದ ಕಥಾ ವಸ್ತುವಿನಲ್ಲಿ ಬರುವ ಚಿಕ್ಕ ಘಟಕಗಳೇ ಆಶಯ ಅಥವಾ ಪ್ರೇರಕ. ತೀರ ಚಿಕ್ಕ, ಸರಳವಾದ ಕಥೆಯೂ ಆಶಯವಾಗಬಹುದು. ಧಾರ್ಮಿಕ ಕಾವ್ಯಗಳಲ್ಲೂ ಸುಂದರ ಕಲ್ಪನೆಯ ಅನೇಕ ಆಶಯಗಳನ್ನು ಗುರುತಿಸಬಹುದು.

ಮಾದೇಶ್ವರ ಕಾವ್ಯಗಳಲ್ಲಿ ಹಲವಾರು ಪವಾಡಗಳು ಮತ್ತು ಆಶಯಗಳಿದ್ದರೂ ಇಲ್ಲಿ ಕೆಲವನ್ನು ಮಾತ್ರ ಪ್ರಸ್ತಾಪಿಸಲಾಗುವುದು.

ಮಾದೇಶ್ವರ ಕಾವ್ಯದಲ್ಲಿ ಪ್ರಾಣದಾನ ಪವಾಡಗಳು ಹಲವಾರು ಬರುತ್ತವೆ. ಅವುಗಳಲ್ಲಿ ಹರಳಯ್ಯನ ಪ್ರಸಂಗವೂ ಪವಾಡಮಯವಾಗಿದೆ.

"ಹರಳಯ್ಯನನ್ನು ಮಾದೇಶ್ವರರು ಒಂದು ಜೊತೆ ಪಾದರಕ್ಷೆಯನ್ನು ಮಾಡಿತಾ ಎನ್ನಲು ಆತ ತನ್ನ ಹೆಂಡತಿಯನ್ನು ಕೊಂದು ಆಕೆಯ ಚರ್ಮದಲ್ಲಿ ಚಮ್ಮಾವುಗೆ ಮಾಡಿ, ಮಾದೇಶ್ವರರಿಗೆ ನೀಡಲು, ಮಾದೇಶ್ವರರು, ದಂಪತಿಗಳ ಸಮೇತರಾಗಿ ಬಂದು ಚಮ್ಮಾವುಗೆಯನ್ನು ನೀಡಬೇಕು" ಎಂದರು. ಆಗ ಹರಳಯ್ಯ ಬೇರೊಬ್ಬ ಹೆಂಗಸನ್ನು ತನ್ನ ಹೆಂಡತಿಯಂತೆ ನಟಿಸುವಂತೆ ಹೇಳಿ ಕರೆತಂದನು. ಆದರೆ ಮಾದೇಶ್ವರರು ಆಕೆ

ಸತ್ಯ ಸಂಗತಿಯನ್ನು ಹೇಳುವವರೆಗೂ ಬಿಡಲಿಲ್ಲ. ಹರಳಯ್ಯನ ಸಂಯಮವೂ ಬಲು ಗಟ್ಟಿ. ಹೆಂಡತಿಯನ್ನು ಕೊಂದು ಆಕೆಯ ಚರ್ಮದಿಂದ ಚಮ್ಮಾವುಗೆ ಮಾಡಿದೆ ಎಂದು ಹೇಳುವುದಿಲ್ಲ. ಮಾದೇಶ್ವರರು ಅದಕ್ಕೇ ಹರಳಯ್ಯನಿಗೆ ಮಾನವನ ಚರ್ಮದಿಂದ ಮಾಡಬೇಕೆಂದು ಹೇಳಿದ್ದರು, ಆತನ ಧೃಢತೆ, ಸತ್ಯ ಪರೀಕ್ಷಿಸಲು. ಹಾಗೆಯೇ ಆತ ವಿಷಯವನ್ನು ಹೆಂಡತಿ ಕಲ್ಯಾಣಮ್ಮನಲ್ಲಿ ಹೇಳಲು ಆಕೆ "ಇದಕ್ಕಾಗಿ ಚಿಂತಿಸಬೇಡಿ, ನನ್ನ ಚರ್ಮದಿಂದಲೇ ಮಾಡಿ. ನನ್ನನ್ನು ಕೊಲ್ಲಿ" ಎಂದಳು. ಈಕೆಯೂ ಮಹಾ ಶರಣೆ. ಹೆಂಡತಿಯನ್ನು ಕೊಂದರೂ ಸರಿ ಗುರುವಿಗೆ ತೃಪ್ತಿಯಾಗಬೇಕೆಂಬುದು ಆತನ ಛಲ. ಮಾದೇಶ್ವರರದು ಭಕ್ತನ ನಿಷ್ಠೆಯನ್ನು ಪರೀಕ್ಷೆ ಮಾಡುವ ಛಲ. ಇದೊಂದೇ ಕಥೆಯಲ್ಲಿ ಅನೇಕ ಆಶಯಗಳು ಹಾಸುಹೊಕ್ಕಾಗಿ ಬಂದಿವೆ. ಮಾದೇಶ್ವರರು ಹರಳಯ್ಯನನ್ನು ಮನುಷ್ಯ ಚರ್ಮದಲ್ಲಿ ಚಮ್ಮಾವುಗೆ ಮಾಡಿ ತರಬೇಕೆಂದು ಹೇಳಿದಾಗ ಏನು ಮಾಡುವುದೆಂಬ ಚಿಂತೆಯಲ್ಲಿರಲು ಕಲ್ಯಾಣಮ್ಮ ಸಮಾಧಾನಿಸಿ - "ನಾನು ಒಂದು ರಾತ್ರಿ ಹೊರಗಿನಿಂದ ಬರುತ್ತೇನೆ, ಎಲ್ಲಿಗೆ ಹೋಗಿದ್ದೆ? ಎಂದು ಗದರಿಸಿ, ಪಾತಿವ್ರತ್ಯಕ್ಕೆ ಭಂಗವಾಗಿ ನಡೆದೆ ಎಂದು ಕೋಪಗೊಂಡು ನನ್ನನ್ನು ಕೊಂದು ಬಿಡಿ. ಅನಂತರ ನನ್ನ ಚರ್ಮದಿಂದ ಚಮ್ಮಾವುಗೆ ಮಾಡಿ" ಎಂದಳು ಆ ಮಹಾಪತಿವ್ರತೆ. ಇದು ಒಂದು ಆಶಯವಾಗಿ ಕಾಣಿಸುತ್ತದೆ. ಚಮ್ಮಾವುಗೆ ಸಿದ್ಧಮಾಡಿ ಹರಳಯ್ಯ ಮಾದೇಶ್ವರರಿಗೆ ಒಪ್ಪಿಸಲು ಬರಲು "ನಿನ್ನ ಹೆಂಡತಿಯನ್ನು ಕರೆ, ದಾನ ಕೊಡುವಾಗ ದಂಪತಿಗಳು ಬಂದು ಕೊಡಬೇಕು" ಎಂದಾಗ ಬೇರೆ ಹೆಂಗಸೊಬ್ಬಳನ್ನು ಕರೆತಂದು ಹೆಂಡತಿ ಎಂದು ಹೇಳಿ ನಟಿಸುವುದು, ಮಾದೇಶ್ವರರು ಅದನ್ನು ತಿಳಿದು, ಆಕೆಯ ಬಾಯಿಯಿಂದ ಸತ್ಯ ಹೇಳಿಸುವುದು ಮತ್ತೊಂದು ಆಶಯವಾಗುತ್ತದೆ. ಮಾದೇಶ್ವರರು 'ಕಲ್ಯಾಣಮ್ಮಾ, ಕಲ್ಯಾಣಮ್ಮಾ' ಎಂದು ಮೂರು ಸಾರಿ ಕೂಗು ಎಂದಾಗ ಹರಳಯ್ಯ ಹಾಗೆಯೇ ದನಿಗೂಡಿಸುವನು. ಕಲ್ಯಾಣಮ್ಮ ಮಾದೇಶ್ವರರ ಪವಾಡದಿಂದ ಬಂದಳು.[3]

ಸಂಕಮ್ಮನಿಗೆ ಮಗ ಆದಿಶೇಷನನ್ನು ಕೊಯ್ದು ಅಡಿಗೆ ಮಾಡಿ ಹಾಕು ಎಂದು ಮಾದೇಶ್ವರರು ಕೇಳಿದರು. ಅದಕ್ಕೆ ಹೆದರದೆ ಸಂಕಮ್ಮ ಮಗನನ್ನು ಕೊಂದು ಅಡಿಗೆ ಮಾಡಿದಳು.[4] ಹೀಗೆ ಮಾಡಬೇಕಾಗಿದ್ದರೆ, ತಾಯಿ ತನ್ನ ಮನಸ್ಸನ್ನು ಅದೆಷ್ಟು ಕಲ್ಲು ಮಾಡಿಕೊಂಡಿರಬೇಡ? ಮಾದೇಶ್ವರರು ಸಂಕಮ್ಮನನ್ನುದ್ದೇಶಿಸಿ "ನಿನ್ನ ಮಗನನ್ನು ಕರೆಯಮ್ಮಾ" ಎಂದು ಹೇಳಿದಾಗ ಆಕೆ ಕೂಗಿದಳು. ಆದಿಶೇಷ ಓಡಿಬಂದು ಮಾದೇಶ್ವರರ ಜೊತೆಯಲ್ಲಿ ಊಟಮಾಡಿದನು. ಊಟದ ಮೇಲೆ ನೀರು ಚಿಮುಕಿಸಿದಾಗ ಮಾಂಸ ಹೂವಾದುವು. ಕೊನೆಗೂ ಮಾದೇಶ್ವರರು ಮಗುವನ್ನು ಆಕೆಯಿಂದ ದಾನವಾಗಿ ತೆಗೆದುಕೊಂಡು ಹೊರಡುವರು. ಈ ಪ್ರಾಣದಾನ

ಪವಾಡದಲ್ಲೂ ಹಲವಾರು ಆಶಯಗಳು ಬಂದಿವೆ. ಈ ಪ್ರತಿಮೆಯ ಚಿತ್ರಣಕ್ಕೆ ಭಕ್ತ ಸಿರಿಯಾಳನ ಕಥೆಯೇ ಸ್ಫೂರ್ತಿ ಎನಿಸುತ್ತದೆ.

ಒಂದು ಪದಾರ್ಥ ಎಷ್ಟು ವಿನಿಯೋಗಿಸಿದರೂ ಮತ್ತೆ ಮತ್ತೆ ಒದಗಿದುದಕ್ಕೆ "ಅಕ್ಷಯ ಪವಾಡ" ಎಂದು ಕರೆಯುವರು.

"ಮಾದೇಶ್ವರರು ತಾಯಿ ಉತ್ತರಾಜಮ್ಮ ಕಟ್ಟಿಕೊಟ್ಟ ಮುಂಗೈಗಾತ್ರದ ಮೂರು ಬತ್ತಿಯನ್ನು ಕಲ್ಯಾಣದ ಶರಣರೆಗೆಲ್ಲಾ ಹಂಚಿದ ಮೇಲೂ ಅನ್ನ ಉಳಿಯುವುದು. ಉಗ್ರಾಣವೆಲ್ಲಾ ಅನ್ನಮಯವಾಯಿತು."[4] ಅನ್ನದಾನ ಮಾಡಿದಷ್ಟೂ ಹೆಚ್ಚುತ್ತದೆ. ದಾನಗಳಲ್ಲೆಲ್ಲಾ ಅನ್ನದಾನ ಮಿಗಿಲು ಎಂಬುದನ್ನು ಈ ಪವಾಡ ಹೇಳುತ್ತದೆ. ಅಲ್ಲದೆ ಇದ್ದುದನ್ನು ಎಲ್ಲರೂ ಹಂಚಿಕೊಂಡು ತಿಂದರೆ ಉತ್ತಮ ಎಂದು ಸಾರಲು ಮಾದೇಶ್ವರರು ಈ ಪವಾಡವನ್ನು ಎಸಗಿದಂತಿದೆ.

ಮಾದೇಶ್ವರರು ಮನೆಮನೆಗೆ ಹೋಗಿ ಭಿಕ್ಷೆ ತರಲು ಮನೆ ತುಂಬಿಹೋಗುತ್ತಿತ್ತು.[5] ಇನ್ನು ದಿನವೂ ತಂದರೆ ಎಲ್ಲಿ ತುಂಬಿಕೊಳ್ಳುವುದು ಎಂಬ ಚಿಂತೆಯುಂಟಾಯಿತು, ತಾಯಿ ಉತ್ತರಾಜಮ್ಮನಿಗೆ. ಆಗ ತಾಯಿ, ಮಗನಿಗೆ "ಮಗೂ ನೀನು ದಿನಕ್ಕೆ ಎರಡು ಸೇರು ಮಾತ್ರ ಭಿಕ್ಷೆ ತೆಗೆದುಕೊಂಡು ಬಾ" ಎಂದು ಹೇಳಿದಳು. ಇದರಲ್ಲಿ ಒಂದು ತತ್ವ ಅಡಗಿದೆ. ಹೆಚ್ಚಿಗೆ ಸಂಗ್ರಹಿಸಿಕೊಂಡು ಒಬ್ಬರೇ ಸುಖಪಡಬಾರದು. ಇದು ಅಕ್ರಮವಾಗುತ್ತದೆ. ನಾವು ಯಾವಾಗಲೂ ಎಷ್ಟು ಬೇಕೋ ಅಷ್ಟನ್ನು ಮಾತ್ರ ಶೇಖರಿಸಿಟ್ಟುಕೊಳ್ಳಬೇಕು. ಬೇರೆಯವರಿಂದ ಉಚಿತವಾಗಿ ಸಿಗುತ್ತದೆ ಎಂದು. ನಾವು ದುರಾಸೆಯಿಂದ ಪಡೆಯಬಾರದು ಎಂಬ ನೀತಿಯನ್ನು ಈ ಪ್ರಸಂಗದಲ್ಲಿ ಕವಿ ಚಿತ್ರಿಸಿದ್ದಾನೆ.

ಕುರುಡರಿಗೆ ಕಣ್ಣು ಬರಿಸಿದರೆ "ನೇತ್ರದಾನ ಪವಾಡ" ಎಂದು ಹೆಸರು.

ಬೇಡರ ಕನ್ನಯ್ಯನಿಗೆ ಬೇಟೆಯಾಡಿ ಪ್ರಾಣಿ ಹಿಂಸೆ ಮಾಡಬಾರದು ಎಂದು ಬೋಧಿಸಲೆಂದೇ ಈ ಪವಾಡ ಮೆರೆದಂತೆ ಕಾಣುತ್ತದೆ.[6] ಮಾದೇಶ್ವರರು ಬಾಣದ ಏಟು ಪ್ರಾಣಿಗೆ ನೋವಾಗುತ್ತದೆ ಎಂಬುದನ್ನು ಬೇಡರ ಕನ್ನಯ್ಯನಿಗೆ ಖಚಿತಪಡಿಸಿದರು. ಒಮ್ಮೆ ಬೇಡರ ಕನ್ನಯ್ಯ ಬೇಟೆಯಾಡುತ್ತಿದ್ದಾಗ ಆ ಏಟನ್ನು ಮಾದೇಶ್ವರರು ಪ್ರಾಣಿಗೆ ತಪ್ಪಿಸಿ ತಮ್ಮ ಕಣ್ಣಿಗೆ ಬೀಳುವಂತೆ ಮಾಡಿದರು. ಬೇಡರ ಕನ್ನಯ್ಯನನ್ನು ಕಣ್ಣು ಕೊಡು ಎಂದು ಕೇಳಿದರು. ಆತನಿಗೆ ತಾನು ಮಾಡಿದುದು ತಪ್ಪು ಎಂಬ ಅರಿವು ಮೂಡಿತು. ಕೂಡಲೇ ಬಾಣದಿಂದ ತನ್ನ ಕಣ್ಣನ್ನು ತೆಗೆದು ಕೊಟ್ಟನು. ಆತನ ಸಂಕಲ್ಪವೂ ದೊಡ್ಡದು. ಬೇರೆಯವರಿಗೆ ನೋವಾದಾಗ ತನ್ನ ನೋವನ್ನೂ ಸ್ವೀಕರಿಸಿಕೊಳ್ಳುತ್ತಾನೆ. ಮಾದೇಶ್ವರರು

ನಮ್ಮ ಕಣ್ಣಿನಷ್ಟೇ ಪ್ರಾಣಿಗಳ ಪ್ರಾಣವೂ ಮುಖ್ಯ ಎಂದು ಅವನಿಗೆ ಮನವರಿಕೆಯುಂಟು ಮಾಡಿದ ರೀತಿ ಇದು.

ನಾಸ್ತಿಕರನ್ನು ಆಸ್ತಿಕರನ್ನಾಗಿ ಮಾಡುವ ಉದ್ದೇಶದಿಂದ ಭವಿಷತ್ಕಥನ, ರೂಪಾಂತರ ಪವಾಡಗಳು ನಡೆದವೆಂಬುದನ್ನು ಮಾದೇಶ್ವರ ಕಾವ್ಯವು ನಿರೂಪಿಸಿದೆ. ಜುಂಜೇಗೌಡನು ಮಾದೇಶ್ವರರ ಒಕ್ಕಲಾಗದಿರಲು ಜುಂಜೇಗೌಡನ ಹಸುವನ್ನು ರಕ್ತ ಕರೆಯುವಂತೆ ಮಾಡಿದರು. ಕೊನೆಗೆ ಆತನು ಚಿಂತಿಸುತ್ತಿರಲು ಕಣಿ ಹೇಳುವ ವೇಷದಲ್ಲಿ, ಬುಡುಬುಡುಕೆ ವೇಷದಲ್ಲಿ ಕಾಣಿಸಿಕೊಂಡು, ಏಕೆ ಹೀಗಾಗುತ್ತದೆ ಎಂಬುದನ್ನು ವಿವರಿಸಿದರು. ಮಾದೇಶ್ವರರು ಇದಕ್ಕಾಗಿ ಜುಂಜೇಗೌಡನ ಪೆಟ್ಟಿಗೆಯ ಹಣವನ್ನು ಕಲ್ಲು ಮಾಡಿದರು. ಕಣಜದ ಧಾನ್ಯವನ್ನು ಮರಳು ಮಾಡಿದರು. ಇವೆಲ್ಲಾ ರೂಪಾಂತರ ಪವಾಡಗಳಾಗಿ ನಿಂತಿವೆ.[67] ಜುಂಜೇಗೌಡನ ಮನ ಒಲಿಸಿ, ಕಾಡು ಜನರನ್ನು ಪೂಜೆ ಮಾಡಿ ಭಕ್ತಿಯಿಂದ ನಡೆಸಲಿಕ್ಕೋಸ್ಕರ ಈ ಪವಾಡಗಳನ್ನು ಎಸಗಿದರು. ಜುಂಜೇಗೌಡನ ಹಸು ರಕ್ತ ಕರೆಯುವುದು, ಕಣತಮ್ಮನ ವೇಷದಲ್ಲಿ ಮಾದೇಶ್ವರರು ಜುಂಜೇಗೌಡನಿಗೆ ಮುಂದಾಗುವುದನ್ನು ತಿಳಿಸುವುದು, ಕಣಜದ ಧಾನ್ಯ ಮರಳಾಗುವುದು, ಪೆಟ್ಟಿಗೆ ಹಣವನ್ನು ಕಲ್ಲು ಮಾಡುವುದು, ಇವು ಜನಪದ ಆಶಯಗಳಾಗಿ ನಿಲ್ಲುತ್ತವೆ.

ದೇವನು ಸರ್ವಾಂತರ್ಯಾಮಿ, ಸರ್ವ ವ್ಯಾಪಿ ಎಂಬುದಕ್ಕೆ ಇದೊಂದು ಉದಾಹರಣೆ. ಒಂದೇ ಕಾಲದಲ್ಲಿ ಹಲವಾರು ಕಡೆ ಒಂದು ವ್ಯಕ್ತಿ ಉಪಸ್ಥಿತವಾಗುವುದಕ್ಕೆ ಸರ್ವಾಂತರ್ಯಾಮಿ ಪವಾಡ ಎಂದು ಹೆಸರು. ಒಮ್ಮೆಲೇ ಮಾದೇಶ್ವರರು ಎಪ್ಪತ್ತೇಳು ಕೋಟಿ ಬರಗಗಳ (ಹುಲಿಗಳ) ಮೇಲೆ ನಾಟ್ಯವಾಡಿ[68] ಕಾಡು ಜನರನ್ನು ಆಕರ್ಷಿಸಿ ಅವರಲ್ಲಿ ದೈವಭಕ್ತಿ ಹುಟ್ಟುವಂತೆ ಮಾಡಿದರು.

ಆ ಕಾಲದಲ್ಲಿ ಗಿಡ ಹೂವು ಹಣ್ಣು ಬಿಡುವುದು, ಒಂದು ಜಾತಿಯ ಮರದಲ್ಲಿ ಮತ್ತೊಂದು ಜಾತಿಯ ಹಣ್ಣು ಹೂವು ಬಿಡುವುದು, ಬಂಜೆ ಮಕ್ಕಳನ್ನು ಪಡೆಯುವುದು, ಅಸಹಜೋತ್ಪತ್ತಿ ಪವಾಡವಾಗುವುದು. ಇದಕ್ಕೆ ಸಂಕಮ್ಮನ ಕಥೆಯೇ ಒಂದು ಸುಂದರ ಉದಾಹರಣೆ. ಬಂಜೆ ಸಂಕಮ್ಮನನ್ನು ನೀಲಯ್ಯ ಬಂಧನದಲ್ಲಿಟ್ಟು ಹೆಜ್ಜೇನು ಬೇಟೆಗೆ ಹೋಗಿದ್ದ ಕೆಲವು ತಿಂಗಳಾದ ಮೇಲೆ ಬಂದು ನೋಡಿದಾಗ ಆತನ ಗುಳ್ಳಿನ ಜಾಗದಲ್ಲಿ ಅರಮನೆಯಾಗಿತ್ತು, ಒಳಗೆ ನೋಡಿದರೆ ಗರ್ಭಿಣಿಯಾದ ಹೆಂಡತಿ ನಿಂತಿದ್ದಳು. ಆಗ ಅವನು ಹೆಂಡತಿಯ ಶೀಲವನ್ನು ಶಂಕಿಸಿದ. "ಯಾರನ್ನು ಮಾಡಿಕೊಂಡು ಗರ್ಭಿಣಿಯಾದ" ಎಂದು ಚಂಡಿಸಿದ. ಅದಕ್ಕೆ ಆಕೆ "ಮಾದೇಶ್ವರರ ಅನುಗ್ರಹದಿಂದ ಗರ್ಭಿಣಿಯಾದ" ಎಂದಳು. ಅದಕ್ಕೆ ಒಪ್ಪದ ನೀಲಯ್ಯ "ಶಕ್ತಿಯನ್ನು ಎತ್ತಿ ಹೊಡೆಯಲು ಬಾಳೆಸುಳಿಯಾಗುವುದು,[69] ಹೂವಿನ ಹಾರವಾಗುವುದು.[100] ಸುಣ್ಣದ ಗೂಡಿನಿಂದ

ಕುದಿವ ಎಣ್ಣೆ ಕೊಪ್ಪರಿಕೆಗಳಿಂದ ಬರಬೇಕು,[೧೧೧] ಕಡ್ಡಿಯ ವಂದ್ರಿಯಲ್ಲಿ (ಜರಡಿ) ನೀರು ತರಬೇಕು, ಒಂದು ಅರಳಿ ಗಿಡ ಚಿಗುರಬೇಕು, ಮರಳ ಗಡಿಗೆಯಲ್ಲಿ ನೀರು ತರಬೇಕು,[೧೧೨] ಮೆಣಸಿನ ಕಾಯಿನ ಹೊಗೆಯಿಂದ ಹೊರ ಬರಬೇಕು, ಕುದಿವ ಜೇನು ತುಪ್ಪದಿಂದ ಉಂಗುರ ತರಬೇಕು.[೧೧೩] ಮೂರು ಖಂಡುಗ ಅಕ್ಕಿ ಎಳ್ಳು ಬೇರ್ಪಡಿಸಬೇಕು,[೧೧೪] ಭಾರಿಗುಂಡನ್ನು ಉರುಳಿಸಿದರೂ ಬದುಕಬೇಕು,[೧೧೫] ಮೂರು ಖಂಡುಗ ಭತ್ತ ಬಿಡಿಸಿ ಅಕ್ಕಿ ಮಾಡಬೇಕು, ಎರಡು ಕೈ ಕಾಲುಗಳಿಗೆ ಬಳೆ ಹಾಕಿ ಗುಂಡು ಇಟ್ಟರೂ ತೆಗೆದುಕೊಳ್ಳಬೇಕು,[೧೧೬] ಬೆಂಕಿಯಿಂದ ಹೊರಬರಬೇಕು,[೧೧೭] ಉಕ್ಕಿನ ಒನಕೆಯಲ್ಲಿ ಒಳನಾರು ತೆಗೆಯಬೇಕು, ಕಲ್ಲಿನ ಮೇಲೆ ಕೀರೆ ಹಾಕಿ ಬೆಳೆಯಬೇಕು, ಕಾಳಿಂಗ ಸರ್ಪನಿರುವ ಬಾವಿಯಿಂದ ಹೊರಬರಬೇಕು[೧೧೮] ಎಂಬ ಹಲವಾರು ಕಟ್ಟಾಜ್ಞೆಗಳನ್ನು ಮಾಡಿದ ಮಾದೇಶ್ವರರು ನೀಲಯ್ಯನನ್ನು ಕಣ್ಣು ತೆರೆಸಲು ಹಲವಾರು ಪವಾಡಗಳನ್ನು ಮಾಡಿದರು. ಅವನ ಅನುಮಾನಗಳನ್ನು ಪರಿಹರಿಸಲು ಅವು ತೀರ ಅಗತ್ಯವಾಗಿದ್ದವು. ಲೌಕಿಕ ವ್ಯಕ್ತಿಯಾದ ನೀಲಯ್ಯ ತನ್ನ ಹೆಂಡತಿ ಸಂಕಮ್ಮ ಬಂಜೆ ಎಂದು ತಿಳಿದುಕೊಂಡಿದ್ದ. ಆದರೆ ದೈವಕೃಪೆಯಿಂದ ಬಂಜೆ ಬಸುರಾಗಬಹುದು ಎಂಬುದರ ಅರಿವು ಆತನಿಗಿರಲಿಲ್ಲ. ಹೆಂಡತಿ ಎಷ್ಟು ಹೇಳಿದರೂ ಕೇಳದೆ ಆತ ನಡೆಸುವ ಪರೀಕ್ಷೆಗಳಲ್ಲಿ ಆಕೆ ಗೆದ್ದಳು. ಸತ್ಯದ ಅರಿವನ್ನು ನೀಡಲು ಕಾರಣರಾದರು. ಮಾದೇಶ್ವರ ಕಾವ್ಯದಲ್ಲಿನ ಸಂಕಮ್ಮನ ಕಥೆಯಲ್ಲಿ ಹಲವಾರು ಪವಾಡಗಳು ಆಶಯಗಳು ನುಸುಳಿರುವುದನ್ನು ಗುರುತಿಸಬಹುದು. ನೀಲಯ್ಯ ಮಾಡುವ ಒಂದೊಂದು ಪರೀಕ್ಷೆಯೂ ಜನಪದ ಆಶಯವಾಗಿ ಮೂಡಿನಿಂತಿದೆ.

ಉತ್ತರಾಜಮ್ಮನು ಹೂವನ್ನು ಮೂಸಿದಾಗ ಗರ್ಭಿಣಿಯಾಗುವುದು, ಎಪ್ಪತ್ತೈದರ ಉತ್ತರಾಜಮ್ಮ ತನ್ನ ಮುಪ್ಪಿನ ವಯಸ್ಸಿನಲ್ಲಿ ಮಗು ಹಡೆಯುವುದು ಅಸಹಜವೇ.[೧೧೯]

ನೀರಿಲ್ಲದಾಗ ನೀರು ಬರಿಸುವುದು, ಮಳೆ ಸುರಿಸುವುದು, ಇವು ಕಾಲ ಸಂಬಂಧ ಪವಾಡಗಳು. ಮಾದೇಶ್ವರರು ಮಲ್ಲಯ್ಯ ಕಾರಯ್ಯ ಇಬ್ಬರೂ ತಮಗೆ ಸರಿಯಾದ ಶಿಷ್ಯರೇ? ಗುರುಗಳಲ್ಲಿ ಎಷ್ಟೊಂದು ಭಕ್ತಿ ಇಟ್ಟಿದ್ದಾರೆ ಎಂಬುದನ್ನು ಪರೀಕ್ಷಿಸಲು ವಿಪರೀತ ಮಳೆ ಕರೆದರು. ನೀರಲ್ಲಿ ಮಾದೇಶ್ವರರು ಕೊಚ್ಚಿಕೊಂಡು ಹೋಗುತ್ತಿರಲು ತಾವು ಪ್ರವಾಹದಲ್ಲಿ ಸಾಯುವುದನ್ನೂ ಲೆಕ್ಕಿಸದೆ ಗುರುಗಳನ್ನು ತಬ್ಬಿಕೊಂಡು ನೀರಲ್ಲಿ ಈಜಾಡಿ ರಕ್ಷಿಸಿದರು.[೧೨೦]

ತನ್ನನ್ನು ನಂಬಿದವರನ್ನು ದೈವ ಎಂದೂ ಕೈಬಿಡದು ಎಂಬುದಕ್ಕೆ ಒಂದು ಪವಾಡವಿದೆ. ಕೊಂಗರಾಜ, ರಾಯಣ್ಣನ ಮಗಳು ದುಂಡಮ್ಮನನ್ನು ಎತ್ತಿಕೊಂಡು ಹೋಗುತ್ತಿರಲು ರಾಯಣ್ಣನ ಸೈನ್ಯವನ್ನು ಹಿಂಬಾಲಿಸಿತು. ಪಾಲಾರ್ ನದಿಯಲ್ಲಿ ಈಜಿ

ಹೋಗುತ್ತಿರಲು ದುಂಡಮ್ಮನ ದೈವಭಕ್ತಿಯಿಂದ ಮಾದೇಶ್ವರರು ನದಿಯನ್ನೇ ಮಂಜಾಗಿ ಮಾಡುವರು. ದುಂಡಮ್ಮ ಯಾವ ತೊಂದರೆಯೂ ಇಲ್ಲದೆ ಮನೆ ಸೇರುವಳು.[೧೧೧] ಇದೂ ಜಲಸಂಬಂಧದ ಪವಾಡಕ್ಕೆ ಮತ್ತೊಂದು ಉದಾಹರಣೆ.

ಬೆಂಕಿಯಲ್ಲಿ ಬೇಯದಂತೆ ಮಾಡುವುದು ಬೆಂಕಿಯ ಪವಾಡ. ಒಂದು ಹೆಣ್ಣಿನ ಪಾತಿವ್ರತ್ಯವನ್ನು ಶಂಕಿಸಿ ಅಗ್ನಿ ಪರೀಕ್ಷೆ ಮಾಡುವುದನ್ನು ಕಾಣಬಹುದು. ಸಂಕಮ್ಮ ಎಷ್ಟು ನಿಜ ಹೇಳಿದರೂ ನೀಲಯ್ಯ ತನ್ನ ಸತಿ ಸಂಕಮ್ಮನ ಮೇಲೆ ಅನುಮಾನ ಪಡುತ್ತಾನೆ. ಬೆಂಕಿಯಿಂದ ಹೊರಬಂದರೆ ನಿನ್ನನ್ನು ಹೆಂಡ್ತಿಯಾಗಿ ಸ್ವೀಕರಿಸುತ್ತೇನೆ ಎಂದಾಗ ಇದರಲ್ಲೂ ಜಯಶೀಲಳಾಗುವಂತೆ ಮಾಡ್ತಾರೆ ಮಾದೇಶ್ವರರು.[೧೧೨]

ಪುಷ್ಪವೃಷ್ಟಿಯಾಗುವುದು, ಇದ್ದಕ್ಕಿದ್ದಂತೆ ಮಾಯವಾಗುವುದು, ಅದೃಶ್ಯ ಪವಾಡಕ್ಕೆ ಉದಾಹರಣೆಗಳು. ಮಾದೇಶ್ವರರು ಅನೇಕ ಸಾರಿ ಅದೃಶ್ಯರಾಗುವುದು, ಶಿಷ್ಯರನ್ನು ಪರೀಕ್ಷಿಸಲು ಜುಂಜೇಗೌಡರನ್ನು ತನ್ನ ಒಕ್ಕಲು ಮಾಡಿಕೊಳ್ಳಲಿಕ್ಕೆ ಆತನ ಹಸು ಕುರಿ, ದನಗಳನ್ನು ಮಾಯಮಾಡುವುದನ್ನು ಕಾಣಬಹುದು.[೧೧೩]

ದೇವರು ಮತ್ತು ದೆವ್ವಗಳೊಡನೆ ವ್ಯವಹರಿಸುವುದು ದೇವರು, ದೆವ್ವಗಳ ಪವಾಡ ಎಂದು ಹೆಸರು. ಮೂಗಯ್ಯನ ಪರೀಕ್ಷೆಗೆ ಮಾದೇಶ್ವರರು ಪಟ್ಟದ ರಂಗಸ್ವಾಮಿ, ಮುಡುಕುತೊರೆ ಮಲ್ಲಿಕಾರ್ಜುನರೊಡನೆ ವ್ಯವಹರಿಸಿ ನಾಟಕವಾಡಿ ಮೂಗಯ್ಯನನ್ನು ತಮ್ಮ ಒಕ್ಕಲು ಮಾಡಿಕೊಂಡಿದ್ದುಂಟು.[೧೧೪] ಹಾಗೆಯೇ ಜಂಗಮರಿಗೆ ವಿಷದ ಕಜ್ಜಾಯ ಮಾಡಿ ಅವರಿಂದ ದ್ರವ್ಯವನ್ನು ಅಪಹರಿಸುತ್ತಿದ್ದ ಇಕ್ಕೇರಿ ದೇವಮ್ಮನ ಮಕ್ಕಳಿಗೇ ಆ ವಿಷದ ಕಜ್ಜಾಯ ತಿನ್ನಿಸಿ ಅವಳ ಕಣ್ಣೆದುರಿಗೇ ಸಾಯುವಂತೆ ಮಾಡಿದರು.[೧೧೫] ಪರರ ದ್ರವ್ಯವನ್ನು ಆಶಿಸಬಾರದು ಎಂಬುದರ ಪ್ರತೀಕವಾಗಿ ಈ ಪ್ರತಿಮೆ ಇಕ್ಕೇರಿ ದೇವಮ್ಮನ ಕಥೆಯಲ್ಲಿ ನಿರೂಪಿಸಲ್ಪಟ್ಟಿದೆ. ಮೂಗಯ್ಯನ ಕಥೆಯಲ್ಲಿ ಬರುವ ಮಾದೇಶ್ವರರು ನಾಗರಹಾವಾಗಿ ಮೂಗಯ್ಯನನ್ನು ಕಚ್ಚಿ ಸಾಯಿಸುವುದು, ಪಟ್ಟದ ರಂಗಸ್ವಾಮಿ, ಮುಡುಕು ತೊರೆಯಲ್ಲಿ ಮಲ್ಲಿಕಾರ್ಜುನರು ಇಕ್ಕೇರಿ ದೇವಮ್ಮನ ತಂಗಿಯಿಂದ ಶುದ್ಧವಾದ ಕಜ್ಜಾಯವನ್ನು ಕಿತ್ತುಕೊಂಡು ಅದನ್ನು ತಾವು ಬಿಡಿಸಿಕೊಂಡು, ವಿಷದ ಕಜ್ಜಾಯವನ್ನು ತಮ್ಮ ಜೋಳಿಗೆಗೆ ಹಾಕಿಕೊಂಡು ಅದನ್ನು ಇಕ್ಕೇರಿ ದೇವಮ್ಮನ ಮಕ್ಕಳಿಗೆ ಕೊಡುವ ಹಲವಾರು ಆಶಯಗಳನ್ನು ಈ ಎರಡೂ ಪ್ರಸಂಗಗಳಲ್ಲಿ ಕಾಣಬಹುದು.

ದೇವರ, ಗುರುವಿನ ನಾಮಸ್ಮರಣೆ ಮಾಡುವುದರಿಂದ ಇಷ್ಟಾರ್ಥಗಳು ನೆರವೇರುತ್ತದೆ. ಇದಕ್ಕೆ ನಾಮಸ್ಮರಣೆಯ ಪವಾಡ ಎಂದು ಹೆಸರು. ಕುಂತೂರಿನಲ್ಲಿ ಮಾದೇಶ್ವರರು ಗುರುಗಳ ನಾಮಸ್ಮರಣೆ ಮಾಡಿ ಗೊದ್ದೆ ಗೋಸುಂಬೆಗಳನ್ನು ನೀರಿಗೆ

ಆದ್ದಿ ಹೂವನ್ನಾಗಿ ಮಾಡಿದರು.[೧೧೬] ಗುರುವಿನ ಮಹಿಮೆ ಎಂಥದ್ದು ಎಂಬುದನ್ನು ಹೇಳುವ ಉದ್ದೇಶದಿಂದ ಈ ಪವಾಡವೆಸಗಬೇಕಾಯಿತು. ಗುರುವಿನ ಗುಲಾಮನಾಗುವ ತನಕ ಮುಕ್ತಿ ಸಿಗದು ಎಂಬುದಕ್ಕೆ ಪೂರಕವಾಗಿ ಬಂದ ಪವಾಡ ಇದು. ಗುರುಗಳಲ್ಲಿ ನಿಜವಾದ ಭಕ್ತಿ ಇದ್ದುದಕ್ಕೆ ಗೊದ್ದೆ ಗೋಸಂಬೆಗಳೂ ಹೂವಾದುವು. ಇದೇ ಪ್ರಭುದೇವರ ಮಿಕ್ಕ ಶಿಷ್ಯರು ಮಾದೇಶ್ವರರು ಮಾಡಿದಂತೆ ಮಾಡಲು, ಹಾವು ಚೇಳುಗಳು ಗುರುಗಳ ಮುಂದೆ ಓಡಾಡಿದವು.[೧೧೭] ಗುರುಭಕ್ತಿ ಇದ್ದರೆ ಏನನ್ನಾದರೂ ಸಾಧಿಸಬಹುದು ಎಂಬ ಪ್ರತಿಮೆಯನ್ನು ಈ ಜನಪದ ಕಾವ್ಯದಲ್ಲಿ ಕವಿ ತಂದಿದ್ದಾನೆ.

ಹೀಗೆ ಮಾದೇಶ್ವರ ಕಾವ್ಯ ಪವಾಡಮಯವಾಗಿದೆ. ಹಾಗೆಯೇ ಆಶಯಗಳು ಪೂರಕವಾಗಿ ಬಂದಿವೆ. ಸತ್ಯಪರೀಕ್ಷೆಗಾಗಿ, ಲೋಕಕಲ್ಯಾಣಕ್ಕಾಗಿ ದುಷ್ಟರ ನಿಗ್ರಹಕ್ಕಾಗಿ, ಅನಿವಾರ್ಯವಾಗಿ ಮಾದೇಶ್ವರರು ಪವಾಡಗಳನ್ನು ಮಾಡಿ ಅವರು ಒಳ್ಳೆಯ ದಾರಿಗೆ ಬರಲು ನೆರವಾದರು.

### ಟಿಪ್ಪಣಿಗಳು

೧. ಜೀರಿಗೆ ಕಟ್ಟೆ ಬಸಪ್ಪ, ಕರ್ನಾಟಕ. ಯಾತ್ರೆ, ಪ್ರ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೭೧-೭೨, ೧೯೭೩.

೨. ಎ.ಕ. IV, ಸಂಪುಟ ೪, ಪ್ರ|| ಮೈಸೂರು ವಿಶ್ವವಿದ್ಯಾನಿಲಯ, ಪು. ೪೫೨, ೧೯೭೫.

೩. ಸಿ. ನಾಗರಾಜು, ಸಾಲೂರು ಮಠ, ಶಾಂತಮಲ್ಲಿಕಾರ್ಜುನ ಪ್ರಕಾಶನ, ಸಾಲೂರು ಮಠ, ಮಾದೇಶ್ವರ ಬೆಟ್ಟ, ೧೯೭೯.

೪. ಕಂಸಾಳೆ ಕಥಾ ಸಂಪ್ರದಾಯ-೩.

೫. ಕಂಸಾಳೆ ಕಥಾ ಸಂಪ್ರದಾಯ-೬.

೬. ಸಂ. ಶ್ರೀ ಉತ್ತಂಗಿ ಚನ್ನಪ್ಪನವರು, ಆದಯ್ಯನ ವಚನ, ಪು. ೧೯೬, ಶ್ರೀ ನಿ.ಪ್ರ.ಸ್ವ., ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ, ವಚನ-೩೫೧: ೧೯೫೭.

೭. ಸಂ. ಬಿ. ಶಿವಮೂರ್ತಿ ಶಾಸ್ತ್ರೀ, ಮಾದೇಶ್ವರ ಸಾಂಗತ್ಯ, ಶರಣ ಸಾಹಿತ್ಯ ಗ್ರಂಥಮಾಲೆ, ಬೆಂಗಳೂರು, ೧೯೭೭.

೮. ಸಂ. ಗೊ.ರು. ಚನ್ನಬಸಪ್ಪ, ಕರ್ನಾಟಕ ಜನಪದ ಕಲೆಗಳು, ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

೯. ಆರಿಯೋನ್ ಎಂಬ ಮೇಧಾವಿ ಕ್ರಮ ನಿಮಯಗಳಿಲ್ಲದೆ ಚಲಪ್ಲವ ರೂಪದಲ್ಲಿ ಹಳ್ಳಿಯ ಹಾಡಾಗಿಯೇ ಉಳಿದಿದ್ದ ದೀಥುರಂಬೋಸ್ ಗೀತೆಗಳಿಗೆ ನಿಷ್ಕೃಷ್ಟ ಸ್ವರೂಪಕೊಟ್ಟು ವ್ಯವಸ್ಥೆಗೊಳಿಸಿದ ಈ ಕಾಲಕ್ಕೆ ಮೇಳದವರ ಸಂಖ್ಯೆ ಐವತ್ತು ಎಂದು ಗೊತ್ತಾಗಿತ್ತಲ್ಲದೆ, ಗೀತೆಗಳನ್ನು ಬಲಮುರಿ, ಎಡಮುರಿಗಳಾಗಿ ಸಮಜೋಡಿಯಲ್ಲಿ

ಕಟ್ಟುವ ಪದ್ಧತಿ ಒಂದು ನಾಟಕ ದೃಷ್ಟಿಯಿಂದ ಗಮನಿಸಬೇಕಾದ ಮಾರ್ಪಾಡೆಂದರೆ ಆರಿಯೋನ್ ಗೀತೆಗಳ ನಡುವೆ ಮೇಳ ನಾಯಕ ಅಟ್ಟಣಿಯನ್ನು ಹತ್ತಿನಿಂತು ಕೆಳಕಣದಲ್ಲಿದ್ದ ಮೇಳದವರೊಡನೆ ಭಾಷಣ, ಪದ್ಯಗಳ ಮೂಲಕ ನಡೆಯುತ್ತಿದ್ದ ಕಥನ ಸ್ವರೂಪದ ಆ ಸಂವಾದಗಳೇ ಗ್ರೀಕ್ ನಾಟಕದ ತಳಹದಿ ಎನ್ನಬಹುದು. ಭಾಷಣ ಪದ್ಯದ ಛಂದಸ್ಸು ಬೇರೆ ಬೇರೆಯಾಗಿದ್ದುವು. ಸಂವಾದ ಭಾಗ ಬೆಳೆದಂತೆಲ್ಲಾ ಕೇವಲ ಕಥಾಸ್ವರೂಪ ಹಿಮ್ಮೆಟ್ಟಿ, ನಾಟಕ ಸ್ವರೂಪ ನಿಧಾನವಾಯಿತು. ಮೊದಲು ಕಥನ ಗೀತೆಗಳು ದಿಯಯೊನೊಸೊಸ್ ದೇವತೆಗೆ ಸಂಬಂಧಿಸಿದ ಕಥೆಯಾಗಿದ್ದು ಅನಂತರ ಪುರಾಣ ಕಥೆಗಳು ನಾಟಕದ ವಸ್ತುವಾಗುತ್ತಾ ಬಂದವು.

ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರಿಗೆ ಅವರು ಶಿಷ್ಯರು ಮಿತ್ರರು, ಒಪ್ಪಿಸಿದ ಪ್ರಬಂಧಗಳ ಸಂಪುಟ. ಲೇ।। ಕೆ.ವಿ. ರಾಘವಾಚಾರ್, ಲೇಖನ, ಗ್ರೀಕ್ ರುದ್ರನಾಟಕ ೧೯೪೧, ಪು. ೪೭೦-೪೭೧.

೧೦. **ಕ್ವಾರಣ್ಯ:**

ಹಳ್ಳಿಗಳಲ್ಲಿರುವ ಕಂತೆಮಠದ ಸ್ವಾಮಿಗಳು ಕಾವಿಯುಟ್ಟು, ಕಾಲಿಗೆ ಜಂಗನ್ನು ಧರಿಸಿ ಭಕ್ತರ ಮನೆಗೆ ಹೋಗಿ "ಗುರು ಕೋರಾನ್ನ ಭಿಕ್ಷಾ" ಎಂದು ಹೇಳಿ ಭಿಕ್ಷೆಯನ್ನು ತೆಗೆದುಕೊಂಡು ಹೋಗಿ, ಮಠಕ್ಕೆ ಬರುವ ಅತಿಥಿಗಳಿಗೆ ದಾಸೋಹ ನೀಡುವರು. 'ಕೋರನ್ನ' ಎಂದರೆ ಅನ್ನವನ್ನು ಕೋರುವ ಭಿಕ್ಷೆ. ಇದಕ್ಕೆ ಕ್ವಾರಣ್ಯ ಎಂದೂ ಹೇಳುವರು. ಕ್ವಾರಣ್ಯ ಎಂದರೆ ಕರುಣೆಯಿಂದ ನೀಡುವ ಭಿಕ್ಷೆ. ಇದು ಜನಪದರ ಬಾಯಿಯಲ್ಲಿ ಕ್ವಾರಣ್ಯ ರೂಪವನ್ನು ಪಡೆಯಿತು. ಮಾದೇಶ್ವರರ ಗುಡ್ಡರು ಸೋಮವಾರ, ಶುಕ್ರವಾರ ಕ್ವಾರಣ್ಯ ಮಾಡುತ್ತಾರೆ.

೧೧. ಜೀ.ಶಂ. ಪರಮಶಿವಯ್ಯ -ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೧೨. ಪಿ.ಕೆ. ರಾಜಶೇಖರ: ಮಲೆಯ ಮಾದೇಶ್ವರ-೧, ಪ್ರಸ್ತಾವನೆ ಪು. ೪೦ ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು, ೧೯೭೩.

೧೩. ಸಂ. ಗೊ.ರು. ಚನ್ನಬಸಪ್ಪ, ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೨೧, ೧೯೭೭.

೧೪. **ದೇವರ ಗುಡ್ಡರಾಗಿ ದೀಕ್ಷೆ:**

ಮಂಟೇಸ್ವಾಮಿ ಒಕ್ಕಲಿನವರು 'ಏಳು ವರ್ಷದ ಹುಡುಗನಿಗೆ ಬೊಪ್ಪೇಗೌಡನ ಮಠದಲ್ಲೋ, ಕಪ್ಪಡಿ, ಚಿಕ್ಕಲ್ಲೂರು ಜಾತ್ರೆಗಳಲ್ಲೋ ದೀಕ್ಷಾ ಕಾರ್ಯವನ್ನು ಮಾಡಿಸುತ್ತಾರೆ. ಪುರುಸೇಕಾರಿ ಒಂಟಿ ಮಣಿಯನ್ನು ಕತ್ತಿಗೆ ಕಟ್ಟಿ ಉಪದೇಶಿಸುತ್ತಾನೆ. ಗುಡ್ಡನಾದವನು "ಧರ್ಮಪುರಿ ರಾಚಯ್ಯನ ಭಿಕ್ಷವೋ" ಎಂದು ಹೇಳಿ ನಾಲ್ಕು ಜನ ನೀಲಗಾರರೊಡನೆ ಭಿಕ್ಷೆ ಸಾರುತ್ತಾನೆ. ಮಕ್ಕಳಿಲ್ಲದಿದ್ದರೆ ದತ್ತು ತೆಗೆದು ಕೊಂಡು ದೀಕ್ಷೆ ಕೊಡಿಸಬಹುದು. ಚೌಡಿಕೆಯವರು (ಗೊಂದಲಿಗರು) ಹಳದಿ ಮಣಿಗಳನ್ನು ಕಟ್ಟಿ, ಕಿವಿಯಲ್ಲಿ ಗುರು ಮಂತ್ರವನ್ನು ಉಪದೇಶಿಸುತ್ತಾನೆ.

"ಪುರುಷ ವೇಷದ ಸ್ತ್ರೀಯರು, ಸ್ತ್ರೀವೇಷದ ಪುರುಷರುಗಳಿಗೆ ಜೋಗತಿ, ಜೋಗಪ್ಪ ಎಂದು ಕರೆಯುತ್ತಾರೆ. ಚಿಕ್ಕ ವಯಸ್ಸಿನಲ್ಲಿ ಜೋಗತಿಯಾಗಿ ದೀಕ್ಷೆ ಪಡೆದರೆ ವಿವಾಹವಾಗದೇ ಉಳಿಯುತ್ತಾರೆ. ದೇವಿಯ ಹಡ್ಲಿಗೆ (ಬಿದುರಿನ ಬುಟ್ಟಿಯಲ್ಲಿ ಹಾಕುವ ಪೂಜಾ ಸಾಹಿತ್ಯ) ತುಂಬಿಸಿ, ಊಟ ಹಾಕಿ, ಬೇವಿನ ಸೊಪ್ಪನ್ನು ದಾರದಲ್ಲಿ ಕಟ್ಟಿಕೊಂಡು ಕಾಲಿಗೆ ಗೆಜ್ಜೆ, ಕೊರಳಲ್ಲಿ ಸರ, ಐದು ಮುತ್ತುಗಳನ್ನು ಧರಿಸಿ ದೇವಿಯನ್ನು ಸ್ತುತಿಸುತ್ತಾ ನೃತ್ಯ ಮಾಡುವರು. ಗಂಡಸರು ಹೆಂಗಸರಂತೆ ನಡೆದುಕೊಳ್ಳುವುದನ್ನು ಪರಶುರಾಮನ ಅವತಾರ ಎಂದು ಹೇಳುವರು" ಎಂದು ಏಳು ಕೊಳ್ಳದ ಎಲ್ಲಮ್ಮ ಎಂಬ ಹೊತ್ತಗೆಯಲ್ಲಿ ಮತಿಘಟ್ಟ ಕೃಷ್ಣಮೂರ್ತಿಯವರು ಹೇಳಿದ್ದಾರೆ (ಪು. ೩೪). ಹರಿಜನ, ಹಾಲುಮತದವರಲ್ಲಿ ಈ ದೀಕ್ಷಾಕಾರ್ಯ ನಡೆಯುತ್ತದೆ.

ಮೈಲಾರಲಿಂಗನ ಗುಡ್ಡರಿಗೆ ಗೊರವರು, ಗೊಗ್ಗಯ್ಯ, ಗಡಬಡ್ಡಯ್ಯ ಎನ್ನುವರು. ಹಾಲುಮತದವರೇ ಮೈಲಾರಲಿಂಗನ ಗುಡ್ಡರಾಗುವುದು ಹೆಚ್ಚು. ಹರಿಜನ ಮತ್ತಿತರರು ಗುಡ್ಡರಾಗುವುದು ಕಡಿಮೆ. ದನ ಹೊಲದಲ್ಲಿ ಮೇಯುತ್ತಿದ್ದರೂ ಮೇಯುತ್ತದೆ ಎಂದು ಹೇಳುವುದಿಲ್ಲ. ಗಾಡಿಯಮೇಲೆ ಕೂರುವುದಿಲ್ಲ. ತಂದೆ ತಾಯಿಯರನ್ನು ದೂಷಣೆ ಮಾಡುವುದಿಲ್ಲ. ಮುದುಕು ತೊರೆಯಲ್ಲಿರುವವರಿಗೆ 'ಪಾರ್ವತಿ ಗೊರವರು' ಎಂದು ಹೆಸರು. ಉತ್ತರ ಕರ್ನಾಟಕದ ಗೊರವರು ಕಂಬಳಿ, ನಿಲುವಂಗಿ, ಹುಲ್ಲೆಯ ಚರ್ಮದ ಭಂಡಾರ, ಪೇಟ, ಕವಡೆಸರ, ಹೆಗಲಲ್ಲಿ ಭಿಕ್ಷಾಪಾತ್ರ, ದೋಣಿ, ಕೈಯಲ್ಲಿ ಢಮರುಗ ತ್ರಿಶೂಲ ಹಿಡಿದು ತಲೆಯ ಮೇಲೆ ಬಿಳಿ ರುಮಾಲು ಸುತ್ತುವರು. ದಕ್ಷಿಣ ಕರ್ನಾಟಕದ ಗೊರವರು ಒಕ್ಕಳ ಗಂಟೆ, ಹುಲಿಯ ಚರ್ಮ, ರಟ್ಟಬಳೆ, ಕಾಲುಗೆಜ್ಜೆ, ಕೊರಳಲ್ಲಿ ಕವಡೆ, ಭಂಡಾರ ಚೀಲ, ಪಿಳ್ಳಂಗೋವಿ ಹೊಂದಿರುತ್ತಾರೆ. ಹಣೆ ಕಣ್ಣುಗಳ ಸುತ್ತಾ ವಿಭೂತಿ ಕುಂಕುಮವನ್ನು ಲೇಪಿಸಿಕೊಂಡಿರುತ್ತಾರೆ. ಗುರುಗಳು ಶಿಷ್ಯನಿಗೆ ತಮ್ಮ ದೇವರ ಹೆಸರಿನಲ್ಲಿ ಪ್ರಮಾಣ ಮಾಡಿಸಿ ದೀಕ್ಷೆ ನೀಡುತ್ತಾರೆ.

"ಕಾಡುಗೊಲ್ಲರ ದೀಕ್ಷೆ ಪಡೆದು ಗಣೆಯನ್ನು ಹೊತ್ತು ಜುಂಜಪ್ಪನ ಮಹಿಮೆಯನ್ನು ಪ್ರಸಾರ ಮಾಡುವರು. ಇವರಿಗೆ ಗಣೆಯವರು (ಕಾಣೆಕೆಯವರು) ಎಂದೂ ಕರೆಯುವರು. ಗಣೆ ನವಿಲುಗರಿಗಳಿಂದ ಅಲಂಕರಿಸಿದ ಒಂದು ದೊಡ್ಡ ಬಿದಿರು ಕೋಲು ಇದರ ತುದಿಗೆ ಒಂದು ಗಂಟೆಯನ್ನು ಕಟ್ಟಿರುತ್ತಾರೆ. ಇದಲ್ಲದೆ ನಾಗಬೆತ್ತ, ಶಂಖ, ಜಾಗಟೆ, ಗೊಂಡೇವುಗಳು, ಲೋಹದ ನಾಗರ ಹೆಡೆಯನ್ನು ಹೊಂದಿರುತ್ತಾರೆ. ಗಣೆಯವರು ಕೊರಳಿಗೆ ಒಂಟಿನಾಮ, ರುದ್ರಾಕ್ಷಿ, ಹಣೆಯಲ್ಲಿ ನಾಮವನ್ನು ಧರಿಸಿಕೊಂಡಿರುತ್ತಾರೆ. ಮಕ್ಕಳಿಗೆ ಹಾವು ಚೇಳು ಕಾಣಿಸಿಕೊಳ್ಳದೇ ಇರಲಿ ಎಂದು ಹರಕೆ ಎಣ್ಣೆ ಗಡಿಗೆಗೆ ಕಾಸನ್ನು ಹಾಕುತ್ತಾರೆ."

ಎಂಬುದಾಗಿ ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳಲ್ಲಿ ಜೀ.ಶಂ. ಪರಮಶಿವಯ್ಯನವರು ವಿವರಿಸಿದ್ದಾರೆ.

೧೫. ಶಿವಮೂರ್ತಿ ಶಾಸ್ತ್ರೀ ಬಿ. (ಸಂ.) ಮಾದೇಶ್ವರ ಸಾಂಗತ್ಯ, ಶರಣ ಸಾಹಿತ್ಯ ಕಾರ್ಯಾಲಯ, ರಂಗಸ್ವಾಮಿಗುಡಿ ಬೀದಿ, ಬೆಂಗಳೂರು, ೧೯೫೫.

೧೬. ನಂಜುಂಡಾರಾಧ್ಯರು ಎಂ.ಜಿ., ಶಿವರಾತ್ರಿ ಶಿವಾಚಾರ್ಯ, ಪು. ೭೩-೭೫, ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಶಿವರಾತ್ರೀಶ್ವರ ವಿದ್ಯಾಪೀಠ, ಮೈಸೂರು, ೧೯೬೧.

೧೭. ಸಂಗಪ್ಪ ಶಾಸ್ತ್ರಿ ವೇ., ಸುತ್ತೂರು ಸಿಂಹಾಸನದ ಗುರುಪರಂಪರೆ, ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಶಿವರಾತ್ರೀಶ್ವರ ವಿದ್ಯಾಪೀಠ, ಮೈಸೂರು, ಪು. ೨೧, ಪ. ೨, ೧೯೩೩.

೧೮. ಕಂಸಾಳೆ ಕಥಾ ಸಂಪ್ರದಾಯ ೮

೧೯. ಅದೇ, ೮

೨೦. ಕಂಸಾಳೆ ಕಥಾ ಸಂಪ್ರದಾಯ ೯

೨೧. ಅದೇ, ೯

೨೨. ಕಂಸಾಳೆ ಕಥಾ ಸಂಪ್ರದಾಯ ೧೨

೨೩. ಪರಮಶಿವಯ್ಯ ಜೀ.ಶಂ., ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯.

೨೪. ಕಂಸಾಳೆ ಕಥಾ ಸಂಪ್ರದಾಯ ೧.

೨೫. ಪರಮಶಿವಯ್ಯ ಜೀ.ಶಂ., ಜನಪದ ಕಾವ್ಯ ಕಥೆಗಳು, ಸುರುಚಿ ಪ್ರಕಾಶನ, ಮೈಸೂರು, ೧೯೭೦.

೨೬. ಎಪಿಗ್ರಾಫಿಯಾ ಕರ್ನಾಟಕ ಕೊಳ್ಳೇಗಾಲ, ಶಾಸನ ೧, ಕುಂತೂರು, ಪು. ೪೦೧-೪೦೩.

೨೭. ನಾಯಕ, ಹಾ.ಮಾ. (ಸಂ.) ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೯೯೪, ೧೯೭೯.

೨೮. ಮಂಜುಳಾದೇವಿ, ಮಾಯಕಾರ ಮಲೆ ಮಾದೇಶ್ವರ ಸ್ವಾಮಿ ಚರಿತ್ರೆ, ಶಿವರಾಮಪೇಟೆ, ಮೈಸೂರು, ಪು. ೨೦, ೧೯೬೨.

೨೯. ಪುಟ್ಟಮಲ್ಲಪ್ಪ ಬಿ. ಎಪ್ಪತ್ತೇಳು ಮಲೆಯೊಳಗೆ ನಾಟ್ಯವಾಡುತ್ತಿರುವ ಮಾಯಕಾರ ಮಾದೇಶ್ವರ ಚರಿತ್ರೆ, ಮೈಸೂರು, ೧೯೫೪.

೩೦. ದೇವಚಂದ್ರ, ಕಾಗದದ ಪ್ರತಿ, ಕೆ.ಎ. ೬೫, ಪುಟ ೨೮೩-೨೮೪, ರಾಜಾವಳಿ ಕಥೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೩೧. ಸಾ.ಶಿ. ಮರುಳಯ್ಯ, ಕೆಳದಿಯ ಅರಸರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೨. ಸಂಗಪ್ಪ ಶಾಸ್ತ್ರಿ ವೇ. ಸುತ್ತೂರು ಸಿಂಹಾಸನ ಗುರುಪರಂಪರೆ ಶಿವರಾತ್ರೀಶ್ವರ ಗ್ರಂಥಮಾಲಾ, ಶಿವರಾತ್ರೀಶ್ವರ ವಿದ್ಯಾಪೀಠ, ಮೈಸೂರು, ೧೯೩೩.

೩೩. ಕಂಸಾಳೆ ಕಥಾ ಸಂಪ್ರದಾಯ ೧.

೩೪. ಶಾಮರಾವ್, ತ.ಸು., (ಸಂ.) ಶಿವಶರಣ ಕಥಾ ರತ್ನಕೋಶ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ಪು. ೩೨೧-೨೨೨, ೧೯೬೭.

೩೫. ಕಂಸಾಳೆ ಕಥಾ ಸಂಪ್ರದಾಯ ೩.

೩೬. ಕಂಸಾಳೆ ಕಥಾ ಸಂಪ್ರದಾಯ ೬.

೩೭. ಅದೇ, ೬.

೩೮. ಕಂಸಾಳೆ ಕಥಾ ಸಂಪ್ರದಾಯ ೧.

೩೯. ಕಂಸಾಳೆ ಕಥಾ ಸಂಪ್ರದಾಯ ೩.

೪೦. ಕಂಸಾಳೆ ಕಥಾ ಸಂಪ್ರದಾಯ ೭.

೪೧. ಪರಮಶಿವಯ್ಯ ಜೀ.ಶಂ., ಕಂಸಾಳೆಯವರು, ಐ.ಬಿ.ಎಚ್. ಪ್ರಕಾಶನ, ಗಾಂಧೀನಗರ, ಬೆಂಗಳೂರು, ೧೯೭೮.

೪೨. ಕಂಸಾಳೆ ಕಥಾ ಸಂಪ್ರದಾಯ ೨.

೪೩. ಕಂಸಾಳೆ ಕಥಾ ಸಂಪ್ರದಾಯ ೮.

೪೪. ಕಂಸಾಳೆ ಕಥಾ ಸಂಪ್ರದಾಯ ೯.

೪೫. ಸಿದ್ದಪ್ಪಶಾಸ್ತ್ರಿ, ಮಲೆ ಮಾದೇಶ್ವರ ನಿಜಪುರಾಣ, ಕುಂತೂರು, ೪೪-೪೫, ೧೯೭೦.

೪೬. ದೇವಚಂದ್ರ, ರಾಜಾವಳಿ ಕಥೆ, ಅಪ್ರಕಟಿತ, ಪು. ೨೮೨-೨೮೪, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ಕಾಗದದ ಪತ್ರ, ಕೆ.ಎ. ೬೫.

೪೭. ಪುಟ್ಟಮಲ್ಲಪ್ಪ ಬಿ., ಎಪ್ಪತ್ತೇಳು ಮಲೆಯೊಳಗೆ ನಾಟ್ಯವಾಡುತ್ತಿರುವ ಮಾಯಕಾರ ಮಾದೇಶ್ವರನ ಚರಿತ್ರೆ, ಮೈಸೂರು, ೧೯೫೪.

೪೮. ಶಿವಮೂರ್ತಿ ಶಾಸ್ತ್ರೀ. ಬಿ., ಶ್ರೀಮಾದೇಶ್ವರ ಚರಿತ್ರೆ, ಧರ್ಮದರ್ಶಿಗಳ ಸಮಿತಿ, ಶ್ರೀ ಮಾದೇಶ್ವರ ದೇವಾಲಯ, ೧೯೫೪.

೪೯. ನಂಜುಂಡಾರಾಧ್ಯ ಎಂ.ಜಿ., ಮಾದೇಶ್ವರ ಸುಪ್ರಭಾತ.

೫೦. ನಂಜುಂಡಾರಾಧ್ಯ ಎಂ.ಜಿ., ಶಿವರಾತ್ರಿ ಶಿವಾಚಾರ್ಯ, ಜಗದ್ಗುರು, ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು, ೧೯೬೧.

೫೧. ಹಿರೇಮಠ ಆರ್.ಸಿ., (ಸಂ.) ತೋಂಟದ ಸಿದ್ಧಲಿಂಗಶಿವಯೋಗಿ, ಷಟ್ಸ್ಥಲಜ್ಞಾನ ಸಾರಾಮೃತ, ಮುರುಘಾಮಠ, ಧಾರವಾಡ, ಪು. ೫, ವ. ೮, ೧೯೬೪.

೫೨. ತಲಕಾಡು ವಿ. ಮಾದಯ್ಯ, ಮಲೆಮಾದೇಶ್ವರ ಚರಿತ್ರೆ, ಕೆ.ಎಸ್.ಕೆ. ಪ್ರಿಂಟರ್ಸ್, ಬೆಂಗಳೂರು, (೧೯೬೯), ೧೯೭೦.

೫೩. ನಂಜಪ್ಪ, ವ್ಯಾಘ್ರವಾಹನ ಮುದ್ದುಮಾದೇಶ್ವರ ಚರಿತ್ರೆ, ೧೯೭೦.

೫೪. ಸಿದ್ದಪ್ಪಶಾಸ್ತ್ರೀ, ಕುಂತೂರು, ಮಲೆ ಮಾದೇಶ್ವರ ನಿಜಪುರಾಣ, ಕುಂತೂರು, ೧೯೭೦.

೫೫. ಮಂಜುಳಾದೇವಿ, ಮಾಯಕಾರ ಮಲೆ ಮಾದೇಶ್ವರಸ್ವಾಮಿ ಚರಿತ್ರೆ, ಎಸ್.ಕೆ.ಎಸ್. ಪ್ರಿಂಟರ್ಸ್. ಮೈಸೂರು, ೧೯೬೨.

೫೬. ಕಲಿರಾಯ, ಕಾಯಕ (ನಾಟಕ), ಪು. ೯೬, ಶಿವರಾತ್ರೀಶ್ವರ ಗ್ರಂಥಮಾಲಾ, ಶಿವರಾತ್ರೀಶ್ವರ ವಿದ್ಯಾಪೀಠ, ಮೈಸೂರು.

೫೭. ಸ್ವ. ಶಾಮರಾಯ ತ.ಸು., ಶಿವಕಥಾರತ್ನಕೋಶ, ಪು. ೩೨೧-೩೨೨, ತ.ವೆಂ. ಸ್ಮಾರಕ ಗ್ರಂಥಮಾಲೆ, ೧೯೬೭.

೫೮. ನಂಜುಂಡಪ್ಪ ಬಿ. (ಸಂ.) ಮತ್ತು ಎನ್. ಮಹಾದೇವಪ್ಪ, ದೇಗುಲ ಜ್ಯೋತಿ ಸಂಸ್ಮರಣ ಸಂಚಿಕೆ, ದೇಗುಲಮಠ, ಕನಕಪುರ ಪು. ೨೩, ೧೯೭೬.

೫೯. ನೀಲಾಂಬಿಕೆ ಎಂ.ಎಂ. ಜ್ಞಾನಾನ್ನ ದಾಸೋಹಿ, ಸರ್ವೋದಯ ಪ್ರಕಾಶನ, ಸರಸ್ವತಿಪುರ, ಮೈಸೂರು, ಪು. ೧೮, ೧೯೭೮.

೬೦. ಓ.ಎನ್. ಲಿಂಗಣ್ಣಯ್ಯ, ಶೂನ್ಯಸಿಂಹಾಸನ, ಶ್ರೀಶೈಲ ಕುಮಾರಿ ಗ್ರಂಥಮಾಲೆ, ಚಿತ್ರದುರ್ಗ, (೩೧೫, ೩೧೬, ೩೧೭, ೩೩೪, ೩೩೫), ೧೯೬೮.

೬೧. ಲೇಖಿನ, ಗೋವಿಂದಪೈ-ಕರ್ನಾಟಕಕ್ಕೆ ಜೈನ ಧರ್ಮ ಆಗಮನ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೨, ಸಂಚಿಕೆ ೧, ಪು. ೧೮, ಜೂನ್ ೧೯೪೧.

೬೨. ಕಂಸಾಳೆ ಕಥಾ ಸಂಪ್ರದಾಯ ೮.

೬೩. ಕಂಸಾಳೆ ಕಥಾ ಸಂಪ್ರದಾಯ ೨.

೬೪. ಕಂಸಾಳೆ ಕಥಾ ಸಂಪ್ರದಾಯ ೧.

೬೫. ಕಂಸಾಳೆ ಕಥಾ ಸಂಪ್ರದಾಯ ೬.

೬೬. ಕಂಸಾಳೆ ಕಥಾ ಸಂಪ್ರದಾಯ ೭.

೬೭. ಸ.ಚ. ಮಹಾದೇವ ನಾಯಕ, ನಾನೆದ್ದು ನೆನೆದೇನು, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೨.

೬೮. ರಾಜಶೇಖರ, ಪಿ.ಕೆ. ಕಂಸಾಳೆ ಕಥಾ ಸಂಪ್ರದಾಯ ೮, ಪು. ೧೨೨೯, ಮಲೆಯ ಮಾದೇಶ್ವರ, ಮೈಸೂರು, ೧೯೭೩.

೬೯. ಗೊರೂರು ರಾಮಸ್ವಾಮಿ ಅಯ್ಯಂಗಾರ್, (ಸಂ) ಹಳ್ಳಿಯ ಹಾಡುಗಳು, ಪು. ೯, ಶಾರದಾಮಂದಿರ, ಮೈಸೂರು, ೧೯೩೮.

೭೦. ಸ.ಚ. ಮಹಾದೇವ ನಾಯಕ, ನಾನೆದ್ದು ನೆನೆದೇನು, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೨.

೭೧. ಕಂಸಾಳೆ ಕಥಾ ಸಂಪ್ರದಾಯ ೬.

೭೨. ಕಂಸಾಳೆ ಕಥಾ ಸಂಪ್ರದಾಯ ೩.

೭೩. ಕಂಸಾಳೆ ಕಥಾ ಸಂಪ್ರದಾಯ ೫.

೭೪. ಕಂಸಾಳೆ ಕಥಾ ಸಂಪ್ರದಾಯ ೧.

೭೫. 'ನೋಟಕ್ಕೆ ಗದ್ದುಗೆಯಂತೆ ಕಾಣುವುದೇ ತೋರುಗದ್ದುಗೆ. ಮಾದೇಶ್ವರರು ಲಿಂಗೈಕ್ಯರಾಗುವ ಮೊದಲು ಚರಿಸಿದ, ಅನೇಕ ಸ್ಥಳಗಳಲ್ಲಿ ಅವರು ಅನುಷ್ಠಾನವೆಸಗಿದ ಪ್ರದೇಶದಲ್ಲಿ ಭಕ್ತರು ಗದ್ದುಗೆಯನ್ನು ಏರ್ಪಡಿಸಿ ಮಾದೇಶ್ವರರ ಪೂಜೆ ಮಾಡಿದರು. ಅದೇ ತೋರುಗದ್ದುಗೆಗಳಾಗಿ ಪರಿಣಮಿಸಿದವು ಎಂದು ಕಾಣಿಸುತ್ತದೆ. ಪ್ರತಿವರ್ಷವೂ ಮಾದೇಶ್ವರನ ಭಕ್ತರು ಶ್ರೀಕ್ಷೇತ್ರಕ್ಕೆ ಬರಲು ಅನಾನುಕೂಲಗಳಿರುತ್ತವೆ. ಅಂಥ ಸಂದರ್ಭದಲ್ಲಿ ದೇವರನ್ನು ನೆನೆದು ಪೂಜೆಮಾಡಿ ಆತ್ಮ ಸಂತೋಷವನ್ನು ಪಡೆಯಲು

ತೋರು ಗದ್ದುಗೆಗಳು ಸೃಷ್ಟಿಯಾದವು. ಇವು ಕರ್ನಾಟಕ, ತಮಿಳುನಾಡುಗಳಲ್ಲಿರುವುದನ್ನು ಕಾಣಬಹುದು. ಕರ್ನಾಟಕದ ಕನಕಪುರದ ಹತ್ತಿರದ ಸೋಮನಹಳ್ಳಿ, ರೇವಣಸಿದ್ದೇಶ್ವರಬೆಟ್ಟ, ಮೈಸೂರು, ಬೆಂಗಳೂರು, ಕನಕಗಿರಿ, ರಾಮಾಪುರ, ಚನ್ನಪಟ್ಟಣ, ನಂಜನಗೂಡು ತಾಲ್ಲೂಕು ಜೋಡಿಕಟ್ಟೆ, ಕೊಳ್ಳೇಗಾಲದ ಮಕ್ಕಳಾಟಿಕೆ ಮಾದೇಶ್ವರ, ಮರಡೀ ಗುಡ್ಡ, ಗೇರುಮಾಳ, ಹಲಗಾಪುರ, ಮಂಡ್ಯ, ನರಸೀಪುರ, ತಾಲ್ಲೂಕಿನ ಮುಡುಕುತೊರೆ ಭೀಮನಕೊಲ್ಲಿ (ಹೆಗ್ಗಡದೇವನಕೋಟೆ ತಾಲ್ಲೂಕು) ಸುತ್ತೂರು, ಚುಂಚನಹಳ್ಳಿ, ಸರಗೂರು, ಕಲ್ಲೂರು, ಪಿರಿಯಪಟ್ಟಣ, ಕುಂತೂರು, ಕನಕಪುರ, ತಾಲ್ಲೂಕಿನ ಮಳಗಾಳು, ಹೆಗ್ಗಡದೇವನಕೋಟೆಗೆ ಹೋಗುವಾಗ ೧೨ ಮೈಲಿ ದೂರದಲ್ಲಿರುವ ಹೆಣ್ಣೂಳೆ ದಡದಲ್ಲಿನ ಜೋಡಿಕಟ್ಟೆ ಆದಿ ಚುಂಚನಗಿರಿ ಹತ್ತಿರ, ಕೊರಟಗೆರೆ ತಾಲ್ಲೂಕು ಹೊಳವನಹಳ್ಳಿ ಹತ್ತಿರ ಬಿದಲೋಟಿ ಮುಂತಾದುವು.

ತಮಿಳುನಾಡಿನಲ್ಲಿ ನೀಲಗಿರಿ, ಕೊಯಮತ್ತೂರು, ಸೇಲಂ, ಪಂದೇಶ್ವರ, ಬರಗೂರುಗಳಲ್ಲಿ ಮಾದೇಶ್ವರ ತೋರುಗದ್ದುಗೆಗಳಿವೆ.

೭೬. ಶಿವಮೂರ್ತಿಶಾಸ್ತ್ರೀ ಬಿ., "ಮಾದೇಶ್ವರ ಸಾಂಗತ್ಯ", ಶರಣ ಸಾಹಿತ್ಯ ಕಾರ್ಯಾಲಯ, ರಂಗಸ್ವಾಮಿ ಗುಡಿ ಬೀದಿ, ಬೆಂಗಳೂರು.

೭೭. ಪುಟ್ಟಮಲ್ಲಪ್ಪ ಬಿ., ಎಪ್ಪತ್ತೇಳು ಮಲೆಯಲ್ಲಿ ನಾಟ್ಯವಾಡುತ್ತಿರುವ ಮಾಯಕಾರ ಮಲೆಯ ಮಾದೇಶ್ವರ ಚರಿತ್ರೆ, ಮೈಸೂರು, ೧೯೫೪.

೭೮. ಕುಂತೂರು ಸಿದ್ದಪ್ಪಶಾಸ್ತ್ರೀ, ಮಲೆಮಾದೇಶ್ವರ ನಿಜಪುರಾಣ, ಕುಂತೂರು, ೧೯೭೦.

೭೯. ಮಂಜುಳಾದೇವಿ, ಮಾಯಕಾರ ಮಲೆ ಮಾದೇಶ್ವರ ಸ್ವಾಮಿ ಚರಿತ್ರೆ, ಮೈಸೂರು, ೧೯೬೨.

೮೦. ತಲಕಾಡು ವಿ. ಮಾದಯ್ಯ, ಮಲೆಮಾದೇಶ್ವರ ಚರಿತ್ರೆ, ಕೆ.ಎಸ್.ಕೆ. ಪ್ರಿಂಟರ್ಸ್, ಬೆಂಗಳೂರು, ೧೯೬೬.

೮೧. ಸಂಜಪ್ಪ, ವ್ಯಾಘ್ರವಾಹನ ಮುದ್ದು ಮಾದೇಶ್ವರ ಚರಿತ್ರೆ, ಬೆಂಗಳೂರು, ೧೯೭೦.

೮೨. ಪರಮಶಿವಯ್ಯ ಜೀ.ಶಂ., ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೮೩. ಕಂಸಾಳೆ ಕಥಾ ಸಂಪ್ರದಾಯ ೪.

೮೪. ಕಂಸಾಳೆ ಕಥಾ ಸಂಪ್ರದಾಯ ೨.

೮೫. ಕಂಸಾಳೆ ಕಥಾ ಸಂಪ್ರದಾಯ ೩.

೮೬. ಮಹಾದೇವನಾಯಕ, ಸ.ಚ. ಜಾನಪದ ರಸಗಂಗೆ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೨.

೮೭. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೧೦೮, ೧೯೭೯.

೮೮. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೧೧೨.

೮೯. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪು. ೧೫೧, ೧೯೭೯.

೯೦. ಪಿ.ಕೆ. ರಾಜಶೇಖರ, ಮಲೆಯ ಮಾದೇಶ್ವರ, ಮೈಸೂರು, ಪ್ರಸ್ತಾವನೆ, ಪುಟ ೧೬.

೯೧. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪು. ೧೨೩, ೧೯೭೯.

೯೨. ಕಂಸಾಳೆ ಕಥಾ ಸಂಪ್ರದಾಯ ೧.

೯೩. ಕಂಸಾಳೆ ಕಥಾ ಸಂಪ್ರದಾಯ ೪.

೯೪. ಕಂಸಾಳೆ ಕಥಾ ಸಂಪ್ರದಾಯ ೬.

೯೫. ಕಂಸಾಳೆ ಕಥಾ ಸಂಪ್ರದಾಯ ೬.

೯೬. ಕಂಸಾಳೆ ಕಥಾ ಸಂಪ್ರದಾಯ ೮.

೯೭. ಕಂಸಾಳೆ ಕಥಾ ಸಂಪ್ರದಾಯ ೭.

೯೮. ಕಂಸಾಳೆ ಕಥಾ ಸಂಪ್ರದಾಯ ೪.

೯೯. ಕಂಸಾಳೆ ಕಥಾ ಸಂಪ್ರದಾಯ ೧.

೧೦೦. ಕಂಸಾಳೆ ಕಥಾ ಸಂಪ್ರದಾಯ ೨.

೧೦೧. ಕಂಸಾಳೆ ಕಥಾ ಸಂಪ್ರದಾಯ ೧.

೧೦೨. ಕಂಸಾಳೆ ಕಥಾ ಸಂಪ್ರದಾಯ ೧.

೧೦೩. ಕಂಸಾಳೆ ಕಥಾ ಸಂಪ್ರದಾಯ ೨.

೧೦೪. ಕಂಸಾಳೆ ಕಥಾ ಸಂಪ್ರದಾಯ ೩.

೧೦೫. ಕಂಸಾಳೆ ಕಥಾ ಸಂಪ್ರದಾಯ ೫.

೧೦೬. ಕಂಸಾಳೆ ಕಥಾ ಸಂಪ್ರದಾಯ ೬.

೧೦೭. ಕಂಸಾಳೆ ಕಥಾ ಸಂಪ್ರದಾಯ ೪.

೧೦೮. ಕಂಸಾಳೆ ಕಥಾ ಸಂಪ್ರದಾಯ ೭.

೧೦೯. ಕಂಸಾಳೆ ಕಥಾ ಸಂಪ್ರದಾಯ ೪.

೧೧೦. ಕಂಸಾಳೆ ಕಥಾ ಸಂಪ್ರದಾಯ ೮.

೧೧೧. ಕಂಸಾಳೆ ಕಥಾ ಸಂಪ್ರದಾಯ ೯.

೧೧೨. ಕಂಸಾಳೆ ಕಥಾ ಸಂಪ್ರದಾಯ ೪.

೧೧೩. ಕಂಸಾಳೆ ಕಥಾ ಸಂಪ್ರದಾಯ ೧.

೧೧೪. ಕಂಸಾಳೆ ಕಥಾ ಸಂಪ್ರದಾಯ ೧.

೧೧೫. ಕಂಸಾಳೆ ಕಥಾ ಸಂಪ್ರದಾಯ ೬.

೧೧೬. ಕಂಸಾಳೆ ಕಥಾ ಸಂಪ್ರದಾಯ ೧.

೧೧೭. ಕಂಸಾಳೆ ಕಥಾ ಸಂಪ್ರದಾಯ ೧.

# ೨. ಹುಟ್ಟಿ ಬೆಳೆದ ಸಾಲು

## ಮಂಗಳಾರತಿ ಮಾದೇವರಿಗೆ

"ಮಂಗಳಾರತಿ ಮಾದೇವರಿಗೆ
ಕಾರಯ್ಯ ಬಿಲ್ಲಯ್ಯ ದೇವರಿಗೆ
ಮಂಗಳಾರತಿ ಮಾದೇವರಿಗೆ

ಸರಣು ಸರಣು ಗುರುದೇವರಿಗೆ
ಮಂಗಳಾರತಿ ಮಾದೇವರಿಗೆ

ದೂಪ ದೀಪ ದೇವರಿಗೆ
ಮಂಗಳಾರತಿ ಮಾದೇವರಿಗೆ
ಸರಣು ಸರಣು ಗುರುದೇವರಿಗೆ
ಮಂಗಳಾರತಿ ಮಾದೇವರಿಗೆ

ಸರಣು ಸರಣು ಗುರುವೇ
ಇದ್ಯಾ ಬುದ್ದಿ ಕಲಿಸವರೆ
ಸರಣು ಸರಣು ಗುರುದೇವರಿಗೆ
ದೇವ ದೇವ ದೇವರಿಗೆ
ಮಂಗಳಾರ್ತಿ ಮಾದೇವರಿಗೆ

ದೂಪ ದೀಪ ದೇವರಿಗೆ
ಕಾರಯ್ಯ ಬಿಲ್ಲಯ್ಯ ದೇವರಿಗೆ
ಸರಣು ಸರಣು ಗುರುದೇವರಿಗೆ
ಸರಣಾರ್ತಿ ಗುರು ಧ್ಯಾವರಿಗೆ
ಮಂಗಳಾರ್ತಿ ಮಾದೇವರಿಗೆ

ಮಂಗಳಾರತಿ ಎತ್ತುವರೆ
ಮಾದೇವ ನಿನ್ಗೆ ಬೆಳ್ಗಿದರು ಆರುತಿಯ
ಮಂಗಳಾರತಿ ಎತ್ತಿದರು ಶಿವನಿಗೆ
ನಿಮಗೆ ಮಂಗಳಾರತಿ ಎತ್ತಿದರು ಗುರುದೇವಾ

ಹೂವ ಚೆಲ್ಲಾಡಿ ಬನ್ನಿರೋ ಮಾದೇವನಿಗೆ
ಪುಸ್ಪ ಚೆಲ್ಲಾಡಿ ಬನ್ನಿರೋ
ಮಂಗಳಾರತಿ ಎತ್ತಿ ಬನ್ನಿರೋ

ಅಯ್ಯೋ ಮೊಗ್ಗು ಚೆಲ್ಲಾಡಿ ಬನ್ನಿರೋ
ಮಾದೇವಗೆ ಕಮಲಾ ಚೆಲ್ಲಾಡ ಬನ್ನಿರೊ
ಹೂವ ತರುವಾಗ ಸರಣೆಂದು
ದೇವ ಬೇಡುವೆನಯ್ಯಾ ಸಿವನೆ ನಿಮಗೆ

ಮಂಗಳಾರ್ತಿ ಎತ್ತಿ ಬನ್ನಿರೊ
ಮಂಗಳಾರ್ತಿ ಎತ್ತಿ ಬನ್ನಿರೊ
ಮಾದೇವಗೆ ಕಮಲಾ ಚೆಲ್ಲಾಡ ಬನ್ನಿರೋ॥''[೧]

"ಗುರುಗಳೆ ನಿಮ್ಮ ಪಾದವ ನೆನೆವೆನು
ಮತಿಗಳ ಕರುಣಿಸು ಮಾದೇವಾ
ಮತಿಗಳ ಕರುಣಿಸು ಮಾದೇವ

ಯತಿಗಣ ಪ್ರಾಸೊಂದರಿಯದ ಕಂದಗೆ
ಗತಿ ಮೋಕ್ಷವ ಕೊಡು ಗುರುದೇವ

ಒಂದನು ಅರಿಯದ ಕಂದನಿಗೆ
ಚಂದ್ನದಿ ಪೇಳುವೆ ಸಿವ ಪದವ
ವಂದಿಸಿ ಮಾನ್ಯರ ಚರಣ ಕಮಲವ
ಕುಂದಿಸಿ ಬೇಡುವೆ ಗುರುಹರನ

ವಿದ್ಯೆವ ಕರುಣಿಸು ಕಂದನಿಗೆ
ನಿಮ್ಮಯ ಪಾದವ ನೆನೆವೆನು
ಮತಿಗಳ ಕರುಣಿಸು ಮಹದೇವ
ಯತಿಗಣ ಪ್ರಾಸೊಂದರಿಯದ ಕಂದಗೆ
ಗತಿ ಮೋಕ್ಷವ ಕೊಡು ಗುರುದೇವ

ಏಳು ಮಲೆ ಎಪ್ಪತ್ತೇಳು ಮಲೆಕೈಲಾಸ
ಅಲ್ಲಿರುವನು ಜಗದ್ಗುರು ಮಹದೇವ
ಅಲ್ಲಿರುವನು ಗುರು ಮಹದೇವ ಮಹದೇವ

ಸ್ವಾಮಿಯ ಬಲಗಡೆ ಇರುವನು
ಆಲಂಬಾಡಿಯ ಬಸವೇಸ
ಯತಿ ಗಣ ಪ್ರಾಸೊಂದರಿಯದ ಕಂದಗೆ
ಗತಿ ಮೋಕ್ಷವ ಕೊಡು ಗುರುದೇವ

ಆರುನೂರು ಏಳುನೂರು ಮಂಟಪ ನೂರು
ಅಲ್ಲಿ ಮನ ನೂರು ಆಲಂಬಾಡಿ
ಬಸವನ ಕತ್ತಲಿ ಗಂಟೆ ಇರುವುವು ಐನೂರು
ಒಂದನು ಅರಿಯದ ಕಂದನು ನಾನು

ಚಂದದಿ ಪೇಳುವೆ ಸಿವ ಪದವ
ಮೊದಲೆ ಪಾದವ ನೆನೆವೆನು ಮಾದೇವ
ಯತಿಗಣ ಪ್ರಾಸೊಂದರಿಯದ ಕಂದಗೆ
ಗತಿ ಮೋಕ್ಷವ ಕೊಡು ಮಾದೇವ

ಆಗ್ಗಣೆ ತಂದನು ಕಾರಯ್ಯ
ಪುಷ್ಪವ ತಂದನು ಬಿಲ್ಲಯ್ಯ
ಇಬ್ಬರು ಸೇರಿ ಮಜ್ಜನಕ್ಕೆ ಬಂದರು
ಯತಿಗಣ ಪ್ರಾಸೊಂದರಿಯದ ಕಂದಗೆ
ಮತಿಗಳ ಕರುಣಿಸು ಮಾದೇವ

ತಣ್ಣೀರ ಸ್ನಾನವ ಮಾಡವರೇ
ಸಣ್ಣ ನಾಮವ ದರಿಸುವರೆ
ಸಣ್ಣ ನಾಮವ ಸರಗೂರಪ್ಪನವರು
ಸಣ್ಣ ನಾಮವ ದರಿಸವರೆ
ಸಣ್ಣ ನಾಮ ದರಿಸಿದ ಸರಗೂರಪ್ಪ
ತೇರಿಗೆ ಪಯಣವ ಮಾಡವ್ರೆ

ಮೊದಲೆ ನಿಮ್ಮಯ ಪಾದವ ನೆನೆವೆನು
ಮತಿಗಳ ಕರುಣಿಸು ಮಾದೇವ
ಯತಿಗಣ ಪ್ರಾಸೊಂದರಿಯದ ಕಂದಗೆ
ಮತಿಗಳ ಕರುಣಿಸು ಮಾದೇವಾ

ತೇರಿಗೆ ದಾಳ ಮೇಲೆ ಒಂದು ಕಳಸ
ಯಾವ ತೇರು ಸ್ಯಂಗಾರವ್ವ
ಯಾವ ತೇರು ಸ್ಯಂಗಾರವ್ವ
ನಾಗುಮಲೆ ನಡು ಬೀದಿಲಿರುವ ತೇರು
ಮಾದೇವನ ತೇರಿಗೆ ಸ್ಯಂಗಾರವ್ವೂ ।। ಯತಿಗಣ।।

ಪ್ರಸನ್ನವಾದರು ಮಾದೇವ
ಪ್ರಸನ್ನವಾದರು ಮಹದೇವ

ಹರುಸದಿಂದ ಗಿರಿ ಒಳಗೆ
ಪರಸೆ ನಡೆದರು ।। ಯತಿ ಗಣ।।

ಗುಡು ಗುಡು ಗುಟ್ಟುತ್ತಾ
ನಮ್ಮ ನಡುಮಲೆಯಲಿ ಮಾದಪ್ಪ
ನಡು ಮಲೆ ಮಿಂಚುತ್ತ
ಕಾರು ಗುಡುಗ ಮಿಂಚಿನ ರೋಸಿನಲಿ
ಕರೆದರು ಮಾದೇವ ಹೆಬ್ಬುಲಿಯ

ರನ್ನದ ಹೆಬ್ಬುಲಿಗೆ ಚಿನ್ನದ ಸುಳಿಯ
ಬಂಗಾರದ ಬೆಳ್ಳಿ, ಬರಗನ ಮೇಲೆ
ಮಾದಪ್ಪ ಬೀಗಿ ಮೆರೆದಾರು

ತಾವರೆ ಕಟ್ಟೆ ಏರಿಯ ಮೇಲೆ
ದೇವರು ಮೂರುತ ಮಾಡವರೆ

ದೇವರ ಕಂಡೆಡೆ ಬರಹೇಳಿ
ದೇವಗನ್ನದ ಮಹದೇವ ।। ಯತಿ ಗಣ ।।

ಮಲೆಯ ಮಾದೇವ ಬರುವ ಚಂದಾವ
ನೋಡಿ ನಮ್ಮ ಸಿವನಾ।।"[೨]

"ಶ್ರೀಮದ್ ರಮಣ ಗೋವಿಂದ್ಾ ಗೋವಿಂದ್ಾ
ಮಹಾ ಪಾರ್ವತಿ ಪತೇ ಹರ ಹರ ಮಹಾದೇವ ಸಂಬೋ

ಸರಣು ಸರಣು ಗುರು ದೇವರಿಗೆ
ಸರಣಾರ್ತಿ ಮಾದೇವರಿಗೆ ।। ಸರಣು ಸರಣು ।।

ಸರಗೂರಯ್ಯಾ ಸರಣರ ಪಾದಕ್ಕೆ
ಸರಣಾರ್ತಿ ಮಾದೇವರಿಗೆ ಸರಣು ।।

ಹರ ಹರ ಅಂಬೆ ಸರಸ್ವತಿ ಪಾದಕ್ಕೆ
ಸರಣಾರ್ತಿ ಮಾದೇವರಿಗೆ ।। ಸರಣು ಸರಣು ।।

ಪಟ್ಟದ ಪಾರ್ವತಿ ಪಾದಕ್ಕೆ ।। ಸರಣು ಸರಣು ।।
ಸೂರ್ಯನ ಪುತ್ರನ ಪಾದಕ್ಕೆ ।। ಸರಣು ಸರಣು ।।

ವಿದ್ಯ ಕಲಿಸಿದ ಗುರುವಿನ ಪಾದಕ್ಕೆ ।। ಸರಣು ಸರಣು ।।
ಹೆತ್ತತಾಯಿಯ ತಂದೆಯ ಪಾದಕ್ಕೆ ।। ಸರಣು ಸರಣು ।।

ಎಲ್ಲಾ ದೇವರ ಪಾದಂಗಳಿಗೂ
ಮಂಗಳಾರತಿ ಮಾದೇವರಿಗೆ ।। ಸರಣು ಸರಣು ।।

ಶ್ರೀಮದ್ ರಮಣ ಗೋವಿಂದಽ ಗೋವಿಂದ
ಹರಹರ ಮಹಾದೇವ ಸಂಬೋ

ಸುವ್ವಿ ಹೇಳಮ್ಮ ದೇವರ ದೇವಽ
ತಾಳ ತಂಬೂರಕ
ನೀ ಒಲಿಯುವವಳೆ ಸರಸತಿಯೆ
ನೀ ನಲಿಯುವವಳೆ ಸರಸತಿಯೆ

ಈ ನಾಲಿಗೆಯ ಅಕ್ಷರವು ಬಂದು
ಸುವ್ವಿಯೇ ದೇವಾನು ದೇವ

ಎಂಟೆಲೆ ಮಾವಿನ ದಂಟಿನಲ್ಲಿ
ಈ ಗಂಟೆ ನಾದಕೆ ಒಲಿಯುವಳೆ
ಸುವ್ವಿಯೇ ದೇವಾನು ದೇವಾ
ಗಂಟ ನಾದಕೆ ನೀ ನಲಿಯುವಳೆ
ಸರಸತಿಯೆ ಈ ಗಂಟನಾ ತೂಡರ
ಬಂದು ಸುವ್ವಿಯೇ ದೇವಾನುದೇವ

ಆದಿ ಬ್ರಹ್ಮನ ರಾಣಿ
ವೇದದಲ್ಲಿ ಕರ ಚೆಲ್ವೆ ॥ ಸುವ್ವಿಯೇ ॥

ಮೋಕ್ಷ ಗುರುವಿಗೆ ಸರಣು
ವಿದ್ಯಾ ಬುದ್ಧಿ ಕಲಿಸಿದ ಗುರುವಿಗೆ ಸರಣು ॥ ಸುವ್ವಿಯೇ ॥

ವಿದ್ಯಾ ಬುದ್ದಿಯ ಕಲಿಸಿದ ಗುರುವಿನ ಪಾದಕ್ಕೆ
ಗುರುವೇ ಸ್ವಾಮಿ ನಿನಗೆ ಸರಣು
ಸ್ವಾಮಿಯ ದೇವಾನುದೇವ

ಸಿವನಿಗೆ ಸರಣಂದಿ ಶ್ರೀಹರಿಗೆ ಸರಣಂದಿ
ಶ್ರೀ ಹರನಿಗೆ ಸರಣಂದಿ ಶಿವನ ಮಡದಿಗೆ ಸರಣಂದಿ ॥ ಸುವ್ವಿಯೇ॥

ಪಾರ್ವತಿಗೆ ಸರಣೆಂದೆ
ಪಾರ್ವತಿಯ ಮಗನಿಗೆ ॥ ಸುವ್ವಿಯೆ ॥

ಪಾರ್ವತಿ ಪತಿಗೆ
ಮಗನಾದ ಗಣಪತಿಗೆ
ಮೊದಲು ವಂದನೆ ಮಾಡಿ
ಎತ್ತುವೆ ಸ್ವಾಮಿ
ನಿಮಗೆ ಆರುತಿಯ ॥ ಸುವ್ವಿಯೆ ॥

ಶ್ರೀಮದ್ ರಮಾ ರಮಣ ಗೋವಿಂದ ಗೋವಿಂದ॥"[೬]

ಮಂಗಳ ಮೈಮ ಲಿಂಗದರೂಪ॥
ಸಂಗಾಮೇಶ್ವರ ಮಾದೇವ
ಶಿವಾನುಶಂಕರ ಮಹದೇವಾ
ಲಿಂಗದ ವರಗಳ ಕರುಣಿಸು ಗುರುವೆ
ಜಂಗಮರ ಪ್ರಿಯ ಮಾದೇವಾ

ಗುರುವಿಗೆ ಒಂದು ಶರಣಾರ್ತಿ
ಗುರುಭಕ್ತರಿಗೊಂದು ಶರಣಾರ್ತಿ
ಎನಗೆ ಲಿಂಗಧಾರಣೆ ಮಾಡಿದ ಗುರುವಿನ।
ಪಾದಕೆ ಒಂದು ಶರಣಾರ್ತಿ ॥ ಮಂಗಳ ಮೈಮ ॥

ಗುರುವೇ ಮಾದೇವನೆಂಬ ನಾಮವ ಧರಿಸಿ
ಬಂದರು ಮರ್ತ್ಯ ಲೋಕಕೆ
ಮೂಡಲ ಮಲೆಯ ಮಹದೇವ
ಮರ್ತ್ಯರ ಮನೆಯ ಮುರಿದವರ್ಯಾರೋ ॥ ಮಂಗಳ ಮೈಮ ॥

ಸತ್ಯವಂತರ ಮನೆಯ ಒಳಗೆ ಎತ್ತುವೆ ನಿಮ್ಮಯ ಶಿವನುಡಿಯ
ಹೇಳುವೆವು ನಿಮ್ಮ ಶಿವನುಡಿಯ
ಎತ್ತಿದಾರು ಮಾದೇವರ ಗಂಡುಗಲಿಯಾ ಮೇಲೆ ॥ಮಂಗಳ ಮೈಮ॥

ಒಂದನು ಅರಿಯದ ಕಂದನು ಪೇಳುವೆ।
ಚೆಂದದಿ ಕೇಳಿರೆ ಶಿವನುಡಿಯ।
ಕುಂದು ಕೋಪಿದ್ದರೆ ಮನ್ನಿಸಿ ಮಾನ್ಯರೆ।
ಸಣ್ಣ ಬಾಲರ ವಾಕ್ಯಗಳ ॥ ಮಂಗಳ ಮೈಮ ॥

ಲಿಂಗ್ಯೆಯನವರ ಮತದೊಳಗೆ।
ಎಂಬ್ಯೆನೂರ ಜಂಗಮರು।
ಈಬೂತಿ ಬಸುಮಾಂಗ ಮಾಡಿ।
ಇದ್ದರು ಕುಂತೂರು ಮಠದೊಳಗೆ ॥ ಮಂಗಳ ಮೈಮ ॥

ವಿಗ್ಗಾಣೇಶ್ವರನೆ ಮಾದೇವ।
ಗೌರೀಯ ಮುದ್ದಿನ ಕುಮಾರನೆ
ಇದ್ಯಾಬುದ್ದಿ ಕಲಿಸೀದ ಗುರುವೆ।
ಕೊಡು ನಮಗೆ ಮತಿಯ।

ಸಂದೇಲೆತ್ತಿದ ವಾಲಗವು।
ಸಂದಿದವು ನಿಮ್ಮೇಳು ಮಲೆಗೆ।
ಚಂದಕೆ ಚಂದ್ರವೇತುರ ಮೂರ್ತಿ
ವಂದೀಪೆ ನಿಮಗೆ ಸರಣಾರ್ತಿ

ಮುಡುಕುತೊರೆ ಮಲ್ಲಪ್ರಬಾ
ತಲಕಾಡ ಹೊಸಲಿಂಗ ಬಾ
ಕುಂತೂರ ಮಡದ ಹುತ್ನಲ್ಲಿರುವಾ
ಚಿಲುಕೋಡಿ ಸಂಬುಲಿಂಗ ಬಾ

ಪಾದ ನೋಡಿದರೆ ಪಾತಾಳದಲ್ಲೊ
ಜಂಜಡೆಯೊಳಗೆ ಕೈಲಾಸ
ಮುಕ್ಕೋಟಿ ಮಾನುವ ದೇವದಾನುವ

ನಿನ್ನೊಳಗಲ್ಲೊ ಮಾದೇವ
ಪಾತಾಳ ಲೋಕ ಪಾದಕೆ ಜಂಗು
ಪಾದಪೂಜೆ ಕಿರುಜಂಗಮ ಸಪ್ತ
ಘಲೀರು ಎಂದಾವು।

ಮಂಗಳ ಮೈಮ ಲಿಂಗದ ರೂಪ।
ಸಂಗಮೇಶ್ವರ ಮಾದೇವ
ಲಿಂಗದ ವರಗಳ ಕರುಣೇಸಯ್ಯ
ಬಾಲಚಂದಿರ ಮಾದೇವ।
ಏಳುಮಲೆ ಕೈಲಾಸದೊಡೆಯ ನಮ್ಮಪ್ಪಾಜಿ ಮಾದೇವ
ನಿಮ್ಮ ಪಾದುಕ್ಕೆ ಸರಣೆ ಸರಣಾರ್ತಿ।

## ಚಾಮುಂಡಿ ಪ್ರಕರಣ

ಹ್ಞಾಂ... ನೋಡಿ ನಮ್ಮ ಸಿವನಾ।
ಮಲೆಯ ಮಾದೇವ ಒಲಿವೆ ಚಂದವಾ।
ನೋಡಿ ನಮ್ಮ ಸಿವನ।।

ಸಿವಾ ಸಿವಾ ನಮ್ಮಪ್ಪಾಜಿ ಏಳು ಮಲೆಯಯ್ಯ। ಮೇಗ ಲೋಕದಲ್ಲಿ ಮುಗಿಲಿನಲ್ಲಿ ವಾಸ ಮಾಡುವಂತ ಕಾಲದಲ್ಲಿ। ದೇವ ಲೋಕಕ್ಕೆ ಬಂದು ನೋಡುವಂತ ಕಾಲದಲ್ಲಿ। ಸ್ವಾಮಿ ಕೂತ್ಕಳಕ್ಕೆ ಸ್ತಳವಿಲ್ಲ ಅಂತೇಳಿ। ಮಾಯಕಾರ ಅವರು ದೃಷ್ಟಿ ಮಡಗವರೆ। ಮಾದೇವ।।

ಞ್ಲಂ... ನೋಡಿ ನಮ್ಮ ಸಿವನಾ
ಮಲೆಯಾ ಮಾದೇವ ಒಲಿವ ಚಂದ್ವಾವ
ನೋಡಿ ನಮ್ಮ ಸಿವನಾ।

ಸಿವ ಸಿವಾ ಚಂಡಿ ಚಾಮುಂಡೇಸ್ವರಮ್ಮ। ಕೊಳದಲ್ಲಿ ಸ್ತಾನ ಜಪ ಮಾಡುವಂತ ಕಾಲದಲ್ಲಿ ಅಪ್ಪಾಜಿ ಏಳು ಮಲೆಯಯ್ಯ। ಬೂಲೋಕಕ್ಕೆ ಕಣ್ಣು ಬಿಟ್ಟು ನೋಡಿದ। ಬೂಲೋಕಕ್ಕೆ ಕಣ್ಣಿಟ್ಟು ನೋಡುವಂತ ಕಾಲದಲ್ಲಿ। ಚಂದ್ರನಂತೆ ಕಳೆಯ। ಸೂರ್ಯನಂತ ರೂಪು। ಪ್ರಕಾಸವಾಗಿ ದಗಾ ದಗನೆ। ಕತ್ಕಂಡು ಉರಿತಾದೆ। ಚಂಡಿ ಚಾಮುಂಡೇಸ್ವರಮ್ಮ। ಅವರು ದೃಷ್ಟಿ ಮಡಗಿದರು। ಮಾದೇವ।

ಞ್ಲಂ... ನೋಡಿ ನಮ್ಮ ಸಿವನ

ಹರ ಹರಾ ಸಿವ ಸಿವಾ ನಮ್ಮಪ್ಪಾಜಿ। ಮಾಯಕ್ಕಾರ ಚಂಡಿ ಚಾಮುಂಡೇಸ್ವರಮ್ಮನ ಕಣ್ಕಂಡು। ಮಾಯಕ್ಕಾರ ತಿರುಪತಿಗೋಗಿ। ತಿರುಪತಿ ಬಳಿ ವಾಸಮಾಡುವಂತ ಕಾಲದಲ್ಲಿ। ಮಾಯಕಾರ ಸಿವಸಿವಾ। ಆದಿನಾರಾಯಣ ಲಕ್ಷ್ಮೀದೇವಿ। ತೆಂಕಣ ರಾಜ್ಯ ಬಿಟ್ಟು ಬರುವಂತ ಕಾಲದಲ್ಲಿ। ಕೊಂಗಳ್ಳಿ ಬೆಟ್ಟಕೆ ಬಂದ್ರಲ್ಲೋ ಮಾಯಕ್ಕಾರ। ಆವಾಗಲೀಗ ಆದಿ ನಾರಾಯಣ। ಮೂರ್ತಿ ಮುಡುಕು ತೊರೆ ಕೈಲಾಸಕೂ ಬಂದ। ಮುಡುಕು ತೊರೆ

ಕೈಲಾಸದಲ್ಲಿ ಜಾಗವಿಲ್ಲ। ಲಕ್ಷ್ಮಿದೇವಿಗೂ ಆದಿ ನಾರಾಯಣ ಮೂರ್ತಿಗೂ। ಅವರು ಮಾಯದಲ್ಲೊಯ್ತಾರೋ। ನಾರಾಯಣ ನೋಡಿ ನಮ್ಮ ಶಿವನಾ।

ತಿರುಪತಿಗೆ ಬಂದ ಆದಿ ನಾರಾಯಣ ಮೂರ್ತಿ ಲಕ್ಷ್ಮಿದೇವಿ। ತಿರುಪತಿಗೆ ಬಂದು ದೃಷ್ಟಿ ಮಡುಗುವಂತ ಕಾಲದಲ್ಲಿ। ಈ ಸ್ಥಳ ನಮಗೊಳ್ಳೇದು ಅಂತೇಳಿ। ಆದಿ ನಾರಾಯಣ ಮೂರ್ತಿಯವರು ಆಗಲೀಗ। ದೇವೇಂದ್ರನಿಗೆ ಕಣ್ಣು ಸನ್ನೆ ಮಾಡಿದ ಆದಿ ನಾರಾಯಣಮೂರ್ತಿ। ಆವಾಗ ಸಿಡಿಲು, ಗುಡುಗು, ಮಿಂಚು ಎಲ್ಲಾ ದ್ವಂದ್ವವಾಗಿ। ಭೂಲೋಕದಲ್ಲಿ ಚೆಲ್ಲಾಡಿ ಮಳೆ ಹೊಯ್ಯುವಂತ ಕಾಲದಲ್ಲಿ। ಆನೆ ಸೊಂಡಲು ಗಾತ್ರ ಮಳೆ ಬೀಳುತ್ತಲ್ಲಪ್ಪಾ ಸ್ವಾಮಿ। ಮೂರು ಸ್ವರೂಪವಾದ ಆದಿ ನಾರಾಯಣ ಮೂರ್ತಿಯವರು। ಅವರು ಸತ್ಯೆಂಬ ನುಡಿಯ ನುಡಿದಾರು।

ಓಂ... ನೋಡಿ ನಮ್ಮ ಶಿವನ

ಹೌದಪ್ಪಾ ಹೌದು...।

ಸಿವ ಸಿವಾ ಲಕ್ಷ್ಮಿದೇವಿ। ಕಟಾ ಕಟನೆ ಒದುರ್ತಾ ಆವಳೆ। ದೊಣ್ಣೆ ಊರುಕೊಂಡು ಆದಿ ನಾರಾಯಣಮೂರ್ತಿ। ಗಡ್ಡನೆಲ್ಲಾ ಬೆಳಸ್ಕಂಡು। ಮಾಯಕಾರ ಅಜ್ಜಿ ರೂಪನ್ನು ತಾಳಿಕೊಂಡು। ದೊಣ್ಣೆ ಊರಿಕೊಂಡು ನಡಗುತಾರಲ್ಲಾ ಸ್ವಾಮಿ।

ಆವಾಗ ಪಾರ್ವತಿ ಬಾಗಿಲಿಗೆ। ಬಂದು ನಿಂತುಕೊಂಡು ನೋಡಿದ। ತಾಯಿ ಸ್ವಲ್ಪ ಜಾಗ ಕೊಡಮ್ಮ ಅಂತ। ಲಕ್ಷ್ಮಿದೇವಿ ಆಗಲೀಗ ಪಾರ್ವತಿ। ಮಾಯಕಾರ ಗಂಡ ಬೂದಿ ಮರೆಸಿದ ಕೆಂಡ। ಬೂಲೋಕದೊಳಗೆ ಉದ್ದಂಡ ಹಿಂಡಿಗಾಳಿಗೆ ಗಂಡ। ಗಂಡುಗಲಿ ಮಾಯಕಾರ। ಅಪ್ಪಾಜಿ ಏಳು ಮಲೆ ದಂಡಕೆ ಬಂದ।

ಪಾರ್ವತಿ ಯಾರೋ ಜಾಗವನ್ನು ಕೇಳ್ತರಲ್ಲಾ। ನಿನಗೆ ತಿಳಿಯಾಗದು। ಬ್ಯಾಡ ಅಂದ ಮಾಯಕಾರ। ನಮ್ಮಂತ ಪ್ರಾಣಿಗಳು। ಅವರಿಗೆ ಜಾಗ ಕೊಡಬೇಕು ಅಂದ ಪಾರ್ವತಿ। ಈವಾಗ ಇಲ್ಲಿಂದೀಚೆಗೆ ನಿನ್ನ ಇಷ್ಟ ಅಂದ ಮಾಯಕಾರ।

ಆಗಲೀಗ ಆದಿ ನಾರಾಯಣ ಮೂರ್ತಿ। ಸಂಕು ಜಾಗಟೆ ತಂದು। ಆ ಮೂಲೇಲಿ ಮಡಗಿದ। ಆವಾಗಲೀಗ ಪರ್ವತ ಬಾಯಿ। ಬೆಳಗ್ತಲ್ಲಪ್ಪಾ ಸ್ವಾಮಿ। ಕೂತ್ಕಳಕ್ಕೆ ಸ್ಥಳವಿಲ್ಲ ಮಾಯಕಾರನಿಗೆ। ಪಾರ್ವತಿ ನಾನು ಹೇಳಿದ ಮಾತು ನೀನು ಕೇಳಿಲ್ಲ।

ಈವಾಗ ತಿರುಪತಿಯನ್ನು ಬಿಡುವಂತಾಗು ಆಂದ್ರು। ಮಾಯಕಾರ ಆಗ ಇಬ್ಬರೂ ಒಂದುಗೂಡಿ। ಬರುವಂತ ಕಾಲದಲ್ಲಿ।

ಆವರು ಮಾಯದಲ್ಲಿ ಒಯ್ತಾವ್ರಲ್ಲೋ। ಮಾದೇವಾ।
ನೋಡಿ ನಮ್ಮ ಸಿವಾನಾ।

ಅಪ್ಪಾ ಸಿವಾ ಚಾಮುಂಡಿ ಬೆಟ್ಟಕ್ಕೆ ಬಂದು। ಮಾಯಕಾರ ಮೈಸೂರಿನಲ್ಲಿ ರಾವಣಾಸುರ ಅಂದರೆ। ಹತ್ತು ತಲೆ ಹದಿನಾರು ಭುಜ। ಆಗಲೀಗ ಒಬ್ಬನನ್ನ ತಿಂತಾ ಇದ್ದಾನೆ। ಒಬ್ಬನನ್ನ ಬಡೀತಾ ಇದ್ದಾನೆ ರಾಕ್ಷಸ। ಆವಾಗ ಪಾರ್ವತಿ ಯೇಳ್ದ। ಸ್ವಾಮಿ ಮೈಸೂರವರನ್ನೆಲ್ಲಾ ಕೊಂದು ಬಿಡ್ತಾ ಇದ್ದಾನೆ ರಾಕ್ಷಸ। ಇವನೊಂದಿಗೆ ನಾನು ಯುದ್ದ ಮಾಡ್ತೀನಿ। ಸ್ವಲ್ಪ ನಿಲ್ಲು ಅಂದ। ಆವಾಗ ನಿಂತುಕೊಂಡ ಮಾಯಕಾರ ಗಂಡ।

ಆವಾಗಲೀಗ ಹತ್ತು ತಲೆ ಹದಿನಾರು ಬುಜ। ಅರವತ್ತು ಆಯುದವನ್ನು ತೊಟ್ಟ ಪಾರ್ವತಿದೇವಿ।

ಆ ಯುದ್ಧ ಮಾಡುತವಳೆ। ಪಾರ್ವತಿ।

ಳ್ಞ... ನೋಡಿ ನಮ್ಮ ಸಿವನಾ

ಸಿವ ಸಿವಾ ಪಾರ್ವತಿ। ಇದ್ಯ ಮಾಡಿ ಸಾಕಾಗೋಯಿತಲ್ಲ। ಗುರುವೇ ಏನು ಮೈಕೈಯೆಲ್ಲಾ। ಚೆಲ್ಲಾಡ್ತದೆ ಸ್ವಾಮಿ। ಒಂದು ಚೊಟ್ಟು ರಕ್ತ ಬಿದ್ದರೆ। ಸಹಸ್ರ ಕೋಟಿ ರಾಕ್ಷಸರಾಗ್ತಾರೆ। ಆಗಲೀಗ ಬೆವರೆಲ್ಲಾ ತೆಗೆದಿಟ್ಟ ಪಾರ್ವತಿ। ಆ ಬೆವರಲ್ಲಿ ಉದ್ಭವವಾದ ಉತ್ನಳ್ಳಿ ಮಾರಮ್ಮ। ಅಕ್ಕಯ್ಯ ಅಕ್ಕಯ್ಯ ಹೆದರ್ಬೇಡ। ನಾನಿದ್ದೀನಿ ಅಂತೇಳಿ। ಉತ್ನಳ್ಳಿ ಮಾರಮ್ಮ ಬೂಮಿಗೆ। ನಾಲಿಗೆಯನ್ನು ಹಾಸ್ಬುಟ್ಟವಳೆ ಮಾಯಕಾರ। ಆ ಬಿದ್ದ ರಕ್ತವನೆಲ್ಲಾ ಹೀರ್ತಾ ಅವಳೆ। ಉತ್ನಳ್ಳಿ ಮಾರಮ್ಮ। ಈಗ ಯುದ್ಧ ಮಾಡುತಾಳೆ। ಪಾರ್ವತಿ।

ಳ್ಞಂ... ನೋಡಿ ನಮ್ಮ ಸಿವನಾ।

ಸಿವ ಸಿವಾ ಮಾಯಕಾರ ಅಂದರೆ। ಇವರು ರಾಕ್ಷಸ ಕುಲ್ದವ ಅಂತೇಳಿ। ಇವಳ ಮಾಯ ಸ್ವರೂಪವನ್ನು। ಇಲ್ಲಿಯವರೆಗೆ ಗೋಚರವಿಲ್ಲ ಅಂತೇಳಿ। ಅವ ಯುದ್ದ ಮಾಡುತವಳೆ। ಅವಳ ಬಿಟ್ಟ ಮಾಯಕಾರ ಅವರು। ಮಾಯದಲ್ಲಿ ಇದ್ದವರೆ। ಮಾದೇವಾ।

ಳ್ಞಂ... ನೋಡಿ ನಮ್ಮ ಸಿವನಾ।

ಒಡಕೆ ಹಳ್ಳಕೋದ ಮಾದೇವಾ। ಚಂಡಿ ಚಾಮುಂಡೇಸ್ವರಿ ಯುದ್ದ ಮಾಡಾಯಿತು। ರಾಕ್ಷಸರನ್ನೆಲ್ಲಾ ಕೊಂದು ಮರಳು ಮಾಡಿಬಿಟ್ಟು। ಪಾರ್ವತಿ ಇಂದು ನೋಡ್ತಾಳೆ। ಮಾಯಕಾರ ಇಲ್ಲ। ಮೈಲಿಗೆ ಒಂದು ಹೆಜ್ಜೇನು ಮಾಡಿಕೊಂಡು। ಅವಳು ಬೆನ್ನತ್ತಿ ಓಯ್ತಾಳೆ ಪಾರ್ವತಿ।

ಳ್ಞಂ ನೋಡಿ ನಮ್ಮ ಸಿವನಾ।

ಸಿವ ಸಿವಾ ಬೆನ್ನತ್ತಿಪೋದ ಪಾರ್ವತಿ। ಒಡಕೆ ಹಳ್ಳದಲ್ಲಿ ಸ್ವಾಮಿ ಮೂರ್ತಮಾಡಿ ಕೂತಿದ್ರು। ಆವಾಗ ಪಾರ್ವತಿ ಕಂಡ ಮಾಯಕಾರ। ಚಂದ್ರಾಯುದದಲ್ಲಿ ಒಡೆದ।

ಮಾಯಕಾರ ಬಿನ್ನ ಮಾಡಿದ। ನೀನು ಇಲ್ಲೇ ಮೂರ್ತ ಮಾಡುವಂತೇಳಿ। ಮಾಯಕಾರ ಅವರು ಕಲ್ಲಿಗೆ ಹುಲಿಮಾಡಿಕೊಂಡು। ಬಾರಿ ಕಡಿವಾಣ ಮಾಡಿಕೊಂಡು। ಅವರು ಮಾಯಾದ ಹೆಬ್ಬುಲಿ ಮ್ಯಾಲೆ ಮೂರ್ತಮಾಡಿ। ಮಾದೇವ। ಅವರು ಮೂಡಲ ಕೈಲಾಸಕ್ಕೆ ವೊಯ್ತವರೆ। ಮಾದೇವ।

ಛ್ಲಂ... ನೋಡಿ ನಮ್ಮ ಸಿವನ।

ಸಿವ ಸಿವಾ ಮಾಯಕಾರ। ಮೂಡಲ ಕೈಲಾಸಕ್ಕೆ ವೋಗುವಂತ ಕಾಲದಲ್ಲಿ। ಆನೆ ತಲೆದಿಂಬಿನಲ್ಲಿ ನಿಂತು ನೋಡಿದ ಮಾಯಕಾರ। ಚಾಮುಂಡಿ ಬೆಟ್ಟ ಕಾಣ್ತಿತಲ್ಲಸ್ವಾಮಿ। ಇವಳ ಬೆಟ್ಟನ ಕಣ್ಣಾರ ನೋಡಬಾರದು ಅಂತೇಳಿ।

ಅವರು ಜಗ್ಗಿಸಿ ತುಳಿದಾರು। ಮಾದೇವಾ।
ಛ್ಲಂ... ನೋಡಿ ನಮ್ಮ ಸಿವನ।

ಜಗ್ಗಿಸಿ ತುಳಿದಾ ದೇವ। ಪಾತಾಳವಾಯಿತಲ್ಲೋ ಸ್ವಾಮಿ। ಅಲ್ಲಿ ಸೀಗೆ ಸಿರಿಗಂದ। ಬಾಡ ಬಾಕಲ ಗುತ್ತಿ। ಆಲ್ಲಿ ಉತ್ತರಾ ಕಲ್ಲು ಬಂಡೆ। ಏಳು ಬಾಯಿ ಹೊನ್ನುತ್ತ। ಒಂಟಿ ಕ್ವಾಬೆಯಿಂದ ಜಲಕಂಡು। ಒಡೆದು ಮೂಡಿದ ಮಾಯಕ್ಕಾರ।

ಅವರು ಬೂಲೋಕ ನೋಡುತವರೇ। ಮಾದೇವ।
ಛ್ಲಂ ನೋಡಿ ನಮ್ಮ ಸಿವನಾ।*

## ಹುಟ್ಟಿ ಬೆಳೆದ ಸಾಲು

ಮಲೆಯಲಿ ಮಾದೇವ ಬರುವ ಚಂದಾವ್ವಾ
ನೋಡಿ ನಮ್ಮ ಸಿವನ್ನಾ

ಉರಿಯ ಬೆಂಕಿಯ ಮುಂದೆ ಅರಗಳಿಗೆ ನಿಲಬಹುದು ಮಹದೇವ। ನಿಮ್ಮ ಕರಿಯ ಬರಗಾನ ಮುಂದೆ ನಿಲಬಹುದಾ।

॥ ನೋಡಿ ನಮ್ಮ ಸಿವನಾ ॥

ಮಾಯ್ಕಾರ ಗಂಡ ಮಾದೇಶ್ವರ। ಬೂದಿ ಮುಚ್ಚಿದ ಕೆಂಡ ಭೂಲೋಕದಲ್ಲಿ ಉದ್ದಂಡ। ನಮ್ಮಪ್ಪಾಜಿ ಅಖಂಡ ಮಹಿಮ ಅಲ್ಲಮಪ್ರಭು। ಮರ್ತ್ಯಲೋಕದಲ್ಲಿ ಮಹದೇವನೆಂಬ ನಾಮವನ್ನು। ಯಾವ ರೀತಿ ಪಡೆದರು ಧರೆಯಲ್ಲಿ ಅಂದರೆ। ಕೈಲಾಸದಲ್ಲಿ ಬ್ರಮ್ಹ ವಿಷ್ಣು ಈಸ್ವರ ಕೂತುಕೊಂಡು।

ಅವರು ಪಂಥ ಮಾಡವರೇ ಮುನಿಗಾಳ್ಳೂ।
ನೋಡಿ ನಮ್ಮ ಸಿವನಾ ॥

ಬ್ರಹ್ಮದೇವರು ವಿಷ್ಣು ದೇವರು ಕೂತ್ಕಂಡು। ನೋಡಯ್ಯಾ ಈಸ್ವರ। ನೀನು ಪ್ರಪಂಚದಲ್ಲಿ ಸೃಷ್ಟಿಕರ್ತನಾಗಿರ ತಕ್ಕಂಥವನು। ತ್ರೇತಾಯುಗ ಕೃತಯುಗ, ದ್ವಾಪರಯುಗ। ಮುಂದು ಮುಂದೆ ಕಲಿಯುಗ ಬರ್ತಾಯಿದೆ। ಕಲಿಯುಗದಲ್ಲಿ ಭೂಲೋಕದಲ್ಲಿ ಧರ್ಮಗಳು ಹಾಳಾಗಿ। ಕರ್ಮವೇ ಹೆಚ್ಚಾಗ್ತಾಯಿದೆ। ಕಾಸಿನ ಧೂಪ ಹಾಕುವರಿಲ್ಲ ಕರವೆತ್ತಿ ಕಯ್ಯ ಮುಗಿಯುವರಿಲ್ಲ। ನಮ್ಮ ಶಿವಾ ಶಿವಾ ಎಂದು ಶಿವನ ಜ್ಞಾನ ಮಾಡುವರಿಲ್ಲ.

ಅವತಾರ ಎತ್ತು ಅಂಥವರ ಜಗದೊಡೆಯಾ।
ನೋಡಿ ನಮ್ಮ ಶಿವನಾ ॥

ಬ್ರಹ್ಮದೇವ ವಿಷ್ಣುದೇವರ ಮಾತನು ಕೇಳಿ। ಆಗ ಪರಮಾತ್ಮ ಹೇಳ್ತಾ ಇದ್ದಾರೆ। ಅಯ್ಯಾ ಬ್ರಹ್ಮದೇವ ವಿಷ್ಣುದೇವ। ನಾನು ಅವತಾರ ಎತ್ತ ಬೇಕಾದ್ರೆ ನನಗಿಂತ ಹೆಚ್ಚಿನವರಿದ್ದಾರೆ। ಅವರನ್ನು ಕೇಳ್ತಾ ಇದ್ದೀನಿ ಅಂತ್ಹೇಳಿ। ಕೈಲಾಸದಲ್ಲಿ ಪರಮೇಸ್ವರ।

ಆವರು ಉಗ್ರ ತಪಸಿಗೆ ಕುಳಿತವರೇ ಪರಶಿವ್ವಾ।
ನೋಡಿ ನಮ್ಮ ಶಿವನಾ ॥

ಯಾವಾಗ ಪರಮಾತ್ಮ ಕೈಲಾಸದಲ್ಲಿ ಉಗ್ರ ತಪಸ್ಸಿಗೆ ಕುಳಿತುಕೊಂಡ್ರೋ। ಪರಮಾತ್ಮ ತಪಸ್ಸಿನ ಜ್ವಾಲೆಯೊಳಗೆ ಇಡೀ ಕೈಲಾಸವೆಲ್ಲ ತಲ್ಲಣಿಸ್ತಾಯಿದೆ। ಧಗಧಗನೆ ಹತ್ತಿ ಭಗಭಗನೆ ಉರಿತಾಯಿದೆ। ಆ ಕೈಲಾಸದಲ್ಲಿರತಕ್ಕಂಥ ಮುನಿಗಳು। ಕಣ್ಣಿಲ್ಲದವರು ಕಾಲಿಲ್ಲದವರು ಕೈಯಿಲ್ಲದವರು। ಪರಮೇಶ್ವರನ ಜ್ವಾಲೆಗೆ ತಾಳಲಾರದೆ।

ಅವರು ಓಡಿ ಬಂದವರೇ ಮುನಿಗಳ್ಳು।
ನೋಡಿ ನಮ್ಮ ಶಿವನಾ ॥

ಪರಮಾತ್ಮ ಪರಮಾತ್ಮ ಕೈಲಾಸದಲ್ಲಿ। ನಮ್ಮಂತಾವರು ಉಳಿಯೋದಿಲ್ಲ। ನಿಮ್ಮ ತಪಸ್ಸು ಬಿಡಪ್ಪಾ ಅಂತ್ಹೇಳಿ ಓಡಿಬಂದ್ರು ಮುನಿಗಳು। ಅಯ್ಯಾ ಮಹಾಮುನಿಗಳೇ। ಇನ್ನುಮುಂದೆ ಕಲಿಯುಗದಲ್ಲಿ। ನಾನು ಅವತಾರ ಎತ್ತಬೇಕಂತೆ। ಬ್ರಹ್ಮದೇವ ವಿಷ್ಣುದೇವ ಕೇಳ್ತಾ ಇದ್ದಾರೆ।

ನಾನು ಯಾವ ಅವತಾರ ಎತ್ತಲಿ ಅಂದ್ರೆ। ಆವಾಗ ಮುನಿಗಳು ಹೇಳ್ತಾಯಿದ್ದಾರೆ। ಪರಮಾತ್ಮ ನೀವು ಅವತಾರ ಎತ್ತ ಬೇಕಾದ್ರೆ। ನಿಮ್ಮ ತಪಸ್ಸನ್ನೇ ಬಿಟ್ಟು ಬಿಡಿ ನಾವೇಳುತ್ತೇವೆ ಅಂತ್ಹೇಳಿ। ಪರಮೇಶ್ವರನ ತಪಸ್ಸು ಬಿಡಿಸ್ಬಿಟ್ರು। ನೋಡಿ ಪರಮಾತ್ಮ। ನಿಮ್ಮ ಅವತಾರ ತೋರಬೇಕಾದರೆ ಭೂಲೋಕದಲ್ಲಿ। ಬಲಗಡೆ ಜಡೆ ಎಡಗಡೆ ಜಡೆ। ಎರಡು ಸಾರಿ ಒದರು ಬುಡಿ। ಮತ್ತೆ ಜಗದಗಲ ಜಡೇನಲ್ಲ ಒಂದು ಸಾರಿ ವದಿರಿ। ಆವಾಗ ಅವತಾರ ತೋರುತ್ತೆ ಎಂದರು। ಆವಾಗ ಮುನಿಗಳ ಮಾತುಕೇಳಿ ಪರಮಾತ್ಮ। ನೋಡಿದೆಯ ಬ್ರಹ್ಮದೇವ, ವಿಷ್ಣುದೇವ ಅಂತೇಳಿ। ತಮ್ಮ ಬಲಗಡೆ ಜಡೆಯನ್ನು ಹಿಡಿದುಕೊಂಡು।

ಆಲ್ಲಿ ಜಡಿದು ವದರವರೇ ಜಗದೊಡೆಯ।

ನೋಡಿ ನಮ್ಮ ಶಿವನಾ ॥

ಎಡಗಡೆಯ ಜಡೆಯನ್ನು ವದರಿದ ತಕ್ಷಣವೇ। ಒಂದು ಲಿಂಗವಾಗಿರಕ್ಕಂತಾದ್ದು ಮರ್ತ್ಯ ಲೋಕಕ್ಕೂ ಕೈಲಾಸಕ್ಕೂವೆ ಕೀಲು ಕೊಟ್ಟು ನಿಂತ್ಕೊಂಡ್ಬಿಡ್ತು। ಇದಾವ ಅವತಾರ ಅಂದ್ರು। ಇದೇ ರಾಕ್ಷಸಾವತಾರ। ಇವನೇ ಶ್ರವಣೇಶ್ವರ ಅಂದ್ರು। ಮತ್ತೆ ಒಂಭತ್ತನೇ ಅವತಾರ ತೋರು ಅಂದ್ರು। ಒಂಬತ್ತನೇ ಅವತಾರಕ್ಕೆ ಪರಮಾತ್ಮ। ತಮ್ಮ ಜಗದಗಲ ಜಡೇನೆಲ್ಲಾ ಒಂದ್ಸಾರಿ ಇಡ್ಕೊಂಡು।

ಅವರು ಜಡಿದು ವದರವರೇ ಜಗದೊಡೆಯಾ।

ನೋಡಿ ನಮ್ಮ ಶಿವನಾ ॥

ಒಂಬತ್ತನೇ ಅವತಾರ ಇದು ಅಂತ್ಹೇಳಿ। ತಮ್ಮ ಜಡೆಯನ್ನು ವದರಿದ್ದಾರೆ। ಆಗ ಒಂಬತ್ತನೇ ಅವತಾರದಲ್ಲಿ ಹುಟ್ಟಿದಂತ ಲಿಂಗ। ಯಾರ ಕಣ್ಣಿಗೂ ಗೋಚರವಾಗಲಿಲ್ಲ। ಮರ್ತ್ಯಲೋಕದಲ್ಲಿ ಒಂದು। ಮಗ್ಗ ಮರಳ್ಳಿ ಹೆಗ್ಗಡದೇವನ ಕೋಟೆ ಭೀಮನ ಕೊಲ್ಲಿ ಒಳಗೆ। ಜಾತಿವೊಳಗೆ ಹಾಲುಮತಸ್ಥ ಹಲಗಪ್ಪನ ಮನೆ ಮುಂದುಗಡೆ। ಬೇವುನ ಮರದ ಜಗಲಿ। ಆ ಬೇವಿನ ಮರದ ಪ್ಪಾಟೆವೊಳಗೆ।

ಅವರು ಪುಟಲಿಂಗವಾಗಿ ಕುಂತವರೇ ಜಗದೊಡೆಯ।

ನೋಡಿ ನಮ್ಮ ಶಿವನಾ ॥

ಮೊದಲು ಹಲಗಪ್ಪನಿಂದ ಪೂಜೆ ಮಾಡಿಸ್ಕೊಂಡು। ನಾನು ಲೋಕ ಕಲ್ಯಾಣಕ್ಕೆ ಹೋಗಬೇಕಂತ್ಹೇಳಿ ಆ ಹಲಗಪ್ಪನ ಹನ್ನೆರಡು ಕಂಬದ ಹಟ್ಟಿವೊಳಗೆ। ನಡು ಮನೆವೊಳಗ್ಹೋಗಿ ಮಾಯಕಾರ

ಅವರು ಹೊನ್ನುತ್ತವಾಗಿ ಮೂಡವರೇ ಮಾಯ್ಕಾರ್ರಾ।

ನೋಡಿ ನಮ್ಮ ಶಿವನಾ ॥

ಆಹಾ... ನೋಡಿ ನಮ್ಮ ಶಿವನಾ

ಮಲೆಯೇ ಮಾದೇವ ಬರುವ ಚಂದಾವ

ನೋಡಿ ನಮ್ಮ ಶಿವನಾ।

ಆಗಲೀಗ ನಮ್ಮಪ್ಪ ಮಾಯಕಾರ ಗಂಡ। ಗಂಡುಲಿಗಂಡ ಹುಲಿವಾಹನದವನು। ಹುಚ್ಚು ಮಾದೇಸ್ವರ। ಮರೆತೋರ ಮನೆ ಮುರಿಯುವಂತ ಮರಿದೇವರು। ಏನು ಯೋಚನೆ ಮಾಡ್ತೀರಿ? ಗುರುವೇ,। ದೇವಾನು ದೇವತೆಗಳೆಲ್ಲಾ ಸೇರಿ। ನ್ಯಾಯ ಪಂಚಾಯಿತಿ ಮಾಡುವಾಗ। ನಿಮ್ಮ ತಾಯಿ ಯಾರು? ನಿಮ್ಮ ತಂದೆ ಯಾರು? ನಿಮ್ಮ ಹುಟ್ಟಿದ ಊರಾವುದು? ನೀವು ಬೆಳೆದ ಊರಾವುದು? ದೇವ ಮಾನವರೆಲ್ಲಾ ಕೇಳುವಾಗ।

ನಾಯೇನು ವಾಗ್ತಾನ ಹೇಳಲಿ।
ಅಂತಾನಲ್ಲೋ ಮಾದೇವ
ಆಹಾ ನೋಡಿ ನಮ್ಮ ಸಿವನಾ।

ನಾಯಾರನ್ನ ತಾಯಿ ಮಾಡ್ಕಳ್ಲಿ? ಯಾರನ್ನ ತಂದೆ ಮಾಡ್ಕಳ್ಲಿ? ಯಾರಿಗೇನ ಉತ್ತರ ಕೊಡಲಿ? ಅಂತೇಳ್ಬುಟ್ಟು ಮಹದೇವ।

ಅಯ್ಯಾ ಕಂಬದ ಬೋಳಿ ಮ್ಯಾಲೆ ಹೋಗಿ ಕೂತವನೆ। ಮಾದೇವಾ।
ಆಹಾ ನೋಡಿ ನಮ್ಮ ಸಿವನ।

ಲೋಕದಲ್ಲಿ ಯಾವ ಸತ್ಯವಂತೆ ಸರಣೆ ಇದ್ದಳೋ। ಈ ಪ್ರಪಂಚದಲ್ಲಿ ಭೂಲೋಕಕ್ಕೆ ಯಾರು ಹೆಚ್ಚಾಗಿದ್ದಾರು। ಅಂತೇಳಿ ನಮ್ಮಪ್ಪ ಮಾಯಕಾರ ಮಾದೇವ। ಅಯ್ಯಾ ತಕ್ಕಡಿನೇ ಹಿಡಕೊಂಡು। ತರಾಟೆ ಮಾಡುವಂತ ಕಾಲದಲ್ಲಿ ಗುರುವೇ। ಉತ್ತರಾದೇವಿಗೆ ಒಂದು ಕಡೆ ಎತ್ತಿ ಮಡಗಿಬಿಟ್ಟ

ಏಳು ಮಲೇನೇ ಒಜ್ಜರಿಕೆ ಎತ್ತಿ ಮಡ್ಗವ್ನೆ। ಸೀವ್ನೇ ಅಯ್ಯಾ ಏಳು ಮಲೆಗಿಂತ। ಎಳ್ಳಸ್ಟು ಗಟ್ಟಿಯಾಗವಳೆ ಅಯ್ಯಾ। ಇವಳೇ ಸತ್ಯವಂತೆ ಪತಿವ್ರತೆ। ಇವಳನ್ನು ತಾಯಿಯಾಗಿ ಪಡೀಬೇಕು। ಅಂತೇಳಿ ಅವನು।

ಅವನು ಮತ್ತೇನು ಗ್ನಾನ ಮಾಡವನೆ। ಧೀರ ಮಾದಯ್ಯ
ಆಹಾ ನೋಡಿ ನಮ್ಮ ಸಿವನ।

ಹಳೇ ಕಂಬಳಿ ಜೋಳಿಗೆ ಮಾಡ್ಕಂಡು ಕಡ್ಡಿ ಬೆತ್ತ ಮಾಡ್ಕಂಡು ಎಕ್ಕದ ಕಾಯಿ ಲಿಂಗ ಮಾಡ್ಕಂಡು ಬೂರುಗದ ಕಾಯಿ ಚಿಜ್ಜೆ ಮಾಡ್ಕಂಡು

ಆಯ್ಯಾ ಉತ್ತರಾದೇವಿ ಮನೆಗೆ ಬಿಕ್ಷಕ್ಕೆ ಓಯ್ತಾರಲ್ಲೊ ಮಾದೇವಾ
ಆಹಾ ನೋಡಿ ನಮ್ಮ ಸಿವನಾ।

ಮಲೆಯೇ ಮಾದೇವ ಬರುವ ಚಂದಾವಾ
ಆಹಾ ನೋಡಿ ನಮ್ಮ ಸಿವನಾ।

ಹರಹರಾ ಸಿವ ಸಿವ ಮರಿದೇವರು ಮಾದಪ್ಪನವರು। ಮುಗಿಲಲೇ ಹುಟ್ಟಿ ಮುಗಿಲಲೇ ಉದ್ಭವವಾಗಿ। ನಮ್ಮಪ್ಪಾಜಿಯವರು। ಹೌದು ನಡು ರಾಜ್ಯದಲ್ಲೇ ನಿಂತ್ಕಂಡು। ನಾನು ನಡು ರಾಜ್ಯದಲ್ಲಿ ನಿಂತ್ಕಂಡನಲ್ಲ।

ಈಗ ನಾನು ಸರಿಯಾದ। ತಂದೆ ತಾಯಿ ಪಡ್ಕಳ್ಳಕದ್ದೇ ಸರಿ। ನನಗೆ ತಂದೆತಾಯಿ ಆಗಬೇಕಾದ್ರೆ। ಅವರು ಯಾವ ತರ ಇರಬೇಕು ಅಂದ್ರೆ। ಅವ್ರು ಎಂಜಲಾಗಿರಕ್ಕಿಲ್ಲ, ಅಂಟಾಗಿರಕ್ಕಿಲ್ಲ। ಮುಟ್ಟಾಗಿರಕ್ಕಿಲ್ಲ, ಸೂತ್ಕ ಆಗಿರಕ್ಕಿಲ್ಲ। ಅಂತವ್ರನ್ನು ಪಡೀಬೇಕು ಅಂತ।

ನಮ್ಮ ಅಪ್ಪಾಜಿಯವರು ತಮ್ಮ ದಿವ್ಯಾದೃಷ್ಟಿಯಿಂದ
ನಾಲ್ಕಾಕಡೆ ಮಾಡಪ್ಪ ದೃಷ್ಟಿಮಡಗವ್ರೇ ಮಾದೇವ್ರೋ
ಆಹಾ... ನೋಡಿ ನಮ್ಮ ಶಿವನಾ!

ದೃಷ್ಟಿ ಮಡಗಿ ನೋಡುವಂತ ಕಾಲದಲ್ಲಿ! ಅವರ ದೃಷ್ಟಿಗೆ ಉತ್ತಮಾಪುರ ಅನ್ನದು ಒಂದು ಕಾಣ್ತಂತೆ! ಆ ಉತ್ತಾಪುರದಲ್ಲಿ ಯಾರಪ್ಪಾ ಅಂದ್ರೆ! ಉತ್ರಾಜಮ್ಮ ಅನ್ನುವವಳು! ಚಂದ್ರಸೇಕರ ಅಂತನ್ನವ್ರು! ಅವರಿಬ್ಬರಿಗೂ ಮದ್ವೆ ಆದದ್ದೇ ಸರಿ! ಅವರಿಬ್ಬರಿಗೂ ಸೋಬನವಾಗಲಿಲ್ಲವಲ್ಲ! ಅವರಿಬ್ರೂ ಏನ್ಮಾಡ್ತಾರಪ್ಪಾ ಅಂದ್ರೆ! ಗಂಡ ಹೆಂಡ್ತಿರಾದ್ರು ಅಷ್ಟೇ ವರ್ತಾಗಿ! ಅವ್ರ ಮುಕ ಇವರು ನೋಡ್ತಿಲ್ಲಾ! ಇವರ ಮುಕ ಅವರು ನೋಡ್ತಿಲ್ಲಾ! ಅವರಿಬ್ರೂ ಗಂಡ ಹೆಂಡತಿರಾದ್ರೆ ವರ್ತಾಗಿ! ಇನ್ನೇನು ಹೆಚ್ಚಿಗೆ ಅವರಿಲ್ಲ! ದೊಡ್ಡ ಬಸವಣ್ಣನವರ ಹತ್ತಿರ! ಈ ಚಂದ್ರಸೇಕರ ಅನ್ನುವವರು ಓಗಿ! ಕೊಂಬಿನ ಚಾಕ್ರಿ ಮಾಡ್ಕಂಡಿದ್ಬುಟ್ರು! ಈ ಉತ್ತರಾಜಮ್ಮ ಅನ್ನವ್ರು! ಕಲ್ಯಾಣಪಟ್ಟಣದಲ್ಲಿರತಕ್ಕಂತ! ಸಾದು ಸನ್ಯಾಸಿ ಮುನಾದ್ಗಳು! ಅವ್ರು ಎಂತ ಮುನಾದ್ಗಳಪ್ಪ ಅಂದ್ರೆ! ಕಣ್ಣಲ್ಲಿ ಕಣಜ ಕಟ್ಟಿದವರು! ಹಲ್ಲಿನ ಸಂದಲ್ಲಿ ನೆಲ್ಲಿಮರ ಹುಟ್ಟಿದವರು! ಇಂತ ಕೋಟ್ಯನುಕೋಟಿ ಶರಣರಿಗೆ! ಅಡಿಗೆ ಮಾಡಿ ಬಡಿಸ್ಕಂಡಿದ್ಬುಟ್ಲು ಉತ್ತರಾಜಮ್ಮನವರು!

ಓಹೋ ಇವರೇ ಸರಿ! ಇವರು ಅಂಟಿಲ್ಲ ಮುಟ್ಟಿಲ್ಲ! ಸೂತ್ಕವಾಗಿಲ್ಲ! ಇವರನ್ನೇ ತಂದೆತಾಯಿಯಾಗಿ ಪಡೀಬೇಕು! ಅಂತ ನಿಶ್ಚಯಿಸ್ಕಂಡ್ರು!

ಉತ್ತರಾದೇವಿ ಮನೆಗೆ! ಬಿಕ್ಷಕ್ಕೆ ಹೋಗುವಂತ ಕಾಲದಲ್ಲಿ! ನನ್ನ ಗಂಡ ನನಗೆ ಮುಂದರದೆ! ಹೂವು ಕಟ್ಟಿಂಬಂದು! ಇಂತ ಜಂಗಮರು ಬಿಕ್ಷಕ್ಕೆ ಬರಲಿ! ಅಂತೇಳ್ಬುಟ್ಟು ಅವ್ಳು ಮುತ್ತಿನ ಕೊಂಗ ತಕ್ಕಂಡು! ವಜ್ರ ವೈಡೂರ್ಯ ತುಂಬಿಕೊಂಡು! ನವರತ್ನ ತುಂಬಿಕೊಂಡು! ಕಾಣಿಕೆ ಮಡಿಕಂಡು!

ಅವಳು ದಾನ ತತ್ತಾಳಲ್ಲೋ! ಗಗನ ಸರಣೆ!
ಆಹಾ... ನೋಡಿ ನಮ್ಮ ಶಿವನಾ!

ಆಗಲೀಗ ಬಿಕ್ಷವನ್ನು ತಕ್ಕಂಡು! ಕ್ವಾರಪ್ಪಾ ದಾನವ ಅಂದಳು ಗುರುವೇ! ಅಲ್ಲೇ ಎತ್ತುಕೊಡಲು ಶಿವಸರಣೆ ಗನಸರಣೆ! ನಿನ್ನ ಮಕ್ಕಳ ಈಚಿಗೆ ಕರೆಯಮ್ಮ! ಕಪ್ಪು ಧೂಳತ ಇಕ್ಕಿಸಿಕೊಂಡು! ನಾನು ಬಿಕ್ಷೆ ತೆಕ್ಕಳ್ತೀನಿ ಅಂತೇಳಿ!

ಗುರುವೇ ಮೂರು ವಾಗ್ದಾನವ ಹೇಳ್ತಾನಲ್ಲೋ
ದೀರ ಮಾದಯ್ಯ
ಆಹಾ... ನೋಡಿ ಶಿವನಾ!

ಆಗಲೀಗ ಮಕ್ಕಳನ್ನು ಕರೆಯಮ್ಮ! ಕಪ್ಪು ದೂಳತ ಇಡ್ತೀನಿ! ಆಮೇಲೆ ದಾನ ಈಸ್ಕತೀನಿ! ಅಂತೇಳಿದ್ನಲ್ಲಪ್ಪಾ ಗುರುವೇ! ಆಗಲೀಗ ನನ್ನ ಸತ್ಯವಂತೆ ಉತ್ತರಾದೇವಿ! ಕೆಳಕ್ಕೂ ಮೇಲಕ್ಕೂ ನೋಡ್ತಾಳಪ್ಪಾ! ಗುರುವೇ ಮುತ್ತಿನಂತ ಕಣ್ಣೀರ! ನೆಲದ ಮ್ಯಾಲೆ

ಪಳಪಳನೆ ಸುರಿಸಿದಳೋ ಗುರುವೆ। ಯಾಕಮ್ಮ ದುಕ್ಕ ಮಾಡ್ತೀಯಾ? ಮುತ್ತು ರತ್ನ ವಜ್ರ ವೈಡೂರ್ಯ। ನನಗೆ ಕೊಡಬೇಕು ಅಂತೇಳಿ। ದುಕ್ಕ ಮಾಡ್ತೀಯೇನಮ್ಮಾ।

ನೀ ಯಾಕೆ ದುಕ್ಕ ಮಾಡ್ತಿ ಅಂತಾನಲ್ಲೋ। ದೀರ ಮಾದಯ್ಯಾ।

ಆಹಾ... ನೋಡಿ ನಮ್ಮ ಶಿವನಾ।

ಸಿವನೇ ನಿನಗೆ ದಾನ ಕೊಡಬೇಕು। ಅಂತೇಳಿ ದುಕ್ಕ ಬರಲಿಲ್ಲ ಸ್ವಾಮಿ। ಮಕ್ಕಳ ಈಚಿಗೆ ಕರಿ। ಕಪ್ಪು ದೂಳತ ಇಡ್ತೀನಿ। ಅಂತ ಹೇಳಿದ್ರಲ್ಲಾ ಗುರುವೇ। ನಿಮ್ಮ ಪಾದ ಒತ್ತೇನು।

ನನಗೆ ಸಿಸುವಿನ ಬೋಗ ಮೊದಲಿಲ್ಲವೋ।

ಆಹಾ... ನೋಡಿ ನಮ್ಮ ಶಿವನ।

ಆಗಲಿ ಹೇಳ್ತೀನಿ ಕೇಳಮ್ಮ। ನಿನ್ನ ಮುತ್ತು ರತ್ನ ವಜ್ರ ವೈರ ಮುಡಿ ಮ್ಯಾಲೆ। ಏನಾದ್ರೂ ಆಸೆ ಮಾಡಿ। ನಾನು ಜೋಳಿಗೆ ಒಡ್ಡಿದ್ದೇ ಉಂಟಾಗಿದ್ದರೆ। ನಾಲ್ಕು ರಾಜ್ಯವೆಲ್ಲಾ ಬಂಜೆಯಾಗೋದಲ್ಲಾ। ನನ್ನ ನಾಗಬೆತ್ತ ಬಂಜೆಯಾಗೋದಲ್ಲಾ। ನನ್ನ ಮುತ್ತಿನ ಜೋಳಿಗೆ ಬಂಜೆಯಾಗೋಲ್ಲಾ। ಅಂತೇಳಿ ನಿನ್ನ ಬಂಜೆಕೈರ ಬಿಕ್ಷ ನನಗೆ ಬೇಡಮ್ಮ

ಆಹಾ... ನೋಡಿ ನಮ್ಮ ಶಿವನಾ।

ನಿನ್ನ ಬಂಜೆ ಕೈ ಬಿಕ್ಷ। ಬ್ಯಾಡ ಕಣಮ್ಮ ಅಂತೇಳ್ಬುಟ್ಟು।

ಸುದ್ದ ಮೂಡಲು ಮಲೆಗೆ ಕರ್ಕಂಡು। ಗುರುವೇ ಅಣ್ಣಾಬ್ಲು ಮುದುಕಿಯಾಗಿದ್ದಳು। ಮುತ್ತು ರತ್ನ ತಕ್ಕಂಡೋಗಿ। ಮೂಲೆಗೆ ಬಿಸಾಕ್ಬುಟ್ಟು। ನಿನ್ನ ಮಕ್ಕಳ ಎತ್ತುಕೊಂಡು। ಮುತ್ತಿನ ಕೊಂಗ ಮನೆ ಕಟ್ಟಿಕೊಂಡು। ಬದುಕು ಆಡಿಕೋತಾರೆ। ಇಲ್ಲಿರಬಾರದು ಅಂತೇಳಿ। ಆವಳು ರನ್ನದ ಸಿಂಬಿ ಹಾಕ್ಕಂಡು। ಚಿನ್ನದ ಚಲಿಗೆ ಹೊತ್ಕೊಂಡು। ಅಯ್ಯಾ ತಾವರೆ ಕಟ್ಟೆ। ಏರಿಮ್ಯಾಗೆ ಓಯ್ತಾಳೆ ಗನಸರಣೇ।

ಆಹಾ ನೋಡಿ ನಮ್ಮ ಶಿವನಾ।

ಆಗಲೀಗ ಗನಸರಣೇ ತಕ್ಕಂಡೋಗಿ। ತಾವರೇ ಕಟ್ಟೆ ಏರಿ ಮ್ಯಾಕೆ ಮಡಗ್ಬುಟ್ಟು। ಸ್ವಾಮಿ ಮೂರು ಕೂಡಿದ ಹಾದಿಗೆ ಹೋಗಿ। ತನ್ನ ದುಕ್ಕ ತಾನೇ ತಿನ್ನಂಡು। ತನ್ನ ಗೋಳ ತಾನು ತಿನ್ನಂಡು।

ಆವಳು ಗೋಳಿಂಬಾ ಗೋಳ ಗೋಳೀಲೋ

ಆಹಾ ನೋಡಿ ನಮ್ಮ ಶಿವನಾ।

ಆಗಲೀಗ ನಮ್ಮಪ್ಪ ಮಾಯಕಾರ ಮಹಾದೇವ। ಗಂಡುಗಲಿ ಹುಲಿವಾಹನದವನು ಹುಚ್ಚು ಮಾದೇವಾ। ಮರೆತೋರ ಮನೆ ಮುರಿವಂತ ಮರಿದೇವರು। ತಾಯಮ್ಮನಿಗೆ ಕಣ್ಣು ಕಿತ್ತು ತಕ್ಕೊಂಡೋಗಿ। ಮೂಡ್ಲ ಕಟ್ಬುಟ್ಲಲ್ಲ ಅಂತೇಳಿ।

ಒಂದು ತಾವರೆ ಪದ್ಮವಾಗಿ ಉದ್ಭವಿಸ್ತಾನಲ್ಲೋ। ಧೀರ ಮಾದಯ್ಯೋ।
ಆಹಾ... ನೋಡಿ ನಮ್ಮ ಶಿವನಾ।

ತಾವರೆ ಪದ್ಮವಾಗಿ ಉದ್ಭವಿಸಿದಂತ ಕಾಲಲ್ಲಿ। ತಾಯಮ್ಮನು ಕಟ್ಟೆ ಏರಿ, ಮ್ಯಾಕೆ ಬಂದು ನಿಂತ್ಕಂಡು। ನನ್ನ ಗಂಡನ ಮನೆಗೆ ಮುಂದಲೆಗೆ। ಹೂವು ಕಟ್ಕಂಡು ಬಂದು ತಾಯಿ। ಹೂವ ಕಟ್ಕಂಡು ಬಂದ ತಾವಿಂದ। ಈ ತಾವರೆ ಪದ್ಮ ಇರಲಿಲ್ಲವಲ್ಲಾ ಎಲ್ಲಿ ಬಂತು। ಯಾವ ತಾವ ಬಂತು ಅಂತೇಳಿ। ಯಾವ ದೇವರ ಮಂಡೆ ಮ್ಯಾಕೆ ಹೂವ ಕಾಣೆ। ಹೂವನ್ನು ತರಬೇಕು ಅಂತೇಳಿ।

ತಾ ಉಟ್ಟಿದಂತಾ ತಾ ನೀರಿಗೆ ಹೋಯ್ತಾಳಲ್ಲೋ। ಗನಸರಣೇ।
ಆಹಾ... ನೋಡಿ ನಮ್ಮ ಶಿವನಾ।

ಆಗಲೀಗ ತಾಯಿ ಸತ್ಯವಂತೆ। ದೃಡ ಮನ ನೋಡಬೇಕು ಅಂತೇಳಿ। ನಮ್ಮಪ್ಪ ಮಾಯಕಾರ ಮಾದೇವ। ಅವ ಮಂಡಿ ನುದ್ದ ನೀರಿಗೆ ವೋಯ್ತಾನಲೋ। ನಾನು ನಡೀ ನುದ್ದ ನೀರ್ಗೋಯ್ತಿನಿ। ಅವಳು ನಡೀ ನುದ್ದ ನೀರ್ಗೋದ್ರೆ। ನಾನು ಕತ್ತಿನುದ್ದ ನೀರ್ಗೋಯ್ತೀನಿ। ಅಂತ ವೊಯ್ತಾನೆ।

ಇವ್ಳ ನಿಜವನ್ನು ನೋಡ್ಬೇಕು ಅಂತಾನಲ್ಲೋ। ಮಾದಯ್ಯೋ।
ಆಹಾ ನೋಡಿ ನಮ್ಮ ಶಿವನಾ।

ಆಗಲೀಗ ನನ್ನ ಸತ್ಯವಂತೆ ಉತ್ತರಾಜಮ್ಮ। ಆ ಕತ್ತುದ್ದ ನೀರಿಗಂಟ ಓಗ್ಬುಟ್ಟು। ಆ ಕತ್ತುದ್ದ ನೀರಿನಾಗೆ। ವೋಗಕ್ಕೆ ಕೇಳ್ತಿದ್ದಾಳೆ। ದಾರಿ ಇರ್‍ಲಿಲ್ಲ ಕಣಪ್ಪಾ। ಆದ್ರೆ ಯೇಳ್ತೀನಿ ಕೇಳೋ ತಾವರೆ ಪದ್ಮ। ನಾನು ಒಬ್ಬ ತಾಯಿ ಒಬ್ಬ ತಂದೆಗೆ ಹುಟ್ಟಿ। ನಾನು ಲೋಕಕ್ಕೆ ಸರಣೆಯಾದ್ದೆ ಉಂಟಾದರೆ। ನಾನಿರುವಂತ ತಾವರೆ ಪದ್ಮ ಬಂದ। ನನ್ನ ಮುಂದಲ ಮಲೆಗೆ ಕೂತ್ಕಳ್ಳಿ ಅಂತೇಳಿ।

ಅವಳು ಪಟ್ಟೆ ಸೀರೆ ನೀರ್ಮೇಲೆ ಹಾಸ್ತಳಲ್ಲೋ। ಗನಸರಣೆ
ಆಹಾ... ನೋಡಿ ನಮ್ಮ ಶಿವನಾ।

ತಾಯಮ್ಮನ ಮಾತಿಗೆ। ಮಿತಿ ಮಿರೋಗಿ ಬಿಟ್ಟೋಡೆ। ಕಾಮ ಕರ್‍ಯೋಲ್ಲ, ಬೂಮಿ ಬೆಳ್ಯೋಲ್ಲ। ಸೂರ್ಯ ಚಂದ್ರ ಅಡ್ಡ ತಿರ್ಗೋತಾರೆ ಅಂತೇಳ್ಬುಟ್ಟು। ಹನ್ನೆರಡು ಮಂಡಲ ಹಾರಿ ಬಂದು।

ಅಯ್ಯೋ ತಾಯಮ್ಮನ ಪಟ್ಟೆ ಸೀರೆಮ್ಯಾಗೆ ಕೂತ್ಕತಲ್ಲಪ್ಪೋ
ಹೂವ ಪದ್ಮಾವು।
ಆಹಾ... ನೋಡಿ ನಮ್ಮ ಶಿವನಾ।

ಆ ಹೂವನ್ನು ತಕ್ಕಂಡು। ಕಣ್ಣು ಮೂಗಿಗೆ ಒತ್ಕಂಡು। ಸರಣೆ ತನ್ನ ಎದೆ ಮೇಲಿರುವಂತ ಚಿನ್ನದ ಲಿಂಗ ಕರಡಿಗೆಗೆ ಮಡಿಕಂಡವ್ಳೆ

ನೀರುಯ್ಕೊಂಡು ಆವಳು। ಅವಳು ಅರಮನೆಗೆ
ಇನ್ನು ಬರುತಾಳೆ
ಆಹಾ... ನೋಡಿ ನಮ್ಮ ಸಿವನಾ।[೬]

ಅಂಗೈ ಮೇಲೆ ಕರಡಿಗೆ ಇಡ್ಕಂಡು। ತಾವರೆ ಪುಸ್ಮ ಮಡಿಕ್ಕಂಡು। ಇನ್ನೈದು ಜಾತಿ ಪುಸ್ಮ। ನನ್ನ ಉತ್ತರಾಜಮ್ಮನವರು। ಅವರ ತಂದೆ-ತಾಯಿ ಪಾದ ನೆನಕೊಂಡು। ಪತಿ ಪಾದ ನೆನಕೊಂಡು। ಕಲ್ಯಾಣ ಪಟ್ಟಣದ ಬಸವಣ್ಣನವರ ಪಾದವ ನೆನ್ಕಂಡು। ಐದು ಜಾತಿ ಪುಸ್ಮ ಕೂಗ್ತಾಳೆ ಅಂದ್ರೆ।

ಅಮ್ಮ ನನ್ನ ಓಣೇಲಿ ಉಟ್ಟಿದವಳೇ।
ನನ್ನ ಓಣೇಲಿ ಬೆಳೆದವಳೆ।
ನನ್ನ ಓಗುವರ ಸೆರಗ ಇಡಿಯುವಳೆ।
ಸುವ್ವ ಬಸವಯ್ಯ ವೋಗುವರ ಸೆರಗ ಹಿಡಿಯುವಳೆ।
ಉತ್ತರಾಣೆ ನೀ ಬೇಗ ಬಾರವ್ವ ನನ್ನ ಸಿವಪೂಜೆಗೆ
ಸುವ್ವ ಬಸವಯ್ಯಾ।
ತಾಯ ಹಳ್ಳದಲ್ಲಿ ಉಟ್ಟವಳೆ ಕುಳ್ಳಾನಿ ಬೆಳೆಯುವಳೆ
ಚಿಳ್ಳುಗುರಿನಲ್ಲಿ ಹೆತ್ತವಳೆ।[೭]

ಸುವ್ವಾ ನಾ ಸುವ್ವಿ ಬಸವಯ್ಯ।
ಚಿಳ್ಳುಗಿರಿನಲ್ಲಿ ಹೆತ್ತವಳೆ।
ತುಂಬಿದ್ರಸ್ವ ನೀ ಬೇಗ ಬಾರವ್ವ।
ನನ್ನ ಸಿವಪೂಜೆಗೆ ಸುವ್ವಾ ಬಾ ಚನ್ನಬಸವಯ್ಯ।

ತೋಪ್ನಲ್ಲಿ ಹುಟ್ಟಿದವಳೇ।
ನೀ ತೋಪ್ನಲ್ಲಿ ಬೆಳೆದವಳೆ।
ಬಿಲ್ವಪತ್ರೆ ಬೇಗ ಬಾರಮ್ಮ।
ನನ್ನ ಸಿವಪೂಜೆಗೆ ಸುವ್ವಬಾ ಚನ್ನ ಬಸವಯ್ಯ।

ಅಮ್ಮ ತ್ವಾಟದಲ್ಲಿ ಹುಟ್ಟಿದವಳೇ।
ತ್ವಾಟದಲ್ಲಿ ಬೆಳೆದವಳೇ।
ತೊಟ್ಟು ಸಣ್ಣವಾಗಿ ಬಿಡುವಂತ।
ಮಲ್ಲಿಗೆ ಹೂವೆ।
ನೀ ಬೇಗ ಬಾರವ್ವಾ ನನ್ನ ಸಿವಪೂಜೆಗೆ।
ಸುವ್ವ ಬಾ ಚನ್ನ ಸುವ್ವಬಸವಯ್ಯ।

ಹಿತ್ತಲ್ಲಿ ಹುಟ್ಟಿದಳೇ, ಹಿತ್ತಲ್ಲಿ ಬೆಳೆದವಳೆ।
ನೀ ಸೂರ್ಯನಿಗೆ ಮುಕವ ತೋರವಳೆ।
ಸುವ್ವ ಬಾ ಸುವ್ವಾ... ಬಸವಯ್ಯ।

ಸೂರ್ಯನಿಗೆ ಮುಕ ಮಾಡಿ।
ಸೂರ್ಯ ಕಾಂತಿ ನೀ ಬೇಗ ಬಾರವ್ವ।
ನನ್ನ ಸಿವಪೂಜೆಗೆ।
ಸುವ್ವ ಬಾ... ಬಾ... ಸುವ್ವ ಬಸವಯ್ಯ[1]

ಈ ಐದು ಹೂವುಗಳನ್ನು ಕೂಗ್ದಂತ ಸಮಯದಲ್ಲಿ। ಈ ತಾಯಿ ಉತ್ತರಾಜಮ್ಮನವರು। ಐದು ಜಾತಿ ಪುಷ್ಪದಲ್ಲಿ। ಈ ತಾವರೆ ಹೂವು ಬಂದು ಸೇರ್ಕಂಡು। ಬೆಳ್ಳಿ ಕರಡಿಗೆಯಲ್ಲಿ ಸಿವಪೂಜೆ ಮಾಡ್ಕಂಡು। ತನ್ನ ಕತ್ತಿಗೆ ಹಾಕ್ಕಂಬುಟ್ಟು। ಅಡಿಗೆ ಮಡ್ಕಂಬುಟ್ಟು ಇಕ್ಕಬುಟ್ಲು[?]

ಆಗಲೀಗ ನನ್ನ ಗನ ಸರಣೆ। ಅರಮನೆಗೆ ಬಂದಂತ ಕಾಲದಲ್ಲಿ। ಮೂರುದಿನ ತುಂಬೋ ಹೊತ್ತಿಗೆ। ಮೂರು ತಿಂಗಳು ತುಂಬಿದಂಗೆ ಆಯ್ತದೆ। ಆರು ದಿನ ತುಂಬೊ ಹೊತ್ಗೆ। ಆರು ತಿಂಗಳು ತುಂಬಿದಂಗೆ ಆಯ್ತದೆ।

ಅವಳು ಗಂಡಾನ ಬಳಿಗೆ ಬರುತಾಳೆ
ಹ್ಞಾಂ ನೋಡಿ ನಮ್ಮ ಸಿವನಾ

ಆದ್ರೆ ಯೇಳ್ತೀನಿ ಕೇಳೆ ದಮ್ಮಯ್ಯ। ನಾನು ಕೊಕ್ಕೆ ದೊಣ್ಣೆ ಇಡ್ಕಂಡು। ಮುಪ್ಪಾದ ಕಾಲದಲ್ಲಿ। ನನಗೆ ನೂರೊಂದು ವರ್ಸ ತುಂಬೊಯ್ತಲ್ಲೊ ಗುರುವೇ। ನನ್ನ ಹೊಟ್ಟೆ ವಳಗೆ ಮುಪ್ಪಾದ ಕಾಲದಲ್ಲಿ।

ನನ್ನ ಹೊಟ್ಟೆ ಒಳಗೆ ಜಳಕನಾಡ್ತದಲ್ಲೋ
ನಿನ್ನ ಸಿರಿಪಾದೋ...
ಹ್ಞಾಂ... ನೋಡಿ ನಮ್ಮ ಸಿವನಾ।

ಆಗಲೀಗ ಗಂಡನಿಗೆ ಹೇಳುವಂತಾ ಕಾಲದಲ್ಲಿ। ಹೇಳ್ತೀನಿ ಕೇಳೆಣ್ಣೆ। ವಿಕಾರವಾಗಲಿ, ಪೀಡೆಯಾಗ್ಲಿ ಪಿಸಾಚಿ ಆಗ್ಲಿ।

ನಿನಗೆ ಬಂಜೆ ಅನ್ನೋ ಹೆಸರು ತಪ್ಪೋಗಲೀ ಕಣೆ
ಆಹಾ ನೋಡಿ ನಮ್ಮ ಸಿವನಾ

ಅಂಗೈಲಿ ಸಿವ ಆದಾರಿಗಳೋ ಗುರುವೇ। ಮುಂಗೈಲಿ ಸಿವ ಜೋಳಿಗೆಯೇ। ಮಹಾರುದ್ರಲಿಂಗರು ಪೂಜೆಗೆ ಗುರುತರ। ಕ್ವಾರಣ್ಯಕೂ ಬಂದವರೆ। ಕ್ವಾರಣ್ಯ ನೀಡಮ್ಮಾ ಕೋಡುಗಲ್ಲು ಮುನಿಗೆ। ಅಂಗೈಲಿ ಆದಾರಿಗಳೋ ಗುರುವೇ। ಮುಂಗೈಲಿ ಸಿವ ಜೋಳಿಗೆಯೋ ಗುರುವೇ। ಸಿವ ಕ್ವಾರಣ್ಯಕೂ ಬಂದವರೆ। ಮೂಡಲ ಮಲೆಯಾಗಿ ಹೋಗವನೇ। ನನ್ನ ನಾಗಮಲೆಯ ಮಾದೇವಾ। ಆಹಾ ಗುರು ದೇವನು ಕ್ವಾರಣ್ಯಕೆ

ಬಂದಾರು। ಅಂಗೈಲಿ ಆದಾರಿಗಳೋ ಗುರುವ। ಮುಂಗೈಲಿ ಸಿವ ಜೋಳಿಗೆಯೇ। ಗುರುವೇ ಮಾ ಕ್ವಾರಣ್ಯಕೆ ಬಂದವರೆ।

ಆಗಲೀಗ ನನ್ನ ಸತ್ತವಂತೆ। ಗನ ಸರಣೆ ಕುಟ್ವಾಣಿ ತಕ್ಕಂಡು। ಎಲೆ ಅಡಿಕೆ ಕುಟ್ಟುವಂತಾ ಕಾಲದಲ್ಲಿ। ನಮ್ಮಪ್ಪ ಮಾಯಕ್ಕಾರ ಮಾದೇವ। ಈ ಗಂದದ ಕರಡಿಗೆಯೊಳಗಿದ್ದಂತೆ। ತನ್ನ ಸತ್ತವಂತೆಯಾದ। ಸಿವಸರಣೆ ಉತ್ತರಾದೇವಿಯೊಂದಿಗೆ।

ಅವನು ಮಾತಾಡ್ತಾನಲ್ಲೋ ಮಾದೇವ।
ಆಹಾ... ನೋಡಿ ನಮ್ಮ ಸಿವನಾ।

ಆದ್ರೆ ಯೇಳ್ತೀನಿ ಕೇಳವ್ವಾ। ನೀನೀಗ ಎಲೆ ಅಡಿಕೆ। ಹಾಕೋತ ಕೂತಿರಲೋ ತಾಯಿ। ನನಗೆ ಬರೋಕೆ ಅಪ್ಪಣೆ ಕೊಡೋ।

ಅಂತಾನಲ್ಲೋ ಮಾದೇವಾ।
ಆಹಾ... ನೋಡಿ ನಮ್ಮ ಸಿವನಾ।

ಆಗಲೀಗ ನಮ್ಮಪ್ಪ ಮಾಯಕಾರ। ಮಾದೇವ ಒಡೆದು ಮೂಡುವಂತ ಕಾಲದಲ್ಲಿ। ಸತ್ತವಂತ ಸಿವಸರಣೆ। ಸುತ್ತ ಮುತ್ತ ಗರಗರನೆ ತಿರುಗಿ ನೋಡ್ತಾಳಪ್ಪಾ ಗುರುವೇ। ಯಾಕಪ್ಪಾ ಸುತ್ತಾಮುತ್ತಾ ತಿರುಗಿ ನೋಡ್ತಲ್ಲ। ನಿನ್ನ ಹೊಟ್ಟೆ ಒಳಗಿರ್‍ವಾಗೆ। ನಾನು ಮಾತಾಡ್ತೀನಿ ತಾಯಿ।

ನನಗೆ ಬರೋಕೆ ಅಪ್ಪಣೆ ಕೊಡು ನೀನು। ಗನಸರಣೆ।
ಆಹಾ... ನೋಡಿ ನಮ್ಮ ಸಿವನಾ।

ಆದ್ರೆ ಯೇಳಪ್ಪಾ ನನ್ನ ಮಾಯಕಾರ ಮಾದೇವ। ನಿನ್ನ ಹಣೇಲಿ ಬರ್‍ದಂಗೆ ಬನ್ನಿ ಆಗಾದ್ರೆ। ನನ್ನ ಕಂದ ಸೀಮೇಲಿ ಎಲ್ಲಾಣೆ ಬಂದಾರು। ಭೂಮಿಲಿ ಎಲ್ಲಾಣೆ ಬಂದಾರು।

ನೀ ಜನ್ಮಿಸಿ ಬಾರಪ್ಪ ಪುತ್ರ ಮಗನೇ
ಆ ನೋಡಿ ನಮ್ಮ ಸಿವನಾ।

ಆ ಮಾತನ್ನು ಕೇಳ್ಬುಟ್ಟು। ನಮ್ಮಪ್ಪ ಮಾಯಕಾರ ಮಾದೇವ। ತನ್ನ ಎರಡು ಕಣ್ಣಳನೇ। ಕೈಯಿಂದ ಮುಚ್ಚಂಡ್ನಲ್ಲಪ್ಪಾ। ಗುರುವೇ ಆ ಸುದ್ದಿಯನ್ನು ಎತ್ತಬ್ಯಾಡ ತಾಯಿ। ಕಾಮ ಕರ್‍ಯೋಲ್ಲ ಬೂಮಿ ಬೆಳ್ಯೋಲ್ಲ। ಸೂರ್ಯಚಂದ್ರರು ಅಡ್ಡಾಗ್ತರಲ್ಲಾ ತಾಯಿ। ನಾ ಎಲ್ಲಾಣೆ ಬರಬೇಕು।

ಅಪ್ಪಣೆ ಕೊಡವ್ವಾ ನೀನು ಗನಸರಣೆ
ಹ್ಹಾಂ... ನೋಡಿ ನಮ್ಮ ಸಿವನಾ।

ಆದ್ರೆ ಯೇಳ್ತೀನಿ ಕೇಳಪ್ಪಾ। ನನ್ನ ಕಂದಯ್ಯ ನನ್ನ ಅಪ್ಪಣೆ। ಇಲ್ಲದೇ ಉಂಟಾದ್ರೆ। ನನ್ನ ಬಾಯ್ಗಾಗೆ ಬಾರಪ್ಪ।

ನನ್ನ ಪುತ್ರಾನೇ। ಮಗನೇ।
ಆಹಾ ನೋಡಿ ನಮ್ಮ ಶಿವನಾ

ಆದ್ರೆ ಯೊಳ್ಳೀನಿ ಕೇಳವ್ವಾ। ನನ್ನ ಗನಸರಣೆ ಬಾಯಲ್ಲಿ ಬಂದ್ರೆ ಎಂಜಲು ಅಂತಾರೆ। ಮೂಗಲ್ಲಿ ಬಂದ್ರೆ ಗೊಣ್ಣೆ ಅಂತಾರೆ। ಕಣ್ಣಲ್ಲಿ ಬಂದ್ರೆ ಗೀಜು ಅಂತಾರೆ। ಕಿವೀಲಿ ಬಂದ್ರೆ ಗುಗ್ಗೆ ಅಂತಾರೆ। ಉಗುರಲ್ಲಿ ಬಂದ್ರೆ ಚೆನ್ನಪಣೆ ಅಂತಾರೆ। ಸಂಕದಲ್ಲಿ ಬಂದ್ರೆ ಕೊಳೆ ಅಂತಾರೆ। ಬೆನ್ನಲ್ಲಿ ಬಂದ್ರೆ ಸಂಕದಾಳ ಅಂತಾರೆ।

ನಾ ಎಲ್ಲಾಣೆ ಬರಲೀ। ತಾಯವ್ವ।
ಆಹಾ... ನೋಡಿ ನಮ್ಮ ಶಿವನಾ।

ಆಗಲೀಗ ನಮ್ಮ ತಾಯಮ್ಮನವರು। ಬೆಚ್ಚಿ ಬೆರಗಾಗಿ ಕೂತುಕೊಂಡು। ಎಲ್ಲಾನೂ ವಾದ ಹೇಳ್ಳಲ್ಲ ಎಲ್ಲಿ ಬಂದೀಯೇ। ಯಾತಾವು ಬಂದೀಯಾ? ಪುತ್ರ ನನ್ನ ಮಗನೇ ಅಂತೇಳ್ಬುಟ್ಟ। ಅವಳು ನಾಯೇನು ನಿನಗೆ। ಪ್ರತಿ ಉತ್ತರ ಕೊಡಲಾರೆ ಮಗನೇ।

ನನ್ನ ಪುತ್ರ ಬಾರಪ್ಪ ಮಗನೇ
ಹ್ಞಾಂ... ನೋಡಿ ನಮ್ಮ ಶಿವನಾ।

ನಿನ್ನ ಹೊಟ್ಟೆ ಒಳಗೆ ಬರಕ್ಕಂತ। ಮುಂದಿನ ಕಲಿಯುಗದಲ್ಲಿ। ನಾನು ಕಲಿಯುಗ ಮರಿದೇವರಾಗಿ। ಜಗತ್ತಿನಲ್ಲುಟ್ಟಬೇಕು। ನಾನು ಮನುಷ್ಯನಾಗಿ ಬರ್ತ್ತಿದ್ದೀನಿ ತಾಯಿ। ನೀನೇನೂ ಚಿಂತೆ ಮಾಡ್ಬೇಡ ಅಂತೇಳ್ಬುಟ್ಟ। ಆಗಲೀಗ ಉತ್ತರಾಜಮ್ಮನಿಗೆ ಬಾಳ ಆನಂದವಾಯಿತು। ಉತ್ತರಾಜಮ್ಮನು ಮೂರುತಿಂಗಳ ಕಾಲ ತುಂಬಿದ ಕಾಲದಲ್ಲಿ। ಒಂದಾನೊಂದು ದಿವಸ ಬಾಳ ದುಕ್ಕ ಮಾಡ್ತಾಳೆ। ಜಗತ್ತಿನಲ್ಲಿ ಎಪ್ಪತ್ತೆದು। ವಯಸ್ಸಿನ ಕಾಲ ಬಂದ್ರೂ ಕೂಡ। ಮಕ್ಕಳನ್ನು ಬೂಲೋಕದಲ್ಲಿ। ಜನನವಾಗದೆ ಅಂತ ಯೇಳಿದ್ರೆ। ಬೂಲೋಕ ನಗ್ತದೆ। ಚಂದ್ರ ಸೂರ್ಯಾದಿಗಳು ನಗ್ತಾರೆ। ಏನಪ್ಪಾ ಈ ಕಲಿಯುಗ ಎಂಬುದಾಗಿ।

ಬಾಳ ಚಿಂತೆ ಮಾಡ್ತವ್ರೆ ಗುರುದೇವಾ
ಆಹಾ... ನೋಡಿ ನಮ್ಮ ಶಿವನಾ

ಆಗಲೇ ಸಿವಸರಣೆ ಉತ್ತರಾಜಮ್ಮನವರು। ಚಿಂತೆ ಮಾಡುವಂತ ಕಾಲದಲ್ಲಿ। ಯಾಕವ್ವಾ ತಾಯಿ ಚಿಂತೆ ಮಾಡುತ್ತಿದ್ದೀಯ। ಚಿಂತೆ ಮಾಡಬೇಡಮ್ಮ। ಈಗಲೀಗ ಮೂರು ತಿಂಗಳ ಕಾಲ ತುಂಬಿ ಬಿಟ್ಟು। ಅಮಾವಾಸ್ಯೆಗೆ ಒಂಬತ್ತು ತಿಂಗಳಿಗೆ ನನ್ನತಾಯಿ। ನಾನು ಬೂಲೋಕದಲ್ಲಿ ಜನನವಾದಂತ ಕಾಲದಲ್ಲಿ। ಬೆಚ್ಚಬ್ಯಾಡ, ಬೆದರಬ್ಯಾಡ ಎದುರಬ್ಯಾಡ। ನಾನು ಜಗತ್ತಿನಲ್ಲಿ ಕಲಿಯುಗದ ಮರಿದೇವರಾಗಿ ಉಟ್ಬೇಕಂತೇಳಿ। ನನಗೆ ತಾಯಿಲ್ಲ ತಂದೆ ಇಲ್ಲ ಎಂಬುದಾಗಿ। ಜಗತ್ತಿನಲ್ಲಿ ಕೊಂಡಾಡ್ತಾ ಇದ್ರು। ಅದಕ್ಕೋಸ್ಕರವಾಗಿ ನಿನ್ನ ಹೊಟ್ಟೆ ಒಳಗೆ। ನಾನು ಹುಟ್ಟಬೇಕಾದಂತ ಮಗ। ನನ್ನ ತಂದೆಯಾಗಿ ಪಡೆಯಬೇಕಾದಂತ

ಚಿಂದ್ರಸೇಕರಮೂರ್ತಿ। ಆ ಇಮಾಚಲ ಪರ್ವತ ತಪ್ಪಲಲ್ಲಿ। ಏಳು ಬಾಯಿ ಹೊನ್ನುತ್ತದಲ್ಲಿ। ತಪ ಮುನಿಯಾಗಿದ್ದಾರೆ ಅಪ್ಪಾಜಿ। ಇವರನ್ನು ತಂದೆಯಾಗಿ ಪಡೀಬೇಕು। ನಿಮ್ಮನ್ನು ತಾಯಿಯನ್ನಾಗಿ ಪಡೀಬೇಕು ಎಂಬುದಾಗಿ। ನಿಮ್ಮ ಜನ್ಮವನ್ನು ಸೇರಿದ್ದೀನಿ। ತಾಯಿ ಚಿಂತೆ ಮಾಡಬ್ಯಾಡ। ಏನಪ್ಪಾ ಕಂದಣ್ಣಾ, ಚಂದ್ರ ಸೂರ್ಯಾದಿಗಳು। ಜಗತ್ತಿನಲ್ಲಿ ನಗ್ತಾ ಅವ್ರೆ ಕಣಪ್ಪಾ। ಆಹಾ ಬೂಮಿ ಕೂಡ ನಗ್ತಾ ಅದೆ। ತಾಯಿ ನೀನು ಯಾವ ಚಿಂತೇನೂ ಮಾಡಬ್ಯಾಡ। ಆಕಾಸ ಬೂಮಿಗಳೇ ಒಂದಾಗಲಿ। ಚಂದ್ರ ಸೂರ್ಯಾದಿಗಳೇ ಒಂದಾಗಲಿ। ನಾನು ಬೂಲೋಕಕ್ಕೆ ಬರಗಂಟ। ನೀನು ಚಿಂತೆ ಮಾಡಬೇಡಮ್ಮ। ನನ್ನ ಕಲಿಯುಗದ ಮರಿದೇವರು ಅಂತ ಕರೀಬೇಕು।

ಚಿಂತೆ ಮಾಡಬೇಡ ಅಂತವನೇ, ಮಾದೇವಾ
ಆಹಾ... ನೋಡಿ ನಮ್ಮ ಸಿವನಾ।

ಉತ್ತರಾಜಮ್ಮನಿಗೆ ಮೂರು ತಿಂಗಳು ತುಂಬೋಗ್ಬುಡ್ತು। ಆಗಲೀಗ ಉತ್ತರಾಜಮ್ಮನಿಗೆ। ಕೆರೆ ತೊಕ್ಕಲು ಮಣ್ಣು ಬೇಕು। ಮೊಗರು ಉಣಸೇಕಾಯಿ, ಬ್ಯಾಲದಕಾಯಿ। ಇಂತವುಗಳನ್ನು ನಾನು ಊಟ ಮಾಡಬೇಕು। ಅನ್ನುವ ಹಂಬಲ ಉಂಟಾಯಿತು। ಆರಣ್ಯದಲ್ಲಿ ಅವಳಿಗೆ ತಂದು ಕೊಡುವವರು ಯಾರೂ ಇಲ್ಲ। ಆಗಲೀಗ ಚಿಂತೆ ಮಾಡುವಂತ ಕಾಲದಲ್ಲಿ। ಪರಮಾತ್ಮನ ಮಾಯದಿಂದ ಮೈಮೆಗಳಿಂದ। ಇವುಗಳಿಗೆ ಬೇಕಾದಂತ। ತೊಕ್ಕಲು ಮಣ್ಣು, ಮೊಗರು ಉಣಸೇಕಾಯಿ। ಚಿಗರು ಮೆಣಸಿನಕಾಯಿ, ಬ್ಯಾಲ ಇಂತವೂ ಕೂಡ। ಬಿದುರು ಮಂಚದ ಬಲಪಾರ್ಸ್ವದಲ್ಲಿ ಮಡಗಿದ್ದಂತೆ। ಸಿವಸಿವ ಇದನ್ನು ತಂದುಕೊಟ್ಟವರು ಯಾರೂ ಕಾಣಿನಲ್ಲ। ಇದನ್ನು ತರಿಸುವುದಕ್ಕೆ ನನ್ನಲ್ಲೇ ಸಾಧ್ಯ ಅಂತೇಳಿ।

ಆ ಪರಮಾತ್ಮ ಉತ್ತರಾಜಮ್ಮನವರೊಡನೆ ನುಡಿದವರೆ
ಆಹಾ... ನೋಡಿ ನಮ್ಮ ಸಿವನ

ಆಗಲೀಗ ಗುರುದೇವರು ಆಡಿದ। ಆಡಿದ ಮಾತು ಕೇಳಿಬಿಟ್ಟು। ಏನಪ್ಪಾ ಆತ್ಮದಲ್ಲಿ ಇರುವಂತ ಸಿಸುಬಾಲಕ। ಇಷ್ಟು ಕೆಲಸಗಳನ್ನೆಲ್ಲಾ ಈಗ್ಲೇ ಮಾಡ್ತಾ ಇದ್ದಾನೆ। ಇನ್ನು ಮುಂದಕ್ಕೆ ಕಾಣದು। ಈ ಕರಣಕ್ಕೆ ಕೇಳದು। ಆಗಲೀಗ ಉತ್ತರಾಜಮ್ಮನಿಗೆ।

ಆರು ತಿಂಗಳ ಕಾಲ ತುಂಬಿ ಬಂತು ಗುರುದೇವಾ
ಆಹಾ... ನೋಡಿ ನಮ್ಮ ಸಿವನ

ನನ್ನಪ್ಪ ಬೂಲೋಕದಲ್ಲಿ। ಪತಿ ಇಲ್ಲದೆ ಸತಿಗರ್ಭಿಣಿಯಾದಳು।

ಅಂತೇಳಿದರೆ ಈ ಜಗತ್ತೆಲ್ಲಾ ಒಂದಾಗಿ ನಗುತ್ತದಲ್ಲಾ ಕಂದಣ್ಣಾ
ಆಹಾ... ನೋಡಿ ನಮ್ಮ ಸಿವನಾ।

ಉತ್ತರಾಜಮ್ಮನವರು ಗೊಳಗೊಳನೆ। ಎರಡು ಕಣ್ಣುಗಳಿಂದ ನೀರನ್ನು। ಕೆಡಿವಂತ ಕಾಲದಲ್ಲಿ। ತಾಯಿ ನಿನ್ನ ಗರ್ಬದಲ್ಲಿ ನಾನಿರುವಂತ ಕಾಲದಲ್ಲಿ। ನೀನ್ಯಾಕಮ್ಮ ಇಷ್ಟು ಚಿಂತೆ ಮಾಡಬೇಕು। ಚಿಂತೆ ಮಾಡಬೇಡ ದುಕ್ಕಿಸ ಬ್ಯಾಡ ನಮ್ಮಮ್ಮ। ಒಂಬತ್ತು ತಿಂಗಳಮ್ಯಾಲೆ ಏಳುವರೆ ದಿವಸದಲ್ಲಿ। ನಾನು ತುಂಬಿದ ಸೋಮವಾರ। ಅರ್ಧರಾತ್ರಿ ಬಯಂಕರದಲ್ಲಿ ನಿನ್ನೊಟ್ಟೆಯಿಂದೀಚೆಗೆ ಬರುತ್ತೀನಿ।

ಚಿಂತೆ ಮಾಡಬೇಡ ಅಂತವರೆ ಮಾಯಕಾರ ಮಾದೇವಾ
ಆಹಾ ನೋಡಿ ನಮ್ಮ ಸಿವನಾ

ಆಗಲೀಗ ತುಂಬಿದ ಸೋಮವಾರದ ದಿವಸ। ಜ್ಯೋತಿ ಬೆಳಗನ್ನು ಬೆಳಗಿಬಿಟ್ಟು। ಆ ಸಿವನ ಲೀಲೆಯಿಂದ। ಆ ಸಿವಲಿಂಗವನ್ನು ತೊಳೆದು। ನೆತ್ತಿಯ ಮ್ಯಾಲೆ ಪುಸ್ಪವನ್ನು ಇಟ್ಟು ಬುಟ್ಟು ಆಗಲೀಗ ಕರವೆತ್ತಿ ಕೈಮುಗಿದು ಕೂತುಕೊಂಡ। ಪರಮಾತ್ಮ ಆಗಲೇ ಇವಳ ಆತ್ಮವನ್ನು। ಬಿಟ್ಟು ಬರುವಂತ ಕಾಲದಲ್ಲಿ। ಉತ್ತರಾಜಮ್ಮನ ಸರೀರವೆಲ್ಲಾ ಜಲೀರ್ ಅಂದ್ಬುಡ್ತು। ಜಲೀರ್ ಅಂದ ತಕ್ಷಣ ಕಿಟಕಿ ಬಾಗಿಲು ತೆಗೆದರೆ। ಯಾವ ರೀತಿ ಬಾಗಿಲು ಕಾಣುತ್ತೆ। ಅದೇ ಪ್ರಕಾರವಾಗಿ ಅವಳ ಹೃದಯವನ್ನು ಬಿಟ್ಟು।

ಸ್ವಾಮಿ ಭೂಮಿಗಿಳಿದ ಜಗದೊಡೆಯಾ।
ಆಹಾ... ನೋಡಿ ನಮ್ಮ ಸಿವನಾ

ಹೊಟ್ಟೆಲುಟ್ಟಿದ ಸಿಸುಕಂದನಿಗೆ। ಹಾಲು ಕುಡಿಸಬೇಕು ಅಂತ ಬೇಕಾದಾಟ ಆಡಿದಳು। ಅವಳ ಅಮೃತವನ್ನು ಕಚ್ಚಿಕೊಂಡು ಹಾಲನ್ನು ಕುಡೀಲಿಲ್ಲ। ಆ ನಮ್ಮ ಮಾಯಕ್ಕಾರ ಮರಿದೇವರು। ಏಳು ಅರ್ದ ವರ್ಸದ ಮಗನಾಗಿ। ಉತ್ತರಾಜಮ್ಮನ ಮಡಿಲಲ್ಲಿ ಬೆಳೆದು। ಸಿವನೇ ಆ ಚಂದ್ರಸೇಕರ ಮೂರ್ತಿ। ಇಮಾಚಲ ಪರ್ವತ ತಪ್ಪಲಲ್ಲಿ। ಹೌದು ತಪ ಮಾಡುವಾಗ ಸ್ವಾಮಿ।

ಹುಡಿಕಂಡು ಬತ್ತವರೇ ಮಾದೇವಾ
ಆಹಾ... ಕ್ವಾರಣ್ಣ ನೀಡಪ್ಪಾ ಕೋಡುಗಲ್ಲಿನ ಮ್ಯಾಲೆ

ಕೋಲು ಮಂಡೆ ಜಂಗಮದೇವರು ಕ್ವಾರಣ್ಣಕ್ಕೆ ದಯ ಮಾಡವರೊ।
ಕ್ವಾರಣ್ಣ ನೀಡಮ್ಮಾ ಕೋಡುಗಲ್ಲ ಮ್ಯಾಲೆ।

ಇಮಾಚಲ ಪರ್ವತದಲ್ಲಿ ಹೋಗಿ ನಿಂತಕಂಡು। ಏಳು ಬಾಯಿ ಹೊನ್ನುತ್ತದಲ್ಲಿ। ಕಿವಿಕೊಟ್ಕಂಡು ಕೇಳುವಂತ ಕಾಲದಲ್ಲಿ। ಓಂ ನಮಃ ಸಿವಾಯ ಎನ್ನುವಂತ ಸಬ್ದಗಳು। ಏಳು ಬಾಯಿ ಹೊನ್ನುತ್ತವೆಲ್ಲಾ ಕರಗಿ। ನೀರಾಗಿ ಅರಿದೋಗ್ಬುಡ್ತು ಪರಮಾತ್ಮ। ಅವರ ಜಡಮುಡಿಗಳೆಲ್ಲಾ ಪಾಸು ಬೇರುಬಿಟ್ಬೋಗ್ಬುಟ್ಟಿದ್ದೋ। ಆಗಲೀಗ ನನ್ನ ತಂದೆ ಪಡೆದಂತಾಯಿತು।

ಅಂತೇಳಿ ಸರಣ ಅಂದವರೇ

ಆಹಾ... ಕ್ವಾರಣ್ಯ ನೀಡವ್ವಾ ಕೋಡುಗಲ್ಲಿನ ಮ್ಯಾಲೆ

ಆಗಲೀಗ ಚಂದ್ರಸೇಕರ ಮೂರ್ತಿಗಳು। ದೃಸ್ಟಿಯಿಂದ ನೋಡಿದಾಗ। ಸ್ವಾಮಿಯವರು ಬಾಳ ಚನ್ನಾಗಿ ಕಂಡ್ಬುಟ್ರು। ಯಾರಪ್ಪಾ ನೀನು ಎಂಬುದಾಗಿ ಕೇಳಿದ್ರಂತೆ। ಅಪ್ಪಾಜಿ ನಿಮ್ಮನ್ನು ಕಾಣುವಂತ ನಾನು। ಬೇಕಾದಂತ ಕಸ್ಟ ಬಿದ್ದಂತಾಯಿತು। ಈಗಲೀಗ ನಡೀರಿ ನಮ್ಮ ಮನೆಗೋಗೋಣ।

ಅಂತೇಳಿ ಸ್ವಾಮಿಯವರನ್ನು ಕರ್‍ಕೊಂಡು ಬತ್ತವರಲ್ಲೋ ದೇವಾ

ಆಹಾ..... ಕ್ವಾರಣ್ಯಗಳ ನೀಡವ್ವಾ ಕೋಡುಗಲ್ಲಿನ ಮೇಲೆ

ತಾಯಿ ಉತ್ತರಾಜಮ್ಮನವರು। ತನ್ನ ಗರ್ಬದಲ್ಲಿ ಉದ್ಬವಿಸಿದರು ಪುಟ್ಟ ಮರಿದೇವರು ಅಂತೇಳಿ। ತಾಯಿ ಅನುಗ್ರಹ ಮಾಡಿದರು। ಅಲ್ಲಿ ಕೆಲವಾರು ದಿವಸ ಕಾಲ। ತಾಯಿ ತಂದೆ ಸನ್ನಿದಾನದಲ್ಲಿ ಕಾಲಹರಣ ಮಾಡಿ। ಮತ್ತು ಗುರುಮಟ ಸೇರಬೇಕಂತೇಳಿ। ಏಳು ವರ್ಸ ವಯಸ್ಸಾದಂತೆ। ಏಳು ವರ್ಸದ ಬಾಲಕ ಮರಿದೇವರು। ಉತ್ತರಾಜಮ್ಮನ ಪುತ್ರ ಉತ್ತರ ದೇಸದ ಮಾದೇವ। ನಾನು ಕುಂಂತೂರು ಮಟಕ್ಕೆ ಯೋಗಬೇಕು। ಪ್ರಬುಲಿಂಗಸ್ವಾಮಿ ಸನ್ನಿದಾನದಲ್ಲಿ। ಹದಿನಾಲ್ಕು ವರಸ ಸೇವಾಕರ್ತನಾಗಿರಬೇಕು ಅಂತೇಳಿ।

ಅವನು ವೇಗ ದೃಷ್ಟಿಯಿಂದ ಕಡೆದು ಬತ್ತವನಲ್ಲಾ

ಮೂಡಲ ಮಲೆಯ ಮಾದೇವಾ

ಆಹಾ ಕ್ವಾರಣ್ಯಗಳ ನೀಡಮ್ಮಾ ಕೋಡುಗಲ್ಲು ಮುನಿಗೆ

ಅವಾಗ ತಾಯಿ। ಹೇಳಿದ ಮಾತಿನಂತೆ ಶಿವನ ಮಾತಿನಂತೆ। ಶಿವಯೋಗ ಮಾಡ್ಕಂಡು ಬರ್ತಾಯಿದ್ದಾರೆ। ಈ ಮಗನಿಗೆ। ಮಹಾಲಿಂಗು ಶಿವಲಿಂಗು ಅಂತ್ಹೇಳಿ ಕರದ್ಬುಟ್ಟು। ನಮ್ಮ ಕುಲ ಗುರುಗಳಾಗಿದ್ರಕ್ಕಂಥ ವ್ಯಾಘ್ರಾನಂದಸ್ವಾಮಿ ಕರೆದು। ನಾಮಕರಣ ಮಾಡಬೇಕು ಅಂತೇಳಿ। ಅವರು ವ್ಯಾಘ್ರಾನಂದ ಸ್ವಾಮಿ ಕರೆದವರೇ ಉತ್ತರಾಜಮ್ಮಾನೂ।

ನೋಡಿ ನಮ್ಮ ಶಿವನ

ಗುರುದೇವಾ ಈ ಮಗನಿಗೆ ನಾಮಕರಣ ಮಾಡಿ। ನಾವು ಸಾಕ್ಕೊಳ್ತೀವಿ ಚನ್ನಾಗಿ ಅಂದ್ರು। ಆಗ ವ್ಯಾಘ್ರಾನಂದ ಸ್ವಾಮಿಗಳು। ಅಮ್ಮ ಮಗುವಾದ್ರೂ ದೇವನಾಗಿದ್ದಾನೆ। ನನಗೆ ನಾಮಕರಣ ಮಾಡುವುದಕ್ಕೆ ಭಯವಾಗುತ್ತೆ। ದೂರದಲ್ಲಿ ನಿಂತ್ಕಂಡು ವಾಘ್ರಾನಂದ ಅಂತೇಳಿ ನಾಮಕರಣ ಮಾಡಿದ್ರು।

ಮಗನು ಹುಟ್ಟಿ ಐದು ವರ್ಷ ಆರು ವರ್ಷ। ಓಡಾಡುವಾಗ ಬೆಳೆಯುವಾಗ। ವಾಘ್ರಾನಂದ ಸ್ವಾಮಿಗಳು ಬಂದ್ರು। ಅಮ್ಮ ಉತ್ರಾಜಮ್ಮ ಶಿವದಾಸರೆ। ನಮಗೆ ಒಬ್ಬ ಮಗ ಹುಟ್ಟಿದರೆ। ಕಾಣಿಕೆ ಕೊಡ್ತೀನಿ ಅಂದ್ರಲ್ಲ ಏನು ಕೊಟ್ರಿ ಅಂದ್ರು ಗುರುದೇವಾ। ಏನು ಕೇಳ್ತೀರಿ ಕೇಳಿ ಗುರುವೇ ಅಂದ್ರು। ಏನೂ ಇಲ್ಲಮ್ಮ ನನಗೇನೂ ಭಾಗ್ಯ ಬೇಕಿಲ್ಲ।

ಒಂದು ಬಂಗಾರ ಬೇಕಿಲ್ಲ! ನಿಮ್ಮ ಮರಿದೇವರ ಕಾಣಿಕೆ ಕೊಡಮ್ಮ ಅಂದ್ರು! ಉತ್ತರಾಜಮ್ಮ ದುಃಖ ಮಾಡಾಕೆ ಸುರು ಮಾಡಿದ್ಲಾ! ನಮ್ಮ ಮಗನ ಕಾಣಿಕೆ ತೆಗೊಂಡ್ರೆ ಯಾರು ಸೇರಬೇಕು ಅಂದ್ರು! ನೀವು ಸೂರ್ಯಚಂದ್ರಾದಿಗಳು ಇರೋವರ‍್ಗೂವೆ! ಲಿಂಗೈಕ್ಯವಾಗಿ ಬಾಳಿರಮ್ಮ! ಆ ಮಗನ ಕಾಣಿಕೆ ಕೊಡಿ ಅಂತ್ಹೇಳಿ! ಮಗನ ಕಾಣಿಕೆ ತಕ್ಕೊಂಡು! ಆ ವ್ಯಾಘ್ರಾನಂದ ಸ್ವಾಮಿಗಳು! ಶ್ರೀ ಶೈಲದಲ್ಲಿ ಹೋಗಿ!

> ಅವರು ವಿದ್ಯೆ ಬುದ್ದಿ ಕಲಿಸವರೇ ಗುರುಗಳ್ಳೂ
> ನೋಡಿ ನಮ್ಮ ಶಿವನಾ

ಹುಲಿ ಮ್ಯಾಲೆ ಕೂರಿಸಿ ಸವಾರಿ ಮಾಡಿಸ್ತಾಯಿದ್ರು ಆವಾಗಲೀಗ ಮಾಯಕಾರ ಗಂಡ! ಗುರುಗಳ ಸೇವೆ ಮಾಡ್ಕಂಡು! ಅಲ್ಲಿ ವಿದ್ಯೆ ಬುದ್ದಿ ಕಲಿತವರೇ ಮಾಯ್ಕಾರಾ!

> ನೋಡಿ ನಮ್ಮ ಶಿವನಾ!

ನೀನು ಲೋಕಕಲ್ಯಾಣಕ್ಕೋಗು! ನನ್ನ ಗುರು ಮಠವನ್ನು ಬಿಟ್ಟು ಅಂದ್ರು ಗುರುದೇವ ನಿಮ್ಮ ಅಪ್ಪಣೆಯಂತೆ ಆಗ್ಲಿ ಅಂತ್ಹೇಳಿ! ಆವಾಗಲೀಗ ಮಾಯಕ್ಕಾರ ಗಂಡ! ಶ್ರೀಶೈಲ ಪರ್ವತವನ್ನು ಬಿಟ್ಟು

> ಅವರು ರಾಜ್ಯ ಹುಡೀಕೊಂಡು ಹೋರಟವರೇ ಮಾಯಕ್ಕಾರ!
> ನೋಡಿ ನಮ್ಮ ಶಿವನಾ[೮]

ಆಗಲೀಗ ತಾಯಮ್ಮನ ತೊಡೆ ಮ್ಯಾಲೆ ಬಂದು! ಕೂತಂತ ಕಾಲ್ದಲ್ಲಿ ಮಗ ಅಂದ ನೋಡಿ ಚಂದ ನೋಡಿ! ಮುತ್ತಿಕ್ಕಿ ಮುದ್ದಾಡ್ಬುಟ್ಟು! ನೋಡಪ್ಪಾ ನನ್ನ ಕಂದ! ಮಾದೇವ ಚಿನ್ನದ ತೊಟ್ಟಿಲ ಮಾಡಿಸ್ವಿ! ಬೆಳ್ಳಿ ಗಿಲ್ಕ ಮಾಡಿಸಿವ್ನಿ! ವಜ್ರದ ವೈರಮುಡಿ ಮಾಡಿಸಿವ್ನಿ! ನೀ ತೊಟ್ಟಿಲೊಳಗೆ ಮಲಕೋಪ್ಪ!

> ಜೋಗುಳ ಪಾಡ್ತೀನಿ ಅಂತಾಳಲ್ಲೋ! ಗನಸರಣೇ!
> ಆಹಾ ನೋಡಿ ನಮ್ಮ ಶಿವನಾ!

ಆದ್ರೆ ಯೇಳ್ತೀನಿ ಕೇಳವ್ವಾ ನನ್ನ ಗನಸರಣೆ! ನೀನು ಮಾಡಿಸಿರುವಂತ ತೊಟ್ಟಿಲಲ್ಲಿ ಮಲಿಕಂಡದ್ದೇ ಉಂಟಾದ್ರೆ! ನಿನ್ನ ಗಂಡ ಬಿನ್ನಕ್ಕ ಬಿದ್ದಂಗೆ ಆಯ್ತದೆ ಗನಸರಣೆ! ನಾನು ಆ ತೊಟ್ಟಲಲ್ಲಿ ಮಲ್ಗಕ್ಕೆ ಅಪ್ಪಣೆ ಇಲ್ಲ ತಾಯಿ! ನಿನಗೆ ಅಷ್ಟು ಪ್ರೀತಿ ಪ್ರೇಮ ಉಂಟಾದ್ರೆ! ಒಂದು ಗುಂಡಕಲ್ಲು ಮಡಿಕೊಂಡು![೬]

ತಂದೆ ಚಂದ್ರಸೇಕರ ಮೂರ್ತಿಯವರು! ತಾಯಿ ಉತ್ತರಾಜಮ್ಮನವರು ಇಬ್ಬರೂ ದಂಪತಿಗಳನ್ನು ನಿಲ್ಲಿಸಿ! ತಂದೆತಾಯಿಗಳ ಪಾದಕ್ಕೆ ನಮಸ್ಕಾರ ಮಾಡ್ಬುಟ್ಟು! ಪರಮಾತ್ಮ ದಕ್ಷಿಣ ಭಾಗಕ್ಕೆ ಬತ್ತವರೇ!"[೪]

ತೆಕ್ಕೋ ಅಂತಾನಲ್ಲೊ ಮಾದೇವಾ
ಆಹಾ... ನೋಡಿ ನಮ್ಮ ಶಿವನಾ

ನೋಡಪ್ಪಾ ಗನಸರಣೆ। ನೀನು ಗುಂಡುಕಲ್ಲು ಮಡಿಕೊಂಡು। ತೂಗುವಂತ ಶಾಸ್ತ್ರ। ಬೂಮಿ ಬೂಲೋಕವೆಲ್ಲಾ ಅಂಡಲಿ। ಹೆಣ್ಣು ಗಂಡಿಗೆ ಮದ್ವೆ ಮಾಡ್ತಿದ್ವಾಗ।

ನೀರಾಕೋ ಸಾಸ್ತ್ರ ನೆರವೇರಿಸವ್ವಾ। ನೀನು ಗನಸರಣೆ।
ಆಹಾ... ನೋಡಿ ನಮ್ಮ ಶಿವನಾ

ಅಪ್ಪಾ ನನ್ನ ಕಂದ ಮಾದೇವಾ।

ನನ್ನ ಎದೆ ಹಾಲು ಬಿಗಿತವೆ ನನಕಂದ
ನನ್ನ ಎದೆ ಹಾಲನ್ನಾದರೂ ಊಟ ಮಾಡ್ಕೋ ಬಾರಪ್ಪಾ
ಪುತ್ರಾ... ಮಗನೇ
ಆಹಾ... ನೋಡಿ ನಮ್ಮ ಶಿವನಾ

ಆದ್ರೆ ಯೇಳ್ತೀನಿ ಕೇಳವ್ವಾ। ನಿನ್ನ ಎದೆ ಹಾಲು ನಾನು ಊಟ ಮಾಡಿದ್ರೆ। ನಿನ್ನ ಹೊಟ್ಟೇಲಿ ಉಟ್ಟಂಗಾಯ್ತದೆ ಕಣ್ ತಾಯಿ। ನನ್ನ ಕಂಬದ ಬೋಳಿ ಮ್ಯಾಲೆ ನಿತ್ಕಂಡು। ಮೂರು ತೊಟ್ಟು ಹಾಲು ಕರೆದುಬುಟ್ರೆ। ಚಿಕ್ಕಾಲಳ್ಳ ದೊಡ್ಡಾಲಳ್ಳ ಅಂತೇಳಿ। ಮೂರು ಹಳ್ಳ ಮಾಡ್ತೀನಿ। ತಾಯಿ ನನಗೆ ದೀವಳಿಗೆ ಸ್ಯಾವೆಗೆ

ಹಾಲಳ್ಳದಿಂದ ನನಗೆ ಹಾಲರುವೆ ಬರಲಿ
ನನ್ನ ಗನಸರಣೇ
ಆಹಾ... ನೋಡಿ ನಮ್ಮ ಶಿವನಾ

ಆದ್ರೆ ಯೇಳ್ತೀನಿ ಕೇಳಪ್ಪಾ। ನನ್ನ ಕಂದ ಏನೇಳಿದರೂ। ಯಾವುದಕ್ಕೂ ವಾಗ್ದಾನ ಕೊಡ್ತಲ್ಲೋ। ನನ್ನ ಕಂದ ಬೇಕಾದ ಅಡಿಗೆ ಮಾಡಿವ್ನಿ। ನಿನ್ನ ಕಣ್ಗೊಪ್ಪುವಂತ ಫಲಾರ ಮಾಡಿವ್ನಿ।

ನೀ ಊಟ ಮಾಡಪ್ಪಾ ಪುತ್ರ ಮಗಾನೇ
ಆಹಾ... ನೋಡಿ ನಮ್ಮ ಶಿವನಾ

ಏನವ್ವಾ ನನ್ನ ತಾಯಿ ಗನಸರಣೆ। ಮೂರು ಮಾತು ಆಡಬೇಕು ತಾಯಿ। ಆ ವಾಗ್ದಾನಕ್ಕೆ ಅಪ್ಪಣೆ ಕೊಟ್ರೆ।

ನಿನ್ನ ಮನೆ ಊಟ ಮಾಡ್ತೀನಲ್ಲೋ। ಮಾದಯ್ಯೋ।
ಆಹಾ... ನೋಡಿ ನಮ್ಮ ಶಿವನಾ

ಏನಪ್ಪಾ ಮೂರು ಮಾತು। ವಾಗ್ದಾನ ಕೇಳಪ್ಪಾ ಅಂತ ಕೇಳ್ತಾಳೆ। ಗುರುವೇ ನಿಮ್ಮನೆ ಊಟ ಉಣ್ಣಬೇಕಾದರೆ। ಮೂಡ ಪಡುವ ತೆಂಕ ಬಡಗ ನಾಲ್ಕು ರಾಜ್ಯ ಅದೆ ತಾಯಿ।

ನಾನು ನಾಲ್ಕು ರಾಜ್ಯದಲ್ಲೂ ಬಿಕ್ಷ ಮಾಡ್ಕಂಡು ಬರಬೇಕು ತಾಯಿ
ಗನಸರಣೆ
ಆಹಾ... ನೋಡಿ ನಮ್ಮ ಸಿವಾನಾ

ಆ ಮಾತನ್ನು ಕೇಳಿಬಿಟ್ಟು! ನನ್ನ ಸತ್ಯವಂತೆ ಉತ್ತರಾಜಮ್ಮ! ಕಣ್ಣೀರ ಪಳಪಳನೆ! ಎದೆ ಮ್ಯಾಕೆ ಹರಿಸ್ತಾ ಕೂತುಕೊಂಡ್ಳು! ಗುರುವೇ ಯಾಕವ್ವಾ ಗನಸರಣೆ! ನೀ ಅಳ್ತಾ ಕೂತ್ಕಲ್ಲೋ! ಅಂತ ಕೇಳ್ತಾನೆ ಗುರುವೇ! ಏನಪ್ಪಾ ಪುಂಡಗಾರ ಮಗನೇ! ಉತ್ತರಾಜಿ ಮಗ ಬಿಕ್ಷಕ್ಕೆ ಬಂದ ಅಂದರೆ! ಜನ ನಗಲ್ವಪ್ಪಾ! ವಾಡೆ ವೊತ್ಕೊಂಡು, ಮೂಟೆ ಒರಿಕೊಂಡು! ರತ್ನ ಮುತ್ತು ವಜ್ರ ವೈಡೂರ್ಯ ಇಟ್ಟುಕೊಂಡು! ಊಟ ಮಾಡಬಹುದು!

ನಿನಗೆ ಬಿಕ್ಷದ ಸುದ್ದಿ ಬ್ಯಾಡಾವೋ
ಆಹಾ... ನೋಡಿ ನಮ್ಮ ಸಿವನಾ

ಆದ್ರೆ ಯೇಳ್ತೀನಿ ಕೇಳವ್ವಾ! ನೀನು ಯಾವ ಬಿಕ್ಷ ಬಂಡಾರ ಮಡಗಿದರೇನು! ವಜ್ರ ವೈರಮುಡಿ ಮಡಗಿದರೇನು! ನೀ ಚಿನ್ನ ಕಿರೀಟ ಮಡಗಿದ್ರೆ ನಾ ಒಪ್ಪೋದಿಲ್ಲ! ನೀನು ಮೂರು ಮನೆ ಬಿಕ್ಷಕೆ! ಅಪ್ಪಣೆ ಕೊಟ್ಟಿದ್ದೇ ಉಂಟಾದ್ರೆ!

ನಿನ್ನ ಮನೆ ಊಟ ಉಣ್ತೇನಿ ಕಾಣೋ ಗನಸರಣೆ
ಆಹಾ... ನೋಡಿ ನಮ್ಮ ಸಿವನಾ

ಅಯ್ಯೋ ನಿನ್ನ ಹಣೇಲಿ ಬರದೋನ ಮನೆ ಹಾಳಾಗ್ಲಪ್ಪ! ದ್ಯಾವರು ಯಾಕೆ ಇಂತ ಬುದ್ದಿ ಕೊಟ್ಟಿದ್ದಾರೆ ಅಂತೇಳ್ಬುಟ್ಟು! ಯೋಳ್ತೀನಿ ಕೇಳಪ್ಪ ನನ್ನ ಕಂದ! ಮಾದೇವ ಮೂಡ ಪಡುವ ತೆಂಕ ಬಡಗಣ! ಈ ನಾಲ್ಕು ರಾಜ್ಯ ಬಡಗ ರಾಜ್ಯಕ್ಕೆ ವೋಗಬೇಡ!

ಈ ಮೂಡಲ ರಾಜ್ಯಕ್ಕೆ ಓಗಿ ನೀ ಬಿಕ್ಷ ಮಾಡಪ್ಪ ನೀನು ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಇಲ್ಲಿ ನನ್ನತ್ರ ಈ ಸತ್ಯವಂತೆ! ಮೂರು ರಾಜ್ಯಕ್ಕೆ ಅಪ್ಪಣೆ ಕೊಟ್ಳು! ಒಂದು ರಾಜ್ಯಕ್ಕೆ ಅಪ್ಪಣೆ ಕೊಡಲಿಲ್ಲ! ಈ ಮೂರು ರಾಜ್ಯನೂ ಬಿಕ್ಷ ಮಾಡ್ಕಂಡು! ಅಪ್ಪಣೆ ತಕ್ಕಂಡು ಬಾ ಅಂತೇಳ್ಬುಟ್ಟು! ಅವ್ವು ಅಯ್ಯಾ ಹಳೆ ಕಂಬಳಿ ಜೋಳಿಗೆ ಮಾಡಿಕೊಂಡು! ಅಳ್ಳಕಡ್ಡಿ ಬೆತ್ತ ಮಾಡಿಕೊಂಡು! ಎಕ್ಕದ ಕಾಯಿ ಲಿಂಗ ಮಾಡಿಕೊಂಡು! ಬೂರುಗದ ಕಾಯಿ ಚಜ್ಜೆ ಲಿಂಗ ಮಾಡಿಕೊಂಡು!

ಅಯ್ಯಾ ಬಿಕ್ಷಾಕೆ ಒಯ್ತಾನೆ ಮಾದೇವ!
ಆಹಾ ನೋಡಿ ನಮ್ಮ ಸಿವನಾ!

ಆಗಲೀಗ ಮಗ್ಗಲು ಬಿಡು! ಮೂರು ಮನೆ ದಿನ ಒಪ್ಪತ್ತು! ಬಿಕ್ಷ ಮಾಡಿದ್ನಲ್ಲಪ್ಪಾ! ಗಂಡ ಸತ್ತ ಮುಂಡೆ ಮನೆ! ಬಿಕ್ಷಾನೂ ಬರಲಿಲ್ಲ ವಲ್ಲಪ್ಪಾ ಅಂತೇಳಿ ಗುರುವೇ

ಅಯ್ಯಾ ತಾಯಮ್ಮನ ಮನೆಗೆ ಇನ್ನು ಬರುತಾನೇ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ತಾಯಿ ಅರಮನೆಗೆ ಬಂದನು। ಬಿಕ್ಷ ಮಾಡ್ಕಂಬಂದಿ ಗನಸರಣೆ ಅಂದ್ರಪ್ಪಾ। ಗುರುವೇ ಮಗನಿಗೆ ಕಾಲು ಕೈಗೆ ನೀರು ಕೊಟ್ಟು। ಎಲ್ಲಿ ತಂದೆ ಸುರಿಯಪ್ಪಾ ಅಂತ ಹೇಳಿದಳೋ। ಗುರುವೇ ತಾಯಮ್ಮನ ನಡುಮನೆಯಿ। ಹನ್ನೆರಡು ಅಂಕಣದ ಮನೆ ತುಂಬಿ। ಪಡಸಾಲೆ ಹಜಾರವೆಲ್ಲಾ ತುಂಬಿ।

ಗುರುವೇ ಅಷ್ಟೊಂದು ಬಿಕ್ಷ ತಂದವನಲ್ಲೋ ಮಾದೇವೋ।
ಆಹ ನೋಡಿ ನಮ್ಮ ಸಿವನಾ।

ಯೇನಪ್ಪಾ ನನ್ನ ಕಂದಾ। ಮೂರು ಮನೆ ಬಿಕ್ಷ ಮಾಡ್ಕಂಡು ಬರೋ ಹೊತ್ಗೆ। ಮನೆ ತುಂಬೋಯ್ತು ಹಜಾರ ತುಂಬೋಯ್ತು। ತೊಟ್ಟಿ ತುಂಬೋಯ್ತು, ಗುಳಿ ತುಂಬೋಯ್ತು। ಕಣಜ ತುಂಬೋಯ್ತು। ಬೀದಿಗೆ ಬಂದು ಬಿದ್ದದಲ್ಲಾ। ಯಾರ ಹಗೆ ಕಿತ್ತೆ, ಯಾರ ಗುಳಿಕಿತ್ತೆ। ಯಾರ ಕಣಜ ಕಿತ್ತೆ। ಯಾರ ಮನೆಯಲ್ಲಿ ಕಳ್ಳನ ಮಾಡ್ಕಂಡು ಬಂದೆ।

ನನ್ನೊಂದಿಗ್ಯೋಳಪ್ಪಾ ಪುತ್ರ ಮಾದಯ್ಯ
ಆಹಾ... ನೋಡಿ ನಮ್ಮ ಸಿವನಾ।

ಆದ್ರೆ ಯೇಳ್ತೀನಿ ಕೇಳವ್ವಾ। ನನ್ನ ಗನಸರಣೆ ಯಾರ ಗುಳೀನೂ ಕೀಳಲಿಲ್ಲ। ಯಾರ ಅಗೇನೂ ಕೀಳಲಿಲ್ಲ। ಯಾರನ್ನೂ ಹಾಳು ಮಾಡ್ಲಿಲ್ಲ। ನನ್ನ ಗನಸರಣೆ ಯೇಳ್ತೀನಿ ಕೇಳವ್ವ। ಗಂಡ ಸತ್ತ ಮನೆ, ಮುಂಡೆ ಮನೆ। ಬಿಕ್ಷಾನೂ ಬಿಡಲಿಲ್ಲ ನನ್ನ ಮುತ್ತಿನ ಜೋಳಿಗೆಗೆ ಹಾಕದ್ರು। ನನ್ನ ಗನಸರಣೆ।

ನಾನು ಎಲ್ಲೂ ಕಳ್ಳನ ಮಾಡ್ಲಿಲ್ಲ ಕಣಪ್ಪಾ। ತಾಯವ್ವೋ।
ಆಹಾ... ನೋಡಿ ನಮ್ಮ ಸಿವನಾ।

ಅಪ್ಪಾ ಪುಂಡಗಾರ ಮಗನೇ। ಒಂದು ದಿನ ಸುಮಾರು ಹನ್ನೆರಡು ಅಂಕಣ। ಮನೆ ತುಂಬಿ, ಗುಳಿ ತುಂಬಿ। ಕಣಜ ತುಂಬಿ ತೊಟ್ಟಿ ತುಂಬಿ। ಬೀದಿಗೆ ಬನ್ನುಡ್ತಲ್ಲಾ ಸ್ವಾಮಿ। ನೀ ದಿನಾ ತಂದರೆ ಎಲ್ಲಿ ತುಂಬಲಿ। ಯಾವ ಗುಳೀಲಿ ತುಂಬಲಿ ನನ್ನ ಕಂದ। ನೀನು ಎಷ್ಟೇ ಚೆಚ್ಚಿ ಬಡಕಂಡರು। ಒಪ್ಪತ್ತಿಗೆ ಎರಡು ಸೇರು ಊಟದಂತೆ।

ಸಾಪ ಹಾಕದಲ್ಲೊ ಗನಸರಣೇ
ಆಹಾ... ನೋಡಿ ನಮ್ಮ ಸಿವನಾ

ನೀನು ಎಸ್ಟೇ ಚಚ್ಚಂಡು ಬಡಕಂಡ್ರೂ। ಒಂದು ಊರಿಗೆ ಎರಡು ಸೇರುಟ್ಟಲಿ ಕಣಪ್ಪಾ। ಅಂತ ಸಾಪ ಆಕ್ಬಟ್ಟು। ಬೇಕಾದಂತ ಅಡ್ಗೆ ಮಾಡಿವ್ನಿ। ದಾನವಂತ ನೀ ಊಟ ಮಾಡಪ್ಪ ಪುತ್ರ ಮಗನೇ।

ಅಂತೇಳಿ ಅಯ್ಯಾ ಮಗನನ್ನು ಇನ್ನು ಕರೆದವಳೆ
ಆಹಾ... ನೋಡಿ ನಮ್ಮ ಶಿವನಾ।

ಆದ್ರೆ ಯೇಳ್ತೀನಿ ಕೇಳವ್ವಾ। ನನ್ನ ಗನಸರಣೆ ಸತ್ಯವಂತೆ। ಮೂರು ರಾಜ್ಯ ಅಪ್ಪಣೆ ಕೊಟ್ಟೆ। ಬಡಗ ರಾಜ್ಯಕ್ಕೆ ಅಪ್ಪಣೆ ಕೊಟ್ಟಿದ್ದೇ ಉಂಟಾದ್ರೆ।

ನಿನ್ನ ಮನೆ ಊಟ ಉಣ್ತೇನಿ ಕಣೋ ತಾಯಮ್ಮೋ
ಆಹಾ ನೋಡಿ ನಮ್ಮ ಶಿವನಾ

ಆದ್ರೆ ಯೇಳ್ತೀನಿ ಕೇಳು। ನನ್ನ ಕಂದ ಮಾದೇವ। ಬಡಗಣ ರಾಜ್ಯ ಅಂದ್ರೇನು। ನೀನು ಅಂದ್ರೇನಪ್ಪಾ ನನ್ನ ಕಂದ। ನೀ ಬಡಗಣ ರಾಜ್ಯದ।

ಸುದ್ದಿ ಎತ್ತಬ್ಯಾಡ ಕಣೋ ಧೀರ ಮಾದಯ್ಯೋ
ಆಹಾ... ನೋಡಿ ನಮ್ಮ ಶಿವನಾ

ಯಾಕವ್ವಾ ಬಡಗಲ ರಾಜ್ಯಕ್ಕೆ। ಬ್ಯಾಡ ಅಂತ ಹೇಳ್ಳಲ್ಲಾ। ಏನು ಕಾರಣ ಹೇಳು ನನ್ನ ಸತ್ಯವಂತೆ ಸರಣೆ। ಅಂತೇಳಿ ಕೇಳ್ತಾನೆ ಗುರುವೇ। ಹೇಳ್ತೀನಿ ಕೇಳಪ್ಪಾ ನನ್ನ ಕಂದ। ಬಡಗಲ ರಾಜ್ಯದೊಳಗೆ। ಬಂಕಾಪುರಿ ಸ್ರವಣನು ಇದ್ದಾನಲ್ಲೋ। ನನ್ನ ಕಂದ ಅವನಿಗೆ ಬೆಂಕೀಲಿ ಬಿದ್ರೆ ಸಾವಿಲ್ಲ। ಗುಂಡಲ್ಲಿ ಒಡೆದರೆ ಸಾವಿಲ್ಲ। ಕತ್ತಿಲಿ ಕಡಿದರೆ ಸಾವಿಲ್ಲ।

ಅವನತ್ರ ವೋಗ್‌ಬ್ಯಾಡ ಕಣಪ್ಪಾ ನನ್ನ ಒಡೆಯನೇ
ಆಹಾ... ನೋಡಿ ನಮ್ಮ ಶಿವನಾ।

ನೋಡಪ್ಪಾ ನೀನು। ಬಡಗಣ ರಾಜ್ಯಕ್ಕೆ ವೊದ್ದೇ ಉಂಟಾದ್ರೆ। ನಿನ್ನ ಜಾತಿ ಮರೆಸ್ಕೋ ಬಾರದು। ಕುಲ ಮರಸ್ಕೋಬಾರದು। ಅಂತೇಳಿ ನೀನು ಮಾದೇಸ್ವರ ಅಂತ ಹೇಳ್ತೀಯೇ। ನೀ ಮಾದೇಸ್ವರ ಅಂದೇಟಿಗೆ।

ನನ್ನ ಮಾದರಿ ಚನ್ನಯ್ಯನ್ನ ಮಾಡ್ತಾನೆ ಕಣೋ ಮಾದಯ್ಯೋ
ಆಹಾ... ನೋಡಿ ನಮ್ಮ ಶಿವನಾ

ನಿಜವನ್ನು ಹೇಳ್ತೀನಿ ಕೇಳಪ್ಪಾ। ನಂಜನಗೂಡು ನಂಜಪ್ಪ ಬಂದು। ಸಾಸ್ತ್ರ ಹೇಳ್ತಾನೆ ನನ್ನ ಕಂದ। ಸರ ಮುನ್ನೂರು ಕೋಟಿ ದೇವಮಾನವರೆಲ್ಲಾ। ಮುಗ್ಗಾವಣೆ ಕಟ್ಕೊಂಡು। ಕಲ್ಯಾಣಿಯ ನೀರು ತಂದಾಗ। ಕಂಡ ನೀ ಬಂಕಾಪುರಿ।

ಪಟ್ಟಣಕ್ಕೆ ಹೋಗಬ್ಯಾಡ ಕಾಣೋ। ಮಾದೇವೋ
ಆಹಾ... ನೋಡಿ ನಮ್ಮ ಶಿವನಾ

ಆದ್ರೆ ಯೇಳ್ತೀನಿ ಕೇಳವ್ವಾ ಇಂತ ಸರ ಮೂವತ್ತು ಮುನ್ನೂರು ಕೋಟಿ। ದೇವತೆಗಳನ್ನೆಲ್ಲಾ ಸೆರೆ ಇಟ್ಕಂಡು। ಸನಿಮಾತ್ಮನ್ನಿಟ್ಕಂಡು ನೀರು ಕುಡಿದನವ್ವಾ। ಚಂದ್ರ ಬತ್ತಾನಲ್ವಾ। ವಾಸದೇವ ಬಂದು ರಜವೊಡಿತಾನಪ್ಪೊ। ಅಗ್ನಿ ದೇವ ಬರ್ತಾನೆ। ಗುರುವೇ

ಇಂತ ದೇವ ಮಾನವರೆಲ್ಲಾ। ಸೆರೆ ಸಂಕೋಲೆ ಹಾಕ್ಕಂಡವ್ನೆ। ನೀನು ಹೋಗಬ್ಯಾಡ ಅಂತ ಯೇಳಿದ್ರೂ ಕೇಳಲ್ಲ।

ನನ್ನ ಕಂದ ನೀ ದಯಮಾಡಿ ಹೋಗಿ ಬಾರಪ್ಪಾ, ಮಾದಯ್ಯೋ।
ಆಹಾ... ನೋಡಿ ನಮ್ಮ ಶಿವನಾ।

ಆದ್ರೆ ಯೇಳ್ತೀನಿ ಕೇಳವ್ವಾ। ಬೆಂಕಿಲಿ ಬೆಂದ್ರೆ ಸಾವಿಲ್ಲ। ಗುಂಡಲ್ಲಿ ಒಡೆದರೆ ಸಾವಿಲ್ಲ। ಕತ್ತೀಲಿ ಕಡಿದರೆ ಸಾವಿಲ್ಲ ಅಂತೇಳಿ। ಹೇಳ್ತೀಯಲ್ಲೋ ಗನಸರಣೆ।

ಅವನಿಗೆ ವರಬಾಗ್ಯ ಕೊಟ್ಟವರ್‍ಯಾರು
ಆಹಾ... ನೋಡಿ ನಮ್ಮ ಶಿವನಾ।

ತಾಯಿ ಮುಂದೆ ನಾನು ಎಲ್ಲಾ ವಿಚಿತ್ರ ಮಾಡ್ತಕೀನಿ। ನಾನು ಅವನಿಗೆ ಸರಿಯಾದ ಸಂಕೋಲೆ ಕೊಟ್ಟಿದ್ರೂ। ಅವನಿಗೆ ಆಯಸ್ಸು ಕೊಟ್ಟಿದ್ರೂನೂ। ಸಂಹಾರ ಮಾಡ್ತೀನಿ ತಾಯಿ।

ನನಗೆ ಬಡಗಣ ರಾಜ್ಯಕೆ ಅಪ್ಪಣೆ ಕೊಡು ನೀನು ತಾಯಮ್ಮೋ
ಆಹಾ... ನೋಡಿ ನಮ್ಮ ಶಿವನಾ।

ಆದ್ರೆ ಯೇಳ್ತೀನಿ ಕೇಳಪ್ಪಾ ನನ್ನ ಕಂದ। ಮಾದೇವ ನಾನು ಮೂರು ಗ್ರಾಮದಲ್ಲಿ। ಮೂರು ಮರಿಯಾಳು ಇಟ್ಟವ್ನಿ ಕಂದ। ಅವನ್ನೇ ಮುಳ್ಳು ಪಂಜರದೊಳಗೆ ಕಟ್ಟಿವ್ನಿ ನನ್ನ ಕಂದ।

ನಾನು ಮೂರಿಡಿ ಅಕ್ಕಿಯನ್ನು ಅಡಿಗೆ ಮಾಡಿ। ಅನ್ನ ಹಾರಾಕೋ ಹೊತ್ತಿಗೆ। ಆ ಹೂವು ಕುಯ್ಕೊಂಡು ಬಂದದ್ದೇ ಒಂದು ಉಂಟಾದ್ರೆ।

ನೀ ಬಡಗಲ ರಾಜ್ಯ ಗೆಲ್ಲತೀಯೋ ಕಣೋ ಪುತ್ರ, ಮಗನೇ
ಆಹಾ... ನೋಡಿ ನಮ್ಮ ಶಿವನಾ।

ಆದ್ರೆ ಯೇಳ್ತೀನಿ ಕೇಳವ್ವಾ। ನನ್ನ ಗನಸರಣೆ ನೀನು। ಹೂವಿನ ಕರಡಿಗೆ ಕೊಡವ್ವ। ಮೂರಿಡಿ ಅಕ್ಕಿ ಅನ್ನ ಮಾಡಿ। ಅಡಿಗೆ ಮಾಡೋ ಹೊತ್ತಿಗೆ। ಬಂದಿದ್ದೇ ಉಂಟಾದರೆ। ಬಡಗನ ರಾಜ್ಯ ಗೆಲ್ತೀನಾ ನನ್ನ ತಾಯಿ।

ನನಗೆ ಹೂವಿನ ಕರಡಿಗೇ ಕೊಡವ್ವಾ ನೀನು ಗನಸರಣೆ
ಆಹಾ... ನೋಡಿ ನಮ್ಮ ಶಿವನಾ।

ಆಗಲೀಗ ನನ್ನ ಸತ್ಯವಂತೆ। ಸರಣೆ ಹೂವಿನ ಕರಡಿಗೆ ಮಗನಿಗೆ ಕೊಟ್ಟು ಬಿಟ್ಟು। ಅಕ್ಕೀನೀಗ ತೊಳೆದು ಅಡಿಗೆ ಮಾಡ್ತಾಳೋ। ಗುರುವೇ ನಮ್ಮಪ್ಪ ಮಾಯಕಾರ ಮಾದೇವ। ಮೂರು ಗಾವುದಕ್ಕೆ ಮೂರೇ ಹೆಜ್ಜೆ ಇಟ್ಟು ಬಿಟ್ಟು। ತಾಯಿ ನೆಟ್ಟಿರುವಂತ ಮುಳ್ಳು ಪಂಜರದಂತ। ಹೂವನ್ನೂ ಕೊಯ್ಕಂಡು।

ಅಯ್ಯಾ ತಾಯಮ್ಮನ ಹತ್ತಿರಕ್ಕೆ ಬಂದು ನಿಂತವನೇ
ಆಹಾ ನೋಡಿ ನಮ್ಮ ಸಿವನಾ

ಬಂದೆ ಕಣವ್ವಾ ಹೂವ ಕುಯ್ಕಂಡು ಅಂತೇಳಿ। ದಡಕ್ಕಣೆ ನುಗ್ಗಿದನಲ್ಲಪ್ಪಾ। ಹೂವಿನ ಕರಡಿಗೆ ಈಸ್ಕಂಡು। ತಾನು ನೆಟ್ಟಂತ ಪದ್ಮನ ಎಣಿಸಿದಳಲ್ಲಪ್ಪಾ ಗುರುವೇ। ಎಲ್ಲಾ ಹೂವೆಲ್ಲಾ ಇದ್ದವಪ್ಪಾ ಗುರುವೇ। ಆದ್ರೆ ಯೇಳ್ತೀನಿ ಕೇಳಪ್ಪಾ ಪುಂಡುಗಾರ ಮಾದೇವ। ಬಡಗಲ ರಾಜ್ಯ ಗೆಲ್ಲುತ್ತೀಯೇ ನನ್ನ ಕಂದ। ದಿನಾ ಬೇಕಾದಂತ ಅಡಿಗೆ ಮಾಡಿಪ್ನಿ।

ನೀ ಊಟ ಮಾಡಪ್ಪಾ ದೀರ ಮಾದಯ್ಯೋ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಯೇಳ್ತೀನಿ ಕೇಳು ಗನಸರಣೆ। ನನಗೆ ಹೊಟ್ಟೆ ಎಲ್ಲಿ ಹಸೀತದೆ। ನಾ ಅಲ್ಲಿ ಊಟ ಮಾಡ್ತೀನಿ।

ನನ್ನ ತಾಯಿ ನನಗೆ ಮೂರು ಬುತ್ತಿಯ ಕಟ್ಟಿ ನೀನು ಕೊಡವ್ವಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಮೂರು ಬುತ್ತಿ ಕಟ್ಟಿ। ಮಗನ ಕೈಲಿ ಕೊಟ್ಟು ಬಿಟ್ಟು। ಏನಪ್ಪಾ ನನ್ನ ಕಂದ ನೀ ಸೋತು ಗೆದ್ದೆ। ಕಾಣಪ್ಪಾ ನನ್ನ ಕಂದ। ಹೇಳ್ತೀನಿ ಕೇಳು ನನ್ನ ಗನಸರಣೆ। ನಾನು ಗೆಲ್ಲವನೇ ನಾ ಉಳಿಸವನೇ। ಎಂಬುದನ್ನು ನೋಡು ಬತ್ತೀನಿ ತಾಯಿ। ಬಂಜೆ ಬಸುರಾಗಿ ಬತ್ತೀದಾ ಕೆರೆ ತುಂಬಿ।

ನೆಟ್ಟ ತೆಂಗ ಪಲಬಿಟ್ಟು
ಆಹಾ... ನೋಡಿ ನಮ್ಮ ಸಿವನಾ

ಆದ್ರೆ ಯೇಳ್ತೀನಿ ಕೇಳವ್ವಾ ತಾಯವ್ವಾ। ನಿನ್ನ ಮನೆ ಮುಂದುಗಡೆ। ಐದು ತೆಂಗಿನ ಮರಾನ। ಅರಗಚ್ಚಿಗೆ ಕಡೀತೀನಿ। ಅರೆಗಚ್ಚು ಕಡದ್ಬುಟ್ಟು। ಇಲ್ಲಿ ನೆಡತೀನಿ ಸಿವ ಸರಣೆ। ಆ ಮರ ಅಂತಕ್ಕಂತಾದ್ದೂ। ದಿನಾ ಒಂದು ತರ ಚಿಗಿತುಕೊಂಡು। ಪಲ್ಲವಿಸಿಕೊಂಡು ಎಲ್ಲರಿಗೂ ಎಳನೀರು ಬಿಟ್ಟುಕೊಂಡು। ಒದ್ದೆ ಉಂಟಾದರೆ ನನ್ನ ಮಗ ಗೆದ್ದವನೇ।

ಅಂತ ತಿಳ್ಕೋ ನನ್ನ ತಾಯಮ್ಮ।
ಆಹಾ ನೋಡಿ ನಮ್ಮ ಸಿವನಾ

ಆದ್ರೆ ಯೇಳ್ತೀನಿ ಕೇಳವ್ವಾ। ಮರವೇನಾದರೂ ಒಯ್ತ್ಯಲ್ಲಾ। ನನಗೆ ದೂಪ ದೀಪ ಏನೂ ಇಲ್ಲದಂಗೆ ಮಾಡೀಯಾ। ನನ್ನ ಕಂದ ಮಾದೇವ ಅಂತೇಳಿ। ಗುರುವೇ ಆದ್ರೆ ಯೇಳ್ತೀನಿ ಕೇಳವ್ವಾ। ಗನಸರಣೆ ಉತ್ತರಾಣಿ ಗಿಡವಾಗಿ ಉಟ್ಟೋ। ನನ್ನ ಗನಸರಣೆ ಸೋಮವಾರ। ನಿನ್ನ ರಾಜ್ಯಕ್ಕೆ ಪೂಜೆ ಮಾಡ್ತಾರೆ ಗನಸರಣೆ। ನಿನ್ನ ಕೊಳಕ್ಕೆ ಪೂಜೆ ಮಾಡ್ತಾ।

ನಿನಗೆ ಕಾಸಿನ ದೂಪಹಾಕ್ತೀನಿ ಕಾಣೋ ಗನಸರಣೆ।
ಆಹಾ... ನೋಡಿ ನಮ್ಮ ಸಿವನಾ।

ಮಂಡೇಲಿ ಕಿರೀಟ ಕೈಯಲ್ಲಿ ಬೆತ್ತ ಹಿಡಕೊಂಡು ಮಾದೇವ।
ಕುಂತೂರು ಮಾದೇವ ನಡೆದರು ಮಾದೇವ।

ಮಂಡೇಲಿ ಕಿರೀಟ ಕೈಯಲ್ಲಿ ಬೆತ್ತ ಹಿಡಿದರು ಮಾದೇವೋ
ಕುಂತೂರು ಮಟದ ಪಂಚೇಳು ಬಿನ್ನಕೆ ಬಂದರು ಮಾದೇವೋ
ಕಂಚಿನ ಬಟ್ಟಲು ಕೈಯೊಳಗೇ ನನ್ನ ನಾಗಮಲೆ ಮಾದೇವನಿಗೇ
ಕುಂತೂರು ಮಟದ ಪಂಚೇಳು ಬಿನ್ನಕೆ ಬರುತರು ಮಾದೇವಾ
ಮಂಡೇಲಿ ಕಿರೀಟ ಕೈಯಲಿ ಬೆತ್ತ ಹಿಡಿದರು ಮಾದೇವಾ
ಕುಂತೂರು ಮಟದ ಪಂಕ್ತಿಯ ಬಿನ್ನಕೆ ಬರುವರು ಮಾದೇವಾ
ಹುಟ್ಟುಗಲ್ಲು ಹುಲಿ ಮಾಡವನೇ ಏಳು ಮಲೆಯ ಮಾದೇವೋ
ಕುಂತೂರು ಮಟದ ಪಂಕ್ತಿಯ ಬಿನ್ನಕೆ ಬರುವರು ಮಾದೇವೋ
ಮಂಡೇಲಿ ಕಿರೀಟ ಕೈಯಲ್ಲಿ ಬೆತ್ತ ಹಿಡಿದರು ಮಾದೇವೋ
ಕುಂತೂರು ಮಟದ ಪಂಕ್ತಿಯ ಬಿನ್ನಕೆ ಬರುವರು ಮಾದೇವೋ।[4]

ನಿನ್ನ ಕೈ ಮುಟ್ಟಿ ನನಗೆ ತಾಯಮ್ಮನವರೇ।

ನನಗೆ ಮುಂಗೈ ಗಾತ್ರ ಮೂರು ಬುತ್ತಿ ಕಟ್ಕೊಡಿ ಅಂತವ್ರೆ। ಮಾದೇವಾ।
ಹ್ಹಾ... ನೋಡಿ ನಮ್ಮ ಸಿವನಾ।

ತಾಯಿ ಮುಂಗೈ ಗಾತ್ರ ಮೂರು ಬುತ್ತಿ। ಯಾವ ತರ ಇರಬೇಕು ತಾಯಿ। ಯಾವ ತರ ಇರಬೇಕು ಕಂದ। ಯೇಳ್ತೀನಿ ಕೇಳಿ ತಾಯಮ್ಮನವರೇ। ಒಂದು ಸೀಗೆ ಎಲೆ ತರಬೇಕು। ಆ ಸೀಗೆ ಎಲೆ ಮೂರುಬಾಗ ಮಾಡಬೇಕು। ಮೂರು ಬಾಗ ಮಾಡಿ ಮೂರು ಅಗಳು ಅನ್ನ ಇಟ್ಟು। ನಿನ್ನ ಎದೆ ಹಾಲು ಕರೆದು ಬುತ್ತಿಕಟ್ಟಬೇಕು ಅನ್ನುಟ್ರು। ಆಗ ಒಂದು ಯೋಚನೆ ಬಂದ್ಬುಡ್ತು ಉತ್ತರಾಜಮ್ಮನಿಗೆ। ಅಯ್ಯಾ ನಾನು ಏರಲಿಲ್ಲವಲ್ಲಾ ಎದೆಪಾಲು ಎಲ್ಲಿ ಕರೀಲಪ್ಪಾ। ಚೀಚೀ ಹಾಗನ್ಬೇಡ ತಾಯಮ್ಮ। ಏರಲಿಲ್ಲ ಅಂತ ಮಾತ್ನ ಯೇಳ್ಬೇಡ। ನೀ ಸತ್ಯ ಸೀಲೆ ಆದರೆ ನಾ ಯೇಳ್ತೀನಿ। ಕೇಳ್ ತಾಯಮ್ಮ ಮೂರು ಸೀಗೆ ಎಲೆ ತಂದು ಮಡಗ್ಬುಟ್ಟು। ಮೂರು ಬಾಗ ಮಾಡ್ಬುಟ್ಟು। ಮೂರು ಅನ್ನದಗಳು ಮಡಗ್ಬುಟ್ಟು। ನಿಮ್ಮ ತಂದೆ ತಾಯಿ ಪಾದ ನೆನ್ಕಂಡು। ನಿಮ್ಮ ಅತ್ತೆ ಮಾವನ ಪಾದ ನೆನ್ಕಂಡು। ನಿಮ್ಮ ಪತಿ ಪಾದವ ನೆನ್ಕಂಡು। ಕಲ್ಯಾಣಪಟ್ಟಣದ ದೊಡ್ಡ ಬಸವಣ್ಣನವರ ಪಾದ ನೆನ್ಕಂಡು। ನಿನ್ನ ಎದೆ ಪಾಲು ಕರೆಯವ್ವಾ ಅನ್ಬುಟ್ರಂತೆ। ಅದೇ ಪ್ರಕಾರವಾಗಿ ಉತ್ತರಾಜಮ್ಮನವರು ಸೀಗೆ ಎಲೆ ತಂದು ಮೂರು ಬಾಗ ಮಾಡ್ಬುಟ್ಟು। ಮೂರು ಅನ್ನದಗಳು ಇಟ್ಬುಟ್ಟು। ತನ್ನ ತಂದೆ ತಾಯಿ ಪಾದ ನೆನ್ಕಂಡು। ತನ್ನ ಅತ್ತೆ ಮಾವನ ಪಾದ ನೆನ್ಕಂಡು। ತನ್ನ ಪತಿ ಪಾದ ನೆನ್ಕಂಡು। ಎದೆಗೆ ಯಾವಾಗ ಕೈಯಾಕುದ್ಲೋ।

ಅಲ್ಲಿ ಬೊಗ್ಗುಂಬ ಹಾಲನ್ನು ಕರೆದವಳೆ
ಆಹಾ ನೋಡಿ ನಮ್ಮ ಶಿವನಾ

ಆಗ ಮುಂಗೈಗಾತ್ರ ಬುತ್ತಿ ಕಟ್ಟಿಸ್ಕೊಂಡೋ ಕಾಲ್ದಲ್ಲಿ ಅದನ್ನು ತಾಯಿ ಉತ್ತರಾಜಮ್ಮನವರಿಂದ। ಎರಡು ಕೈಯಿಂದ ಈಸ್ಕೊಂಡು। ಅದನ್ನ ಯಾವ ತರ ಮಡಿಕತವ್ರೆ ಅಂದ್ರೆ। ಕೆಂಜೆಡೆಯಲ್ಲಿ ಮಡಿಕಂಡವ್ರೆ। ನಮ್ಮಪ್ಪಾಜಿಯವರು ಹೋಗಿದ್ದು ಬರ್ತೀನಿ ಅಂತ ಯೇಳ್ಬುಟ್ಟು। ತಾಯಿ ತಂದೆಯವರ ಪಾದ ನೆನ್ಕಂಡು। ಆ ಬಸವಣ್ಣನವರ ಪಾದ ನೆನ್ಕಂಡು।

ಹೋಗಿದ್ದು ಬರ್ತೀನಿ ಅಂತ ಯೇಳ್ಬುಟ್ಟು ಹೋಗ್ತಾರಲ್ಲಪ್ಪಾ
ಆಹಾ... ನೋಡಿ ನಮ್ಮ ಶಿವನಾ

## ಬೀರಂಕೊಲ್ಲಿ ಹಲಗೇಗೌಡನ ಪ್ರಸಂಗ

ಮಲೆಯ ಹುಲಿವಾಹನ ಬರುವ ಚಂದಾವ
ನೋಡಿ ನಮ್ಮ ಶಿವನಾ।

ಏಳ್ಮಲೆಕರ್ತು ಏಕಾಂಗಿ ವಸ್ತು ಮಾಯ್ಕಾರ ಮಾದೇವ। ಮಗ್ಗಾ ಮರಳ್ಳಿ ಹೆಗ್ಗಡದೇವನ ಕೋಟೆ ಸಂತೇಸರಗೂರು। ಕೊಂಗನಾಡು ನವರಂಗಿ ರಂಜಕಲ್ಲು ಸುತ್ತುಕೊಂಡು। ಮಾನೊಂದ್ವಾಡಿ ಪಿರಿಯಾಪಟ್ಣಣವನ್ನು ಬಳಸಿ। ಈ ದೇಸಾದಿ ದೇಸನೆಲ್ಲ

ಚಂಚಾರ ಮಾಡವರಲ್ಲಪ್ಪ ನಮ್ಮ ಮುದ್ದು ಮಾದೇವ
ನೋಡಿ ನಮ್ಮ ಶಿವನಾ

"ನನಗೆ ತಕ್ಕಂತ ಭಕ್ತರು ಎಲ್ಲೂ ಇಲ್ಲವಲ್ಲ" ಅಂತ್ಹೇಳಿ। ಅವರು ಬೀರಂಕೊಲ್ಲಿಗೆ ದೃಷ್ಟಿ ಮಡಗವರೆ ಮಾದೇವ। ನೋಡಿ ನಮ್ಮ ಶಿವನಾ। ಬೀರಂಕೊಲ್ಲಿಗೆ ನಮ್ಮಪ್ಪಾಜಿ ಬಂದ್ರಲ್ಲ। ಬೀರಂಕೊಲ್ಲೀಲಿ ಹಲಗೇಗೌಡ ಮಾದೇವಮ್ಮ ಬಾಳಟಕ್ತಿವಂತರು। ಉಂಡುವರೆ ಅನ್ನವಿಲ್ಲ, ಉಡುವುದಕೆ ಬಟ್ಟೆ ಇಲ್ಲ। ಬಾಳ ವನವಾಸದಲ್ಲಿದ್ದಾರೆ ಆ ಮನೆಗೆ।

ದ್ರಿಷ್ಟಿ ಮಡಗವ್ವರಲ್ಲೊ ಮುದ್ದು ಮಾದೇವ
ನೋಡಿ ನಮ್ಮ ಶಿವನಾ।

"ಇವುರ್ನ ಒಕ್ಕಲು ಪಡ್ಕೊಂಡು ಮುಂದಕ್ಕೆ ಹೋಗ್ಬೇಕು। ಇವುರ ಬಡಸ್ತಾನ ಬಯಲು ಮಾಡಬೇಕು। ಇವುರ್ಗೆ ಸಿರಿ ಸಂಪತ್ತನ್ನು ಕೊಡಬೇಕು" ಅಂದ್ಬುಟ್ಟು।

ಆ ಮನೆಗೆ ದ್ರಿಷ್ಟಿ ಮಡುಗವರೆ ಮುದ್ದು ಮಾದೇವ
ನೋಡಿ ನಮ್ಮ ಶಿವನಾ

ಗಂಡ ಹಲಗೇ ಗೌಡ ಏರ್ಕಟ್ಕೊಂಡು ಹೊಲುಕ್ಕೋದ। ಹೆಂಡ್ತಿ ಮಾದೇವಮ್ಮ ಅಡ್ಗೆ ಮಾಡ್ಕೊಂಡು। ಗಂಡುಂಗೆ ಊಟ ತತ್ತಳಲ್ಲಪ್ಪ ಮಾದೇವಮ್ಮ। ನೋಡಿ ನಮ್ಮ

ಶಿವುನಾ। ಮಾದೇವಮ್ಮ ಊಟ ತಕ್ಕಂಬಂದು ಹೊಲದಲ್ಲಿ ಮಡುಗ್ದ। ನಮ್ಮ ಸ್ವಾಮಿಯವರು। ಮುಪ್ಪಿನ ಕಾಲದ ಮುದುಕಯ್ಯನಾಗಿ।

ಅವರು ಹಿಟ್ಟಿನ ಕುಕ್ಕೆ ತಗಂಡೋಗಿ
ಅಲ್ಲೇ ಕೂತವರಲ್ಲಪ್ಪ ಮಾದೇವ
ನೋಡಿ ನಮ್ಮ ಶಿವುನಾ।

ಅಷ್ಟೊತ್ತ್ಗೆ ಗಂಡ ಹಲಗೇಗೌಡ ಏರ್ ನಿಲ್ಲಿಸ್ಬುಟ್ಟು। ಅಲ್ಲಿಗೆ ಬಂದು ಕೂತ್ಕೊಂಡ। ನಮ್ಮ ಸ್ವಾಮಿಯವರು ಬಂದು ಕೂತ್ಕೊಂಡ್ರು। ತಂದಿರೋದು ಒಂದು ಮುದ್ದೆ ಹಿಟ್ಟು। "ಈ ಒಂದು ಮುಂದೆ ಹಿಟ್ಟು ಐದು ಭಾಗ ಮಾಡಿ ಇಕ್ಬೇಕು। ಅವರು ಏನು ತಿಳಿಕೊಂಡ್ರೂ ಸರಿಯೆ" ಅಂತ್ಹೇಳಿ। ಮಾದೇವಮ್ಮ ಊಟುಕ್ಕೆ ಬಡುಸ್ಬುಟ್ಟು।

"ಈ ಸಲ ಊಟ ಮಾಡಿ" ಅಂತಾಳಲ್ಲೋ ಮಾದೇವಮ್ಮ
ನೋಡಿ ನಮ್ಮ ಶಿವುನಾ।

ಮಾದೇವಮ್ಮಂಗೆ ಇನ್ನೂ ಊಟ್ವೇ ಇಲ್ಲ। ಊಟ ಮಾಡ್ಬಿಟ್ಟು ಹಲಗೇಗೌಡ ಎದ್ದೋಗಿ ಏರ್ ಹಿಡ್ಕೊಂಡ। ನಮ್ಮ ಸ್ವಾಮಿ ಮ್ಯಾಲುಕ್ಕೇಳ್ಲಿಲ್ಲ। "ಅಮ್ಮಾ ಹಸಿದು ಬಂದಿದ್ನಿ ನನಕಂದ-

ನನಗೆ ಇನ್ನೊಂದು ಸಲ ತಂದು ನೀಡವ್ವ"
ನೋಡಿ ನಮ್ಮ ಶಿವುನಾ।

ಮಾಸರಣೆ ಮಾದೇವಮ್ಮ ಆದೆ ಅನ್ನೂ ಇಲ್ಲ, ಇಲ್ಲಾ ಅನ್ನೂ ಇಲ್ಲ ತಂದಿದ್ದು ಒಂದೇ ಮುದ್ದೆ ಹಿಟ್ಟಲ್ವ।

ನಾಚ್ಕೆ ಆಗ್ಬುಟ್ಟು ನಿಂತವ್ಳೆ ಮಾದೇವಮ್ಮ
ನೋಡಿ ನಮ್ಮ ಶಿವುನಾ।

"ನಾ ಎಷ್ಟೊತ್ತು ಕುಂತ್ಕೊಳ್ಳಿಂತ್ ನನಕಂದ। ಹೊಟ್ಟೆ ಬಾಳ ಹಸೀತೈತ್ ಕಂದಮ್ಮ। ಊಟ ಮಾದುದ್ರೆ ಹೊಟ್ಟುಂಬ ಊಟ ಮಾಡ್ಬೇಕು। ಕಂಡವರ ಮಕ್ಳ ಹೊಡದ್ರೂ ಕೈತುಂಬಾ ಹೊಡೀಬೇಕು। ಆ ಕುಕ್ಕೆಗೆ ಕೈ ಹಾಕಿ ನೋಡು ನನಕಂದ। ಅನ್ನುವಂತ ಗ್ನಾನ ಕೊಟ್ಟುಟ್ರು। ಕೈ ಹಾಕೋದ್ರಲ್ಲಿ ಇನ್ನೂ ಒಂದು ಮುದ್ದೆ ಹಿಟ್ಟು ಪ್ರತ್ಯಕ್ಷವಾಗಿತ್ತು। ಆ ಹಿಟ್ಟ ತಕ್ಕಂಬಂದು ಆ ಮುದ್ದೆನೂವೆ ಬಡುಸ್ಬುಟ್ಟು ಮಾದೇವಮ್ಮ "ತಂದಿರೋದು ನೋಡಿದ್ರೆ ಒಂದು ಮುದ್ದೆ ಹಿಟ್ಟು। ಇಲ್ಲಿ ಎರಡ್ಮುದ್ದೆ ಆಗ್ಬುಟ್ವಲ್ಲ ಭಗವಂತ। ಯಾರ ಮಾಯ್ಕೋ ಕಾಣೆ। ಇಲ್ಲ ಸಾಕ್ಷಾತ್ ಬಗವಂತನೋ ಕಾಣೆ। ಇಲ್ಲ ನಮ್ಮಪ್ಪನ ಮನೇ ದೇವ್ರೊ ಕಾಣೆ।

ನನಗೊಂದು ಗೊತ್ತಿಲ್ಲ" ಅಂತಾಳಲ್ಲೊ ಮಾದೇವಮ್ಮ
ನೋಡಿ ನಮ್ಮ ಶಿವುನಾ।

ಊಟ ಮಾಡಿ ಹಸ್ತ ತೊಳದ್ಬುಟ್ರು ನಮ್ಮ ಸ್ವಾಮಿ।

ಮ್ಯಾಕೆ ಎದ್ದು ಬತ್ತವ್ರಲ್ಲ ಮುದ್ದು ಮಾದೇವ
ನೋಡಿ ನಮ್ಮ ಶಿವುನಾ।

ಹಲಗೇ ಗೌಡನ ಹೊಲ ಬುಟ್ಟು। ಮುಂದಲೋಣೆಗೆ ಬಂದ್ಬುಟ್ಟು ಪರಮಾತ್ಮ। ಮಾದೇವಮ್ಮ ಹಿಟ್ಟಿನ ಕುಕ್ಕೆ ಹೊತ್ಕಂಡು। ಅವ ಬಂದ ದಾರೀಲಿ ಬಂದ। ಮಾದೇವಮ್ಮ ಕಂಡ್ಕೊತಳೆ ಅಂತ್ಹೇಳಿ। ಮರೆಯಾಗಿ ಕುಂತ್ಕೊಂಡ್ರು ಪರಮಾತ್ಮ।

ಅವಳು ಮನೆಗೆ ಬತ್ತಳಲ್ಲೊ ಮಾದೇವಮ್ಮ
ನೋಡಿ ನಮ್ಮ ಶಿವುನಾ।

ಮನೆಗೆ ಬಂದು ಹಿಟ್ಟಿನ ಕುಕ್ಕೆಯ ಮಡುಗ್ಬುಟ್ಟು। ಮನೇಲಿ ಹೋಗಿ 'ಅಸ್ಲೋ' ಅಂತ ಕೂತ್ಕೊಂಡ್ಲು। 'ಅಸ್ಲೋ' ಅಂತ ಕೂತ್ಕಂಡ ಕಾಲದಲ್ಲಿ। ನಮ್ಮ ಸ್ವಾಮಿಗಳು ಸಾದು ಸನ್ಯೇಸಿಗಳಾಗಿ ಮಠಾಪತಿಗಳಾಗಿ। ಮುತ್ತಿನ ಜೊಳ್ಗ ಮುಂಗೈಗಾದಾರ ಮಾಡ್ಕಂಡು। ಬೆರಳಿ ಕಟ್ಟಿನ ನಾಗಬೆತ್ತವನ್ನು ಹಿಡ್ಕೊಂಡು। ಕೊರಳ ತುಂಬ ರುದ್ರಾಕ್ಷಿ ಹಣೇಲಿ ತುಂಬ ಈಬುತ್ತಿ ದರುಸ್ಕಂಡು।

ಅವಳಟ್ಟೀಗೆ ದಯ ಮಾಡವ್ರೆ ಮುದ್ದೂ ಮಾದೇವ।
ನೋಡಿ ನಮ್ಮ ಶಿವುನಾ।

"ಯಾರವ್ವ ಮನೇ ಒಳಿಗೆ ನನಕಂದ? ಅದ್ಯಾರು ಸ್ವಾಮಿ? ನಾವು ಕಣವ್ವ ಸಾದು ಸನ್ಯೇಸಿಗಳು। ನಮಗೆ ಕಣ್ಣು ಕಾಣೋದಿಲ್ಲ ಕಿಮೀ ಕೇಳೋದಿಲ್ಲ। ಅಮ್ಮ ರುತ್ತಾಪದ ಕಾಲವಾಗಿದ್ದೀನಿ ತಾಯಿ" "ಸ್ವಾಮಿ ಏನಂದ್ರಪ್ಪಾ?" "ಅಮ್ಮಾ ಆ ಮಾದೇವಮ್ಮನ ಮನೆ ತೋರುಸ್ಕೊಡವ್ವ। ನಿನಗೆ ಬಾಳ ಕೋಟಿ ದರ್ಮ ಬತ್ತದೆ ನನಕಂದ।" "ಸ್ವಾಮಿ ಯಾತುಕ್ಕೆ ಸ್ವಾಮಿ।" "ಅಮ್ಮಾ ತಾಯಿ ಆ ಮಾದೇವಮ್ಮ। ನಮ್ಮಂತ ಸಾದು ಸ್ವನೇಸಿಗಳ ಕಂಡ್ರೆ ಬಾಳ ದಕ್ಷವಾಗಿ ನೋಡ್ತಳಂತೆ। ಎಲ್ಲಾ ಸಾದು ಸನ್ಯೇಸಿಗಳು। ಆಲ್ಗೆ ಹೋಗಿ ಇಸ್ಸೆಲ್ಲೂ ಹೋಗ್ಬೇಡಿ ಅಂತ ಕಳುಸವ್ರೆ। ಅದಕ್ಕೋಸ್ಕರವಾಗಿ ಆ ಮಾದೇವಮ್ಮನ ನೋಡಕೆ ಬಂದೆ ನನಕಂದ।"

"ಸ್ವಾಮಿ ಮಾದೇವಮ್ಮ ಅನ್ನೋಳು ನಾನೇ ಸ್ವಾಮಿ। ಈ ಊರಲ್ಲಿ ಬ್ಯಾರೆ ಯಾರೂ ಇಲ್ಲ" "ನೀನು ಭಾಗ್ಯವಂತೆಯಾಗು ನನಕಂದ"

"ಸ್ವಾಮಿ ಏನ್ ಬಂದ್ರಿ?"

"ಅಮ್ಮಾ ಮಾದೇವಮ್ಮ ನನಗೆ ಅನ್ನವಿಲ್ಲ ಆರವಿಲ್ಲ। ಕಣ್ಗೆ ನಿದ್ರೆಯಿಲ್ಲ ನನಕಂದಮ್ಮ।"

ನಿಮ್ಮನೆಗೆ ಬಂದಿವ್ನಿ ಕಂದ ಮಾದೇವಮ್ಮ
ನೋಡಿ ನಮ್ಮ ಶಿವುನಾ

ಊಟುವೆ ಸ್ವಾಮಿ ಆಗ್ಲಿ ಪರಮಾತ್ಮ। ಊಟುಕ್ಕಿಕ್ಕೀನಿ ಸ್ವಾಮಿ। ಊರೆಲ್ಲ ಬಿಕ್ಷವನ್ನು ಮಾಡ್ಕಂಡು। ಮದ್ದಾನದೊತ್ಗೆ ನೀವು ಬನ್ನಿ। ನಾನು ಅಡ್ಗೆಯನ್ನು ಮಾಡಿರ್‍ತೀನಿ ಸ್ವಾಮಿ।

"ಕಂದ ಏನೇನು ಅಡ್ಗಿಯನ್ನು ಮಾಡ್ತಿಯಮ್ಮ ?"। ನೆಲ್ಲಕ್ಕಿ ಅನ್ನವನ್ನು ಮಾಡಿ ಮಡಗ್ತೀನಿ ಬುದ್ಧಿ। ಚಪ್ಪರದವರೇಕಾಯಿ ಎಸ್ರು ಮಾಡ್ತೀನಿ ಗುರುವೆ। ಹಿಂಡಿಗ್ಮೇಲಾದಂತ ದೊಡ್ಡ ಬಿಳೀಹಸೂನಲ್ಲಿ। ಒಂದು ಸೇರು ಹಾಲ್ತಂದು ಮಡುಗ್ತೀನಿ

ನೀವು ಬನ್ನಿ ಸ್ವಾಮಿ "ಅನ್ವಾಳಲ್ಲ ಮಾದೇವಮ್ಮ
ನೋಡಿ ನಮ್ಮ ಶಿವನಾ।

"ಹನ್ನೆರಡು ಗಂಟೆ ಪ್ರಾತಕಾಲಕ್ಕೆ ನನಕಂದ। ಖಂಡಿತವಾಗ್ಲೂ ಬತ್ತೀನಿ ಕಂದಮ್ಮ" ಅವುಳ ಕಣ್ಣೆದ್ರುಗ್ಗೆ ಹೋಗೋದು ಹೋಯ್ತೀನಿ ಅಂದ್ಬುಟ್ಟ। ಬಿಳಿಪಲ್ಲಿಯಾಗಿ ನಮ್ಮಪ್ಪಾಜಿ ಮಾದೇವ। ಅವಳ ಮನೇ ಒಳೆದೊಟ್ಟಿ ಮೇಲೆ।

ಆಲ್ದೋಗಿ ಮಾಯ್ದಲ್ಲಿ ಕುಂತವರಲ್ಲ ಮಾದೇವ
ನೋಡಿ ನಮ್ಮ ಶಿವನಾ।

"ಇಲ್ಲ ಅದ್ಗೆ ಮಾಡ್ತಲೊ ಮಾಡಕಿಲ್ಲವೋ। ಇವಳ ದುಡಾ ಮನ ತಿಳೀಬೇಕು" ಅಂತ ಕುಂತವ್ರೆ "ಸಾಧುಗಳು ಹೊಂಟೋದ್ರಲ್ಲ। ನಾನು ಏನಡ್ಗೆ ಮಾಡ್ಲಪ್ಪ ಗುರುವೆ। ಮನೆ ಒಳ್ಗೆ ಒಂದು ಕಾಳೂ ಅಕ್ಕಿಲ್ಲ। ಒಂದು ಚಪ್ಪರದವರೇ ಕಾಯಿಲ್ಲ। ಹಿಂಡಿಗೆ ಮೇಲಾದ ಬಳೀ ಹಸೂನ ಹಾಲಿಲ್ಲ। ಬೇಕುಬೇಕು ಅಂತ ಬಾಯಿಗೆ ಬಂದುದು ಹೇಳ್ಬುಟ್ಟೆ। ಸಾದುಗಳು ಬಂದ್ರೆ ನಾನೇನ್ಮಾಡ್ಲಪ್ಪಾ। ನಾನು ಯಾರನ್ನ ಕೇಳ್ಲಪ್ಪ। ಸಾದು ಸನ್ನೇಸಿಗಳ ಹೆಸ್ರೇಳ್ಕಂಡು ಅಕ್ಕಪಕ್ಕದ ಮನೇಲಾರೂ ಕೇಳಬೇಕು ಅಂತೇಳ್ಬುಟ್ಟು ಮಾಸರಣೆ ಮಾದೇವಮ್ಮ ಅಕ್ಕ ಪಕ್ಕಾದ ಮನೇಲೋಗಿ। ಅಕ್ಕಿ ಕೇಳ್ತಳಲ್ಲಪ್ಪ ಮಾದೇವಮ್ಮ। "ಯಾವತ್ತೂ ಬಂದಿದ್ದೋರಲ್ಲ ಏನು ಬಂದಿದ್ದಿರಿ ತಾಯಿ? ಅವ್ವಾ ಒಂದು ಪಾವಕ್ಕಿ ಬೇಕಾಗಿತ್ತು। "ಮಾದೇವಮ್ಮ ಒಂದು ಪಾವಕ್ಕಿ ಕೇಳುದ್ರಲ್ಲ। ಒಂದು ಸೇರಕ್ಕಿ ಕೊಡ್ತೀವಿ ತಕ್ಕಂಡೋಗಿ ತಾಯಿ"

ಒಂದು ಸೇರಕ್ಕಿ ತಂದುಕೊಟ್ರಲ್ಲೋ ಜಗದೀಶ
ನೋಡಿ ನಮ್ಮ ಶಿವನಾ।

ಅಕ್ಕಿ ಈಸ್ಕೊಂಡು ಮಾದೇವಮ್ಮ। ಚಪ್ಪರದವರೆಕಾಯ್ನ ಯಾರು ಹಾಕಿದ್ದಾರೋ ಕಾಣ್ಣಲ್ಲ ಅಂತ್ಹೇಳಿ। ಚಪ್ಪರದವುರೆ ಹಾಕಿರೋರಟ್ಟಿಗೆ ಬಂದು। "ನನಿಗಿಷ್ಟು ಚಪ್ಪರದವರೆ ಕಾಯಿ ಕೊಡಿ ಅವ್ವ" ಅಂತ ಕೇಳಿದ್ಲು। "ಎಂದೂ ಬರದ ಮಾದೇವಮ್ಮ ಇಂದು ಬಂದು। ನಮ್ಮತ್ರ ಚಪ್ಪರದವರೆ ಕಾಯಿ ಕೇಳ್ತಿದ್ದಾಳಲ್ಲ। ನಾನು ಕೈನಿಂದ ಕೊಡಬಾರದು। ನಿಮ್ಗಿಷ್ಟ ಬಂದಷ್ಟು ಕುಯ್ಕೊಂಡೋಗಿ" ಅಂತಿದ್ದಾರೆ। ಆಗ ಮಾದೇವಮ್ಮ ಚಪ್ಪರದವರೆ ಕಾಯಿ ಕುಯ್ಕೊಂಡು।

ಅವಳು ಮನೆಗೆ ಬತ್ತವಳಲ್ಲೊ ಮಾದೇವಮ್ಮ
ನೋಡಿ ನಮ್ಮ ಶಿವನಾ।

ಮನೆಗೆ ಬರುವ ಕಾಲದಲ್ಲಿ ಹಿಂಡುಗೆ ಮೇಲಾದ ಬೆಳ್ಗಸ। ಕರಾ ಹಾಕಿ ಮೂರು ದಿನ ಆಗಿತ್ತಂತೆ।

ಅವರಟ್ಟೀಗೆ ಬತ್ತಳಲ್ಲ ಮಾದೇವಮ್ಮ।
ನೋಡಿ ನಮ್ಮ ಶಿವುನಾ।

"ಮಾದೇವಮ್ಮ ಯಾವತ್ತೂ ಬರದೋಳು। ನಮ್ಮನೆಗೆ ಈವತ್ತು ಬಂದಿದ್ದಾರಲ್ಲಾ ತಾಯಿ। ಏನ್ ಬಂದ್ರಿತಾಯಿ?" "ಅವ್ವಾ ನನಗೊಂದು ಪಾವು ಹಾಲುಬೇಕು ಅಂತ ಬಂದಿವ್ನಿ

ಗೋದಾನ್ನ ಕೊಡಿ" ಅಂತಳಲ್ಲ ಮಾದೇವಮ್ಮ
ನೋಡಿ ನಮ್ಮ ಶಿವುನಾ।

"ಅವ್ವಾ ಕಂಚಿನಂಡೆ ಕೈಲಿ ಕೊಡ್ತಿವಿ ತಾಯಿ। ನಿಮ್ಮಿಷ್ಟ ಬಂದಷ್ಟು ಹಾಲ

ಕರ್‍ಕಂಡೋಗಿ" ಅಂತರಲ್ಲ ಮಾದೇವ
ನೋಡಿ ನಮ್ಮ ಶಿವುನಾ।

ಆಗ ಕಂಚಿನಂಡೆ ಕೈಲಿತ್ಕೊಂಡು। ಎಣ್ಣೆ ಬಟ್ಲ ತೊಡೇ ಮ್ಯಾಲೆ ಮಡೀಕಂಡು ಎಣ್ಣಸವರ್‍ಕೊಂಡು।

ಹಾಲ ಕರುದಳಲ್ಲ ಮಾದೇವಮ್ಮ
ನೋಡಿ ನಮ್ಮ ಶಿವುನಾ।

ಕಂಚಿನಂಡೆ ತುಂಬ್ಕೊತು। "ಅಮ್ಮ ಈಸಲ ವೊಯ್ತೀನಿಕಣಮ್ಮ" ಅಂದ್ಬುಟ್ಟು।

ಏಳಟ್ಟಿಯಿಂದೀಚೆಗೆ ಬತ್ತಳಲ್ಲ ಮಾದೇವಮ್ಮ
ನೋಡಿ ನಮ್ಮ ಶಿವುನಾ।

ಏಳಟ್ಟಿಯಿಂದೀಚೆಗೆ ಬಂದು ಮಾದೇವಮ್ಮ। ತನ್ನ ಮನೆಗೆ ಹೋದಳಂತೆ। ಅಡ್ಗೆ ಸಾಮಾನ್ನೆಲ್ಲ ಅಮುರ್‍ಕೊಂಕೊಂಡು। ಮನೇಲಿ ಮಡುಗ್ಬುಟ್ಟು

ತಾನ ಮಾಡಿದಳಲ್ಲ ಮಾದೇವಮ್ಮ
ನೋಡಿ ನಮ್ಮ ಶಿವುನಾ।

ಮನೆ ತಾರ್‍ಸಿ ಕೈಯೆಣ್ಣೆ ಜ್ಯೋತಿಯನ್ನು ಹಚ್ಚಿ। ಕೊಂಡ ಮಾವುನ ಪತ್ರೆ ಬಿಲ್ಪತ್ರೆ ತುಂಬೇ ಪುಷ್ಪ। ಇವು ಮೂರ್‍ನೂ ತಕ್ಕಂಡೋಗಿ ಸೊಳ್ಳು ಗೂಡ್ಗೆ ಧರುಸ್ಬುಟ್ಟು। ಗಂದದಕಡ್ಡಿ ಹಚ್ಚಿ ಕೈ ಮುಗುದ್ಬುಟ್ಟು।

ಅಡ್ಗೆ ಮಾಡೋದಕ್ಕೆ ದುಡುಕಿದಳಲ್ಲೊ ಮಾದೇವಮ್ಮ।
ನೋಡಿ ನಮ್ಮ ಶಿವುನಾ।

ಪಟ್ಟೆ ಚೌಕ ಬಾಯಿಗೆ ಕಟ್ಟಿಕೊಂಡು। ತಕ್ಷನವಾಗಿ ಅಡ್ಗೆ ಮಾಡ್ಬುಟ್ಟು ಕೆಳಕಿಳುಕುಬುಟ್ಟು। ಸಾದುಗಳ ನೋಡಬೇಕು ಅಂತ್ಹೇಳಿ।

ಈಚೆಗೆ ಬಂದಳಮ್ಮ ಮಾದೇವಮ್ಮ।
ನೋಡಿ ನಮ್ಮ ಶಿವನಾ।

ನಮ್ಮ ಸ್ವಾಮಿಯವರು ಬಂದು ನಡಟ್ಟಿಯೊಳಗೆ ಮೋರ್ತವಾಗಿದ್ರೆ। ಹಲಗಪ್ಪನವರು ಹೊಲುದ ಕೆಲ್ಸ ತೀರಿಸ್ಕೊಂಡು ಮನೆಗೆ ಬಂದ್ರು। ಮಾದೇವಮ್ಮ ನಮ್ಮ ಸ್ವಾಮಿಯವರ ನೋಡಿ। "ಸ್ವಾಮಿ ನಿಮ್ಮನ್ನೇ ಕರಿಯೋದಕ್ಕೋಸ್ಕರ ಬತ್ತಿದ್ರೆ। ನೀವೇ ಬಂದ್ರಲ್ಲಾ ಸ್ವಾಮಿ ನಮ್ಮ ಪುಣ್ಯ" "ಅಮ್ಮಾ ಹನ್ನೆರಡು ಗಂಟೆ ಆಯ್ತು ಅಂತ ನಾವೇ ಬಂದೊ ತಾಯಿ। ಪನ್ನೀರಾ ಗನಿಯನ್ನು ತಂದು। ಸ್ವಾಮಿಯರರ ಪಾದವನ್ನು ತೊಳ್ದು। ತುಂಬೇ ಪುಷ್ಪ ತಂದು ಪಾದದ ಮೇಲ್ಮಡುಗಿ। ಬೆಜ್ಜಲ್ಕೆ ಕೆಂಡವನ್ನು ತುಂಬ್ಕೊಂಡು ಬಂದು। ಸಾಂಬ್ರಾಣಿ ದೂಪವನ್ನು ಹಾಕಿ। ಗಂದದ ಕಡ್ಡಿಯನ್ನು ಹಚ್ಚಿ। ಪಾದಪೂಜೆಯನ್ನು ಮಾಡಿ।

ಆಗ ಕರ್ಕೊಂಡೋಯ್ತಾರಲ್ಲಪ್ಪ ಮಾದೇವನ।
ನೋಡಿ ನಮ್ಮ ಶಿವನಾ।

ಕರುಕೊಂಡೋಗಿ ನಡುಮನೆ ಒಳುಗೆ ಕುಂಡ್ರಿಸಿ। ಮೊಗೇ ಮುರೀದಿದ್ದಂತ ಬಾಳೆದೆಲೆ ತಂದು। ಸ್ವಾಮಿ ಮುಂದೆ ಎಡೆಮಾಡ್ತಳು ಮಾದೇವಮ್ಮ।

ಸ್ವಾಮಿ ಊಟ ಮಾಡಿ ಅಂತಳಲ್ಲ ಮಾದೇವಮ್ಮ
ನೋಡಿ ನಮ್ಮ ಶಿವನಾ।

"ಸಂತೋಷವಾಯ್ತು ನನಕಂದ" ಅಂದ್ಬುಟ್ಟು। ಹೊಟ್ಟೆ ತುಂಬುವಂತಾ ಊಟ ಮಾಡಿದ್ರೂ। "ಅಪ್ಪಾ ದಾವಾಯ್ತದಲ್ಲ ನನಕಂದ। ನನಗಷ್ಟು ಹಾಲು ಬೇಕಮ್ಮ" ಅಂದ್ರು। ಮಾದೇವಮ್ಮ ಕಂಚುನಂಡೇಲಿದ್ದಂತ। ಒಂದು ಸೇರು ಹಾಲು ತಕ್ಕಂಡ್ಬಂದು।

"ಈ ಸಲ ಊಟ ಮಾಡಿ ಅಂತಳಲ್ಲ ಮಾದೇವಮ್ಮ।
ನೋಡಿ ನಮ್ಮ ಶಿವನಾ।

ಒಂದು ಸೇರು ಹಾಲ್ನೂವೆ ಒಂದು ಗುಟ್ಕಿಗ್ಕೆ ಸಲ್ಲುಸ್ಬುಟ್ರು ಪರಮಾತ್ಮ। ಸಂತೋಷವಾಗಿ ಈಚೆಗೆ ಬಂದುಬಿಟ್ರು ಮಾದೇವ। "ಕಂದ ಬಾ ಮಾದೇವಮ್ಮ ಬಾವ್ವಾ" ಅಂದ್ರು। "ಏನು ಸ್ವಾಮಿ ನನ್ನ ಕರುದ್ರಲ್ಲ?"। "ಹೊಲುದಲ್ಲಿ ಒಂದು ಬಿನ್ನ ಮಾಡ್ದೆ ನನಕಂದ। ನಿನ್ನ ಮನೆ ಒಳುಗೆ ಒಂದು ಬಿನ್ನ ಆಯ್ತು ಕಂದಮ್ಮ। ನಿನ್ನ ಮನೆ ಬುಟ್ಟು ಹೋಗಕ್ಕೆ ನನಗಿಷ್ಟವಿಲ್ಲಮ್ಮ। ನೀನು ಅಡುಗೆ ಮಾಡುವಂತ ಒಲೆ ಒಳುಗೆ। ಒಂದು ಪಾದ ಊರ್ತೀನಿ ನನಕಂದ-

ನನಗೆ ತಳವ ಕೊಡು ಕಂದ ಮಾದೇವಮ್ಮ
ನೋಡಿ ನಮ್ಮ ಶಿವನಾ।

"ಅಯ್ಯಯ್ಯೋ ಸ್ವಾಮಿ। ಯಾವ ಮಾತ್ಹೇಳುದ್ರೂವೆ ಆ ಮಾತ್ಹೇಳ್ಬೇಡಿ। ನಮ್ಮನೆ ಊಟ ಮಾಡಿದ ಮ್ಯಾಕೆ ನಿಮ್ಮ ದಾರಿಗುಂಟ ಹೋಗಿ ನಮ್ಮನೇಲಿ ಸ್ಥಳ ಇಲ್ಲ। ಇರೋದು ಒಂದುಕ್ಕ ಜೋಪಡಿ। ನಿಮಗೆ ತಳ ಕೊಟ್ಟುಬಿಟ್ಟ ನಾವು-

ಎಲ್ಲಿಗೋಗ್ಬೇಕು" ಅಂತಳಲ್ಲ ಮಾದೇವಮ್ಮ

ನೋಡಿ ನಮ್ಮ ಶಿವನಾ।

"ಬ್ಯಾಡವ್ವಾ ನನಮಾತ ಕೇಳು ನನಕಂದ। ಒಂದು ಪಾದ ಊರ್‍ತೀನವ್ವ"। "ಈ ಮಾತ್ತೇಡ ಸ್ವಾಮಿ ಆಗದಲ್ಲ" "ಆಗದಿಲ್ಲ ಅಂದ ಮ್ಯಾಕೆ ಮುಂದೆ ನೋಡ್ಕೊ ನನಕಂದ। ಬೆಳ್ಳಿ ಮೂಡಿ ಬೆಳಕರಿಯೋ ಹೊತ್ಕೆ ನೋಡ್ಕೊ" ಅಂತ್ಹೇಳಿ। ಅವಳ ಕಣ್ಣೆದುರ್‍ಗೆ ಹೋಗೋನಾಗಿ ಹೊಂಟೋಗ್ಬುಟ್ರು। ಹೊನ್ನ ದುಂಬಿಯಾಗಿ ಹೋಗಿ। ಅವಳ ಹೊಳಿ ದಟ್ಟದ ಮೇಲೆ ಕೂತ್ಕಂಡ್ರು। ಬೆಳ್ಳಿ ಮೂಡ್ತು ಬೆಳಕರೀತು। ಕೋಳಿ ಕೂಗಿ ಲೋಕವೆಲ್ಲಾ ಬೆಳಗಾಯ್ತು। ಮಾದೇವಮ್ಮ ಎದ್ದು ತಾನ ಮಾಡಿಕೊಂಡು। ಒಲೇ ಹತ್ತಕೋದ್ಲು ಅಡ್ಗೆ ಮಾಡೊ ಒಲೇ ಹತ್ಸೋ ಕಾಲದಲ್ಲಿ ನಮ್ಮಪ್ಪಾಜಿ ಮಾದೇವ। ಎಳ ನಾಗರ ಮರಿಯಾಗಿ ಒಲೆ ಒಳಗೆ ಪವುಡಿಸಿದ್ರು। ಮಾದೇವಮ್ಮ ಕೈ ಹಾಕಿದ ಗಳುಗೆ ಒಳುಗೆ ಮಾದೇವಮ್ಮನ ಕಿರು ಬೆರಳ್ಗೆ-

ಪೊಟಕ್ಕೆ ಕಡೀತಾನಲಪ್ಪಾ ಮಾದೇವ

ನೋಡಿ ನಮ್ಮ ಶಿವನಾ।

"ಅಯ್ಯಪ್ಪಾ ಹೋಯ್ತಲ್ಲಪ್ಪಾ ನನ್ನಕೈ" ಅಂತ। ಬಾಯ್ ಬಾಯಿ ಬಡೀತವ್ಳೆ। ಮೈಯೆಲ್ಲಾ ಉರಿಜ್ವಾಲೆ ಆಗ್ಬುಟ್ತು। ತನ್ನ ಪತಿಯಾದ ಹಲಗೇಗೌಡನನ್ನು ಕೂಗಿ ಕರುದ್ಲಲ್ಲ। ಹಲಗಯ್ಯನವರು ಬಂದು ನೋಡಿ। ಔಸ್ತಿ ಕೊಡೋ ಪಂಡಿತ್ರುಗೆ ಹೋಗ್ಬೇಕುಂತ್ಹೇಳಿ। ಮುಂದಾದ್ದ ಬಾಗಲ್ಗೆ ಬಂದ್ರಲ್ಲಾ।

ಮನೆಸುತ್ತ ಬರಗನ ಹಾವ್ನ ನಿಂತಿರುವುದು

ನೋಡಿ ನಮ್ಮ ಶಿವನಾ।

ಮನೆ ಸುತ್ತು ಕಾವುಲು ನೋಡಿ। ಹಲಗೇಗೌಡ ಮಾದೇವಮ್ಮ ಬಾಯಿ ಬಾಯಿ ಬಡೀತಿದ್ರೆ। ಊರು ಜನ ಹೆದ್ರಕೊಂಡು ಮನೆತಾವ್ಕೆ ಬರೋಲ್ಲಂತೆ। ಆಗ ನಮ್ಮಪ್ಪಾಜಿ ಮಾಯಕಾರ ಮಾದೇವ। "ಅಮ್ಮ ಮಾದೇವಮ್ಮ ಅಳಬ್ಯಾಡ ನನಕಂದ। ನಾನು ಕಣಮ್ಮ ಅಳಬ್ಯಾಡ। ಒಲೆ ಒಳುಗೆ ಒಂದು ಜಾಗ ಕೊಡು ಅನ್ನೊತ್ಕೆ। ಆಗದಿಲ್ಲ ಅಂದ್ಯಲ್ಲ ನನಕಂದ।

ಈಗೆಂಗಿದ್ದವ್ವ ಹೇಳು ಮಾದೇವಮ್ಮ"।

ನೋಡಿ ನಮ್ಮ ಶಿವನಾ।

"ನೀನ್ಯಾರಪ್ಪಾ ಸ್ವಾಮಿ ಎಲ್ಲಿದ್ದೀರಪ್ಪ। ಸುತ್ತಾ ನೋಡುದ್ರೆ ಯಾರು ಕಾಣಕಿಲ್ಲ। ಎಲ್ಲಿದ್ದೀರಿ ಸ್ವಾಮಿ ನೀನ್ಯಾರು ಗುರುವೆ" "ನನ್ನೆಸ್ರು ಕೇಳಿದ್ಯಾ ನನಕಂದ।

ನಾನು ಮರಿಯಪ್ಪ ಕಣಮ್ಮ ಮಾದೇವಮ್ಮ

ನೋಡಿ ನಮ್ಮ ಶಿವನಾ।

"ಆ ಒಲೆಯನ್ನು ಮಾತ್ರ ನನಗೆ ಬುಟ್ಕೊಡು ನನಕಂದ। ಒಂದಗ್ಲ ನನಗಾಗ್ಲಿ ನನಕಂದ ಬಾಕಿ ತಾವು ನೀವು ವಾಸ ಮಾಡಿ। ನಿಮಗೆ ಹಾಲುಸಾಗ್ರವಾಗಿ ಬಾಳಾಡೋ ಹಂಗ

ಬ್ಯಾಗ್ಕೊಡ್ತಿವಿ ನನ ಕಂದಮ್ಮ ನೂರಾರು ಖಿಂಡ್ಗ ಹೆಚ್ಚೊ ಕ್ಕ ಕೊಡ್ತೀನಿ। ಸಾಲು ಗುಳೀನೇ ತುಂಬುಸ್ಬುಟ್ಟೀನು ನನಕಂದ। ವರ್ಷಕ್ಕೊಂದಾವರ್ತಿ ಕಂದಮ್ಮ। ನನಗೆ ಇಲ್ಲಿ ಎಳ್ಳು ಬಿಕ್ಷ ಆಗ್ಬೇಕು। ನನ್ನ ಗ್ನಾನವನ್ನು ಮರೀದೆನೆ। ನನಗೆ ಜಾತ್ರೆಯನ್ನು ಮಾಡು ಕಂದ। ನಿನಗೆ ಹಾಲು ಸಾಗರವನ್ನೇ ಕೊಡ್ತಿನವ್ವ। ಗಂಡು ಮಕ್ಕಳ ಫಲಭಾಗ್ಯ ಕೊಡ್ತಿದ್ದೀನಿ। ನಾನು ಈ ತಾವು ನೆಲೆಗೊಳ್ಳೋದ್ಕೆ।

> ಒಪ್ಪೀಯ ಹೇಳು ಮಾದೇವಮ್ಮ"
> ನೋಡಿ ನಮ್ಮ ಶಿವನಾ॥

"ಸ್ವಾಮಿ ನಮ್ಮ ತಪ್ಪು ನೆಪ್ಪು ಮರೀರಿ ಗುರುವೆ। ನಾವು ಮಾಡಿದ್ದು ಸರ್ವತಾ ಅಪರಾದ ಗುರುವೆ। ನಿಮ್ಮ ಮಾತ್ನಂತೆ ನಡ್ಕೋತೀವಿ ಅಂದ್ಲಂತೆ। ನನ ಕಂದ ಮಾದೇವಮ್ಮ। ಹನ್ನೆರಡೊರ್ಷ ತುಂಬೋಯ್ತು। ನಾನು ಮೂಡ್ಲ ಮಲೆಗೆ ಹೊಯ್ತೀದ್ದೀನವ್ವ" ಅಂತ್ಹೇಳಿ ನಮ್ಮಪ್ಪಾಜಿ ಬಿರಗಗಳ್ಳೆಲ್ಲ ಮಾಯ ಮಾಡಿ। "ಹಲಗೇ ಗೌಡನ ದುಡಮನ ನೋಡ್ದೆ। ಮಾದೇವಮ್ಮನ ನಿಜ ಬಕುತಿ ನೋಡ್ದೆ।

> ಇನ್ನು ಮುಂದಕ್ಕೆ ಹೋಗ್ಬೇಕು" ಅಂತ್ಹೇಳಿ।
> ನನಕಂದ ಮಾದೇವಮ್ಮ

ನಾನು ಒಲೆ ಒಳುಗೆ ಒಡುದು ಮಾಡ್ತಿದ್ದೀನಿ। ನನಕಂದ ಹಲಗೇಗೌಡ। ದೀಪಾವಳಿ ಹಬ್ಬದಲ್ಲಿ ಇಲ್ಲಿ ಹುಲಿವಾಹನ ಸೇವೆ ನಡ್ಲಪ್ಪ। ಅಂತ್ಹೇಳಿ ಮಾದೇವ

> ಅವರು ಮುಂದಕ್ಕೆ ಪಯಣ ಹೊರಟವ್ರೆ ಮಾದೇವ
> ನೋಡಿ ನಮ್ಮ ಶಿವನಾ॥

## ಸುತ್ತೂರು ಮಠಕ್ಕೆ

ಗುರು ಮಟ ಬಿಟ್ಬುಟ್ಟು। ಮೂರು ಹೆಜ್ಜೆ ಮುಂದುಕ್ಕೋಗ್ಬುಟ್ಟು। ಏನು ಆಲೋಚನೆ ಮಾಡ್ತಾನೆ ಅಂತ ಹೇಳಿದ್ರೆ। ಈಗ ನಾನು ಗುರು ಪಡೀಬೇಕು ಅಂತ ಬಂದ್ನಲ್ಲಾ। ನನಗೆ ತಕ್ಕಾದ ಗುರು ಎಲ್ಲಿದ್ದಾರೆ? ಯಾತವಿದ್ದಾರೆ ಅಂತೇಳ್ಬುಟ್ಟು। ಆರು ಮೂರು ಗಳಿಗೆಯಲ್ಲಿ। ತಮ್ಮ ದಿವ್ಯ ದೃಷ್ಟಿ ನೋಡ್ಬುಟ್ರಂತೆ। ಓಹೋ ಸುತ್ತೂರು ಮಟ ಸುಕ ಅಂತ ಹೇಳ್ತಾರಲ್ಲಾ। ಸುತ್ತೂರು ಮಟಕ್ಕೆ ಮೊದಮೊದಲಾಗಿ ಹೋಗೋಣ್ವಾ। ಆ ಸುತ್ತೂರು ಮಟದ ಗುರುಗಳು ನೋಡೋವಾ। ಅಂತ ಹೇಳ್ಬುಟ್ಟು ಆ ನಮ್ಮಪ್ಪಾಜಿಯವರು।

ಅವೊತ್ತಿನ ದಿನ ಜಾತ್ರೆ ನಡೀತಾ ಇದೆ। ಬೇಕಾದಷ್ಟು ಪರಸೆ ಸೇರಿದೆ। ತೇರೆಳ್ಕೊಂಡೊಯ್ತಾ ಇದ್ದಾರೆ। ಆ ಟೈಮಿನಲ್ಲಿ। ಯಾವನೋ ಒಬ್ಬ ಮನುಷ್ಯನಿಗೆ ಒಂದು ಸರ್ಪ ಕಡಿದ್ಬುಟ್ಟು। ಅಲ್ಲಿ ಆ ಮನ್ಸ ಸತ್ತೋಗ್ಬುಟ್ಟ। ಯಾವಾಗ ಸರ್ಪ ಏಟು ಬಿದ್ದ ತಕ್ಷಣ ಮನ್ಸ ಸತ್ತೋದ್ನೋ? ಹೋಯ್ತಾಯಿದ್ದಂಥ ತೇರು ನಿಂತೋಗ್ಬುಡ್ತು। ಆವಾಗ ಪರಮಾತ್ಮ

ಊರೆಲ್ಲ ಹಾಗೆ ನಿಂತ್ಕಂಡ್ತು। ಮಾಯ್ಕಾರ ಗಂಡ ಮಾದಪ್ಪ। ತಾ ಓಡಿಹೋಗಿ ಬೇಲಿವೊಳಗೆ। ಸೊಪ್ಪ ಕಿತ್ಕೊಂಡು ಬಂದು। ಒನಾವೆಲ್ಲ ಇಕ್ಕಲು ಮಾಡ್ಬಿಟ್ಟು। ಅಪ್ಪಾ ಪ್ರಜೆಗಳೇ ದಾರಿಬಿಡಿ। ಆ ಪ್ರಾಣ ಹೋಗಿರುವಂಥ ಮನ್ಸನ್ನ ನಾ ಪಡೀತೀನಿ ಅಂತ್ಹೇಳಿ। ಆ ಸೊಪ್ಪಿನ ರಸ ತಂದು ಅವನ ಬಾಯ್ಗಾಕ್ಕಿ। ಪ್ರಾಣ ಹೋಗಿರುವಂಥ ಮನ್ಸನ ಏಳಿಸ್ಬಿಟ್ಟು। ಓಡಿ ಬಂದು ದೇಶಿಕ ಸ್ವಾಮಿಗಳು। ಯಾರಪ್ಪಾ ಮರಿದೇವ್ರೆ ಯಾವ ಕಾಡ್ನವರು। ಅಂತ್ಹೇಳಿ ಮುಂಗ್ಗೈ ಹಿಡ್ಕಂದ್ರು। ಗುರುವೇ ಗುರು ಪಾದವೇ। ನಾನು ಉತ್ತುರ ದೇಶದ ಮರುದೇವರು ಅಂದ್ರು। ಆಗ ನನ್ನ ಗುರುಮಠಕ್ಕೆ ಬಾರಪ್ಪ ಅಂತ್ಹೇಳಿ। ಅವರು ಸುತ್ತೂರು ಮಠಕೆ ಕರ್‍ಕೊಂಡೋಯ್ತಾವರೇ ಸ್ವಾಮಿಗಳು।

> ನೋಡಿ ನಮ್ಮ ಶಿವನಾ।
>
> ಸುತ್ತೂರು ಮಟಕ್ಕೆ ಓತಾವ್ರೆ। ನಮ್ಮ ದೇವಾ
>
> ಆಹಾ ನೋಡಿ ನಮ್ಮ ಸಿವನಾ

ಸುತ್ತೂರು ಮಟಕ್ಕೆ ವೋಗ್ಬುಟ್ಟು। ಮಟದ ಬಾಗಿಲಲ್ಲಿ ನಿಂತ್ಕೊಂಡು। ಏನಂತ ಕ್ವಾರಣ್ಯ ಸಾರ್‍ತಾರೆ। ಹರ ಹರಾ ಹರನ ಬಕ್ತ ಗುರುವಿನ ಬಿಕ್ಷ। ಗುರು ಕ್ವಾರಣ್ಯಾ ಬಿಕ್ಷ ಅಂತ ಹೇಳ್ಬುಟ್ಟು। ಬಿಕ್ಷವನ್ನು ಸಾರಿದಂತಾ ಕಾಲದಲ್ಲಿ। ತಾಯಿ ಉತ್ತರಾಜಮ್ಮನ ಬಿಕ್ಷ। ತಂದೆ ಚಂದ್ರಸೇಕರ ಮೂರ್ತಿ ಬಿಕ್ಷ। ಕಲ್ಯಾಣ ಪಟ್ಟಣದ ಬಸವಣ್ಣನವರ ಬಿಕ್ಷ। ಬಿಕ್ಷ ಸಾರಿದಂತ ಕಾಲ್ದಲ್ಲಿ।

ಸುತ್ತೂರು ಮಟದ ಸ್ವಾಮಿಗಳು। ಉರಿಗದ್ದುಗೆ ಮೇಲೆ ಕುಂತಿದ್ದಂತಾ ಕಾಲದಲ್ಲಿ। ಇದ್ಯಾರಪ್ಪಾ ಇಸ್ಟೊತ್ತಿಗೆ ಕ್ವಾರಣ್ಯ ಸಾರ್‍ತಾರಲ್ಲ ಅಂತ ಬಂದು ಬಗ್ ನೋಡಿದಂತಾ ಕಾಲದಲ್ಲಿ। ಇವ್ರು ಮೂರು ಗೇಣುದ್ದಕ್ಕೆ ನಿಂತಿದ್ರಂತೆ। ನೀನು ಯಾರಯ್ಯ ಅಂದ್ರಂತೆ ಸ್ವಾಮಿ। ನಾನ್ಯಾರಾದ್ರೇನು ಸ್ವಾಮಿ। ನಾನು ಅನ್ನವುಂಡು ಮೂರು ದಿನವಾಯ್ತು। ನನಗೆ ಬಾಳ ವೊಟ್ಟೆ ಹಸಿಯುತ್ತೆ ಸ್ವಾಮಿ। ನಿಮ್ಮ ಮಟವನ್ನು ಯಾರೋ ಯೇಳ್ಬುಟ್ರು। ಅದಕ್ಕೆ ಬಂದಿದ್ದೀನಿ ಸ್ವಾಮಿಗಳೇ। ನನ್ನನ್ನ ನಿಮ್ಮ ಮಟದಲ್ಲಿ ಕೆಲವು ದಿವಸ ಇರಿಸ್ಕಬೇಕು। ನನಗೆ ವೊಟ್ಟೆಗೆ ಅನ್ನ ಕೊಡಬೇಕು। ಮೈಗೆ ಬಟ್ಟೆ ಕೊಡಬೇಕು।

> ನನಗೆ ಇದ್ದ ಬುದ್ದಿ ಕಲಿಸ್ಬೇಕು ಅಂತವ್ರೆ। ಮಾದೇವ।
>
> ಹ್ಲಾಂ... ನೋಡಿ ನಮ್ಮ ಸಿವನಾ

ಯಾವಾಗ ಈತರವಾಗಿ ಏಳಿದ ಮಾತನ್ನ। ಸುತ್ತೂರು ಮಟದ ಸ್ವಾಮಿಗಳು ಕೇಳ್ಕಂಡು ಏನಯ್ಯಾ ಮರಿ ಯಾವ ಕೆಲಸವೂ ಕಾಲಿ ಇಲ್ಲ ಕಣಯ್ಯಾ। ಆದ್ರೆ ಒಂದು ಕೆಲಸ ಕಾಲಿ ಅದೆ ಕಣಯ್ಯಾ। ನೀ ಮಾಡ್ತೀನಿ ಅಂದ್ರೆ ಏಳ್ತೀನಿ ಅಂದ್ರು। ಅದ್ಯಾವ್ದ ಏಳಿ ಬುದ್ದಿ ಅಂತ ಏಳ್ಬುಟ್ರು। ಆವಾಗ ಒಳಗ್ ಕರ್‍ಕಂಡೋಗ್ಬುಟ್ಟು। ರಾಗಿ ಕಲ್ ಮುಂದೆ ನಿಲ್ಲಿಸ್ಕಂಡು। ನೋಡಯ್ಯ ಈ ಮೂರು ತೊಂಬೆ ರಾಗಿನ। ಈ ರಾಗಿ ಕಲ್ಲೊಳಗೆ ಮೂರು ಬಳ್ಳ

ಇಕ್ಕಬೇಕು। ಮೂರು ಸುತ್ತಿಗೆ ತಿರಿಬೇಕು। ಮತ್ತೊಂದು ತೊಂಬೆಗೆ ತುಂಬಿ ಇಟ್ಟಿದ್ದೇ ಅದ್ರೆ। ಆಗ ನಿನಗೆ ವಿದ್ಯೆ ನೋಡಿ ಬುದ್ದಿ ಯೇಳ್ತೀವ್ನಿ। ನಿನ್ನ ಬುದ್ದಿ ನೋಡಿ ಇದ್ಯ ಕಲಿಸ್ತೀವ್ನಿ। ನಿನ್ನ ವೊಟ್ಟೆಗೆ ಅನ್ನ ಕೊಡ್ತೀವ್ನಿ। ಮೈಗೆ ಬಟ್ಟೆ ಕೊಡ್ತೀವ್ನಿ ಅಂತ। ಯೇಳ್ಬುಟ್ರು। ಆವಾಗ ಮರಿದೇವ್ರು ಮಾದಪ್ಪನವರು। ಈಗ ನಾನು ಮಾಡಲ್ಲ ಅಂತ ಏಳು ಬುಟ್ರೆ। ಗುರು ಮಾತ್ ಮೀರ್ದಾಗಾಗುತ್ತೆ ಅಲ್ಲಿ ನಾನು ಪಾಪಕ್ಕೊಳ್ಗಾಗ್ತೀನಿ। ಮಾಡ್ತೀನಿ ಅಂತೇಳ್ಬುಟ್ರೆ। ನೀನು ನರಲೋಕಕ್ಕೋಗ್ಬುಟ್ಟು। ಕಲಿ ಕಟ್ಟಾಗ್ ಹೋಗ್ ಬಂದಿವ್ನ್ ಅಲ್ಲಾ। ನಾನು ಪೋಗಿ ನಿತ್ಕಂಡು ಕಲಿ ಕಟ್ಬಾಳೋದ್ಕಂಗೆ। ಈಗ ರಾಗಿಕಲ್ಲು ಗುಂಟೆ ಇಡಿದು ಬೀಸುಬುಟ್ರೆ। ನಾನು ಹಿಂದಕ್ ಬೀಸಾಡ್ಬುಡ್ತೀನ್ಕಲ್ಲಾ ಅಂತೇಳ್ಬುಟ್ಟು। ಆಗ ನಮ್ಮಪ್ಪಾಜಿಯವರು। ಅಗ್ಲಿ ಹೋಗಿ ಅಂತ ಕಳಿಸ್ಬುಟ್ರು। ಆ ಗುರುಗಳು ವೊಂಟೋದ್ಮೇಲೆ। ಆ ರಾಗಿಕಲ್ ತರ ಕೂತ್ಕಂಬುಟ್ಟು। ನಮ್ಮಪ್ಪಾಜಿಯವರು ಏನು ಮಾಡಿದ್ರೂ ಒಂದು ಪವಾಡ್ವ। ನಾನು ರಾಗಿಕಲ್ಲು ಮುಂದೆ ಕೂತ್ಕಂಡು ಬೀಸದ್ಯಾಕೆ। ಅಂತಾ ಬಡಸ್ತನ ಬಂದಿರಾದೇನು ಅನ್ಬುಟ್ಟು। ನಮ್ಮಪ್ಪಾಜಿ ಮಾದಪ್ಪನವರು। ಮಾರಿ ಮಸಣಿ ದುರ್ಗಿ ಚೌಡೀರ್ನೆಲ್ಲಾ।

> ಅವನು ಕೈಬೀಸಿ ಕರದವ್ನೆ ಮಾದೇವ
> ಹ್ಲಾಂ... ನೋಡಿ ನಮ್ಮ ಶಿವನಾ

ಯಾವಾಗ ಕೈ ಬೀಸಿ ಕರೆದುಬಿಟ್ನೋ। ಈ ಮಾರಿ ಮಸಣಿ ಚೌಡಿ ಎಲ್ಲರೂ ಸೇರ್ಕಂಡು ಬಂದ್ಬುಟ್ರು। ಏನಯ್ಯಾ ಅಂದ್ಬುಟ್ರು। ಅಮ್ಮಾ ನಾನು ನರಲೋಕದಲ್ಲಿ ಕಲಿಕಟ್ಬಾಳಬೇಕು ಅಂತ ಬನ್ಬುಟ್ಟು। ಈ ತರವಾಗಿ ನಾನು ಇದ್ಯೆ ಬುದ್ದಿ ಕಲಿಯಕ್ಕೆ। ಬರ್ಲಾ ತಾಯಿ ತಂದೆ ಪಡ್ಕಂಡು। ನಾನು ಇದ್ಯ ಬುದ್ದಿ ಕಲಿಯಕ್ಕೆ ನಮ್ಮ ಈ ಸುತ್ತೂರು ಮಟದ ಸ್ವಾಮಿಗಳು। ಈ ತರವಾಗಿ ಏಳ್ಬುಟ್ಟವ್ರೆ। ಅದ್ಕೇನಣ್ಣಯ್ಯಾ ನೀವು ರಾಗಿಕಲ್ಲು ಗೂಟ ಮುಟ್ಬುಟ್ಟು। ನೀವು ಮಲೀಕಳಿ ಅಂತೇಳ್ಬುಟ್ಟು। ಆ ಮಾರಿ ಮಸಣಿ ದುರ್ಗೀರೆಲ್ಲಾ ಸೇರ್ಕಂಡು। ಮೂರು ತೊಂಬೆ ರಾಗೀನ। ಮೂರು ಒಳ್ಳಗೆ ತುಂಬಿ ಬಿಟ್ಟು ಬೀಸ್‌ಬುಟ್ಟು। ಮೂರು ತೊಂಬೆಗೆ ತುಂಬಿಬಿಟ್ಬುಟ್ರು। ಆಗ ನಮ್ಮಪ್ಪಾಜಿ ಬೆಳಗೆದ್ಬುಟ್ಟು। ಈ ಮಟ ನನಗೆ ಲಾಯಕ್ಕಾದಿಲ್ಲಾ ಅಂತೇಳ್ಬುಟ್ಟು। ಈ ಗುರು ನನಗೆ ತರವಾದವ್ರಲ್ಲಾ ಅಂತೇಳ್ಬುಟ್ಟು। ಆ ಗುರುಗಳ ಪಾದದ ಹತ್ತಿರ ನಿಂತ್ಕಂಡು। ಕಾಲಿಗೆ ನಮಸ್ಕಾರ ಮಾಡ್ಬುಟ್ಟು। ಸ್ವಾಮಿ ಗುರುಗಳೇ ಏಳ್ತೀನಿ ಕೇಳಿ ದಮ್ಮಯ್ಯ। ನಿಮ್ಮ ಮಟ ಸುಕ ಅಂತ ಬಂದ್ರೆ। ರಾಗಿ ತುಂಬಿ ಮಡ್ಗಿತ್ತು ಸ್ವಾಮಿ। ನಿಮ್ಮ ಮಟ ನನಗೆ ಲಾಯಕ್ಕಾದ್ದಲ್ಲಾ। ನೀವೂ ನಂಗೆ ಲಾಯಕ್ಕಾದವ್ರಲ್ಲಾ ಅಂತ ಏಳ್ಬುಟ್ಟು। ಹೋಗಿದ್ದು ಬರ್ತೀನಿ ಅಂತೇಳ್ಬುಟ್ಟು। ಅಲ್ಲಿ ಏನಂತ ಸಾಸನ ಕಲ್ಲು ಮಾಡ್ತಾರೆ। ಯಾರಾದ್ರೂ ಸುತ್ತೂರು ಮಠ ಸುಖ ಅಂತ ಬಂದ್ರೆ। ಸದಾ ಕುಕ್ಕೇಲಿ ರಾಗಿ ತುಂಬಿ ಮಡ್ಗಿರ್‍ಲಿ। ಅಂತೇಳ್ಬುಟ್ಟು ಸಾಸಣದ ಕಲ್ಲು ಮಾಡ್ಬುಟ್ಟು। ನಮ್ಮಪ್ಪಾಜಿಯವ್ರು।

ಅವ್ರು ಬದ್ನಾಳು ಮಟಕ್ಕೆ ಒಯ್ತಾವ್ರೆ ದೇವಾ
ಆ್ಲಾಂ... ನೋಡಿ ನಮ್ಮ ಸಿವನಾ<sup>ಒ</sup>

## ಬದನಾಳು ಮಠಕ್ಕೆ

ಬದನಾಳು ಮಟದಲ್ಲೂ! ಅದೇ ರೀತಿ ಬಿಕ್ಸ ಸಾರಿಬಿಟ್ರು! ಆ ಮಟದ ಗುರುಗಳು ಬಂದು ಕೇಳಿದಂತ ಕಾಲದಲ್ಲಿ! ಬದನಾಳು ಮಟದ ಗುರುಗಳು! ಅದೇ ರೀತಿ ಉತ್ತರ ಕೊಟ್ರು! ಆಗ ಬದನಾಳು ಮಟದ! ಗುರುಗಳು ಏನೇಳ್ತಾರೆ ಅಂತೇಳಿದ್ರೆ! ಏನಯ್ಯಾ ನನ್ನ ಮಟದಲ್ಲಿ ಯಾವುದು ಕೆಲಸ ಕಾಲಿ ಇಲ್ಲ! ಒಂದು ಕೆಲಸ ಕಾಲಿ ಅದ! ಯಾವ ಕೆಲಸದಾ ಸ್ವಾಮಿ ಅಂತ ಕೇಳಿದ! ಬದ್ನೆ ಗಿಡ್ಗಳತ್ರ ನಿಲ್ಲಿಸ್ಕಂಡು! ಈ ಬದ್ನಗಿಡಕ್ಕೆಲ್ಲಾ ನೀನು ಅರಕುಂಡಿ ಚಡ್ಡಿ ಚಲ್ಲಣ ದರಿಸ್ಕಂಡು ಕೈಲಿ ಗುಂಟ ಹಿಡ್ಕಂಡು. ಈ ಬದ್ನೇ ಗಿಡಕ್ಕೆ ನೀರಾಕಿದ್ದೇ ಆದ್ರೆ! ನಿನ್ನ ಇದ್ದ ಬುದ್ದಿ ಯೇಳ್ತೀನಿ ಅಂತ ಏಳ್‌ಬುಟ್ರು! ಆಗ ಆಲೋಚನೆ ಮಾಡಿದ! ಸುತ್ತೂರು ಮಟ ಸುಕ ಅಂತ ಓದೆ! ಕುಕ್ಕೇಲಿ ರಾಗಿ ತುಂಬಿ ಮಡ್ಗಿತ್ತು! ಬದನಾಳು ಮಠಕ್ಕ ಬಂದ್ರೆ! ಗುರುಗಳು ಈಗೇಳ್ತಾವ್ರಲ್ಲಾ! ಈ ಗುರುಗಳ ಮಾತ್ನು ಮೀರಬಾರ್ದದ್ದಲ್ಲ ಅಂತೇಳ್ಬುಟ್ಟು! ಆಗ್ಲಿ ಹೋಗಿ ಬುದ್ದಿ ಅಂತ ಏಳ್ಬುಟ್ಟು! ನಮ್ಮಪ್ಪಾಜಿ ಮಾದಪ್ಪನವರು! ಅರಕುಂಡಿ ಚಡ್ಡಿ ಚಲ್ಲಣ ದರಿಸ್ಕಂಡು! ನಡುತೋಟದಲ್ಲಿ ನಿಂತ್ಕಂಡು! ಗೊಂಬೆ ಇಡ್ಕಂಡು ಏನಂತ ಕೇಳ್ತಾನೆ!

ಗಂಗಾ ದೇವಿನಾ ಕೈ ಬೀಸಿ ಕರೆದವ್ನೆ! ಮಾದೇವಾ
ಹ್ಲಾಂ... ನೋಡಿ ನಮ್ಮ ಸಿವನಾ

ಗಂಗಾಬವಾನಿ ಬಾ ಅಂತ! ಕೈ ಬೀಸಿ ಕರೆದಂತಾ ಕಾಲದಲ್ಲಿ! ಬಂದು ತುಂಬೋಗ್ಬುಡ್ತು! ನಮ್ಮಪ್ಪಾಜಿಯವರು! ಇನ್ನು ಈ ಮಟವೂ ನನಗೆ! ಲಾಯಕ್ ಆದ್ದಲ್ಲ ಅಂತ ಹೇಳ್ಬುಟ್ಟು! ಈ ಗುರುಗಳು ನನಗೆ ತರವಾದವ್ರಲ್ಲ ಅಂತೇಳ್ಬುಟ್ಟು! ಗುರುಗಳಿಗೆ ನಮಸ್ಕಾರ ಮಾಡ್ಬುಟ್ಟು! ಸ್ವಾಮಿ ನಿಮ್ಮ ಮಟ ನಮಗೆ ಒಳ್ಳೇದಲ್ಲ! ನಾವೋಗಿದ್ದು ಬರ್ತೀನಿ ಸ್ವಾಮಿ! ಅಂತವರು ನಮಸ್ಕಾರ ಮಾಡ್ಬುಟ್ಟು! ಬದನಾಳು ಮಠ ಬಿಟ್ಟು ಈಚೆಗೆ ಬಂದು! ಬಿಟ್ಟು ಆ ಮಟಕ್ಕೆ ಏನಂತ ಸಾಪ ಕೊಡ್ತಾರೆ! ಈ ಬದ್ನಾಳ ಮಟ ನನಗೆ ಲಾಯಕ್ ಆದ್ದಲ್ಲ! ಗುರುಗಳು ತರವಾದವಲ್ಲ! ಈ ಬದ್ನಾಳು ಮಟದಲ್ಲಿ ಹಾಕಿದ ಬದ್ನೆ! ಎಲ್ಲಾ ಗೊಡ್ಡು ಬದ್ನೆ ಆಗ್ಲಿ ಅಂತ ಏಳಿ ಸಾಪ ಕೊಟ್ಬುಟ್ಟು!

ಅವರು ವಾಟಾಳು ಮಟಕ್ಕೆ ಪೋಯ್ತವ್ರೆ! ಮಾದೇವಾ
ಹ್ಲಾಂ... ನೋಡಿ ನಮ್ಮ ಸಿವನಾ<sup>ಒ</sup>

## ವಾಟಾಳು ಮಠಕ್ಕೆ

ವಾಟಾಳು ಮಟಕ್ಕೋಗಿ! ಅದೇ ತರವಾಗಿ ಕೂಗಿದಂತ ಕಾಲದಲ್ಲಿ! ಸ್ವಾಮಿ ಅನ್ನ ವುಂಡು ಒಂಬತ್ತು ದಿನವಾಯ್ತು ದಮ್ಮಯ್ಯ! ನನಗೆ ಹೊಟ್ಟೆ ಬಾಳ ಹಸಿವಾಗುತ್ತೆ ಅಂತ

ಹೇಳಿದ್ರಂತೆ! ಆವಾಗ ವಾಟಾಳು ಮಟದ ಗುರುಗಳು ಏನೇಳ್ತಾರೆ! ಅಯ್ಯಾ ನನ್ನ ಮಟದಲ್ಲಿ ಯಾವ ಕೆಲಸವೂ ಕಾಲಿ ಇಲ್ಲ! ಆದ್ರೆ ನಾನು ಅನ್ನ ಉಂಡು ಒಂಬತ್ತು ದಿನವಾಯ್ತು! ಅಂದದ್ದಕ್ಕೆ ಬಾ ಅಂತನ್ಸುಟ್ಟು ಒಳಕ್ಕೆ ಕರ್ಕಂಡೋಗ್ಬುಟ್ಟು! ವಾಟಾಳ ಮಟದಲ್ಲಿ ಏನಪ್ಪಾ ಪದ್ಧತಿ ಅಂದ್ರೆ! ಯಾರೇ ಹೋಗ್ಲಿ ಕುಡಿವಷ್ಟು ಅಂಬಲಿ! ತಿನ್ನುವಷ್ಟು ತುಂಬೆ ಸೊಪ್ಪು ಕೊಡೋದು! ಆವಾಗ ಅಡಿಗೆ ಬಂಡಾರಿಯನ್ನು ಕರೆದುಬಿಟ್ಟು! ನೋಡಯ್ಯಾ ಈ ಮಟದ ಅನ್ನ ಉಂಡು ಒಂಬತ್ತು ದಿನ ಆಯ್ತಂತೆ! ಇವನಿಗೆ ತಿನ್ನುವಷ್ಟು ತುಂಬೆ ಸೊಪ್ಪು! ಹೊಟ್ಟೆ ತುಂಬುವಷ್ಟು ಅಂಬಲಿ ಕೊಡು ಅಂತ ಹೇಳಿದ್ರು! ವಾಟಾಳು ಮಟದ ಸ್ವಾಮಿಗಳು! ಆಗ ಅಡಿಗೆ ಬಂಡಾರಿ ಒಳಗೆ ಕರ್ಕಂಡೋಗ್ಬುಟ್ಟು! ಕುಡಿವಷ್ಟು ಅಂಬಲಿ ಕೊಟ್ಟ! ತಿನ್ನುವಷ್ಟು ತುಂಬೆಸೊಪ್ಪು ಕೊಟ್ಟ! ಅದನ್ನ ಆನಂದದಿಂದ ತಿಂದುಬುಟ್ಟು! ಆನಂದದಿಂದ ಕುಡಿದು ಬುಟ್ಟು! ನಮ್ಮಪ್ಪಾಜಿ ಮಾದಪ್ಪನವರು ಬಂದುಬಿಟ್ರು! ಸ್ವಾಮಿ ಗುರುಗಳನ್ನು ಅಸ್ಟು ಹೊಟ್ಟೆ ಹಸಿದು ಬಂದು ಕೇಳಿದ್ದಕ್ಕೆ! ನಿಮ್ಮ ವಾಟಾಳು ಮಟದಲ್ಲಿ ಈ ಅಂಬಲಿ ತುಂಬೇ ಸೊಪ್ಪು ಅಂತಕ್ಕದ್ದು! ಇನ್ನು ಮೇಲೆ ತುಪ್ಪ ಅನ್ನ ಆಗ್ಲಿ ಅಂತ ಹೇಳ್ಬುಟ್ಟು! ಸಾಪ ಕೊಟ್ಟುಬುಟ್ಟು ಅಲ್ಲಿಂದ ನಮ್ಮಪ್ಪಾಜಿ ಮಾದಪ್ಪನವರು

ಅಲ್ಲಿಂದಾಚೆಗೆ ಅವರು ಕುಂತೂರು ಮಟಕ್ಕೆ ಒಯ್ತಾವ್ರೆ! ಮಾದೇವ
ಪ್ಪಾ... ನೋಡಿ ನಮ್ಮ ಶಿವನಾ"

## ಕುಂತೂರು ಮಠಕ್ಕೆ

ತಂದನಾ ತಾನ ತಾನಂದನೋ ತಾನಾ!
ಹರಹರ ಶಿವಶಿವ ಏಳ್ಮಲೆ ಹೆತ್ತಯ್ಯ!

ಕುಂತೂರು ಮಠಕೆ ಬರುತಾರೆ! ಕುಂತೂರು ಮಠದ ಗುರುಗಳ ನಿಜ ದುಡವ ನೋಡಕೆ ಬಂದನಲ್ಲೊ ಮಾದೇವ! ಏನಾದರೊಂದು ಚಾಕರಿ ಕೊಟ್ಟು ಇದ್ಯಾ ಬುದ್ಧಿ ಕೊಡಿ ಗುರುವೆ! ಯಾವ ಇದ್ಯಾವ ಕಲಿಯಲೇಕಯ್ಯ ಯಾವ ಬುದ್ಧಿ ಕಲೀತಿಯೆ! ಇದ್ಯಾ ಎಂದರೆ ಅಂತಿಂತೆದಲ್ಲ! ಬುದ್ಧಿಯ ಕಲಿಸಿ ಗಮಗಳೆ! ಹಿರಿಸೊಸೆಗೆ ಹಿಂದು ಗಾಳಿಯ ಹಿಡಿಸುವ ಇದ್ಯೆ ಕಲಿಸಯ್ಯ! ಹಿರೀ ಮಗ್ನಿನಿಗೆ ಹುಚ್ಚು ಬರಿಸುವ! ಇದ್ಯವ ನನಗೆ ಕಲಿಸಯ್ಯಾ! ಮದ್ದಕ್ಕಿದೋರು ಸಿಸುಗಳ ಕೊಲ್ಲುವ! ಇದ್ಯವ ನನಗೆ ಕಲಿಸಯ್ಯ! ಹಿಂದು ಗಾಳಿಗೆ ಗಂಡ ಇದ್ಯವ ನನಗೆ ಕಲಿಸಯ್ಯ! ಬೇಕು ಅಂದಾಗೆಲ್ಲ ಬೇಕಾದ ಭಾಗ್ಯ! ಬರುವಂತ ಇದ್ಯೆ ಕಲಿಸಯ್ಯ! ಹುಲಿಯೇ ಕಲ್ಲಾಗೋ! ಕಲ್ಲೇ ಹುಲಿಯಾಗೋ ಇದ್ಯವ ಕಲಿಸಯ್ಯ! ಬೇಡಿದೋರೆಲ್ಲ ಭಾಗ್ಯವ ಕೊಡುವ! ಇದ್ಯವ ಕಲಿಸಯ್ಯ!

ಮಲೆಯ ಹುಲಿವಾನ ಮೆರವಾ ಚಂದವೋ
ನೋಡಿ ನಮ್ಮ ಶಿವನಾ!!

ಕುಂತೂರು ಮಠದ ಪ್ರಭುಲಿಂಗಪ್ಪನವರು। ನಮ್ಮಪ್ಪಾಜಿಗೆ ಕೊರುಳುಗೆ ಲಿಂಗಧಾರಣೆ ಮಾಡಿ। ಮರುದೇವ್ರೆ ಜೋಳುಗೆ ತಕ್ಕಳಪ್ಪ ಅಂತ್ಹೇಳಿ ಜೋಳಿಗೆಯನ್ನು ಕೊಟ್ಟಂತೆ। ನಮ್ಮ ಸ್ವಾಮಿಯವರು ಜೋಳಿಗೆ ಕಂಕ್ಳುಗೆ ಸಿಗೀಸ್ಕೊಂಡು। ಕೊಕ್ಕೆ ದಡಿ ಕೈಲಿಡ್ಕೊಂಡು। ಏಳು ಜನ ಹೂವಿನ ಚಿಟುಗ್ರ ಜೊತೇಲಿ। ಅಯ್ಯಾ ಹುಡುಗ್ರೆ ಮರಿದೇವ್ರು ನಮ್ಮಾರ ಮನೆಗೆ ಹೊಸಬ ಕಣ್ರಪ್ಪ। ನೋಡಿ ಅವನಿಗೆ ಕಾಡುಗೊತ್ತಿಲ್ಲ ಮೇಡುಗೊತ್ತಿಲ್ಲ। ಬುದ್ಧಿಯಿಂದ ಕಾಡ್ಗೆ ಹುವ್ವಗೆ ಕರುಕೊಂಡೋಗ್ಬೇಕು। ಮಠ ಮನೆ ಹತ್ತಿರಕೆ ತಂದು ಬುಡಬೇಕು। ಗುರುವೇ ಅಂಗೇ ಆಕಳ್ಳಿ ಅಂತ್ಹೇಳಿ। ಹುಡುಗ್ರೆಲ್ಲಾ ಯಾವಾಗ ಮರಿದೇವ್ರ ಜೊತೇಲಿ ಕರಕೊಂಡು। ಮಠ ಮನೆಯಿಂದೀಚಗೆ ಬಂದ್ರೋ। ಕುಂತೂರು ಮಠದ ಪ್ರಭುಸ್ವಾಮಿಯವರು। ಅಯ್ಯಾ ಹುಡುಗ್ರೆ ಬನ್ರಪ್ಪ ಸ್ವಲ್ಪ ಅಂದ್ರಂತೆ। ಗುರುವೇ ಯಾತುಕ್ ಸ್ವಾಮಿ ಅಂತ ಹುಡುಗ್ರು ಕೇಳಿದ್ರು। ಅಯ್ಯಾ ಹುಡುಗ್ರೆ। ಮೂಡ್ಲ-ಗಿಡೀಗೋಗಿ ಪಡುವಲ್ ಗಿಡಿಗೋಗಿ। ಬೇಕಾದ್ರೆ ತೆಂಕಲು ಗಿಡೀಗೂ ಹೋಗ್ರಪ್ಪ। ಬಡಗಲು ಗಿಡೀಗೆ ಮಾತ್ರ ಹೋಗಬೇಡಿ ಅಂದ್ರು। ಗುರುಗಳಾಡಿದ ಮಾತು ಕೇಳಿ। ನಮ್ಮಪ್ಪಾಜಿ ಮಾದೇವ ಮನಸ್ಸಿನಲ್ಲಿ ಮಡೀಕಂಡ್ರು। ಇದೇನು ಗುರುಗಳು ಹುಡುಗ್ರನ್ನ ಕರುದಿ। ಯಾವ ದಿಕ್ಕಿಗೋದ್ರು ಬಡಗ್ಲು ಮಾತ್ರ ಹೋಗಬೇಡಿ ಅಂದರಲ್ಲ। ಬಡಗ್ಲು ದಿಕ್ನಲ್ಲಿ ಏನೈತೋ ಕಾಣ್ನಲ್ಲ। ನಾನು ಪರಿಸೋದ್ನೆ ಮಾಡ್ಬೇಕು ಅಂತ್ಹೇಳಿ। ಗುರುಗಳಾಡಿದ ಮಾತ ನಮ್ಮಪ್ಪಾಜಿ ಹೊಟ್ಟೆ ಒಳುಗೆ ತುಂಬ್ಕೊಂಡು। ಹೂವಿನ ಪುಟ್ಟಿ ರೊಕ್ಕ. ದೊಣ್ಣೆ ಕೈಲಿಟ್ಕೊಂಡು। ಮಠ ಬುಟ್ಟು ಈಚಿಗೆ ಬಂದ್ರಂತೆ। ಊರಿಂದಾಚೆ ಒಂದು ಕನ್ನವಂತೆ। ಎಡುಕೆ ಕಾಲಾಕುದ್ರೂ ಮುಳ್ಳಂತೆ। ಬಲಕೆ ಕಾಲಾಕುದ್ರೂ ಮುಳ್ಳಂತೆ। ಹುಡುಗ್ರೆಲ್ಲ ಕನ್ನ ದಾಟ್ಕೊಂಡು ಹೋಗ್ಬುಟ್ರು। ನಮ್ಮ ಸ್ವಾಮಿಯವರೊಬ್ರೆ ನಿಂತಿದ್ದಾರೆ। ಏನಯ್ಯಾ ಮರುದೇವ್ರೆ ಸುಮ್ನೆ ನಿಂತ್ಬುಟ್ಟೆ। ನೋಡಪ್ಪ ಎಡುಕೆ ಕಾಲಾಕುದ್ರೂ ಮುಳ್ಳೈತೆ। ಬಲುಕ್ಕೆ ಕಾಲಾಕುದ್ರೂ ಮುಳ್ಳೈತೆ। ಬಾಳ ಹಸುಮ ದಾರಿಯಿಂದ ಬರ್ಬೇಕು। ಅಂತ ಹುಡುಗ್ರೆಲ್ಲ ಹೇಳ್ತಾ ಇದ್ರೆ ನಮ್ಮಪ್ಪಾಜಿ ಏಳ್ಮಲೆ ಹುಲಿ ವಾಹನದಯ್ಯಾ। ಕುಂತೂರು ಮಠದ ಪ್ರಭುಲಿಂಗ ಸ್ವಾಮ್ಗಳು। ಯಾವ ದಿಕ್ಕಿಗೋದ್ರೂ ಬಡುಗ್ಲಗೋಗಬೇಡ ಅಂದವ್ರೆ। ಬಡಗ್ಲು ಗಿಡೀಲೇನೈತೆ ಅನ್ನೋದ ಕಣ್ಣಾರೆ ನೋಡ್ಬೇಕು। ಅದಕ್ಕಾಗಿ ಹುಡುಗ್ರಿಂದ ತಪ್ಪಿಸ್ಕೊಳ್ಬೇಕು ಅಂತ್ಹೇಳಿ। ನಮ್ಮಪ್ಪಾಜಿ ಮಾಯ್ಕಾರ ಮುದ್ದು ಮಾದೇವ-

ಮುಳ್ಳುನ್ಮೇಲೆ ಪಾದವೂರವ್ರೆ ಮಾದೇವ<br>
ನೋಡಿ ನಮ್ಮ ಶಿವನಾ।

ಮುಳ್ಳುನ ಮೇಲೆ ಪಾದವನ್ನೂರಿಭದ್ರಗಿ ಮೆಟ್ಟುದ್ರಂತೆ। ಮುಳ್ಳು ಅಂಗಾಲ್ಗೆ ನಾಟ್ಕೊಂಡು ಈಚೋರಿಕೆ ಹಾಯ್ಕೊಂಡ್ಬತ್ತಂತೆ। ಅಯ್ಯೋ ಶಿವನೆ ರಕ್ತ ಜಲುಜಲನೆ ಹರೀತಂತೆ। ನಮ್ಮ ಸ್ವಾಮಿಯವರು 'ಲಬಾಲಬ್ನೆ' ಬಾಯನ್ ಬಡ್ಕೊಂಡು। ಕೆಳೀಕ್ಕೆರಪ್ಪಂತೆ ಬಿದ್ಬುಟ್ರಂತೆ। ಹುಡುಗ್ರೆಲ್ಲ ಹಿಂದುಕ್ಕೋಡ್ತಯ ಕೈ ಟಾಕ್ನಲ್ಲಿ। ನಮ್ಮ ಸ್ವಾಮಿಯವರ ಹಿಡುಕೊಂಡು। ಆಲದ ಮರವಂತೆ ಆಲದ ಮರದ ನೆಳ್ಗೆ। ಹುಡುಗ್ರೆಲ್ಲ ತಂದು

ಮನುಗುಸುದ್ರಂತೆ। ನಮ್ಮ ಸ್ವಾಮಿಯವರು ನೋವು ತಡೀನಾರ್ದದವರಂಗೆ। ಬಾಯಿ ಬಾಯಿ ಬಡುಕೊತಾ ಇರೋರಂತೆ। ಹುಡುಗ್ರೆಲ್ಲ ಮುಳ್ಳು ತೆಗೀರಪ್ಪಾ ಅಂತ ಹೇಳಿದ್ರು। ಅಯ್ಯಾ ಮರುದೇವ್ರೆ। ಮುಳ್ಳಿನ ಹಾದಿ ಬುದ್ಧಿಯಿಂದ ಬಾರಪ್ಪ ಅಂತ। ಬರುವಾಗ್ಲೆ ನಾವು ಹೇಳುದುವಲ್ಲಪ್ಪ। ಈ ಮುಳ್ಳು ಅಂಗಾಲ್ಗೆ ನಾಟ್ಕೊಂಡು ಮುರುಕೊಂಡರೆ। ಈ ಮುಳ್ಳ ನಮ್ಮ ಕೈನಿಂದ ಮಾತ್ರ ತೆಗಿಯಕಾಗಕಿಲ್ಲ। ನಿಮ್ಮನ್ನು ಮಠಕ್ಕೆ ಕರಕೊಂಡೋಗಿ। ಗುರುಗಳ ಕೈಲಿ ಮುಳ್ಳನ್ನ ತೆಗಸ್ಬೇಕಪ್ಪಾ। ಈಗ ಇಲ್ಲಿ ನಾವೇನು ತಪ್ಪು ಮಾಡಲ್ವಪ್ಪ ಮರುದೇವ್ರೆ ನೀನಿಲ್ಲೆ ಮಸಗಿರು। ನಾವೆಲ್ಲ ಹೋಗಿ ಹೂವ್ಕುಯ್ಕೊಂಡು ಬತ್ತಿವಿ। ನಾವು ಕುಯ್ಕೊಂಡ್ವಂದ ಹೂವ್ನಲ್ಲಿ। ಎಲ್ರೂ ಒಂದೊಂದಿಡಿ ಹೂವು ಕೊಡ್ತೀವಪ್ಪಾ। ಇದ್ರಿಂದ ನಿನ್ಗೆ ನಿನ್ನ ಹೊಟ್ಟೆ ಯಾಪ್ತಿ ಕಳ್ಕೊಯ್ತದೆ। ಹುಡುಗರ ಮಾತನ್ನು ಕೇಳಿ ನನ್ನ ಸ್ವಾಮಿಯವರು। ಹಂಗಾದ್ರೆ ಹೋಗಿದ್ದು ಬನ್ರಪ್ಪ ಅಂದಿದ್ದಾರೆ। ಹುಡುಗ್ರೆಲ್ಲ ಒಂದ್ಮರ ಎರಡ್ಮರ ಮರೆಯಾಗೋಗಂಟ। ನಮ್ಮಪ್ಪಾಜಿ ನಳ್ಳುತ್ತಾ ನಸುಗ್ತಾ। ಕುಂತ್ತ ಕುಸುರ್ತಾ। ಮನಗಿದ್ದರಂತೆ। ಹುಡುಗೆಲ್ಲಾ ಐದನೆ ಮರ ಮರೆಯಾದೇಟ್ಗೆ। ನಮ್ಮ ಸ್ವಾಮಿಯವರು ಎದ್ದಿ ಧಡಾರ್ ಅಂತ ಕೂತ್ಕಂಡ್ರು। ಎಡಗೈಲಿ ಮುಳ್ಳಿರಿದು ಬೀಸಾಕ್ಬುಟ್ಟು ಬಡಗಲ ಗಿಡೀಗೆ।

ಅವ್ರ ಬಿದ್ದು ವಾಟ ಹೋಡಿತವ್ರೆ ಮಾದೇವ।
ನೋಡಿ ನಮ್ಮ ಶಿವನಾ।

ಅಲ್ಲೊಂದು ಕೆಂಜಾಳ ಗುತ್ತಿಯಂತೆ। ಕೆಂಜಾಳಗುತ್ತಿ ಒಳುಗೆ ಹನ್ನೆರಡೆಜ್ಜೆ ಹೆಬ್ಬುಲಿ। ಇದೇ ನಮ್ಮಪ್ಪಾಜಿ ಮಾದೇಶ್ವರ ಅನೋದು ಗೊತ್ತಾಗ್ದೆ ಹುಲಿ। ಯಾವನೋ ಜಂಗಮ ಬತ್ತಿದ್ದಾನೆ। ನನಗೆ ಯಾವಾಗ್ಲೂ ಹೊತ್ನಂತೆ ಅರಿವೇ ಇರ್ತಿರ್ನಿಲ್ಲ। ಈ ಜಂಗಮನ್ನ ತಿಂದು ತೇಗ್ಬುಡ್ಬೇಕು ಅಂತ್ಹೇಳಿ। ಹನ್ನೆರಡೆಜ್ಜೆ ಕಂಬರಗ ನಮ್ಮ ಸ್ವಾಮಿನ।

ತಿನ್ನಕೆ ಬತ್ತರೆ ಹುಲಿರಾಜ
ನೋಡಿ ನಮ್ಮ ಶಿವನಾ।

ಗುಡ್ಡುಡ್ ಗಾತ್ರ ಕಣ್ಣು ಬಿಟ್ಕಂಡು। ಕೊಂಗದುದ್ದ ನಾಲ್ಗೆ ಬುಟ್ಕೊಂಡು। ಕೊಳದಗ್ಲ ಬಾಯ್ ಬುಡ್ಕಂಡು ಬೆನ್ನುನ ಮ್ಯಾಲೆ ಬಾಲವನ್ನು ಬಡೀತಾ। ನಮ್ಮಪ್ಪಾಜಿಯವರು ಸುಂಗಕ್ಕೆ ಬತ್ತಿತ್ತಂತೆ। ನಮ್ಮ ಸ್ವಾಮಿಯವರು ನೋಡಿದ್ರು। ಹನ್ನೆರಡೆಜ್ಜೆ ಕೆಂಬರ್ಗ ತಿನ್ನಕೆ ಯಾವಾಗ ಬತ್ತೊ। ಮಾದಪ್ಪ ಕೈಲಿ ಕೊಕ್ಕೆ ದಡೀ ಹಿಡಿದಿದ್ರಲ್ಲ। ಹನ್ನೆರಡೆಜ್ಜೆ ಕೆಂಬರಗನ ಬೆನ್ನುನ ಮ್ಯಾಲೆ।

ಅವರು ಮೂರೆಳ್ತ ಎಳುದವರೆ ಮಾದೇವ।
ನೋಡಿ ನಮ್ಮ ಶಿವನಾ।

ನಮ್ಮ ಸ್ವಾಮಿಯವರು ಹುಲಿ ನೋಡ್ಬುಟ್ಟು। ಕೆಂಜುರ್ ಗಣ ಬಿಟ್ಟಿದ್ದಾರೆ। ನೊರಾ ಸೊರ್ಲೆಹಲ್ ಕಡುದ್ರಂತೆ। ಅಲ್ಲವಾ ಬರುಗ್ನೆ। ಹಿಂಗೆ ನೀನು ಎಷ್ಟು ಜನ ತಿಂದಿರ್ಬೋದು। ನಿನಗೆ ಇಷ್ಟು ದೊರೆತನ ಕೊಟ್ಟವರ್ಯಾರು। ಅಂತೇಳ್ಬುಟ್ಟು ನಮ್ಮ ಸ್ವಾಮಿಯವರು।

ಕೋಪ ತಾಳ್ತ ನಿಂತವರೆ ಮಾದೇವ
ನೋಡಿ ನಮ್ಮ ಶಿವನಾ।

ಹನ್ನೆರಡೆಜ್ಜೆ। ಕೆಂಬುರ್ಗ ನಮ್ಮ ಸ್ವಾಮಿಯವರ ನೋಡಿ। ಮಾತಾಡ್ದೆ ಗಡಾ ಗಡ್ಡೆ ನಡುಗ್ತ ಇತ್ತಂತೆ। ಕುಂತೂರು ಮಠದ ಪ್ರಭುಲಿಂಗಪ್ಪನವರು ನನ್ಗೆ। ಹನ್ನೆರಡೆಜ್ಜೆ ಕೆಂಬುರುಗನ ಮೇಲೆ ಕೂತ್ಕಂಡು। ಸವಾರಿ ಮಾಡಕ್ಕೆ। ಅವರೇ ಒಂದ್ಕುಲಿ ಕೊಟ್ಟಂಗಾಯ್ತು ಅಂತ್ಹೇಳಿ। ಮಾದಪ್ಪ ಬಂದ ಒಂದ ಕಬ್ಬಿ ಹಂಬ ಕಿತ್ಕೊಂಡು। ಕಡುವಾಣವನ್ನು ಹೊಡ್ಕೊಂಡು ಹನ್ನೆರಡೆಜ್ಜೆ ಕೆಂಬುರಗನ ಮೇಲೆ ಕೂತ್ಕಂಡು। ಹೊತ್ತು ಸಂದೆ ಬೀಳೋಗಂಟ।

ಸವಾರಿ ಮಾಡ್ತಾ ಕುಂತವರೆ ಮಾದೇವ
ನೋಡಿ ನಮ್ಮ ಶಿವನಾ।

ಹೊತ್ತು ಸಂದೇ ಬಿದ್ಹೋಗ್ಬುಡ್ತಂತೆ। ಅಪ್ಪ ಬರುಗನೆ ಈವೊತ್ತಿನ ಸವಾರಿ ಸಾಕು। ನೀನು ಕೆಂಜಾಳ ಗುತ್ತಿಗೋಗಪ್ಪ ಅಂದ್ಬುಟ್ಟು। ಕೆಂಜಾಳ ಗುತ್ತಿಗೆ ಹುಲಿನ ಕಳಿಸ್ಬುಟ್ಟು। ನಮ್ಮಪ್ಪಾಜಿ ಮಾದೇವ ಒಬ್ಬೇ ಕಡೀಕೋದ್ರಂತೆ। ತುಂಡಗೋಲ ತಕ್ಕೊಂಡು ಒಬ್ಬೆ ಒಬ್ಬೆಗೋಗಿ। ಹಾವು ಚೇಳು ಹಲ್ಲಿ ಪಲ್ಲಿ ಗೊದ್ದೆ ಗೋಸಂಬಿ, ಹಾವ್ರಾಣಿ ಹುಂಟೆಗೊದ್ದ ಎಲ್ಲನೂ ಹೊಡೆದು। ಜೋಳ್ಗೆ ತುಂಬ್ಕೊಂಡು। ಪ್ರಭುಸ್ವಾಮಿಗಳು ಸ್ನಾನ ಮಾಡಿ ನೀರು ಬಂದು ತಿಪ್ಪಾ ಹಳ್ಳದಲ್ಲಿ ನಿಂತಿತ್ತು। ಆ ಹಳ್ಳಕ್ಕೆ ಮೂರು ಸಲ ಅಜ್ಜೆ ಮೂರ್ಲಲ ಎತ್ತಿ। ತಾಯಿ ಉತ್ರಾಜಮ್ಮ. ತಂದೆ ಕಲ್ಯಾಣ ದೇವರೆ। ಕುಂತೂರು ಮಠದ ಪ್ರಭುಲಿಂಗ ಸ್ವಾಮ್ಗಳ್ಗೆ। ನಿಮ್ಮ ಪಾದ್ವೇ ಗತಿ ಅಂತ ಹೇಳಿದ್ರಂತೆ। ಮರುಗ ಮಲ್ಲಿಗೆ ಸುರಗಿ ಸಾವಂತಿಕೆ, ನಂದವಾಳ, ನಾಗಸಂಪ್ಗೆ। ಜಾತಿಗೊಂದು ಬಗೆ ಪುಷ್ಪ ಆಗೋಗ್ಬುಟ್ಟೋ। ನಮ್ಮ ಸ್ವಾಮಿಯವರು ನೆಗ್ ನೆಗ್ತಾ।

ಮಡಕೆ ಬಂದವನಲ್ಲಪ್ಪ ಮಾದೇವ।
ನೋಡೆ ನಮ್ಮ ಶಿವನಾ।[೮]

"ಸಂಜೆವೊಳಗೆ ಐದು ಜನ ಚಿಟಗರು। ಹೂವು ತಂದ್ಬುಟ್ರಲ್ಲಾ ಗುರುವೇ। ಪಟ್ಟೇ ವಸ್ತ್ರವನ್ನೇ ಹಾಸ್ಬಿಟ್ಟು। ತಮ್ಮ ಹೂವನೇ ಸುರುದ್ರಲ್ಲಾ ಗುರುವೇ। ಈ ಹೊಸ ಚಿಟಗರ್ನ ಕರ್ಕೊಂಡೋಗಿ। ತೋರಿದ್ದೇ ಉಂಟಾದ್ರೆ। ನಮಗೆ ಹೂವನ್ನೇ ಬಿಡೊಲ್ಲ ಒಯ್ತಾನೆ। ಇವನಿಗೆ ಕಾಣ್ದಂಗೆ ಓಗಿ ಕುಯ್ಕಂಡು ಬರಬೇಕು। ಅಂತೇಳಿ ಐದು ಜನ ಚಿಟಗ್ರೂವೇ। ಕೋಳಿ ಕೂಗ್ತೋಕ್ಕು ಮುಂಚೆ। ಎದ್ದು ಊಟ ಮಾಡಿಕೊಂಡು। ಬುತ್ತಿ ಬ್ಯಾರೆ ಕಟ್ಕಂಡು ಅವರು।

ಹೂವ ತರಕ್ಹೋಯ್ತಾರಲ್ಲೋ ಗುರುಗಳು
ಆಹಾ ನೋಡಿ ನಮ್ಮ ಶಿವನಾ

ಆಗ್ಲೀಗ ಅವರು ಕೋಳಿ ಕೂಗಕ್ಕೂ ಮೊದ್ಲೆ। ಎದ್ದು ಒಂಟೋಂದ್ರು ಅಂತೇಳಿ। ನಮ್ಮಪ್ಪ ಮಾಯಕಾರ ಮಾದೇವ। ಒತ್ತುಟ್ಟಗಂಟ ಮಲಗಿದ್ದು। ವತಾರೆ ಎದ್ದು ವೋಗಿ।

ಕಾಲುಕೈ ಮುಕ ತೊಳಕಂಡು। ಈಬೂತಿ ಕಟ್ಟಿಕ್ಕಂಡು। ಊಟ ಮಾಡ್ಬಿಟ್ರು ಹೂವಿನ ಕರಡಿಗೆ ಈಸ್ಕಂಡು

ಅವನು ಹೂವ ಕುಯ್ಕಂಡು ಬರೋಕೆ ಹೋಯ್ತಾನೆ
ಧೀರಾ ಮಾದಯ್ಯೋ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ದೀರ ಮಾದಯ್ಯ। ಹೂವು ಕುಯ್ಕಂಡು ಬರೋವಂತ ಕಾಲ್ದಲ್ಲಿ। ಹೊನ್ನರಳಿ ಮರದ ಮುಂದಕ್ಕೆ ಓಗಿ ಕೂತ್ಕಂಡ್ಬಪ್ಪಾ ಗುರುವೇ।[L]

ಹ್ಹಾಂ ನೋಡಿ ನಮ್ಮ ಸಿವನಾ
ಮಲೆಯ ಹುಲಿ ಮೇಲೆ ಹೋಗುವ ಚಂದಾವ
ನೋಡಿ ನಮ್ಮ ಸಿವನಾ।

ಆಗ ಕಲ್ಲೂರು ತೋಪಿನ ಪಕ್ಕ ಹೋದ್ನಂತೆ।[G] ಅಯ್ಯಾ ದನ ಕುರಿ ಆಡು ಕಾಯ ಮಕ್ಕಳು। ಮಟದೊಳಗೆ ಬಂದ್ರಪ್ಪಾ ಗುರುವೇ। ಬನ್ರಪ್ಪಾ ಚಂಡನಾಟ ಆಡುವ। ಗೋಲಿ ಆಟ ಆಡುವ। ಬುಗ್ರಿ ಬನ್ರೋ ಕಂದಗಳಿರಾ। ಅಂತೇಳಿ ಕರೆದರು ಗುರುವೇ। ಏನಪ್ಪಾ ನನ್ನ ಚಂಡನಾಟಕೆ, ಬುಗುರಿಯಾಟಕೆ ಕರೀತೀರಲ್ಲಾ। ಹುಲಿ ಕರಡಿ ತಿನ್ಕಂಡ್ರೆ ನಮ್ಮ ತಾಯಿ ತಂದೆ ಹತ್ತಿರ ಬೈಸಿಕಳಮ। ನಿಮ್ಮ ದನ ಮೇಯ್ಸಕೆ ಆಳು ಕೊಡ್ತೀನಿ। ಆಡು ಮೇಯ್ಸಕೆ ಆಳು ಕೊಡ್ತೀನಿ। ಕುರಿ ಮೇಯ್ಸಕೆ ಆಳು ಕೊಡ್ತೀನಿ।

ಚಂಡಿನಾಟ್ ಆಡೋಣ ಬನ್ರಪ್ಪಾ ನನಕಂದಗಳಿರಾ
ಆಹಾ... ನೋಡಿ ನಮ್ಮ ಸಿವನಾ

ಹೇಳ್ತೀನಿ ಕೇಳಯ್ಯಾ। ಚಂಡು ಬುಗ್ರಿಗೆ ಕರೀತಿಯಲ್ಲಾ। ನಮ್ಮಪ್ಪ ಅವ್ವಾರು। ಹೊಟ್ಟೆ ತುಂಬಾ ಮೇಯ್ದೆ ಹಾಲು ಕೊಡದೇ ಹೋದ್ರೆ ಅವರ ಕೈಲಿ ಒಡಿಸ್ಕಂಡಯಾ, ಬಡಿಸ್ಕಂಡಯಾ। ಬೈಸಿಕೊಂಡಯಾ, ಆನಿಸ್ಕಂಡಯಾ?

ಚೆಂಡಾಟ ಆಡಲು ಬರೋಲ್ಲಾ
ಅಂತಾರಲ್ಲೋ ಹುಡುಗಾರು
ಆಹಾ... ನೋಡಿ ನಮ್ಮ ಸಿವನಾ

ಇವತ್ತು ಇವರ ಬಂದಾನ ತಡ್ಕೊಕ್ಕಾಗೋದಿಲ್ಲ। ಜತೀಲಿ ಬೈದ್ರೂ ಬೈಲಿ। ಇವತ್ತು ಚಂಡಿನಾಟ ಆಡುವ ಅಂತೇಳಿ। ಮೂರು ಜನ ಹುಡುಗ್ರು ಬಂದ್ರಪ್ಪಾ। ಗುರುವೇ ಎಮ್ಮೆ ದನಕ್ಕೆ ಯಾರು ಕಳಿಸ್ತೀರಿ ಕಳೀಸಿ। ಸ್ವಾಮಿ ಮೇಯಿಸ್ತೀನಿ ಅಂತೇಳಿದ್ರಪ್ಪಾ ಗುರುವೇ। ಗುರುವೆ ಕರೆದು ಕೈಗೆ ದೊಣ್ಣೆ ಕೊಟ್ಟ। ಆಳನ್ನು ಕರೆದ ಕೈಗೆ ದೊಣ್ಣೆ ಕೊಟ್ಟ। ಕುರಿ ಒಡೆದ ಸ್ವಾಮಿ ಹೇಳ್ತೀನಿ ಕೇಳ್ರಪ್ಪಾ। ಗವಿ ಒಳಗೆ ಅಡವಿ ಒಳಗೆ। ಹೊಟ್ಟೆ ತುಂಬಾ ಮೇಯಿಸಿಕೊಂಡು ಬನ್ನಿರಂತ। ಕಾಡಿಗೆ ಕಳಸ್ಬುಟ್ಟು ಅವನು ಅಯ್ಯ।

ಚಂಡುಬುಗುರಿ ಹಿಡಿದು ನಿಂತವರಲ್ಲೋ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಯೇಳ್ತೀನಿ ಕೇಳ್ರಪ್ಪಾ। ಮೂರು ಜನ ಒಕ್ಕಡೆ ನಿಂತುಕೊಳ್ಳಿ। ನಾ ಒಬ್ನೆ ಒಕ್ಕಡೆ ನಿಂತ್ಕತೀನಿ। ಮೊದ್ಲಾಟ ನಂದುಕಣ್ರೋ ಕಂದಗಳಿರಾ। ಅಂತಾನೆ ಸ್ವಾಮಿ। ಆಗಲೀ ಸ್ವಾಮಿ ಅಂತೇಳಿ। ಚಂಡ್ನಾಟಕ್ಕೆ ನಿಂತ್ಕಂಡ್ಕಲಪ್ಪಾ ಗುರುವೇ ಅಯ್ಯಾ ಅರಳೀ ಮರದಂಡಲಿ। ಲಗ್ಗೆ ಒಡೆದುಬುಟ್ಟು। ಚಂಡು ಬುಗುಬುಗನೆ ತಿರುಗಿ ಬಿದ್ದೋಯ್ತಲ್ಲಪ್ಪಾ ಗುರುವೇ। ಚಂಡನ್ನು ಒಡಿತೀನಿ। ಹುಡೀಕಂಡು ಬರಾನಿ ಅಂತಾನೆ ಗುರುವೇ। ಆಗಲೀಗ ಲಗ್ಗೆ ತಕ್ಕಂಡು। ಚಂಡನ್ನ ಒಡೆಯಕ್ಕೆ ಗುರುವೇ।

> ಅಯ್ಯೊ ಚಂಡು ನನಗೆ ಗೊತ್ತಿಲ್ಲವಲ್ಲೋ ಮಾದಯ್ಯೋ
> ಆಹಾ ನೋಡಿ ನಮ್ಮ ಶಿವನಾ

ಹೇಳ್ತೀನಿ ಕೇಳ್ರಪ್ಪಾ ನನ್ನ ಕಂದಗಳಿರಾ। ಚಂಡನ್ನ ತಕ್ಕಂಡೋಗಿ ಹುಡಿಕೊಂಡು ಬನ್ರಪ್ಪಾ। ಅಂತೇಳಿದ್ದಲ್ಲೋ ಮಾದೇವ। ಆಗ ಸ್ವಾಮಿ ಚಂಡೋದ ನೆಲೆಯೇ ಗೊತ್ತಿಲ್ಲ। ಯಾವ ದಿಕ್ಕಿಗೋಯ್ತೋ। ಯಾವ ರಾಜ್ಯಕ್ಕೋಯ್ತೋ। ಅನ್ನೋದೇ ಗೊತ್ತಿಲ್ಲ ಗುರುವೇ।

> ನಾವು ಕಾಣೋ ಕಾಣೋ ಮಾದಯ್ಯೋ
> ಆಹಾ ನೋಡಿ ನಮ್ಮ ಶಿವನಾ

ಆಗಲೀಗ ನಮ್ಮಪ್ಪ ಮಾಯಕಾರ ಮಾದೇವ। ಅಂಚಿಕಡ್ಡಿ ತರ ಮಾಡ್ಬುಟ್ಟು। ಮೂರು ಜನಾನೂ ಕೂತ್ಕಂಡು।

> ಸ್ವಾಮಿ ಅಯ್ಯಾ ಚೆಂಡು ಬಿದ್ದಾ ನೆಲೆಗೋಗ್ತವನಲ್ಲಾ ದೀರ ಮಾದಯ್ಯೋ
> ಆಹಾ... ನೋಡಿ ನಮ್ಮ ಶಿವನಾ

ಆಗಲೀಗ ಗುಡಿಗಿಸ್ಕಂಡು ಬರುವಂತಾ ಕಾಲದಲ್ಲಿ। ಗುಡಿಕಂಡು ಬಂದುಸ್ವಾಮಿ ಬಿದ್ದೋಯ್ತಲ್ಲಿಗ್ಗೆ। ಕಲ್ಲು ನೆಡಿಸ್ಬುಟ್ರು ಸ್ವಾಮಿ। ನಾಳಕೆ ಗುಡಿಗಿ ಅಂತೇಳಿ। ಅದೇ ಅರಳೀ ಮರದ ತಾವ।

> ಬತ್ತಾನಲ್ಲೋ ದೀರಾ ಮಾದಯ್ಯಾ
> ಆಹಾ... ನೋಡಿ ನಮ್ಮ ಶಿವನಾ

ಆಗಲೀಗ ಮತ್ತೆ ಅಲ್ಲಿಗೆ ಬಂದು। ನಿಂತಂತ ಕಾಲ್ದಲ್ಲಿ। ಹುಲಿ, ಕರಡಿ, ತೋಳ, ದನ, ಕುರಿ ನೋಡ್ಕಂಬಂದು। ನಿಂತ್ರಪ್ಪ ಗುರುವೇ। ಬನ್ರಪ್ಪಾ ನನ್ನ ನಿಮ್ಮ ದನ। ಹೊಟ್ಟೆ ತುಂಬಾ ಮೇಯ್ತದೆ। ನಿಮ್ಮ ದನಗಳು ಸರಿಯಾಗಿದಾವ ನೋಡ್ಕಳ್ರಪ್ಪಾ। ಆಡು ನೋಡ್ಕಳ್ರಪ್ಪಾ ಅಂತೇಳ್ತಾರೆ। ಗುರುವೇ ಆಡು ಕುರಿಯೆಲ್ಲಾ ಚೆನ್ನಾಗಿದೆ ಸ್ವಾಮಿ। ಹೊಟ್ಟೆ ತುಂಬಾ ಮೇಯ್ತದೆ। ನೀವೆಲ್ಲಾ ಊರಿಗೆ ಹೋಗ್ರಪ್ಪಾ।

> ಅಂತೇಳಿ ಅವನು ಮತ್ತೇನು ಜಾನ ಮಾಡವರೇ
> ಆಹಾ... ನೋಡಿ ನಮ್ಮ ಶಿವನಾ

ಆಗಲೀಗ ನನ್ನಪ್ಪ ಮಾಯಕ್ಕಾರಗಂಡ| ಸಪ್ಪಟ ಸರಿರಾತ್ರಿಯಾಗೋಯ್ತಲ್ಲಾ ನಾವು| ಹೂವ ಎಲ್ಲಿ ಕುಯ್ಯಿನಿ ಅಂತೇಳ್ಬುಟ್ಟು ಗುರುವೇ| ಒಂದ ಮೊಳ ಗುದುಗೆ ಮುರುಕೊಂಡ| ಗೊದ್ದ ಗೋಸಂಬಿ ಅಂಟೇಗೊದ್ದ ಆ ಪ್ರಾಣ ಹೊಡಕೊಂಡು| ಎಕ್ಕದ ಸೊಪ್ಪು ಎಳೇಸೊಪ್ಪು| ಗುಳ್ಳೇ ಸೊಪ್ಪು ತುಂಬಿಕೊಂಡು| ತಿಪ್ಪೆ ಹಳ್ಳಕ್ಕೆ ಅಜ್ಜಿಕೊಂಡು ಗುರುವೇ|

ಅವನು ಹೂವ ತಕ್ಕಂಡು ಒಯ್ತಾನೆ ದೀರಾ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ದೀರ ಮಾದಯ್ಯ| ಹೂವು ತಕ್ಕೋ ಅಂತ ಕಾಲದಲ್ಲಿ| ಚಿಟಗರು ಮುಂದೆ ಹೋದರು| ಹೊಸ ಚಿಟುಗರು ಬಂದ್ರು| ಏನೋ ಮುಂಡೆ ಮಕ್ಕಳಿರಾ| ನನ್ನ ಮನೆ ಸಂಬಳ ತಿಂತೀರಿ| ಮುಂಡೆ ಮಕ್ಕಳಿರಾ| ಈ ಹೊಸ ಚಿಟಿಕಾ ಬಂದು| ಎಂತಾ ಹೂವ ತಂದ್ಲಲ್ಲಪ್ಪಾ| ನನ್ನ ಕುಂತೂರು ಮಟವೆಲ್ಲಾ ಪವಿತ್ರವಾಯ್ತಲ್ಲೋ| ಗುರುವೇ ನೀವು ಎಂತ ಹೂವ ತಂದಿದ್ದೀರಿ ಅಂತೇಳಿ|

ಅವರಿಗೆ ಎರಡು ಎಳಿತಾ ಎಳೇದಾರಲ್ಲೋ ಗುರುಗಳೇ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಹೇಳ್ತೀನಿ ಕೇಳಿ| ನಿಮ್ಮ ಪಾದ ಒತ್ತೇನು ನಿಮ್ಮ ದಮ್ಮಯ್ಯ| ನಮ್ಮನ್ನ ಒಡೀಬ್ಯಾಡಿ| ನಾಳೆ ಹೊಸ ಚಿಟಕ ಎಂತಾ ಹೂವು ತಪ್ತಾನೆ| ಅಂತಾ ಹೂವೆ ತಪ್ತೀವಿ ಅಂತೇಳಿ| ಅವರು ಐದು ಜನವೇ ಪೊಡಿಕೊಂಡೋಗಿ|

ಗುರುವಿನ ಪಾದ ಹಿಡಿತಾರಲ್ಲೋ ಮಾದಯ್ಯೋ
ಆಹಾ ನೋಡಿ ನಮ್ಮ ಸಿವನಾ

ಆಗಲೀಗ ಐದು ಜನ ಚಿಟಕುರೂವೆ| ಈ ಹೊಸ ಚಿಟುಕರನ್ನೇ ಕಾಯ್ಕಂಡು| ಕೋಳಿ ಕೂಗುತ್ತೇ ಎದ್ದೋಗಿ| ಒಂದು ಮಠದ ಮ್ಯಾಲೆ ಕಾಯ್ಕಂಡು| ಕೂತ್ಕಂಡ್ರಲ್ಲಪ್ಪಾ ಗುರುವೇ| ನಮ್ಮಪ್ಪ ದೀರ ಮಾದಯ್ಯಾ| ಪೊತಾರ ಒತ್ತು ಉಟ್ಟಗಂಟ ಮಲಗಿದ್ದು| ಎದ್ದು ಕೈಕಾಲು ಮುಕ ತೊಳಕೊಂಡು| ಈಬೂತಿ ಕಟ್ಟಕ್ಕಂಡು| ಹೂವಿನ ಕುಕ್ಕೆ ತಕ್ಕಂಡು| ಊಟ ಮಾಡ್ಬಿಟ್ಟು|

ಅವ ನವಲಾಡಿ ಮರತಕ್ಕೆ
ಒಯ್ತಾನಲ್ಲೋ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಎರಡು ಸೇರು ಹಾಲು ಕರೀತಿದ್ದವು| ನಾಕು ಸೇರು ಹಾಲು ಕರೀತವಲ್ಲಾ| ಅತ್ತಾಗೇ ಓಗಿ ಹೊಟ್ಟೆ ತುಂಬಾ| ಮೇಯಿಸ್ಕಂಡು ಬನ್ರಪ್ಪಾ| ನನ್ನ ಕಂದಗಳಿರಾ ಅಂತೇಳಿ| ಅವರ ಅಪ್ಪದೀರು ಬಾಳ ಹೆಚ್ಚಳ ಮಾಡಿದ್ರು ಗುರುವೇ| ದನ ಕರ ಆಡು ಕುರಿ ಒಡ್ಕಂಡು| ಆದೇ ಮರದತ್ತರ ಬಂದ್ವಲ್ಲಾ| ಆರಳೀ ಮರದ ಹತ್ತಿರ ಬರೋಪೊತ್ತಿಗೆ| ಸಪ್ಪಟ್ ಸಂಜೆ

ಆಗೋಯ್ತು! ಗೊದ್ದ ಗೋಸಂಬಿ ಅಂಟೆಗೊದ್ದ ಆವ್ರಾಣೆ! ಎಕ್ಕದ ಸೊಪ್ಪು ಎಳೇಸೊಪ್ಪು ಗುಳ್ಳೆಸೊಪ್ಪು! ಗುಪ್ಪಟೆ ಸೊಪ್ಪು ತುಂಬಿಕೊಂಡು! ತಿಪ್ಪೆಹಳ್ಳಕ್ಕೆ ಅಜ್ಜಿಕೊಂಡು

ಅವನು ಹೂವ ತಕ್ಕಂಡೋಯ್ತಾನಲ್ಲಪ್ಪಾ ದೀರಾ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

"ಆಗಲೀಗ ಕಾಲಿಗೆ ಒಂದು! ಬೆಳ್ಳುಗಾತ್ರ ಮೊಗ್ಗಾರು ಮುಳ್ಳು ಮುರಿದು ಬಿದ್ದು! ಸ್ವಾಮಿಯವರು ಆವಾಗಲೀಗ! ಮುಳ್ಳು ತೆಗೆದು ಬೀಸಾಕ್ಬುಟ್ಟು! ಬಾಳ ಬಾಯಾರ್ಬುದ್ದು! ಪಕ್ಕದಲ್ಲಿದ್ದಂತ ಕೊಳಕ್ಕೆ ಹೋಗಿ! ಸ್ವಾಮಿಯವರು ಕೈ ಕಾಲು ಮೊಕ ತೊಳಕೊಂಡು! ಒಂದು ಸೆರೆ ನೀರೆತ್ತಿದ್ರು! ಅಷ್ಟರಲ್ಲಿ ಪ್ರಭುದೇವರು ಕೂತ್ಕಂಡು! ಸವಾರಿ ಮಾಡ್ತಿದ್ದಾ ಹುಲಿ ಬಂದು! ಸ್ವಾಮಿಯರನ್ನು ಕಂಡು ಬಾಳ ಬಯಂಕರವಾದ! ಸಬ್ದವನ್ನು ಮಾಡಿ ಬಿದ್ದು! ಪೂರ್ವ ಪಸ್ಚಿಮ ದಕ್ಷಿಣ ಎಲ್ಲಾಕಡೆಗೂ ಹೋಗಿ! ಆದರೆ ಪಸುಮ ಬಾಗಕ್ಕೆ ಮಾತ್ರ ಹೋಗಬೇಡಿ! ಅಂತ ಗುರುದೇವರು ಯೇಳಿದ್ರು! ಗುರುದೇವರ ಮಾತನ್ನು ಮೀರಿ ಬಂದು ಸಿಕ್ಕಿಕೊಂಡ್ನಲ್ಲಾ! ಈ ಹುಲಿಕಂಡ್ರೆ ನನಗೆ ಬಾಳ ಆನಂದವಲ್ಲಾ! ಇದರ ಮೇಲೆ ನಾನೇಕೆ ಕೂತುಕೊಂಡು ಸವಾರಿ ಮಾಡಬಾರದು! ಈಗ ನಾನು ಸವಾರಿಗೆ ಹೋಗಲೇ ಬೇಕಂತೇಳಿ

ಆಗಲೀಗ ಕಬ್ಬಲಿಯಂಬ ಕಿತ್ತವರಲ್ಲೋ ಮಾದೇವಾ
ಆಹಾ ಕ್ವಾರಣ್ಕ ನೀಡವ್ವಾ ಕೋಡುಗಲ್ಲಿನ ಮ್ಯಾಲೆ
ಕೋಲುಮಂಡೆ ಜಂಗಮದೇವರು ಕ್ವಾರಣ್ಯವಂದು ಸಾರವರೇ
ಆಹಾ ಕ್ವಾರಣ್ಕ ನೀಡವ್ವಾ ಕೋಡುಗಲ್ಲ ಮ್ಯಾಲೆ

ಮುದ್ದು ಮಾದಪ್ಪನವರು ಕೋಲಿನಿಂದ! ಮೂರು ಪೆಟ್ಟುಗಳನ್ನು ಹುಲಿಯ ಮೈಮೇಲೆ ಹೊಡೆದರು! ಆ ಹುಲಿಯು ಸಹ ತಡೆಯಲಾರದೆ! ಸಿವನ ಪಾದಕ್ಕೆ ನಮಸ್ಕಾರ ಮಾಡಿತು! ನಮಸ್ಕಾರ ಮಾಡಿದಂತ ಕಾಲದಲ್ಲಿ! ಹುಲಿಗೆ ಮೊಕರಂಬು ಹಾಕಿದ್ರಂತೆ! ಹುಲಿಯ ಮೇಲೆ ಕುಳಿತುಕೊಂಡು!

ಅರಣ್ಯವನ್ನೆಲ್ಲಾ ಸವಾರಿ ಮಾಡವರೇ ಮಾದೇವಾ
ಆ ನೋಡಿ ನಮ್ಮ ಸಿವನಾ
ಮಾದೇವೋ ಮಾದೇವ ಮೆರೆವ ಚಂದವಾ"
ನೋಡಿ ನಮ್ಮ ಸಿವ್ನಾ

ನನ್ನ ದೀರ ಮಾದೇವಾ! ಮಾಡಿದಂಗೆ ಐದು ಜನ ಚಿಟಕರೂವೆ! ಗೊದ್ದೆ ಗೋಸಂಬಿ, ಅಂಟೆಗೊದ್ದ, ಆ ಪ್ರಾಣ ವೊಡ್ಕೊಂಡು! ಎಕ್ಕದ ಸೊಪ್ಪು ವೊಡ್ಕಂಡು! ಗುಳ್ಳೆ ಸೊಪ್ಪು, ಗುಪ್ಪಟೆ ಸೊಪ್ಪೊತ್ಕಂಡು! ಅವರು ತಿಪ್ಪೆ ಹಳ್ಳಕ್ಕೆ ಅಜ್ಜಿಕಂಡು!

ಹೂವ ತಕ್ಕಂಡು ಒಯ್ತಾರಲ್ಲೋ ದೀರಾ ಮಾದೇವೋ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ನಮ್ಮ ಹೊಸ ಚಿಟಕ! ಹೂವ ತಕ್ಕಂಡು ಬಂದ! ಕುಂತೂರು ಮಟವೆಲ್ಲಾ! ಪರಿಮಳ ಆಯ್ತಲ್ಲೋ ಗುರುವೇ! ಅವನ ಹೂವ ಗಮಲ ಹಿಡಿದ್ಬುಟ್ಟು! ಈ ನನ್ನ ಐದು ಜನ ಚಿಟಕರೂವೆ! ಕಾವಿ ಬಟ್ಟೆ ಒದ್ದಂಡು! ಸುತ್ತ ಕಲ್ಲನ್ನ ಹೇರಿಕೊಂಡು!

ಅಯ್ಯೋ ಹೂವಿನ ಕುಕ್ಕೆ ಮುಸಿಕಿಟ್ಟಾನಲ್ಲೋ ಗುರುಗಾಳು
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಅರ್ದ ಜೀವ ಇದ್ದವು! ತುಂಬಾ ಜೀವ ಆದವು! ಅಂಟಿಗೊದ್ದ ಆ ಪ್ರಾಣ ಅಂತಕ್ಕದ್ದೆಲ್ಲಾ! ಜೀವ, ಆಗೋದೋ! ಕಾವಿ ಬಟ್ಟೆ ಸುತ್ತ ಕಲ್ಲು ಮಡಗಿಸ್ಕಂಡು! ಹೂವಿನ ಕುಕ್ಕೆ ಹೂವು ತಕ್ಕಂಡು! ಗೊದ್ದೆ ಗೋಸುಂಬೆ ಎಲ್ಲಾ! ಕುಂತೂರು ಮಟದ ಹಸುಗಳ್‌ಗಳು! ಮೈಕೈಗೆಲ್ಲಾ ಕಚ್ಚಿಕೊಂಡವು ಸ್ವಾಮಿ! ಅಯ್ಯಾ ಕುಂತೂರು ಮಟದಲ್ಲಿ!

ರುಬ್ ರುಬ್ನೇ ಇನ್ನೂ ಕುಣಿದಾನು
ಆಹಾ... ನೋಡಿ ನಮ್ಮ ಸಿವನಾ

ಆದ್ರೆ ಏಳ್ತಾಗಲೀಗ! ಎಲ್ಲಾರೂ ಮೈಕೈನ ಒದರಿಕೊಂಡು! ಕಿತ್ತಾಕು ಬಿಟ್ಟು ಗುರುವೇ! ಅವನು ಕುದುರೆ ಬಾರ್ ತಕ್ಕಂಡು!

ಅವರು ಓಡಾಡ್ಲಿಕೊಂಡು ಒಯ್ತಾನಲ್ಲೋ ಗುರುಗಳು
ಆಹಾ... ನೋಡಿ ನಮ್ಮ ಸಿವನಾ

ಗುರುಗಳೇ ನಮ್ಮನ್ನ ಒಡೀಬ್ಯಾಡಿ! ನಿಮ್ಮ ಪಾದ ಒತ್ತೇನು! ನಿಮ್ಮ ಹೊಸ ಚಿಟಕ ಬಂದವನು! ಹುಲಿ ಕರಡೀನ ಕರೆದು! ದನ ಕುರಿ ಒಡೆದ್ಬುಟ್ಟು! ದನಕರೀನ ಮಕ್ಕಳನ್ನು ಕರಕೊಂಡು! ಗೊದ್ದ ಗೋಸುಂಬೆ ಒಡಕೊಂಡು! ಎಕ್ಕದ ಗಿಡ ಗುಳ್ಳಿ ಗಿಡ! ಗುಪ್ಪಟೆ ಗಿಡ ಹೊಡಕೊಂಡು! ತಿಪ್ಪೆ ಹಳ್ಳಕ್ಕೆ ಅಜ್ಜಿಕೊಂಡು ಏರ್ತಾನೆ ಸ್ವಾಮಿ! ಅವನು ತರುವಂತಾ! ಇವೆಲ್ಲಾ ಹೂವಾಯ್ತದೆ ಗುರುವೇ! ಹೊಸ ಚಿಟುಕ ಯಾವ ರೀತಿ ಮಾಡಿದ್ನೋ! ಅದೇ ರೀತಿ ಮಾಡಿದೆವು ದಮ್ಮಯ್ಯ!

ನಮ್ಮ ಒಡಿ ಬ್ಯಾಡಿ ಕಾಣೋ ನಿಮ್ಮ ಸಿರಿ ಪಾದೋ!
ಆಹಾ... ನೋಡಿ ನಮ್ಮ ಸಿವನಾ

ಮರುದೇವರೇ ಪರುವಿಲ್ಲಪ್ಪ ಹೊಡುದೇನು ನೀನೇ ದೊಡ್ಡೋನಾಗೀವೆ! ನೆನ್ನೆ ದಿವ್ಸ ಅಂತ ಹೂವು ಕುಯ್ಕಂಡ್ಬಂದಿದ್ದಲ್ಲ ನೀನು ಎಲ್ಲಿ ಕುಯ್ಕಂಡ್ಬಂದೆಯಪ್ಪ! ಅಂತ ಕೇಳಿದ್ರು! ನಮ್ಮಪ್ಪಾಜಿ ಮಾಯ್ಕಾರ ಮಾದೇವ! ನನಗೆ ಇದೇ ಒಂದು ತಕ್ಕಾದ ಸಮಯ! ಹುಡುಗ್ರುನ ಸೆರೆಸಿಕ್ಕಿ ಬುದ್ದಿ ಕಲಿಸಬೇಕು ಅಂದುಕೊಂಡು! ಅಯ್ಯಾ ಹುಡುಗ್ರೆ ತಲಕಾಡ್ನಲ್ಲಿ ತಲಕಾಡು ನಾಯಕ್ನಾನಮ್ಮ ಇದ್ದಾಳೆ! ಅವ್ಳಿಗೆ ಸಾವ್ರರೆಕ್ರೆ ಗದ್ದೆ ಐತೆ! ನೋಡುರಪ್ಪ ಹುಡುಗ್ರೆ ನೂರೆಕ್ರೆ ತುಂಬಾ! ಆ ನಾಯಕ್ನಾನಮ್ಮ ಬರೀ ಹೂವಿನ ಗಿಡುವನ್ನೇ ಹಾಕಿದ್ದಾಳೆ! ನಿನ್ನೆ ದಿವ್ಸ ನಾನು ಅಲ್ಲಿಗೋಗಿ! ಹುವ್ವ ಕುಯ್ಕೊಂಡ್ಬಂದೆ ಅಂದ್ರೆ ಮಾದೇವ! ಹಂಗಾದ್ರೆ

ಮರಿದೇವ್ರೆ ನಡೆಯಪ್ಪ ಹೋಗೋನ. ಅಂತ ಹೇಳಿದ್ರು ಹುಡುಗ್ರು। ಅಪ್ಪಾ ಹುಡುಗ್ರ ಬನ್ನಿ ಅಂತೇಳಿ ಜೊತೆಲಿ ಕರ್ಕೊಂಡು ನಮ್ಮಪ್ಪಾಜಿ ಮಾದೇವ ನಾಯಕ್ನಾನಮ್ಮನ।

ಹುವ್ವನ ತ್ವಾಟಕ್ಕೆ ಬತ್ತವರ ಮಾದೇವ।
ನೋಡಿ ನಮ್ಮ ಶಿವನಾ।

ಹುವ್ವನ ತ್ವಾಟುಕ್ಕೆ ಬಂದು। ಹುಡುಗ್ರೆ ಇದೇ ತ್ವಾಟ ಹೋಗ್ರಪ್ಪ ಅಂತ ಹೇಳಿದ್ರು। ಹುಡುಗ್ರೆಲ್ಲ ತ್ವಾಟುದೋಳೀಕೋಗಿ। ಹೂವ ಕಣ್ಣಲ್ಲಿ ನೋಡಿದ್ದಾರೆ। ಹುಡುಗ್ರೆ ಹೂವೇನೋ ಬಾಳಾ ಚಂದಾಗವೆ! ಇದಕ್ಕತಾನೆ ಮರುದೇವರು। ಹೂವ್ನಯ್ಕೊಂಡು ಬಂದು ಮಠಕ್ಕೆ ಕೊಟ್ಬುಟ್ರು। ಗುರುಗಳು ಗುದ್ದು ಅಂತ ಹೇಳುದ್ನೆ। ನಮ್ಮ ಹೆಕ್ಕತ್ತು ಬಗ್ಗುಸ್ಕೊಂಡು ಮರುದೇವ್ರು ಹೊಡುದ್ಬುಟ್ಟ ಅಂತ ಮಾತಾಡ್ಕಂಡು। "ಮರುದೇವ್ರೆ ಬಾರಪ್ಪಾ ಅಂತ ಹೇಳಿದ್ರು ಹುಡುಗ್ರೆಲ್ಲ! ಏನಪ್ಪಾ ಹುಡುಗ್ರೆ ಅಂದ್ರು ಮಾದೇಶ್ವರ। ಅಯ್ಯ ಮರುದೇವ್ರೆ ಹುವ್ವುಯ್ಯುವ ಬಾರಪ್ಪ। ಅಯ್ಯ ಹುಡುಗ್ರೆ ಎಲ್ಲ ಹೂವು ಕೊಯ್ತ ನಿಂತ್ಕಂಬುಟ್ರೆ! ತ್ವಾಟದವರು ಬಂದಿ ನಿನ್ನ ಬಂಧಿಸಿ ಒತ್ಕಂಡೊಯ್ತಾರೆ ಯಾರಾರು। ಒಂದೇಟ್ಗೆ ಸಿಲ್ಲಿ ಹೊಡೆತೀನಿ। ನಾನು ಸಿಲ್ಲಿ ಹೊಡುದ ತಕ್ಷನ ನೀವೆಲ್ಲ ಓಡ್ಬಂದ್ಬುಡ್ಬೇಕು। ಮರುದೇವ್ರೆ ನೀನು ಹೇಳುವಂತ ಮಾತು ನಿಚ್ಚಯ। ನೀನು ಕಡೇ ಬಾಗಿಲಲ್ಲಿ ನಿಂತ್ಕೊಪ್ಪಾ ಅಂತೇಳಿ ಕಳುಸಿ। ಹುಡುಗ್ರೆಲ್ಲಾ ಏನ್ಮಾತಾಡ್ಕೊಂತಿದ್ದಾರೆ ಅಂದ್ರೆ। ನಿನ್ನೆ ದಿವ್ಸ ಮರುದೇವರು ಇಲ್ಲಿಂದ ಹೂವ ತಂದು। ನಮ್ಮನ್ನೆಲ್ಲಾ ಗುದ್ದುದ್ನಲ್ಲ ಹುಡುಗ್ರೆ। ಈ ದಿವಸ ನಾವು ಹೂವಕಿತ್ತಂಡು। ಈ ಚೋರಿಯಿಂದೀ ಚೋರಿಕೆ ಹೋಗ್ ಬುಡವಾ। ತ್ವಾಟದವರು ಬಂದ್ರೆ ಮರಿದೇವ್ರ ಹಿಡ್ಕೊಳ್ಳಿ! ಅವುರ್ಗೆ ಸಿಕ್ಕೆ ಬಂದ್ರೆ ಮಠದಲ್ಲಿ ಗುರುಗಳು ಗುದ್ದಿ ಅನ್ತಾರೆ। ಎಲ್ಲರೂ ಸೇರ್ಕಂಡು ಗುದ್ದವಾ ಅಂತ ಹುಡುಗ್ರು ಮಾತಾಡ್ಕತಾ ಇದ್ರೆ।

ನಮ್ಮ ಸ್ವಾಮಿಯವರು ನೋಡಿದ್ದಾರೆ ಕಣ್ಣಲ್ಲಿ ನಾನು ಕುಂತೂರು ಮಠಕ್ಕೆ ಸೇರುದ್ನೆ। ಕುಂತೂರು ಮಠಕ್ಕೆ ಯಾವುದಾದ್ರೂ ಒಂದು ಆದೇಶವನ್ನು ಮಾಡ್ಬುಟ್ಟು ಹೋಗ್ಬೇಕು ಅಂತ್ಹೇಳಿ ನಮ್ಮಪ್ಪಾಜಿ ಮಾದೇಶ್ವರ

ಅವರು ತಲಕಾಡೂರ್ಗೆ ಬತ್ತವ್ರೆ ಮಾದೇವ।
ನೋಡಿ ನಮ್ಮ ಶಿವನಾ।

ತಲಕಾಡ ನಾಯಕ್ನಾನಮ್ಮ। ಮಗನ ಮಕ್ಕೆತ್ಕೊಂಡು ಮನೆ ಬಾಗ್ಲತ್ರ ಆಡುಸ್ತಾ ಕುಂತವಳೆ। ಅಯ್ಯ ಹುಡುಗ್ರೆ ನಾನು ಗುದ್ದುದೇಟ್ಗೆ! ನೀವ್ ಗುದ್ದಬೇಕು ಅನ್ತಿದ್ದರೆಲ್ಲ ನಿಮ್ಮ ಇಪ್ಪತ್ನಾಲ್ಕು ಗುದ್ದೆ ಬರಲಿ। ನಾನು ನಿಮುಗೆ ಎಪ್ಪತ್ನಾಲ್ಕು ಗುದ್ದು ಗುದ್ದಿಸ್ತೀನಿ। ನಮ್ಮ ಮಾಯವನ್ನು ಕಣ್ಣಿಂದ ನೋಡಿ ಅನ್ಬುಟ್ಟು। ಮಾದಪ್ಪ ಜಂಗಮರ್ವ್ಯಾಸನವ ತಾಳ್ಕೊಂಡು। ಅಯ್ಯೋ ನಾಯಕ್ನಾನಮ್ಮ ತಾಯಿ। ಮಕ್ಕಳು ಚಂದಾಗವೆ ಅಂತ ಆಡುಸ್ತಾ ಕುಂತಿದ್ದಿ। ನಿನ್ನ ಮನೆ ಮಂಟೋಗೋಳಿ। ನಿನ್ನ ಹೂವಿನ ತ್ವಾಟವೆಲ್ಲ ಸೂರೆ ಆಯ್ತಲ್ಲವ। ಅಂತ ಹೇಳಿದ್ರು। ಅಪ್ಪ ಜಂಗಮ ಹಂಗಂದ್ರೇನಪ್ಪ। ಅಮ್ಮ ಯಾರೋ ಕಾಣೆ ಹಾಜಿ ಬಾಜಿ ಹುಡುಗ್ರು ಬಂದು। ಹೂವ್ವ ಕಯ್ತವ್ರೊ ಗಿಡ್ಗಳ್ನೆ ಕಿತ್ತಾವ್ರೊ। ತ್ವಾಳಟವಾದ ತ್ವಾಟವೆಲ್ಲ

ಸೂರೆ ಆಯ್ತದೆ ತಾಯಿ। ಯಾವ ಸುಕಕ್ಕೆ ಅಂತ ಆ ತ್ವಾಟ ಬೆಳೆಸಿದೆಯವ್ವಾ। ಏನಪ್ಪ ಜಂಗಮ ಈ ಮಾತು ನಿಜವಾ। ಸುಳ್ಳೇಳುದ್ರೆ ಸೊರ್‍ಗ ಸಿಕ್ಕತ್ತ ನನ ಕಂದ। ಕಣ್ಣಾರೆ ನೋಡೋಗವ್ವ ತಾಯಿ। ಹಂಗದ್ರೆ ಜಂಗಮಯ್ಯ ತಡಿಯಪ್ಪ ಅಂತೇಳ್ಬುಟ್ಟು। ಜೀತಗಾರುನೆಲ್ಲ ಕರುಕೊಂಡು ನಾಯಕ್ಸಾನಮ್ಮ-

ಅವುಳು ತ್ವಾಟಕ್ಕೆ ಬತ್ತವ್ಳೆ ನಾಯಕ್ಸಾನಮ್ಮ
ನೋಡಿ ನಮ್ಮ ಶಿವನಾ।

ತ್ವಾಟಕ್ಕೆ ಬಂದು ನೋಡಿದ್ರೆ। ಹುಡುಗ್ರೆಲ್ಲ ಈ ಹೂ ಚಂದಾಗದೆ ಆ ಹೂಚಂದಾಗದೆ ಅಂತ್ಹೇಳಿ। ಹುಡುಗ್ರು ಹೂವೆಲ್ಲ ಕುಯ್ತಾ ಇದ್ರಲ್ಲ। ನಾಯಕ್ಸಾನಮ್ಮನ ಜೀತಗಾರ್‍ರು ಸುತ್ತ ಮುತ್ತ ಬಂದು ಹಿಡ್ಕಂಡ್ರಂತೆ। ಆ ಹುಡುಗ್ರನೆಲ್ಲ ನಾಯಕ್ಸಾನಮ್ಮ ಕಣ್ಣೆಂದ ನೋಡಿ। ಎಲಾ ಎಲಾ ನನ್ನಕ್ಕಳೇ? ಎಷ್ಟು ದಿವಸ ಹಿಂಗೇ ಮಾಡಿದ್ದೀರಿ ನೀವು? ಅಂತ್ಹೇಳ್ಬುಟ್ಟು ಹುಡುಗ್ರ ಹೆಕ್ಕತ್ತ ಬಗ್ಗುಸ್ಕೊಂಡು-

ಚೆಂದಾಗಿ ಒಳ್ಳೆ ಹೊಡೆದವರೆ।
ನೋಡಿ ನಮ್ಮ ಶಿವನಾ।

ಹೊಡುತವನ್ನು ತಾಳ್ಕೊಳ್ಳಾರ್‍ದೆ ಹುಡುಗ್ರೆಲ್ಲ ದುಕ್ಕಾ ಮಾಡ್ತಿದ್ದಾರೆ। ನಮ್ಮಪ್ಪಾಜಿ ಮಾದೇವ ಜಂಗುಮನಾಗಿ ನಿಂತಿದ್ರಲ್ಲ। ಅಯ್ಯಾ ಹುಡುಗ್ರೆ ನನಗೆ ಹೊಡೀಬೇಕು ಅಂತಿದ್ರಿ। ಎಪ್ಪತ್ನಾಕು ಗುದ್ದನ್ನು ತಕ್ಕೊಳ್ಳಿ ಅಂತ್ಹೇಳಿ। ನಾಯಕ್ಸಾನಮ್ಮನ ಜೀತಗಾರ್‍ರು ಹೊಡೆದಿದ್ರೆ-

ಅವರು ನೆಗ್ತಾ ನಿಂತವ್ರೆ ಮಾದೇವ
ನೋಡಿ ನಮ್ಮ ಶಿವನಾ।

ಅಯ್ಯಾ ನಮ್ಮಗನ ಮಕ್ಳೆ। ಹಿಂಗೆ ಎಷ್ಟು ದಿವ್ಸದಿಂದ ಹೂ ಕುಯ್ದು ಕಿತ್ತೆಸಿತಿದ್ರಿ। ನಿಮ್ಮ ತಕ್ಕಂಡೋಗಿ ಕೊಳ್ಳೇಗಾಲದ ಕಚೇರಿಲಿ ಸಜಾ ಮಾಡಿಸ್ತೀನಿ। ನಿಮಗೆ ಪಟ್ಟಾಗಿ ಹಾಕುಸ್ತೀನಿ ಅಂತ್ಹೇಳಿ। ನಾಯಕ್ಸಾನಮ್ಮ ನಮ್ಮ ಹುಡುಗ್ರನೆಲ್ಲಾ ಎಳುಕೊಂಡು ಬಂದು। ಊರಲ್ಲಿ ಚಾವಡಿಯಂತೆ। ಚಾವ್ಡಿ ಕಲ್ಕಂಬುಕ್ಕೆ ಆ ಹುಡುಗ್ರುನೆಲ್ಲ ಕಟ್ಟಾಕ್ಸಿ। ಅಯ್ಯಾ ಹುಡುಗ್ರೆ ನಿಮ್ಮುನ್ನ ನಾನು ಬಿಡೋದಿಲ್ಲ। ನಿಮಗೆ ತಕ್ಕ ಶಿಕ್ಷೆ ಕೊಡ್ಲಿ ಸಜಾ ಮಾಡಿಸ್ದೆ ಹೋದ್ರೆ ನನ್ನ ಹೆಸ್ರು ಬದಲಿ ಕರೀರಿ ಅಂತ್ಹೇಳಿ। ಕೆಕ್ಕರಿಸ್ಕೊಂಡು ನೋಡ್ತಾಳೆ ನಾಯಕ್ಸಾನಿ।

ನೋಡಿ ನಮ್ಮ ಶಿವನಾ।

ನಮ್ಮಪ್ಪಾಜಿ ಸೆರೆ ಬುಡುಸ್ಬೇಕು ಅಂತ್ಹೇಳಿ। ಬಳೇ ಮಲ್ಲಾರ ಮಾಡ್ಕೊಂಡು। ಕೋರಮಾಲು ಪೇಟ ಕಟ್ಕೊಂಡು। ಕಂಚಿ ಪಂಚೆ ಹಾರೂಗಚ್ಚೆ ಹಾಕೊಂಡು। ಬಳೆಗಾರನ ಯಾಸುವನ್ನು ತಾಳ್ಕೊಂಡು। ನಮ್ಮ ಸ್ವಾಮಿಯವರು ಬಂದಿ।

ಅಮ್ಮಾ ತಾಯಿ ಈ ಹುಡುಗನ ನಿನ್ನ ತ್ವಾಟದ ಹೂವ್ಸಿತ್ತಂಡಿ ಮಾರಿ ಹಣ ಸಂಪಾದ್ನೋರಲ್ಲ। ಕುಂತೂರು ಮಠದ ಪ್ರಭುಸ್ವಾಮಿಗಳಿಗೆ। ಪೂಜೆ ಹೊತ್ಗೆ ಹೂ

ತಕ್ಕಂಡೋಗಿ ಕೊಡ್ತಿದ್ರು! ಅಮ್ಮಾ ತಾಯಿ ಇವುರ್ಗೆ ಮಾತ್ರ ಶಿಕ್ಷೆ ಕೊಡಬೇಡಮ್ಮ! ಕುಂತೂರು ಮಠದ ಚಿಟುಗ್ರಿವ್ರು ಬುಟ್ಟುಬುಡಮ್ಮಾ!

ಏನಯ್ಯಾ ಬಳೆಗಾರ ಶೆಟ್ರೆ! ನಿನ್ನನೆ ಏನಾರೂ ಹಾಳಾಗಿದ್ರೆ ಆಗ ನಿಮಗೆ ಗೊತ್ತಾಗದು! ಈ ಮುಂದೇ ಮಕ್ಕಳು ನನ್ನ ತ್ವಾಟ ಹಾಳು ಮಾಡಿದ್ರೆ! ನನ್ನನೆ ತಾನೇ ಹಾಳಾಗೋದು! ನಿನ್ನದ್ದುವೆ ನಿನ್ನ ಬಳೇ ಮಲಾರನೂವೆ! ಕೇಳಿದ್ರೆ ಕೊಟ್ಟಿಯ ಕೊಡು ನೋಡವ ಹಂಗಾರ! ಅಂತೆ ಧರ್ಮ ಕಟ್ಟೆಕೊಳ್ಳೋರು ಅಂತ್ಹೇಳಿದ್ವಾಳೆ! ಆಮ್ಮ ಈ ಹುಡುಗ್ರನ್ನು ನೋಡಿದ್ರಿ ಬಾಳ ಹೊಟ್ಟೆ ಉರೀತದಮ್ಮ ತಾಯಿ! ಈ ಎತ್ತ್ನೂ ನೀನೇ ಕಟ್ಕೋ! ಬಳೇ ಮಲಾರನೂ ನೀನೇ ತಕೋ! ಈ ಹುಡುಗ್ರುನ ಮಾತ್ರ ಬಿಚ್ಚಿ ಬುಟ್ಟುಡು ಅಂದನಂತೆ! ಕೊಡಪ್ಪ ಬಳಗಾರ ಶೆಟ್ಟಿ ಅಂತ್ಹೇಳಿ ನಾಯಕ್ಸಾನಮ್ಮ! ಬಳೇ ಮಲಾರನೂವೆ ಈಸ್ಕೊಂಡು! ಹುಡುಗ್ರನು ಬಿಚ್ಚಿ ಬುಟ್ಟುಟ್ಲಂತೆ! ನಿಮ್ಮ ಪಾದವೇ ಗತಿ ಅಂತ್ಹೇಳಿ! ಇಂದುಕ್ಕು ತಿರುಗಿ ನೋಡ್ದೆ-

> ಅವರು ಬದ್ಕೋಟಿ ಹೊಡೆದಿವ್ರೆ ಹುಡುಗರು
> ನೋಡಿ ನಮ್ಮ ಶಿವನಾ!

ನಾಯಕ್ಸಾನಮ್ಮ ಬಳೇ ತಕೊಂಡೋಗಿ ಮನೆ ಒಳಗೆ ಮಡೀಕೊಂಡ್ಲು! ಮಾದಪ್ಪ ನೋಡಿದ್ರಂತೆ! ಎಲ್ಲಿದ್ದೀರಿ ನನಕಂದ ಹಾವು ಚೇಳುಗಳೆ! ಎದ್ದು ಬನ್ನಿಪ್ಪಾ ಅಂತ್ಹೇಳುದ್ರಂತೆ! ಬಳೆಗಳೆಲ್ಲ ಹಾವು ಚೇಳುಗಳಾಗ್ಬುಟ್ಟು! ಮೈ ಕೈ ಮೇಲೆಲ್ಲಾ ಹರಿತಾವಂತೆ! ಮನೆ ತುಂಬಾ ಹರಾಡ್ತವಂತೆ! ಎಲ್ಲಿದ್ದೀಯೋ ನನ ಕಂದ ಹನ್ನೆರೆಡೆಜ್ಜೆ ಬರುಗ ಅಂದ್ರಂತೆ! ಕೊಟ್ಟೀಲಿ ಕಟ್ಟಾಕಿದಂತ ಎತ್ತು ಹುಲಿ ಆಯ್ತಂತೆ! ಎತ್ತೋಗಿ ಹುಲಿಯಾಗ್ಬುಟ್ಟು ಒಂದು ಕೂಗು ಕೂಗದೇಟ್ಗೆ! ಅಯ್ಯಯ್ಯೋ ಇದೇನಪ್ಪಾ ಬಳೆಗಳೆಲ್ಲಾ ಹಾವು ಚೇಳಗ್ಬುಟ್ವೊ! ಎತ್ತು ಹೋಗಿ ಹುಲಿ ಆಗ್ಬುಟ್ಟದಲ್ಲ ಅಂತ್ಹೇಳಿ! ನಾಯಕ್ಸಾನಮ್ಮ ಮಕ್ಕಮರಿಗೆಲ್ಲ ಕರ್ಕ್ಕೊಂಡು! ಮನೆಯನ್ನು ಬುಟ್ಟು ಈಚೆಗ್ಬಂದು!

> ಅವಳು ಬಾಯಿ ಬಡ್ಕೋತಾಳೆ ನಾಯಕ್ಸಾಮ್ಮಾ
> ನೋಡಿ ನಿಮ್ಮ ಶಿವನಾ!

ಏನಪ್ಪಾ ನಾಯಕ್ಸಾನಮ್ಮನ ಮನೆಗೆ ಹುಲೀನುಗ್ಬುಟ್ಟದೆ ಇನ್ನು ನಮ್ಮನ್ನ ಬುಡ್ತದ ಹುಲಿ ಅಂತ್ಹೇಳಿ! ಊರ ಜನರೆಲ್ಲಾ ಆಲಬ್ರುಸ್ಕಂಡು!

> ಊರಿಂದೀಚ್ಗೆ ಬರುತವ್ರೆ ಜನ್ಗಳು!
> ನೋಡಿ ನಮ್ಮ ಶಿವನಾ!
> ನಮ್ಮಪ್ಪಾಜಿ ಮಾದೇಶ್ವರ! ಅಲ್ಲಿ ನಿಜರೂಪ
> ಮರಸ್ಬುಟ್ಟು ಕೊರುವಂಜಿ ರೂಪನ್ನು
> ಅವರು ತಾಳ್ತ ನಿಂತವರೆ ಮಾದೇವ
> ನೋಡಿ ನಮ್ಮ ಶಿವನಾ!

ತಾಯಿ ಕುಂತೂರು ಮಠದ ಪ್ರಭುಲಿಂಗಪ್ಪನವರ ಹುಡುಗ್ರುಗೆ! ಶಿಕ್ಷೆ ಕೊಟ್ಟದ್ದು ತಪ್ಪಾಯ್ತು ಅಂತ್ಹೇಳ್ಬುಟ್ಟು ತಪ್‌ಗಾಣ್ಕೆಯನ್ನು ಕಟ್ಕೊಂಡು! ತೇರ್ಥ ತೆಕ್ಕೊಂಡೋಗಿ

ಊರುಗೆಲ್ಲ ಚೆಲಿದ್ರೆ। ಹುಲಿರೂಯವಾಯ್ತರಮ್ಮ। ಹಾವು ಚೇಳುಗಳೆಲ್ಲ ಮಾಯವಾಯ್ತಲೆ। ಇಲ್ಲದೇ ಇದ್ರ ನಾಯಕ್ಸಾನಮ್ಮ। ಅಡ್ಡೆ ಹಾಕೊಂಡು ಎಲೆ ಮಡ್ಲೋದ್ರಲ್ಲಿ ಇವತ್ತೆ ನಿನ್ನ ತಲಕಾಡು।

ಹಾಳು ಅಂತವಳೆ ಕೊರವಂಜಮ್ಮ
ನೋಡಿ ನಮ್ಮ ಶಿವನಾ।

ನಾವು ಕೊಟ್ಟಂತ ಶಿಕ್ಷೆ ಸರ್ವಥಾ ತಪ್ಪ ಅಂತೇಳ್ಬುಟ್ಟು ಇಪ್ಪತ್ತೈದು ಎಕ್ರೆ ಗದ್ದೆಯನ್ನು। ಆದ ಪಸಲು ಆದೇಕವೆಲ್ಲ। ಕುಂತೂರು ಮಠಕೆ ನಾನು ಬರೀತೀನಿ ಅಂದ್ಬುಟ್ಟು। ನೀನು ಪರಕೆಯನ್ನು ಮಾಡ್ಕೊಂಡು। ಅಂತೆ ನಡಕೊಂಡ್ರೆ ಸರಿಯಾಯ್ತದಮ್ಮ। ಹಂಗಾದ್ರೆ ಈವಾಗ। ಕಾಣ್ಕೆ ಕಟ್ಕೊ ಅಂತ ಹೇಳಿದ್ರು "ಸ್ವಾಮಿ ಕುಂತೂರು ಮಠದ ಸ್ವಾಮಿಗಳೆ। ನಾನು ನಿಮ್ಮ ಹುಡುಗ್ರಿಗೆ ಶಿಕ್ಷೆ ಕೊಟ್ಟಿದ್ದು ಸರ್ವಶಾ ತಪ್ಪುಸ್ವಾಮಿ। ಇಪ್ಪತ್ತೈದು ಎಕರೆ ಗದ್ದೆಯನ್ನು ನಿಮ್ಮ ಕುಂತೂರು ಮಠಕೆ ಬರೀತೀನಿ ಅಂತೇಳ್ಬುಟ್ಟು। ಇಪ್ಪತ್ತೈದು ಎಕ್ರೆ ಗದ್ದೆಯನ್ನು ಕುಂತೂರ್ಮಠಕ್ಕ ಬರುದವ್ಳೆ ನಾಯಕ್ಸನಮ್ಮ।

ನೋಡಿ ನಮ್ಮ ಶಿವನಾ।

ಆಗಲೀಗ ನಮ್ಮಪ್ಪ ಮಾಯಕಾರ ಮಾದೇವನ್ನ। ಹೇಳ್ತೀನಿ ಕೇಳಪ್ಪಾ। ನನ್ನ ಮರಿದೇವರೇ। ನೀನು ಉರುಳುಗ ಮಾಡಬ್ಯಾಡ। ಉರುಳುಗ ನಾನೇ ಮಾಡ್ತೀನಿ।

ನೀನು ಉರುಳುಗ ಮಾಡ ಬ್ಯಾಡ ಕಣೋ ಮರಿದ್ಯಾವರೇ।
ಆಹಾ... ನೋಡಿ ನಮ್ಮ ಶಿವನಾ

ಗುರುಗಳು ಅಂಗಂದ ಮಾತಿಗೆ। ಮಾದೇವ ಮುನಿಸಿಕೊಂಡು ಕೂತ್ಕಂಡ್ನಲ್ಲಪ್ಪಾ। ಯಾಕಪ್ಪಾ ಸ್ವಾಮಿ ಮರಿದೇವರೇ। ಮುನಿಸಿಕೊಂಡು ಕೂತ್ಕಂಡ್ಕಲ್ಲಾ। ಈ ಕೆಲಸ ನಿನಗೆ ಬೇಡಪ್ಪಾ। ಕಟ್ಟೆ ಏರಿ ಮ್ಯಾಲೆ ಕಲ್ಲು ಬಸವ ಅದೆ ಕಣಪ್ಪಾ। ಆಕಲ್ಲು ಬಸವ ಪೂಜೆ ಮಾಡ್ಕಂಡಿರಪ್ಪಾ ಅಂತೇಳ್ಬುಟ್ಟು।

ಅಯ್ಯಾ ಗುರುಗಳು ಹೇಳ್ತಾನಲ್ಲೋ ಮಾದೇವಾ
ಆಹಾ... ನೋಡಿ ನಮ್ಮ ಶಿವನಾ

ಆಗಲೀಗ ಕೋಳಿ ಕೂಗುತಲೇ ಎದ್ದು। ಐದು ಸೇರು ಅಕ್ಕಿ ಹಾಕಿ ತಳಿಗೆ ಅನ್ನ ಮಾಡ್ಬುಟ್ಟು। ತಳಿಗೆ ಅನ್ನ ತಕ್ಕಂಡು। ತಾಮ್ರದ ಬಿಂದಿಗೆ ತಕ್ಕಂಡು। ಊದುಗಡ್ಡಿ ತಕ್ಕಂಡು। ಊಬತ್ತಿ ವುಂಡೆ ತಕ್ಕಂಡು ಗುರುವೇ। ಅಲ್ಲಿ ತಳಿಗೆ ಅನ್ನ ಮಡಗ್ಬುಟ್ಟು। ಆಗಲೀಗ ಹೂವನ್ನೇ ಕೊಯ್ಕಂಡು। ಗಂದ ತೇಯ್ಕಂಡು। ಗುರುವೇ ಒಂದು ಚರಿಗೆ ಒಳಗೆ। ನೀರು ತಕ್ಕಬಂದು। ಬಸವಣ್ಣನವರ ಮೇಲುಯ್ದು ಬುಟ್ಟು। ಗುರುವೆ ಯೇಳ್ತೀನಿ ಕೇಳು ಬಸವ। ನಾನು ಮುಟ್ಟಿ ಪೂಜೆ ಮಾಡಿದ್ರೆ। ಎಷ್ಟು ರವರುದ್ರವಾಗೋದೆ ಅಂತ ಯೇಳ್ಬುಟ್ಟು। ಹೂವಿನ ಕರಡಿಗೆ ಹೂವನ್ನೇ ಎತ್ತಿ ಬಗ್ಗಿಸ್ಬಿಟ್ಟು। ಊಬತ್ತಿ ಉಂಡೆ ತಕ್ಕಂಡೋಗಿ। ಅಲ್ಲಿ ಮಾಡಿರುವಂತ ತಳಿಗೆ ಅನ್ನವನ್ನು। ಮೂರೇ ಬಾಚಿಗೆ ಬಾಚಿಕೊಂಡು। ಇದು ಅಂತೇಳಿ।

ಅವನು ಒಂದಾರು ಚಿತ್ತ ತೆಗೆದವನೇ
ಆಹಾ... ನೋಡಿ ನಮ್ಮ ಶಿವನಾ

ಏ ಬಸವಾ ನಿನ್ನ ಮುಟ್ಟಿ ನಾನು ಪೂಜೆ ಮಾಡಿದ್ರೆ। ಎಷ್ಟು ಹೊತ್ತಾದೀತೋ ನಾ ಕಾಣೆ ಅನ್ಬುಟ್ಟು। ಹೂವು ಸುರುದ್ಬುಟ್ಟು ಚರಿಗೆ ತಕ್ಕಂಡೋಗಿ। ನೀರು ಸುರುದ್ಬುಟ್ಟು। ಈಬೂತಿ ಉಂಡೆ ಹಣೆ ಮ್ಯಾಲೆ ಬೀಸಾಕ್ಬುಟ್ಟು।

ಅವನು ಅರಿವಾದ ಚಿತ್ತಗೆದವನೇ
ಆಹಾ... ನೋಡಿ ನಮ್ಮ ಶಿವನಾ

ತಕ್ಷಣವೇ ಕಲ್ಲು ಬಸವ। ಆಕಾಸ ಅಂತ್ ನೋಡಿ। ಬೂಮಿತಾಯಿ ಬಗ್ಗಿ ನೋಡಿ। ಅಯ್ಯೋ ಗುಟರಕೆ ಹಾಕ್ಕಂಡು।

ಹಸಿಕಡ್ಲೆ ತಿನ್ನತಾನಲ್ಲೋ ಬಸವಣ್ಣಾ
ಆಹಾ... ನೋಡಿ ನಮ್ಮ ಶಿವನಾ

ಗುರುವೇ ಗುರುಪಾದವೇ। ನನ್ನ ಶರಣು ನಿಮ್ಮ ಪಾದಕ್ಕೆ ಅರುವಾಗಲಿ ಅಂತ್ಹೇಳಿ। ಶಾಂತಮಲ್ಲಿಕಾರ್ಜುನ ಸ್ವಾಮಿಯವರಿಗೆ ನಮಸ್ಕಾರ ಮಾಡ್ಬುಟ್ಟು। ಮಾಯ್ಕಾಕ್ಕಾರ ಗಂಡ ಮಾದಪ್ಪ। ಮುತ್ತಿನ ಜೋಳಿಗೆ ಮುಂಗೈಲಿ ಧರಿಸ್ಕೊಂಡು। ಕಂಚಿನ ಕಂಸಾಳೆ ಕೈಲಾಧಾರ ಮಾಡ್ಕೊಂಡು। ಧಾರೆ ಗಾತ್ರ ದಂಡುಕೋಲು ಬಲಗೈಲಿಡಕೊಂಡು। ಆವಾಗ ಕೊಳ್ಳೇಗಾಲವನ್ನು ಬಿಟ್ಟು ಮಾದಪ್ಪ।

ಅವರು ಮಧುವನಳ್ಳಿ ಬೀದಿಗಾಣೆ ಹೊರಟವರೆ।
ಮಾದೇವಾ

ನೋಡಿ ನಮ್ಮ ಶಿವನಾ।

ಸಿದ್ದಯ್ಯಪುರ ಕೆರೆ ಏರಿಮ್ಯಾಲೆ ಕಡ್ದು ಮಧೂನಳ್ಳಿ ಬೀದಿಗಾಣೆ ಕದ್ದು ನಮ್ಮಪ್ಪಾಜಿ ಮಾಯಕ್ಕಾರ ಗಂಡ। ಆ ಪುಟ್ಟ ಪಾದವನ್ನು ಮೆತ್ತಗಿಟ್ಟುಕೊಂಡು। ಗುಂಡಲವನು ದಾಟಿಕೊಂಡು।

ಅವರು ಸಿರಿಗಾನಲ್ಲೂರು ಕಡೆಯ ಬೀದಿಗಾಣೆ ಒಯ್ತಾರೆ
ಮಾದೇವಾ

ನೋಡಿ ನಮ್ಮ ಶಿವನಾ।

ಸಿವ ಸಿವಾ ನಮ್ಮಪ್ಪಾಜಿ ಮಾದೇವ। ಮಾಯಕಾರ ಆಗಲೀಗ ಬರುವಂತ ಕಾಲದಲ್ಲಿ। ಸ್ವಾಮಿ ಸಿಂಗಾನಲ್ಲೂರಿಗೆ ಬಂದು। ಒಂದು ಜಗಲಿ ಮ್ಯಾಲೆ ಮೂರ್ತ ಮಾಡಿದ ಮಾಯಕಾರ। ಆ ಸಿಂಗಾನಲ್ಲೂರು ಇಚಾರ ಎಂಗಪ್ಪಾ ಅಂದ್ರೆ। ಆಗಲೀಗ ಅಲ್ಲಿ ನೋಡಿದ್ರು ಕಲ್ಲು ಬಸವ। ಆ ಕಲ್ಲು ಬಸವನಿಗೆ ಉಳಿಗೆ ತಕ್ಕಂಡು ಓದವನ್ನ। ಉಳಿಗನೂ ತಿನ್ನಳ್ಳದು ಬಸವಣ್ಣ। ಆಗಲೀಗ ಮಾಯಕ್ಕಾರ ಗಂಡ।

ಅವರು ನೆಗಲಾಡುತವರೆ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ
ಮಲೆಯೋ ಮಾದೇವಾ ಒಲಿವಾ ಚಂದವೋ
ನೋಡಿ ನಮ್ಮ ಸಿವನಾ

ಸಿಪ ಸಿವಾ ಗಂಡ ಸತ್ತ ಮುಂಡೆ। ಅವಳಿಗೆ ಒಬ್ಬನೇ ಮಗ। ಆವತ್ತಿನ ದಿನ ಅವಳ ಮಗನಿಗೆ। ಊಳಿಗ ತಕ್ಕಂಡೋಗದು। ಪೋಗ ದಿನ ಬಂದು ಆಗ ತಬ್ಬಿಕೊಂಡು।

ಅವಳು ದುಕ್ಕ ಮಾಡುತವಳೆ ಮುದುಕಮ್ಮಾ
ಆಹಾ... ನೋಡಿ ನಮ್ಮ ಸಿವನಾ

ಮುದುಕಮ್ಮ ಯಾಕಮ್ಮಾ ದುಕ್ಕ ಮಾಡೀಯೇ?। ಆ ಜಂಗಮರನ್ನ ಏನಂತೇಳ್ಲಿ ಸ್ವಾಮಿ। ನಮ್ಮ ಊರಲ್ಲಿ ದಿನಕ್ಕೊಬ್ಬ ಊಳಿಗ ತಕ್ಕಂಡೋಗ್ಬೇಕು। ಕಲ್ಲು ಬಸವ ಊಳಿಗಾನೂ  ತಿನ್ತದೆ। ತಕ್ಕಂಡೋದ ತಮ್ಮಡೀನೂ ತಿನ್ತದೆ। ಇವತ್ತಿನ ದಿವಸ ನನ್ನ ಮಗ। ಊಳಿಗ ತಕ್ಕಂಡೋಗ್ಬೇಕು ಬಸವನಿಗೆ ಅಂತ।

ಅದಕಾಗಿ ನಾನು ದುಕ್ಕ ಮಾಡ್ತಿವ್ನಿಕಣಪ್ಪಾ ಅಂದಲ್ಲ!
ಆಹಾ... ನೋಡಿ ನಮ್ಮ ಸಿವನಾ

ನೀನು ಚಿಂತಿ ಮಾಡಬೇಡ ಮುದುಕಮ್ಮ। ಇವತ್ತಿನ ಊಳಿಗವನ್ನು। ನಿನ್ನ ಮಗನ ಕೈಲಿ ಕಳಿಸಬೇಡ। ಈವತ್ತು ನಾನೇ ತಕ್ಕಂಡು ಒಯ್ತೀನಿ। ಉಕ್ಕಿನ ಕಡಲೆ ಮಾಡಿಸ್ಕಂಡ। ಆಗ ಉಕ್ಕಿನ ಕಡ್ಲೇನೀಗ ಮಡಗ್ಬುಟ್ಟು। ಉಕ್ಕಿನ ಕಡ್ಲೆ ನೋಡ್ಬುಟ್ಟು।

ಬಸವಣ್ಣಾ ಆಗ ಕಣ್ಣೀರು ಸುರಸೀತು ಬಸವಣ್ಣಾ
ಆಹಾ... ನೋಡಿ ನಮ್ಮ ಸಿವನಾ

ಏನಪ್ಪಾ ಬಸವಣ್ಣಾ। ಹೊಸ ತಮ್ಮಡಿ ಬಂದವನೆ ಅಂತ। ನೀನು ದುಕ್ಕ ಮಾಡೀಯಾ। ಕಣ್ಣೀರು ಸುರಿಸ್ತಾ ಇದ್ದೀಯಾ। ಇಲ್ಲಿ ನಿನಗೆ ಎಡೆ ತಂದಿವ್ನಿ। ಊಟ ಮಾಡಪ್ಪಾ ಅಂದ। ಆಗ ಕಣ್ಣೀರು ಸುರಿಸಿದಾಗ ಬಸವಣ್ಣ। ನಾಗಬೆತ್ತ ತಕ್ಕಂಡು। ಮಾಯಕ್ಕಾರ ಬಲಗೈಲಿ ಹಿಡ್ಕಂಡು।

ಅವರು ಮೂರು ಸೆಬ್ಬೆಯ ತೆಗೆದಾರು
ಆಹಾ... ನೋಡಿ ನಮ್ಮ ಸಿವನಾ

ಯಾವಾಗ ಮೂರು ಸೆಬ್ಬೆ ತೆಗೆದ ಮಾಯಕಾರ। ಗುಟುರು ಒಡಿಕೊಂಡು। ಮೇಲಕ್ಕೆ ಕಾಲು ಕೆಡಿವಿಕಂಡು। ಆವಾಗಲೀಗ ಒಂದು ಸಲ ಕುರುಂಬುಟ್ಟು। ಆಡುವಂತ ಕಾಲದಲ್ಲಿ। ಆ ಹಲ್ಲೆಲ್ಲಾ ಬೊಳು ಬೊಳನೆ ಸುರಿದೊಯ್ತಲ್ಲಾ ಸ್ವಾಮಿ।

ಅದು ಗುಟುಕು ಒಡೀತು ಬಸವಣ್ಣ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಮರಿದೇವರು। ಅಂಗಡಿ ಒಳಗೆ ಬಾಕಲು ತಕ್ಕಂಡು। ಕೈಕಾಲು ಮೊಕ ತೊಳ್ಕಂಡು। ಈಬೂತಿ ಕಟ್ಟುಕೊಂಡು। ಊಟ ಮಾಡ್ವುಟ್ಟು। ಗುರುವೇ ಹಾದಿಲೋಗವರೂನೂ। ಬೀದಿಲೋಗವರೂನೂ ಕರೆದು ಕರೆದು। ಮನೆ ಸಾಮಾನು ಅಂಗಡಿ ಸಾಮಾನ್ನೆಲ್ಲಾ! ಕೊಟ್ಬುಬುಟ್ರು ಗುರುವೇ। ಹೇಳ್ತೀನಿ ಕೇಳಪ್ಪಾ ಮರಿದೇವರೇ। ಎಸ್ಟು ಲಾಬವಯ್ಯ ಮಾಡಿದೆ! ದುಡ್ಡು ಕೊಡಪ್ಪಾ ಅಂತ ಕೇಳಿದ್ವಲ್ಲಪ್ಪಾ। ಗುರುವೇ ಆದ್ರೆ ಹೇಳ್ತೀನಿ ಕೇಳಿಸ್ವಾಮಿ। ನಾಳೆ ಕೊಡ್ತೀನಿ ನಾಳಿದ್ದು ಕೊಡ್ತೀನಿ ಅಂತೇಳಿ।

> ಎಲ್ಲಾ ಕಡ ತಕ್ಕಂಡೋದ್ರು ಕಣೋ ನಮ್ಮ ಸಿವನೇ।
> ಆಹಾ... ನೋಡಿ ನಮ್ಮ ಸಿವನಾ

ಈ ಯಾಪಾರ ನಿನಗೆ ಬ್ಯಾಡಕಣೋ ಮರಿದೇವ್ರೆ ಸುಕ್ರವಾರ ಸಂತೆ। ಬಂಡಳ್ಳಿ ಪ್ಯಾಟೆ, ಸಿಂಗಾನಲ್ಲೂರು ಸಂತ್ಗೋಗಿ। ಸಾಮಾನ್ ತಂದ್ಕೊಂಡಿರಪ್ಪಾ ಅಂತೇಳಿ। ಅಯ್ಯಾ ನನ್ನ ಕೆಂದೆತ್ತಿನ ಮ್ಯಾಲೆ।

> ದುಡ್ಡು ಗೋಣಿ ಚೀಲಾನೂ ಕೊಟ್ಟು ಕಳಿಸಿದ್ನಪ್ಪಾ
> ಆಹಾ... ನೋಡಿ ನಮ್ಮ ಸಿವನಾ

ಬಂಡಳ್ಳಿ ಯಾಪಾರ ಅಂತೇಳಿ। ಅವರು ಗಂಟು ಮೂಟೆ ಕಟ್ಕಂಡು ಬಂದ್ರಲ್ಲೋ ಮಾದಯ್ಯಾ। ಗಂಟು ಮೂಟೆ ಕುಯ್ಕುವಂತ ಕಾಲದಲ್ಲಿ। ನನ್ನ ಒಡೀ ಬ್ಯಾಡಿ ಕಣ್ರಪ್ಪಾ। ಎಲ್ಲಾನೂ ತಕ್ಕಂಡೋಗಿ ಅಂತೇಳ್ಬುಟ್ಟು।

> ಗುರುವೆ ಅವನು ಹಿಂದಿರುಗಿ ಬರುತಾನೇ
> ಆಹಾ... ನೋಡಿ ನಮ್ಮ ಸಿವನಾ

ಯಾಕಪ್ಪಾ ಮರಿದೇವರೇ। ಎಲ್ಲಪ್ಪಾ ಸಾಮಾನು। ಅಂತ ಕೇಳಿದ್ರಲ್ಲಪ್ಪಾ ಗುರುಗಳು। ಆಗ ಯೇಳ್ತೀನಿ ಗುರುಗಳೇ। ಕೌದಳ್ಳಿ ಕಳ್ಳರು ಬಂದು। ಗೋಣಿಚೀಲ ಕುಯ್ದುಬುಟ್ರು। ಎತ್ತಿನ ತೊಡೆ ಮುರ್ದೋಯ್ತು।

> ನಾ ಹಿಂದಿರುಗಿ ಬಂದಿಕಣೋ ಗುರುಗಳೇ
> ಆಹಾ... ನೋಡಿ ನಮ್ಮ ಸಿವನಾ

ವತಾರೆ ಎದ್ದು ಕೈಕಾಲು ಮೊಕ ತೊಳ್ಕಂಡು। ಈಬೂತಿ ಕಟ್ಕೊಂಡು।

> ನೀ ಪಡ್ಸಾಲೆ ಮ್ಯಾಲೆ ಕೂತ್ಕೋ ಅಂತಾರಲ್ಲಪ್ಪಾ। ಗುರುಗಳು
> ಆಹಾ... ನೋಡಿ ನಮ್ಮ ಸಿವನಾ

ಅಯ್ಯಾ ಪಟೇಲಂದು ಹಿಂಡಿಗೆ ಮೇಲಾಗಿ। ಈಗ ಮುಂದಾಗೋದ್ರೆ। ಆಚೆಗೆ ಎಲ್ಲಾ ಗೋವುಗಳು ಬತ್ತದಲ್ಲೋ। ಗುರುವೆ ಅಂತ ಪಡಸಾಲೇಲಿ ಕೂತ್ಕಂಡು। ತೊಡೆ ಮುರಿದು ಇನ್ನೂ ಮಸ್ಗವ್ರೇ। ಊರ ಪಟೇಲ ಬಂದು। ಹೇಳುವಂತ ಕಾಲದಲ್ಲಿ। ಗುರುವೇ ನಮ್ಮ ಪ್ರಬುಲಿಂಗ ಸ್ವಾಮಿಗಳು। ಒಂದು ಬಿಂದಿಗೆ ಹಣ ಅವನು।

ಲಂಚ ಕೊಡ್ತಾನಲ್ಲೋ ಮಾದೇವಾ
ಆಹಾ... ನೋಡಿ ನಮ್ಮ ಶಿವನಾ
ಮಲೆಯ ಮಾಯ್ಕಾರ ಬರುವಾ ಚೆಂಪವಾ।
ನೋಡಿ ನಮ್ಮ ಶಿವನಾ।

ಮಠಕ್ಕೆ ಬಂದ್ರಲ್ಲ ಗುರುಗಳು। ಅಪ್ಪಾ ಮರುದೇವ್ರೆ। ನಾಳೆಯಿಂದ ನಿನ್ಗೆ ಹೂವಿನ ಭಾಕ್ರಿ ಬೇಡಪ್ಪ ನನ್ನ ಮಠ ಮನೆ ಒಳುಗೆ ಅಡ್ಗೆ ಮಾಡುದ್ಕೆ ಸೌದೆ ತರುವಂತ ಕೆಲಸಕ್ಕೆ

ನಿಮ್ಮ ನೇಮ್ಸಿದ್ವಿ ಅಂದವ್ರ ಗುರುಗಳು
ನೋಡಿ ನಮ್ಮ ಶಿವನಾ।

ಏಳ್ಮಲೆ ಹೆತ್ತಯ್ಯ ಮಾಯ್ಕಾರ ಮಾದೇಶ್ವರ। ಬಡುವುರ್‍ಗೆ ಭಾಗ್ಯ ಕೊಡುವಂತ ನನ್ನಪ್ಪಾಜಿ। ಸಾವಿದೋರ್‍ಮ್ಯಾಲೆ ಇಂಬಾಗ್ವಾಲಾಡೋ ಮರಿದೇವ್ರು। ನಂಬುದೇ ಇದ್ದಂತ ಮರಂಕಾರದ ಮಾಯ್ಕಾರ ಮರುದೇವ್ರು। ಅನ್ನ ಇಕ್ಕಿದ ಮನೇ ಒಳುಗೆ ಹೊಸ್ನುಕ್ಕಲು ಚಿನ್ನೂಕ್ಕಲಾಗಿ। ಒಡೆಮ ಹೊಂಬಾಳೆಯಾಗಿ ವಾಲಾಡುವಂತ ಮಾದೇವ-

ಆವ್ರು ಸೌದುಗೋಯ್ತಾವ್ರಲ್ಲಪ್ಪ ಮಾಯ್ಕಾರ।
ನೋಡಿ ನಮ್ಮ ಶಿವನಾ।

ವನ ಕಾಯೋ ಹುಡುಗ್ರ ಸೇರುಸ್ಕೊಂಡು। ಆಡೋ ಗಂಟ ಗೋಲಿಗೆಜ್ಜುಗ ಆಡಿ। ಮಾಯ್ಕಾರ ನನ್ನಯ್ಯ ಏಳ್ಮಲೆ ಹೆತ್ತಯ್ಯ। ಕೆಂಪಾಳು ಗುತ್ತೀಲಿ ಕೆಂಬರ್‍ಗನ ಕರ್‍ದು। ಕಾಡು ಮೇಡ್ನಲ್ಲೆಲ್ಲ ಸವಾರಿ ಮಾಡಿ। ಪರದೆ ಸಾಯಂಕಾಲದೊತ್ಗೆ। ದಾಸ್ ಮಂಡ್ಲ ಹುಳುಕು ಮಂಡ್ಲ ಬಿಟ್ಟುಂಡ್ಲ ಬಾವ್ಮುಂಡ್ಲ। ಹೆಬ್ಬಾವು ಕ್ವಾರೆ ಹಾವು ಗೆಜ್ಜು ಮಂಡ್ಲ ಹಸ್ರಾವುಗಳ್ನೆಲ್ಲ ಹಿಡಿದು। ಒಂದುಕ್ಕೊಂದು ಸುಲ್ದು ಸೌದೆಹೊರೆ ಮಾಡ್ಕಂಡು-

ಉಗ್ರಾಣುಕ್ಕೆ ಸುದವ್ರೆ ಮಾದೇವ।
ನೋಡಿ ನಮ್ಮ ಶಿವನಾ।

ಸೌದುಗೋಗಿ ಕಟ್ಕೊಂಡ್ಬಂದು। ಉಗ್ರಾಣದಲ್ಲಿ ಮಡಗಿರುವಂತ ಕಾಲ್ದಲ್ಲಿ ಸೌದೆ ಹೊರೆಯಾದ ಹೊರೆಯೆಲ್ಲ ಹಾವಾಗ್ಬುಟ್ಟು ಒಂದೊಂದು ನುಲಿವಾ।

ಹರುವಾಡೊಂಗ್ಮಾಡವ್ರೆ ಮಾದೇವ
ನೋಡಿ ನಮ್ಮ ಶಿವನಾ।

ಅಡ್ಗೆ ಮಾಡವ್ರು ಕಣ್ಣಾರ ನೋಡ್ಬುಟ್ಟು। ಅವರು ಬಾಯ್ ಬಾಯ್ ಬಡ್ಕೊಂಡು।

ಗುರುಗಳತ್ರುಕೆ ಓಡೋಡಿ ಬತ್ತವ್ರೆ ಅಡಿಗೇವ್ರು
ನೋಡಿ ನಮ್ಮ ಶಿವನಾ।

ಅಯ್ಯೋ ಗುರುವೆ ಗುರು ಪಾದವೆ। ಇಲ್ಲಿ ಬಂದರೇನು ಕರೀಗಾಣುದಂಗವ್ನೆ ಕಿರಿಮಂಟ ಹಂಗವ್ನೆ। ಸೌದೆ ತಕ್ತೀನಿ ಅಂತ್ಹೋಗಿ। ಹಾವ ಚೋಳ್ಗಳ್ನೆಲ್ಲ ಒಡ್ಕೊಂಡ್ಬಂದಿದ್ದಾನೆ। ನಮ್ಮ ಕುಂತೂರು ಮಠವನ್ನು ಬುಟ್ಟು ಬ್ಯಾಗ್ನೆ ಕಳ್ಸಿ ಇವನ್ನ-

ಇವ್ರನು ಮಾಯ್ಕಾರ ಸ್ವಾಮಿ ಮರಿದೇವ್ರು।
ನೋಡಿ ನಮ್ಮ ಶಿವನಾ।

ಅಡಿಗೇರ ಮಾತನ್ನು ಕೇಳಿ ಗುರುಗಳು। ಅಯ್ಯಾ ಮರಿದೇವ್ರೆ ಇವತ್ತಿಂದ ನಿನ್ಗೆ ಸೌದೆ ಚಾಕ್ರಿ ಬ್ಯಾಡಪ್ಪ। ನಾಳೆಯಿಂದ ನೀನು ಮಠದ ದನಗಳ ಮೇಯಿಸ್ಕಂಡು ಬಾರಪ್ಪಾ। ಅಗ್ಲಿ ಗುರುವೆ ನಿಮ್ಮಾಜ್ಞೆಯನ್ನು। ನನ್ನ ತಲೆ ಮೇಲ್ಕೊಂಡು ನಡುಸ್ತೀನಿ।"

ಆದ್ರೆ ಯೇಳ್ತೀನಿ ಕೇಳಪ್ಪಾ। ಮರಿದೇವ್ರೆ ಇಲ್ಲಿ ಬಂದು। ನಿನ್ನಿಂದ ಇಷ್ಟಾದ್ದೇ ಸಾಕು। ನಮ್ಮ ಮಟ ಮನೆಗೂ ಸರಿಯಲ್ಲ ಗುರುವೇ।

ನೀನು ಹುಚ್ಚು ಮಾದೇವಾ ಕಾಣೋ ಓಗಪ್ಪಾ ಒಡೆಯಾ
ಆಹಾ... ನೋಡಿ ನಮ್ಮ ಸಿವನಾ

ಆದ್ರೆ ಏಳ್ತೀನಿ ಕೇಳಪ್ಪಾ ಸ್ವಾಮಿ। ನಿನ್ನ ಬಿಕ್ಷ ಬಂಡಾರಕ್ಕೆ ಬರ್ಲಿಲ್ಲ। ಸ್ವಾಮಿ ನಿನ್ನ ಕೈಲಿ ಹೆಸರು ಕಟ್ಟಿಸ್ಕೋಬೇಕು। ಅಂತ ಬಂದಿವ್ನಿ ಗುರುವೇ। ನನ್ನ ಹುಚ್ಚು ಮಾದೇವ ಅಂತ। ಹೆಸರು ಕಟ್ಟಿದ ಅಂತೇಳ್ಬುಟ್ಟು। ಅವನು ಹುಚ್ಚು ಮಾದೇವ ಅಂತ

ಹೆಸರು ಕಟ್ಟಿಸಿಕೊಂಡ ಒಯ್ತಾನೋ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಜಂಗಮ ಜಂಗಮರು
ಮಾದೇವ ಎತ್ತಲ ಜಂಗಮರು
ಮಾದಯ್ಯ ಮಾದಯ್ಯ

ಮಲೆ ಮಾದಯ್ಯ ಜಂಗಮರು
ಜಂಗಮ ಜಂಗಮರು
ಮಾದೇವ ಎತ್ತಲ ಜಂಗಮರು

ಮಲೆನಾಡು ಮಲೆಸೀಮೆಗೆ
ಒಬ್ಬ ಮಾದೇವ ಜಂಗಮರು
ಮಾಡಿದ ಮಾಯವ ಬಲ್ಲವರೇ।
ನನ್ನ ಸರಿಯಾಗಿ ಇನ್ನೂ ಬಂದವನೇ।
ಮಲೆನಾಡು ಮಲೆ ಸೀಮೆಗೆ

ಒಬ್ಬ ಮಾದೇವ ಜಂಗಮರು
ಜಂಗಮ ಜಂಗಮರು

ಬಡವರ ಮನೆಗೆ ಬಂದವನೇ।
ನನ್ನ ನಾಗಮಲೆಯ ಮಾದೇವಾ
ಮಲೆನಾಡು ಮಲೆ ಸೀಮೆಗೆ

ಒಬ್ಬ ಮಾದೇವ ಜಂಗಮರು
ಜಂಗಮ ಜಂಗಮರು

ಪ್ರಭುಸ್ವಾಮಿಯವರು ಉರಿಗದ್ದುಗೆಯನ್ನಿಳಿದ್ಬುಟ್ಟು। ಮಾದಪ್ಪ ಎರಡು ಮುಂಗೈ ಹಿಡಕಂಡ್ರು। ಮರಿದೇವ್ರ ನೀವು ನಿಜವಾಗ್ಲೂ ಮರಿದೇವ್ರಲ್ಲ। ಮಾಯ್ಕಾರನಾಗಿದ್ದೀ ಕಣಪ್ಪಾ। ಲೋಕ ಕಲ್ಯಾಣ ಮಾಡು। ನಡೆಯಪ್ಪಾ ಅಂತೇಳಿ ಅರ್ಥನಳ್ಳಿ ಮಟಕೆ ಕರ್‍ಕೊಂಡೊಯ್ತಾವ್ರೆ ಗುರುಗಳು।

ನೋಡಿ ನಮ್ಮ ಸಿವನಾ

ಮಾದಪ್ಪನಿಗೆ ಶೂನ್ಯ ಸಿಂಹಾಸನದ ಮೇಲೆ। ಆವಾಗಲೀಗ ಏಳನೇ ಗುರುವಾಗಿ ಮಾದಪ್ಪನಿಗೆ ಪಟ್ಟಕಟ್ಟಿ। ಅದೇ ಕಂಚಿನ ಕಂಸಾಳೆ ಕೊಟ್ಟು। ಈ ರಾಜ್ಯವನ್ನು ಆಳಪ್ಪ ಅಂತೇಳ್ಬುಟ್ಟು। ಊಳಿಗ ಮಾಡುವುದಕ್ಕೆ ಒಬ್ಬ ಸಂಸಾರಿಸಂಗಪ್ಪ ಅಂತ್ಹೇಳಿ ಸಂಗಪ್ಪನ್ನಿಟ್ಟು।

ಅರ್ಥನಳ್ಳಿ ಮಟದಲ್ಲಿ ನಾಲ್ಕಾರು ದಿನ ಕಳೆದ್ಬುಟ್ಟು ಸಂಗಪ್ಪ ಈ ಲೋಕದಲ್ಲಿ ಇರನಾರಿ। ನಾನು ಇಲ್ಲದ ಮಲೆಗೋಗ್ಬೇಕು। ನಾನು ಕಲಿಯುಗ ಕಟ್ಬಾಳಬೇಕು। ಕಾಸಿನ ಧೂಪ ಹಾಕಿಸಿಕೊಳ್ಳಬೇಕು। ಕರವೆತ್ತಿ ಕೈ ಮುಗಿಸಿ ಕೊಳ್ಳಬೇಕು। ನಂಬಿದವರ ಮನೆಯಲ್ಲಿ ತುಂಬಿ ತುಳುಕಾಡಬೇಕು। ನಂಬದಿದ್ದವರಿಗೆ ಹನ್ನೆರಡನೇ ಕಡೆ ಶನಿ ಆಗಬೇಕು। ನಂಬಿದರೆ ಮಾದೇಶ್ವರನಾಗಬೇಕೂಂತ್ಹೇಳಿ। ಅವರು ಅರ್ಥನಳ್ಳಿ ಬರುತವರೇ ಮಾದೇವಾ।

ನೋಡಿ ನಮ್ಮ ಸಿವನಾ

ಸಂಸಾರಿ ಸಂಗಪ್ಪ ನಾನೂ ಬತ್ತೀನಿ ಅಂತೇಳಿ ಓಡೋಗಿ ನಮಸ್ಕಾರ ಮಾಡಿದ ನನ್ನ ಆದಿ ಕುಂತೂರು ಮಠದಲ್ಲಿ। ಪ್ರಭುಸ್ವಾಮಿಯಿಂದ ನೀನು ಅಪ್ಪಣೆ ಪಡೆದು ಬಾರಪ್ಪಾ ಅಂತೇಳ್ಬುಟ್ಟು। ಅವರು ಧೀರ ಹೊರಟವರೊ ಮಾದೇವಾ।[8]

ಹಾ ನೋಡಿ ನಮ್ಮ ಸಿವನಾ

ಆಗಲೀಗ ನಮ್ಮಪ್ಪ ಮಾಯಕ್ಕಾರ ಮಾದೇವ। ಕುಂತೂರು ಮಟಕೆ ಬಂದು। ಒಳ್ಳೆ ಹುಚ್ಚು ಮಾದೇವ ಅಂತ। ಹೆಸರ ಕಟ್ಕಂಡು। ಗುರುವೆ ಅಯ್ಯಾ ಕಲ್ಯಾಣ ಪಟ್ಟಣಕೆ। ಒಯ್ತಾನ್ರೋ ಮಾದೇವಾ।

ಒಕ್ಕಳಕ್ಕಿ ಹಾಕಿ ಒಂದು ಬದನೇಕಾಯಿ। ನಿತ್ಯ ತೊಂಬತ್ತಾರು ಕೋಟಿ ಜಂಗಮರಿಗೆ। ಬೋಜನ ಮಾಡುವಂತ ತಾಯಿ।

ಅವಳ ಕಲ್ಯಾಣ ಪಟ್ಟಣಕ್ಕೆ ಒಯ್ತಾನ್ರೋ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಕಲ್ಯಾಣ ಪಟ್ಟಣಕೆ ಹೋಗುವಂತ ಕಾಲದಲ್ಲಿ। ನೂರೊಂದು ಕೋಟಿ ಲಿಂಗಾಯಿತರೂವೆ। ಕೊಂಡದೊಳಗೆ ಸ್ನಾನ ಮಾಡ್ತಾರೆ। ಮಡಿ ಉಡ್ತಾರೆ ಗುರುವೇ। ನಮ್ಮಪ್ಪ ಮಾಯಕ್ಕಾರ ಮಾದೇವ। ಮತ್ತೆ ಸ್ನಾನ ಮಾಡಿಕೊಂಡು। ಹೆಗ್ಗಜ್ಜಿ ತುರಗಜ್ಜಿ ಅಂಟಿಸಿಕೊಂಡು। ಗತಗತ ನಾತ, ನೊಣ ಮುತ್ತಿಸ್ಕಂಡು।

ಅಯ್ಯಾ ಕಜ್ಜಿ ರೂಪದಲ್ಲಿ ಒಯ್ತಾನಲ್ಲೋ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಇವನು ಉಳಿತು ನಾತ ಕೊಳಕು ನಾತ ನೋಡ್ಬುಟ್ಟು! ಜಂಗಮರು ಯಾವ ಸೀಮೆ ಬಡ್ಡಿಮಗನೋ ಕಾಣೆ! ಹೆಗ್ಗಜ್ಜಿ ತುರುಗಜ್ಜಿ ಅಂಟಿಸಿಕೊಂಡು! ನಾತ ಬಡೀತನಲ್ಲಾ! ನಾವು ನೀಲಮ್ಮನ ಬಿನ್ನಕೆ ವೋಗಬೇಕಲ್ಲಾ!

ಯಾವ ರೀತಿ ಬಿನ್ನಕೆ ವೋಗ್ಬೇಕು ಅಂತೇಳಿ। ಈ ಸೂಳೆ ಮಗನಿಗೆ ದೊಣ್ಣೆ ತಗಳ್ರೋ ಅಂತೇಳಿ।

ಅವರು ತಳ್ಳಕ್ಕೆ ಬರ್ತಾರಲ್ಲೋ ದೀರ ಮಾದಯ್ಯಾ
ಆಹಾ... ನೋಡಿ ನಮ್ಮ ಸಿವನಾ

ಅಯ್ಯೋ ಮುಂಡೆ ಮಕ್ಕಳಿರಾ! ನಿಮ್ಮ ಕೈಲಿ ನಾನು ತಳ್ಳಿಸಿಕೊಂಡಿದ್ದೆ ಉಂಟಾದ್ರೆ! ಕಾಮ ಕರ್ಮೋಲ್ಲ ಬೂಮಿ ಬೆಳೆಯೋದಿಲ್ಲ! ಸೂರ್ಯ ಚಂದ್ರ ಅಡ್ಡವಾಗ್ತಾರೆ ಅಂತೇಳ್ಬುಟ್ಟು! ಇವರು ತಳ್ಳೋಕೆ ಬರೋ ಅಂತ ಕಾಲ್ದಲ್ಲಿ ನಮ್ಮಪ್ಪ ಮಾಯಕ್ಕಾರ ಮಾದೇವಾ। ಅವರಿಗಿಂತ ಮುಂದೇನೇ ವೋದಾನು ಸ್ವಾಮಿ।

ಒಂದು ಕೊರಕಲಲ್ಲಿ ಸತ್ತು ಮಲಗವನೇ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಅಲ್ಲಿ ನೂರೊಂದು ಕೋಟಿ ಲಿಂಗವಂತರೂವೆ! ಬುಡಬುಡನೆ ಸ್ವಾಮಿತಕ್ಕೆ ಬನ್ಬುಟ್ಟು! ಸ್ವಾಮಿ ಎಲ್ಲವನ್ನೂ ತಕ್ಕಂಡು! ಒಂದು ಹೂವಿನ ಚೌಕಕ್ಕ ಕಟ್ಬುಟ್ಟು!

ಅಯ್ಯಾ ಕಲ್ಯಾಣ ಪಟ್ಟಣಕ್ಕೆ ಬೀಸಾಕ್ತಾನಲ್ಲೋ ದೀರಾ ಮಾದಯ್ಯಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ನೂರೊಂದು ಕೋಟಿ ಲಿಂಗಾಯಿತರೆಲ್ಲಾ! ತಾನವಾಯಿತು ಮಡಿಯಾಯ್ತಲ್ಲಪ್ಪಾ! ತಮ್ಮ ಲಿಂಗಪೂಜೆ ಆಚರಿಸಲಿಕ್ಕೆ ಲಿಂಗ ನೋಡ್ತಾರೆ! ಗುರುವೇ ಒಂದು ಲಿಂಗೂ ಇಲ್ವಲ್ಲಾ! ಎಲ್ಲಾ ಯೋಚನೆ ಮಾಡ್ತಾ ಕೂತರಪ್ಪಾ! ಗುರುವೇ ತಾಯಿ ಸತ್ಯವಂತೆ! ಅಕ್ಕ ನೀಲಮ್ಮನವರು ಯಾಕೋ! ಕಂಡವರ ಮನೆ ಬಿನ್ನಕೆ ಯಾರೂ ಬರಲಿಲ್ಲ ಅಂತೇಳಿ।

ಅಯ್ಯೋ ಅರಮನೆ ಬಿಟ್ಟು ಬತ್ತಾಳೋ ಗನಸರಣೆ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಇಲ್ಲಿ ನೂರೊಂದು ಕೋಟಿ ಲಿಂಗಾಯಿತರೂವೆ! ತಲೆಕೆಳಗಾಕ್ಕಂಡು ಕೂತಿದ್ರಪ್ಪಾ ಗುರುವೆ! ಯಾಕೀತರ ಕೂತ್ರಲ್ಲೋ! ನಮ್ಮ ಮನೆ ಬಿನ್ನಕೆ ಯಾಕೆ ಬರದೇ ಇದ್ದರಿ! ಅಂತ ಕೇಳ್ತಾಳೆ ತಾಯಿ! ಅದ್ರೆ ಯೇಳ್ತೀನಿ ಕೇಳೋ ಗನಸರಣೆ! ಅಂಜಿ ಬಿನ್ನ

ಮಾಡು ಅಂಜದ ಬಿನ್ನಮಾಡು। ಅಂತಾರೆ ಗನಸರಣೆ। ಯಾಕಪ್ಪಾ ಅಂಜಿ ಬಿನ್ನ ಮಾಡೀರಿ। ಅಂಜದೆ ಬಿನ್ನ ಮಾಡ್ರಪ್ಪಾ। ಅಂತ ಹೇಳಿದ್ದಲ್ಲೋ ಗನಸರಣೆ। ನೋಡಪ್ಪಾ ನೂರೊಂದು ಕೋಟಿ ಲಿಂಗಾಯಿತರೆಲ್ಲಾ। ತಾನ ಮಾಡಿದೋ ಮಡಿ ಉಟ್ಟಿದೋ।

ತಾಯಿ ನಮ್ಮ ಲಿಂಗಗಳು ಇಲ್ಲವಲ್ಲೋ ನನ್ನ ಗನಸರಣೆ
ಆಹಾ... ನೋಡಿ ನಮ್ಮ ಸಿವನಾ

ಏನಪ್ಪಾ ಲಿಂಗ ಇಲ್ಲ ಅಂದ್ರೆ। ಯಾರಪ್ಪಾ ಕಳ್ಳರು ಕಾಕರು ಬಂದಿದ್ರು। ಅಂತ ಕೇಳ್ತಾಳಪ್ಪ ಗನಸರಣೆ। ಯಾರೂ ಇಲ್ಲ ಕಣವ್ವಾ। ಯಾರೋ ಕಾಣೆ ಕಜ್ಜಿ ಅಂಟಿಸಿಕೊಂಡು ಬಂದು। ಕೊರಳಿಗೆ ಬುಟ್ರು ಕಣೋ। ಅಯ್ಯೋ ಯೇಳ್ತೀನಿ ಕೇಳಪ್ಪಾ ಜಂಗಮರೇ। ಅವರು ಯಾರು ಅಂತ ಕಂಡು ಹಿಡ್ದಿರಿ। ನೆತ್ತಿಮ್ಯಾಲೆ ರುದ್ರಗಣ್ಣು ಸ್ವಾಮಿ। ಮರೆತೋರ ಮನೆ ಮುರಿದವನು। ಗಂಡುಗಲಿ ಮೇಲೆ ಮೆರೆವಂತ ಮರಿದೇವರು।

ಅವನ ಪಾದ ಹಿಡಿಯೋಗಿ ಅಂತೇಳ್ತಾಳಲ್ಲೋ ಗನಸರಣೆ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಅಂಜಿ ಬಿನ್ನ ಮಾಡಿದೆವು। ಅಂಜದೆ ಬಿನ್ನ ಮಾಡಿದೆವು। ಇವತ್ತು ಅವನ ಪಾದವೇ ಹಿಡಿಬೇಕು ಗುರುವೇ। ನೂರೊಂದು ಕೋಟಿ ಲಿಂಗಾಯಿತರೆಲ್ಲಾ ಬಂದು।

ಗುರುವೇ ಆ ಪಾದ ಹಿಡೀತಾರಲ್ಲೋ ಗನಸರಣೆ
ಆಹಾ... ನೋಡಿ ನಮ್ಮ ಸಿವನಾ

ನೋಡಿ ಸ್ವಾಮಿ ನಾವು ಮಾಡಿದ ತಪ್ಪಿಗೆ। ಈವತ್ತಿನ ಬಿನ್ನ ನಿಮ್ಮದಾಗಲಿ। ನಾಳೆ ಬಿನ್ನ ನಮ್ಮದಾಗಲಿ।

ಗುರುವೇ ನಮ್ಮ ಲಿಂಗ ಕೊಟ್ಟುಟ್ಟು ಬಾರಪ್ಪಾ ನೀವು ಮಾದೇವೋ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಅಕ್ಕ ನೀಲಮ್ಮನ। ಬಿನ್ನಕೆ ಬರುವಂತ ಕಾಲದಲ್ಲಿ ಎಲ್ಲಾ ಊಟ ಮಾಡುವಂತ ಕಾಲ್ದಲ್ಲಿ। ನಮ್ಮಪ್ಪ ಮಾಯಕಾರ ಮಾದೇವ।

ಅಯ್ಯಾ ಚಂದ್ರಪಟ್ಟಣಕೆ ಓಯ್ತಾನಲ್ಲೋ ಮಾದೇವಾ।
ಆಹಾ... ನೋಡಿ ನಮ್ಮ ಸಿವನಾ

ಆದ್ರೆ ಯೇಳ್ತೀನಿ ಕೇಳ್ರಪ್ಪಾ। ನನ್ನ ಮನೆ ಬಿನ್ನ ಆಯಿತು। ಬಿನ್ನ ತೀರಿಸಿಕೊಂಡು ನನ್ನ ಕಂದಗಳಿರಾ। ನಾಳೆದಿನ ನಾನು ಬಿನ್ನ ಮಾಡ್ತೀನಿ। ಬೇವಿನಕಾಯಿನ ಗಾತ್ರದ ಲಿಂಗವಾ। ಯಾರು ಕಟ್ಟಿದ್ದೀರಿ ಅವರೆಲ್ಲಾ ಬರಬೇಕು ಅಂದ್ರಂತೆ। ಯಾರು ಬರ್ಲಿಲ್ಲ ಅಂದ್ರೆ ಎಕ್ಕದಗಿಡ। ಗುಳ್ಳಿಗಿಡ ಗುಪ್ಪಟೆಗಿಡ ಹುಟ್ಟಲಿ ಅಂತ। ಸಾಪ ಹಾಕಿ ಬಿಡ್ತಾನೆ। ಅವನು ನೂರೊಂದು ಕೋಟಿ ಲಿಂಗಾಯಿತರು। ಇದೇ ಪಟ್ಟಣಕೆ ಇರಬೇಕು। ನಾಳೆ ಬಿನ್ನ ಮಾಡ್ತೀನಿ ಅಂತೇಳಿ।

ಅಯ್ಯೋ ಸಾರತಾನಲ್ಲೋ ದೀರ ಮಾದೇವಾ
ಆಹಾ... ನೋಡಿ ನಮ್ಮ ಶಿವನಾ

ನಾಳೆದಿನ ನಿಮ್ಮ ಮನೆಗೆ ಬಿಸ್ನಕ್ಕೆ ಬರ್ತೀವಿ ಅಂತ। ಒಪ್ಪಕೊಂಡ್ರಲ್ಲಾ ಗುರುವೇ। ಅಯ್ಯಾ ನಾಳೆ ದಿನ ಬಿಸ್ನ ಮಾಡ್ತಾನೆ। ಮಾದೇವ ಅಂತ ಹೇಳಿಸ್ವಾಮಿ। ಅಯ್ಯಾ ಚಂದ್ರ ಪಟ್ಟಣಕ್ಕೆ।

ಇನ್ನು ಹೊಯ್ತಾನಲ್ಲೋ ಮಾದೇವೋ
ಆಹಾ... ನೋಡಿ ನಮ್ಮ ಶಿವನಾ

ನಾಳೆ ದಿನ ಕಲ್ಯಾಣ ಪಟ್ಟಣದಿಂದ। ಎಲ್ಲಾ ನೂರೊಂದು ಕೋಟಿ ಲಿಂಗಾಯಿತರೂವೆ। ಗುರುವೆ ಎಲ್ಲರನ್ನೂ ಕುಂಡ್ರಸ್ಬುಟ್ಟು। ನನ್ನ ಸತ್ಯವಂತೆಯಾದ ಅಕ್ಕ ನೀಲಮ್ಮ। ಏನಂತ ಯೋಚನೆ ಮಾಡ್ತಾಳೆ ಗುರುವೆ। ಆಗಲೀಗ ನಮ್ಮಪ್ಪ ಮಾಯಕಾರ ಮಾದೇವ। ಅವನು ವಾಸು ದೇವನನ್ನು ಕರಿಸ್ಬುಟ್ಟು। ರಜಾ ವಡಿಸ್ಬುಟ್ಟು ಗುರುವೇ। ಮಡಿವಾಳನ್ನ ಕರದ್ಬುಟ್ಟು। ಮಡಿ ಬಿಟ್ಟು ಬಿಟ್ಟು ಸ್ವಾಮಿ। ತಾಯಿ ಕಟ್ಟೆದಂತ ಮುಂಗ್ಯೆ ಗಾತ್ರ ಮೂರು ಬುತ್ತೀನೂ ಬಿಚ್ಚಿ। ನೀನು ಕಟ್ಟೆದಂತ ಬುತ್ತಿ ಹಾಲುಅನ್ನ ಆಗು ಅಂದ್ರೆ ಆಗ್ಬೇಕು। ಸಪ್ಪೆಸೊಪ್ಪು ನೀರಾಗು ಅಂದ್ರೆ ಆಗಬೇಕು। ಏನು ಬೇಕೋ ಆದಾಗಬೇಕು ತಾಯಿ। ದಿಗ್ಗನೆ ಏರಬೇಕು ಬುಗ್ಗನೇರಬೇಕು ತಾಯಿ।

ಅಂತೇಳಿ ಅಯ್ಯಾ ಮೂರು ಬುತ್ತೀನೇ ಸುರಿದವರೆ।
ಆಹಾ... ನೋಡಿ ನಮ್ಮ ಶಿವನಾ

ಮೂರು ಬುತ್ತಿಯ ಬಿಚ್ಚಿ ಸುರಿಯೋ ಹೊತ್ತಿಗೆ। ಆಕಾಸಕ್ಕೂ ಬೂಮಿಗೂ ಬೆಳೆದು ಬುಡ್ತಲ್ಲಾ ಗುರುವೇ।

ಆಯ್ಯಾ ಬಾ ಮಾದಯ್ಯ ಬಾ।
ಗಿರಿಯೊಳು ಮಾದೇವ ಲಿಂಗ ಬಾ।।
ಅಯ್ಯಾ ಬಾ ಮಾದೇವ ಬಾ।
ಗಿರಿಯೊಳು ಮಾದಯ್ಯ ಲಿಂಗ ಬಾ।।
ಬೆಡಗುಗಾರ ಮಾದಯ್ಯ ಬಾ
ಗಿರಿಯೊಳು ಮಾದೇವ ಲಿಂಗ ಬಾ।। ಅಯ್ಯಾ ಬಾ...।।

ವಜ್ಜರದೊಳಗಿನ ಮಲೆಯೊಳಗೆ
ಗಿರಿಯೊಳು ಮಾದೇವಲಿಂಗಬಾ।। ಅಯ್ಯಾ ಬಾ।।
ಯಾರೂ ಇಲ್ಲದ ಮಲೆಯೊಳಗೆ
ಗಿರಿಯೊಳು ಮಾದೇವ ಲಿಂಗ ಬಾ।। ಅಯ್ಯಾ ಬಾ।।
ನಾಲ್ಕು ರಾಜ್ಯವ ಪಡೆಯೋಕೆ।
ಗಿರಿಯೊಳು ಮಾದೇವ ಲಿಂಗ ಬಾ।। ಅಯ್ಯಾ ಬಾ।।

ಆಗಲೀಗ ನಮ್ಮಪ್ಪಾಜಿ ಮಾಯಕ್ಕಾರ ಮಾದೇವ। ತಾಯಿ ಕಟ್ಟಿದಂತ ಮೂರು ಬುತ್ತೀನೂ ಬಿಚ್ಚಿಟ್ಟು। ಆಕಾಸಕ್ಕೂ ಬೂಮಿಗೂ ಕೀಲುಕೊಟ್ಟಂತೆ। ನಿಂತದಲ್ಲಪ್ಪಾ ಗುರುವೇ। ಕೂತಿರುವಂತ ನೂರೊಂದು ಕೋಟಿ ಲಿಂಗಾಯಿತರೆಲ್ಲಾ। ಕರಿಸ್ಬುಟ್ನಲ್ಲಾ ಗುರುವೇ। ನನ್ನ ಸತ್ವವಂತೆಯಾದ ಅಕ್ಕ ನೀಲಮ್ಮನವರು। ಸಬಾ ಪಂಕ್ತಿಗೆ ಬಂದ್ರಲ್ಲಪ್ಪಾ ಗುರುವೇ। ಅಂಚಿ ಕಡ್ಡಿ ಸೌದೆ ಕೊಡಲಿಲ್ಲ। ಬೆಂಕಿ ಕೊಡಲಿಲ್ಲ ಬಿಸಿನೀರು ಕೊಡ್ನಿಲ್ಲ। ಯಾವ ರೀತಿ ಊಟ ಇಕ್ಕನೋ। ಅಂತೇಳ್ಬುಟ್ಟು ಬನ್ಬುಟ್ಲು ಗುರುವೇ। ಯಾರೋ ಕಾಣೇ ಸೂಳೇ ಮಗನು। ಅಯ್ಯೋ ಗನಸರಣೆ ಸಿವಸರಣೆ। ಸಬೆಗೆ ಬಂದು ನಿಂತವಳಲ್ಲಾ। ಇಸ್ಟು ರೂಪಸಿಯಾಗಿ ಅಂತೇಳ್ಬುಟ್ಟು। ಅವಳಿಗೆ ಅರಿವಾಯ್ತಾಲ್ಲೋ।

ನನ್ನ ಸತ್ವವಂತೆ ನೀಲಮ್ಮನಿಗೆ
ಆಹಾ....... ನೋಡಿ ನಮ್ಮ ಸಿವನಾ

ಆಗಲೀಗ ನನ್ನ ಸತ್ಯವಂತೆ ಅಕ್ಕ ನೀಲಮ್ಮ। ಯಾವನೋ ಮನ ಹಿಡಿಲಾರದೆ। ತನ್ನ ಮನಸ್ನಲ್ಲಿ ಹಾಳು ಯೋಚ್ನೆ ಮಾಡೋವ್ನೊತ್ಗೆ। ಪ್ರಾಣ ಓಯ್ತಲ್ಲೋ ಗುರುವೆ। ಅರಪ್ಪಾ ಮರಿದೇವರೇ। ನೀನು ನನ್ನ ಎದೆ ಪಾಲನ್ನು ಕೊಯ್ದು ಬುಟ್ಟು। ಅವರೇ ಕಾಳು ಗಾತ್ರ ತೊಗರಿಕಾಳು ಗಾತ್ರ। ರಾಗಿ ಗಾತ್ರ ಸ್ವಾಪ್ಗೆ ಗಾತ್ರ ಕೊಯ್ದುಬುಟ್ಟು। ಇಲ್ಲಿರುವಂತ ಸಭೆಗಳೆಲ್ಲಾ

ಹಪ್ಪಳ ಉಪ್ಪಿನ ಕಾಯಿ ಅಂತ
ಹಂಚಿಬಿಡಪ್ಪಾ ನೀನು ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಅಕ್ಕ ನೀಲಮ್ಮ। ಸತ್ಯವಂತೆ ಸತ್ತು ಮಲಿಕಂಡ್ಲಲ್ಲಾ। ಕಲ್ಯಾಣ ಪಟ್ಟಣ ಬಾಕಲು ಹಾಕಿಸಿಬಿಟ್ನಲ್ಲಪ್ಪಾ। ಗುರುವೇ ಅಕ್ಕ ನೀಲಮ್ಮ ಸತ್ತು ಮಲ್ಗವ್ಳೆ। ಇವಳ ಪವಾಡ ಎತ್ತುಬುಟ್ಹೋಗಿ ಅಂತ। ಮಾದೇವಪ್ಪನತ್ರ ಹೇಳಿದ್ರು। ಗುರುವೇ ಆದ್ರೆ ಯೇಳ್ತೀನಿ ಕೇಳು। ನಿನ್ನ ಸಿರಪಾದ ಒತ್ತೇನು। ನನ್ನಿಂದ ಆಗೋ ಕೆಲಸವೆಲ್ಲಾ। ನೀನು ಮಾಡಬೇಕು। ನಿನ್ನಿಂದ ಆಗೋ ಕೆಲಸವೇ ಹೊರತು। ನನ್ನಿಂದಾಗೋ ಕೆಲಸವಲ್ಲಾ ಗುರುವೇ। ಆ ಪವಾಡನೀಗ ಮಾಡಿ। ಎಚ್ಚರ ಮಾಡು ಅಂತಾರಲ್ಲಪ್ಪಾ। ಗುರುವೇ ಆದ್ರೆ ಯೇಳ್ತೀನಿ ಕೇಳೋ। ಗುರುಪಾದಕೆ ಸರಣು ಸ್ವಾಮಿ। ನೀನು ಸಜ್ಜೆ ಲಿಂಗ ದರಿಸಯ್ಯಾ।

ಮೂಡಲ ಮಲೆಯ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಚಜ್ಜೆ ಲಿಂಗ ದರಿಸ್ತೀನಿ ಕಣಪ್ಪಾ। ಈ ಪವಾಡ ಎತ್ತು ಅಂತ ಯೇಳ್ಬುಟ್ರಪ್ಪಾ ಗುರುವೇ। ನಮ್ಮಪ್ಪ ಮಾಯಕ್ಕಾರ ಮಾದೇವ। ತನ್ನ ನಾಗಬೆತ್ತವನ್ನು ತಾಯಿ ಮ್ಯಾಲೆ ಮಡುಗ್ಬುಟ್ಟು। ಗುರುವೇ ಅವಳು ಎದ್ದು ನಿಂತಾವಳಲ್ಲಾ।

ಮೂಡಲ ಮಲೆಯ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಆಗಲೀಗ ಕಲ್ಯಾಣ ಪಟ್ಟಣಕೆ ಪೋಗಿ। ಪೆಚ್ಚಿನ ಲಿಂಗ ದರಿಸಿಕೊಂಡು।

ಗುರುವೆ ಅವನು ಮತ್ತೇನು ಗ್ಯಾನ ಮಾಡವನೆ ದೀರಾ ಮಾದಯ್ಯಾ
ಆಹಾ... ನೋಡಿ ನಮ್ಮ ಸಿವನಾ

ನನ್ನ ಮಾಯಕಾರ ಮಾದೇಸ್ವರನಿಗೆ। ಹೆಬ್ಬುಲಿ ಸೃಷ್ಟಿ ಮಾಡ್ಬುಟ್ಟಿದ್ದಾರೆ। ಕರುಬರಗನ ಮ್ಯಾಲೆ ಹೋಗು। ನನ್ನ ಕಂದ ಅನ್ಬುಟ್ಟು। ನನಗಿಂತ ಹೆಚ್ಚಿನ ಗನಸರಣ। ಮಹದೇವ ಅಂತೇಳಿ। ನಾಮಕರಣ ಮಾಡಿಬಿಟ್ಟು। ನನ್ನ ಮಹಾ ಗುರು ಉಲ್ಲುರಿ ಬಸಪ್ಪನ। ನನ್ನ ಬೆನ್ನ ಹಿಂದುಗಡೆ ಬಿಟ್ಟಿದ್ದಾರೆ। ನನ್ನ ಗುರುದೇವ ಕಣ್ಣಿಗೆ ಮರೆಯಾಗಿ। ಹೋಗಬೇಕು ಅಂತೇಳಿ ನನ್ನ ಮಹಾ ತಂದೆ।

ಅವರು ಲೋಕದ ಮ್ಯಾಲೆ ಬರ್ತಾವರೇ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಈ ಪ್ರಕಾರವಾಗಿ ಲೋಕದ ವಿಸ್ತಾರದಲ್ಲಿ ಬರುವಾಗ। ಮಾಯಕಾರ ಮಾದೇಸ್ವರ ಹರಹರಾ ನಮ್ಮಪ್ಪಾಜಿ। ದೊಡ್ಡ ಬೆಟ್ಟದ ಪ್ರಬುಸ್ವಾಮಿಯವರು ಕೊಟ್ಟು। ಉಲ್ಲುರಿ ಬಸಪ್ಪನಾ ಬಿಟ್ಟು। ಗನ ಸರಣ ನನಗಿಂತ ಗನಸರಣ।

ಮಾಯಕಾರ ನೀನು ಮೂಡಲ ಮಲೆಗೆ ಹೋಗು ಅಂತವರೇ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಸಬಾಸ್ ನನ್ನ ಕಂದ ಮಾಯಕಾರ ಅಂತೇಳಿ। ತೊಡೆಯನ್ನೇ ತಟ್ಟಿಕೊಂಡು। ಕಿರುಗಣ್ಣ ಒಡೆಕೊಂಡು। ಕರಿ ಬರಗನ ಮೂರ್ತ ಮಾಡಿಕೊಂಡು। ಕೊಳ್ಳೇಗಾಲದ ಮರಡೀ ಗುಡ್ಡದೊಳಗೆ। ಬಂದು ನಿಂತಕೊಂಡು। ಮಂಡಿ ಬಟ್ಟಲ ಊರಿಕೊಂಡು।

ಅವರು ಹಿಂತಿರುಗಿ ನೋಡವ್ರೇ
ಮುದ್ದು ಮಾದೇವಾ
ಆಹಾ ನೋಡಿ ನಮ್ಮ ಸಿವನಾ

ಹರಹರಾ ಸಿವ ಸಿವಾ। ದಿವ್ಯಾ ದೃಷ್ಟಿಯಿಂದ ನೋಡುವಾಗ। ನನ್ನ ಮಹಾಗುರು।" ಇನ್ನೂ ನನಗೆ ಎದುರಾಗಿ ಕರಿಸಿಸ್ತಾ ಇದ್ದರೆ। ಇನ್ನೂ ಮರೆಯಾಗಿ।

ಯೋಜನಕ್ಕೆ ಪೋಗಭೇಕು ಅಂತೇಳಿ ಅವರು।
ಮಂಡಲ ದೃಷ್ಟಿಸಿ ನೋಡವರೇ ಮುದ್ದು ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಹರಹರಾ ಮುಂದಲ ದೃಷ್ಟಿಯಿಂದ ಬರುವಾಗ। ಮಾಯಕಾರ ಮಾದೇಸ್ವರ ಕೋಲದೇವನ ಗುಡ್ಡ। ನಾಗಬೆತ್ತ ಊರಿಕೊಂಡು। ನಾಗಬೆತ್ತದ ಮೇಲೆ ದೃಷ್ಟಿಯಿಂದ

ನೋಡುತ್ತಾ ಇದ್ದಾರೆ। ಮುಂದಲ ಬೆಟ್ಟದ ಪ್ರಬುಸ್ವಾಮಿ। ಇನ್ನು ಕಾಣುತಾ ಇದ್ದಾನೆ। ಕೋಲುಗಡ್ಡದಲ್ಲಿ ಕೋಲೂರಿ ನೋಡ್ತಾ ಇದ್ದೀನಿ ಅಂತ ಹೇಳಿ। ನಾನು ಕೋಲುರಿದ್ದರಿಂದ ಕೋಲಿನ ಗುಡ್ಡ। ಅಂತ ನಾಮಕರಣ ಮಾಡಿಬಿಟ್ಟು।

ಅವರು ಲೋಕದ ವಿಸ್ತಾರಕ್ಕೆ ಹೋಗುತ್ತವರೇ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಹರಹರಾ ಮಾಯಕಾರ। ಲೋಕದ ವಿಸ್ತಾರಕ್ಕೆ ಹೋಗುವಾಗ। ಸಿಂಗಾನಲ್ಲೂರು ದಂಡೇಲಿ ಬಸವಣ್ಣ ಬಂದು। ಮುಂದಲಾಗಿ ತಡ್ಡಿದ್ದಾನೆ। ಏನಪ್ಪಾ ಕಟ್ಟೆ ಬಸವೇಶ್ವರ। ನಾನು ಮೂಡಲ ಕೈಲಾಸಕ್ಕೆ ಹೋಗ್ತಾ ಇದ್ದೀನಿ। ಮೊದಲ ಪೂಜೆ ನಿನಗಾಗಲಿ।

ನನಗೆ ಮಾರ್ಗ ಬಿಡಪ್ಪಾ ಬಸವಣ್ಣಾ।
ಆಹಾ... ನೋಡಿ ನಮ್ಮ ಸಿವನಾ

ಮುಂದಲ ಪೂಜೆ ನಿನಗಾಗಲಿ ಅಂತೇಳ್ಬುಟ್ಟು। ಮಾರ್ಗ ಬಿಡಿಸಿಕೊಂಡು ಮಾಯಕಾರ ಮಾದೇಸ್ವರ।

ಅವರು ಮೂಡಲ ಮಲೆಗೆ ಬತ್ತವರೆ ಮುದ್ದು ಮಾದೇವಾ
ಆಹಾ... ನೋಡಿ ನಮ್ಮ ಸಿವನಾ

ಈ ಪ್ರಕಾರವಾಗಿ ಲೋಕದ ವಿಸ್ತಾರದಲ್ಲಿ ಬರುವಾಗ। ಮಾಯಕಾರ ಮಾದೇಸ್ವರ। ಕೌವಳ್ಳಿಯಿಂದಾಚೆಗೆ ಮೂಕಳ್ಳಿ ಮಾರಮ್ಮ। ಅಡ್ಡಗಟ್ಟಿ ತಡೀತಾ ಇದ್ದರೆ। ಎಲ್ಲಿಗೆ ಹೋಗ್ತಾ ಇದ್ದೀಯಪ್ಪಾ ಮಾದೇಸ್ವರ।

ನೀವು ಇಲ್ಲಿ ನೆಲೆಗೊಳಬೇಕು ಅಂತವಳೇ ತಾಯಮ್ಮ
ಆಹಾ... ನೋಡಿ ನಮ್ಮ ಸಿವನಾ

ಹರಹರಾ ಸಿವಸಿವಾ ಮೂಕಳ್ಳಿ ಮಾರಮ್ಮ। ಪ್ರಪಂಚದ ಮ್ಯಾಲೆ ಹೆಣ್ಣೇಳು ಕೋಟಿ ಗಂಡೇಳು ಕೋಟಿ। ಅವರು ದೂಪದ ಸೇವೆ ಮಾಡುತ್ತಾ ಇದ್ದರೆ। ಆ ದೂಪವೆಲ್ಲಾ ನಿನ್ನ ವಸವಾಗಲೀ।

ನಾನು ಮೂಡಲ ಮಲೆಗೆ ಹೋಯ್ತೀನಿ ಅಂತವರೇ ಮಾದೇವಾ
ಆಹಾ ನೋಡಿ ನಮ್ಮ ಸಿವನಾ

ಕುಂತೂರು ಬೆಟ್ಟದ ಪ್ರಭುಲಿಂಗ ಸ್ವಾಮಿ। ಬಸವೇಸ ಬರ್ನಿಲ್ಲವಲ್ಲ ಅಂತ್ಹೇಳಿ। ಬಾರಪ್ಪ ಏಳ್ತಲೆ ಕಾಳಿಂಗ ಸರ್ಪನೆ ಅಂತ ಕೂಗುದ್ರು। ಗುರು ಅಪ್ಣೆ ಆದೇಟ್ಗೆ ಏಳ್ತಲೆ ಕಾಳಿಂಗ ಸರ್ಪ। ಗುರುಗಳ್ಗೆ ಬಂದು ನಮಸ್ಕಾರ ಮಾಡ್ತು। ಅಪ್ಪಾ ಏಳ್ತಲೆ ಕಾಳಿಂಗ ಸರ್ಪನೆ। ಮರುದೇವರು ಕೋಪ್ಗುಸ್ಕೊಂಡೊಂಟೊಯ್ತಾ ಇದ್ದಾನೆ। ಮಠಕ್ಕೆ ಅವನು ಬರಕಿಲ್ಲ ಅಂತ್ಹೇಳಿದ್ರೆ। ನೀನು ಮಾತ್ರ ಅವನ್ನ ಬುಡಬೇಡಪ್ಪ। ಮೈ ಕೈನೆಲ್ಲ ಸುತ್ತುಕೊಂಡು ಸೆಡೇ

ಮೇಲಿಕ್ಕೊಂಡು ಬಾರಪ್ಪ। ಗುರು ಕರ್‍ರೊಂಡ್ಸರೇಳ್ತರೆ ಅಂತ್ಹೇಳಿ ಕರುಕೊಂಡು ಬಾರಪ್ಪ। ಗುರು ಅಪ್ಣೆ ಆದೇಟ್ಗೆ ಏಳ್ತಲೆ ಕಾಳಿಂಗಸರ್ಪ। ಮಟವನ್ನು ಬುಟ್ಟು।

ಅಡವೀಯ ಒಳುಗೆ ಬರುತಾದೆ।
ನೋಡಿ ನಮ್ಮ ಶಿವನಾ।

ಏಳ್ತಲೆ ಕಾಳಿಂಗ ಸರ್ಪ ಬಂದು। ಮರುದೇವ್ರೆ ಗುರುಗಳು ಕರ್‍ಕಂಡ್ಸರಕ್ಹೇಳಿದ್ದಾರಪ್ಪಾ। ನೀನು ಮಠುಕ್ಕೆ ಬಂದೇ ತೀರ್‍ಬೇಕು ಅಂತ್ಹೇಳಿ। ಏಳು ತಲೆ ಕಾಳಿಂಗ ಸರ್ಪ ಕರೀತು। ಅಯ್ಯಾ ಕಾಳಿಂಗ ಸರ್ಪ್ನೆ। ನಾನು ಮಾತ್ರ ಬರುಕಿಲ್ಲ। ಮರುದೇವ್ರು ಬರಕಿಲ್ಲ ಅಂತೇಳ್ಬುಟ್ಟು। ಇಷ್ಟು ಮಾತಾಡಿದ್ದಾನೆ ಅಂತ ನೀನು ಗುರುಗಳ್ಗೆ ತಕ್ಕಂಡೋಗಿ ತಿಳಿಸ್ಬುಡಪ್ಪ ಅಂತ ಹೇಳಿದ್ದಾರೆ। ಸ್ವಾಮಿ ನೀವು ಬರ್‍ದೆ ಇದ್ರೆ ನಾನು ಬುಡಕಿಲ್ಲ ಅಂತ್ಹೇಳಿ। ಏಳ್ತಲೆ ಮಾಸೇಸ ಮುಂದಕ್ಕೆ ಬತ್ತಂತೆ। ಮಾಸೇಸ ಹೋಗಿ ತಡುದಾಗ। ನೋಡಪ್ಪ ನೀನು ನನ್ಗೆ ಬೋದ ಚಕ್ರ ಕೊಡೆಯಾಗು ಅಂತ್ಹೇಳಿ।

ಅದನ್ನು ನುಲ್ದು ಹಿಡಿದವ್ರೆ ಮಾದೇವ್ರು
ನೋಡಿ ನಮ್ಮ ಶಿವನಾ।

ಅಯ್ಯೋ ಶಿವ ಶಿವಾ ಭಗವಂತನೆ। ಬಸವಣ್ಣ ಆದಿಶೇಷ ಹೋಗಿ ಬರ್‍ನೆ ಇಲ್ಲವಲ್ಲ ಅಂತ್ಹೇಳಿ। ಕುಂತೂರು ಬೆಟ್ಟದ ಪ್ರಭುಲಿಂಗಸ್ವಾಮಿ । ಹನ್ನೆರಡೆಜ್ಜೆ ಕೆಂಬರುಗನ ಕರ್‍ದು।

ಆ ಬರಗನ ಕಳುಗವ್ರೆ ಗುರುಗಳು।
ನೋಡಿ ನಮ್ಮ ಶಿವನಾ।

ನನ್ನಪ್ಪಾಜಿ ಮಾದೇವ ಏಳ್ಮಲೆ ಹೆತ್ತಯ್ಯ। ಆ ಬರುಗನ ಹಿಡ್ಕೊಂಡು ಕಂಬ್ಳಿ ಹಂಬ ಕಡಿವಾಣ ಹಾಕಿ। ನನ್ನ ಗುರುಗಳು ನನಗೊಂದು ಬರಗನ ಕೊಟ್ಟಿದ್ದಾರೆ ಅಂತ್ಹೇಳಿ।

ಅವರು ಅಜ್ಜಿಪುರ ರಾಮಾಪುರಕ್ಕೆ ಬರುತಾರೆ ಮಾದೇವ
ನೋಡಿ ನಮ್ಮ ಶಿವನಾ।

ಅಲ್ಲಿಂದ ನನ್ನಪ್ಪ ಏಳ್ಮಲೆ ಹೆತ್ತಯ್ಯ। ಅಲ್ಲಿ ಹನುಮಂತ್ರಾಯ ಬಂದು ನನ್ನಪ್ಪಾಜಿಯ ತಡುಕೊಂಡು। ನೋಡಪ್ಪ ಹನುಮಂತ್ರಾಯ। ನಮ್ಮನ್ನ ತಡೀಬ್ಯಾಡ ನನಕಂದ। ಮುಂದಲ ಪೂಜೆ ನಿನಗಾಗ್ಲಿ ಅಂತ್ಹೇಳಿ। ಅಲ್ಲಿಂದ ಮುಂದಕ್ಕೆ ನಮ್ಮಪ್ಪಾಜಿ ಏಳ್ಮಲೆ ಮಾದೇವ.

ಸಲಾಮುನ ಬ್ವಾರೆಗೆ ಬತ್ತರಲ್ಲಪ್ಪ ಮಾದೇವ
ನೋಡಿ ನಮ್ಮ ಶಿವನಾ।

ಮುಂದೆ ಒಡ್ಡೆ ಹೊಸಳ್ಳಿಗೆ ನನ್ನ ಸ್ವಾಮಿ ಬಂದ್ರತೆ। ತಾಯಿ ಉತ್ರೋಜಮ್ಮ ಕಟ್ಟಿದ್ದಂತ ಉದ್ದಾರ ನಮ್ಮ ಸ್ವಾಮಿರ್‍ಗೆ ಬಿಗುದ್ಬಂತು। ನನ್ನ ಸ್ವಾಮಿ ಬೆಳೆದು ಬೆಳೆದು ಮಾದಪ್ಪ ಆಯ್ತಿದ್ದಲ್ಲ। ಚಿನ್ನದುಡದಾರ ಪಟ್ಟಂತ ಕಿತ್ಬಂತು। ನನ್ನ ಮಾಯ್ಕಾರ ಮುದ್ದು ಮಾದೇವ। ಕಿತ್ತೋದುಡದಾರವನ್ನು ನೋಡಿ। ಇಲ್ಲೆ ತಂದೆ ತಾಯಿ ಬಂಧು ಬಳಗದ ಬಂದಾನ ಹರೀತು। ನನ್ನ ಉಡ್ದಾರ ಕಿತ್ತಂತ ಈ ಸ್ಥಳದಲ್ಲಿ। ಮುಂದೆ ಬರುವಂತ

ಕಲಿಯುಗದಲ್ಲಿ। ನನ್ನೇಳು ಮಲೆ ಕೈಲಾಸಕ್ಕೆ ಬರುವಂತ ಹೆಣ್ಣೇಳು ಕೋಟಿ ಗಂಡೇಳು ಕೋಟಿ ಪಡಲು ಪರ್ಲೆಯಲ್ಲ! ಇಲ್ಲೇ ಬಂದು ನಿಂತಾಗ! ಇಲ್ಲಿನ್ತಂಟ ನಾವು ತಂದೆ ತಾಯಿ ಮಕ್ಳ ಆಗಿದ್ವೊ! ಇನ್ನು ಮುಂದೆ ಗುರು ಮಕ್ಳ ಅಂತ್ಹೇಳಿ। ತಮ್ಮ ತಮ್ಮ ಉದ್ದಾರ ಕಿತ್ತೆಸೀಲಿ। ಈ ಹಳ್ಳಕ್ಕೆ ಉದ್ದಾರಳ್ಳ ಅಂತ ಹೆಸ್ರಾಗ್ಲಿ ಅಂತ್ಹೇಳಿ।

ನನ್ನ ಮಾಯಕ್ಕಾರ ಮುಂದೆ ಹೊಂಟವ್ರೆ
ನೋಡಿ ನಮ್ಮ ಶಿವನಾ।

ಅಯ್ಯೋ! ನನ ತಾಯಿ ಅಂದ್ಬುಟ್ಟು! ದಿಷ್ಟಿಸಿ! ಮೈಸೂರು ಚಾಮುಂಡೇಶ್ವರಿ ಬೆಟ್ಟ ನೋಡುದ್ರಂತೆ! ಹಾಳ್ಕುಂಡೆ ಮೊಕ ಇಲ್ಲೂ ಕಾಣ್ತದಲ್ಲ ಅಂತ್ಹೇಳಿ। ಕುಂತೂರು ಕಡೀಕೆ ದ್ರಿಷ್ಟಿ ಮಡುಗುದ್ರಂತೆ! ಪ್ರಭುಸ್ವಾಮಿ ಬೆಟ್ಟ ಕಂಡ್ಬುತ್ತಂತೆ! ಇತ್ತಾಗಿ ತಿರುಗಿನೋಡಿದ್ರಂತೆ! ರಂಗಸ್ವಾಮಿ ತೊಳಸಮ್ಮನ ಬೆಟ್ಟ! ಸ್ವಾಮಿ ಎದುರ್ಗೆ ಕಂಡ್ಬುಡ್ತಂತೆ! ಸುತ್ತಾ ಮುತ್ತಾ ಶತ್ರುಗಳಿದ್ದಾರಲ್ಲ ಇವರ ಮೊಕ ಹ್ಯೇಂಗೆ ನೋಡ್ಬೇಕು ನಾನು! ಕಾ ಅನ್ನೋ ಕಾಗೆ ಸಪ್ತ! ಗೂ ಅನ್ನೋ ಗೂಗೆ ಸಪ್ತ! ಕೊಕ್ ಅನ್ನೋ ಕೋಳಿ ಸಪ್ತ ನನ್ನ ಕಿವಿ ಕರ್ಣಕ್ಕೆ ಕೇಳ್ದೇ ಹೋಗ್ಲಿ ಅಂತ್ಹೇಳಿ ನನ್ನಪ್ಪಾಜಿ! ಕೆಂಜೆಡೆ ಒದುರ್ಕೊಂಡು! ಕೆಂಜರಗಣ್ ಬುಟ್ಕೊಂಡು! ರೋಸ ವ್ಯಾಸವನ್ನು ತಾಳ್ಕೊಂಡು ಲಿಂಘಳ್ನೆ ಮ್ಯಾಗ್ನಿಂದ!

ಅವರು ಝೇಂಕರಿಸಿ ತುಳಿದವರೆ ಮಾದೇವ
ನೋಡಿ ನಮ್ಮ ಶಿವನಾ।

ಝೇಂಕರಿಸಿ ತುಳುದೇಟ್ಗೆ! ಬೆಟ್ಟ ಗುಡ್ಡವೆಲ್ಲ ಸಮತಟ್ಟಾಗೋದೇ! ಅಡವಿ ಅರಣ್ಯ ಚದುರ ಮದ್ಯದಲ್ಲಿ ನಟ್ಟನಡು ರಾಜ್ಯ ಬ್ಯಾಡ ಗಂಪಣ ಸೀಮೆ! ಕಿಕ್ಕೇರಿ ದೇಸ ಹಿಂದುಕ್ ಬುಟ್ಕೊಂಡ್ರು! ಬೇವುನಟ್ಟಿ ಬಲಕೆ ಬುಟ್ಕೊಂಡ್ರು! ಆಲಂಬಾಡಿನೂ ಬಲಕ್ಕ ಬುಟ್ಕಂಡ್ರು! ನೂರೊಂದಯ್ಯನ ಚಾರಂದಪ್ಪನ ಮಲೆ! ದ್ವಾವರಳ್ಳಿ ನಡುರಾಣ್ಯ! ಅಂತರಗಂಗೆ ತೆಂಕ್ಲೋರಿ! ಸೀಗೆ ಸಿರುಗಂಧ ಬಾಡ ಬಾಕನೊತ್ತಿ! ಏಳ್ಬಾಯಿ ಹೊನ್ನುತ್ತ! ನುಗ್ಗನಾರದ ಜ್ವಾಲೆ ಬಿರ್ರು! ಮಗ್ಗಾರು ಗುತ್ತಿ ಕೆಮ್ಮತ್ತಿ ಮರದಲ್ಲಿ!

ಅಲ್ಲಿ ಉದ್ಭವಿಸಾಗವರಲ್ಲ ಮಾದೇವ!
ನೋಡಿ ನಮ್ಮ ಶಿವನಾ।

ಬಸವಣ್ಣುವೆ ಸರ್ಪಾನೂವೆ ಬಂದ್ರಲ್ಲ! ನೀನು ಬಂದ ದಾರಿ ಬಸವನ ದಾರಿ ಆಗ್ಲಪ್ಪ! ಸರ್ಪ ಬಂದ ದಾರಿ ಸರ್ಪನ ದಾರಿ ಅಂತ್ಹೇಳಿ ಅಯ್ಯಾ ಬಸವಣ್ಣ! ನನ್ನ ರಕ್ಸೆ ಕೈಲಿ ನಿನ್ಗೆ ಒಂದು ಪೂಜೆ ಕೊಡುಸಿದ್ದೀನಿ! ನನ್ನ ಗುಡಿ ಬಾಗಲ ಮುಂದೆ ನೀನಿರಪ್ಪ! ನನ್ನ ಪರಸೇಮಂದಿ ಕೈಲಿ ತುಣೇಸಿ! ನಿನಗೊಂದು ಧೂಪ ಹಾಕಿಸ್ತೀನಿ ಅಂದ್ರು! ಏಳು ತಲೆ ಕಾಳಿಂಗ ಸರ್ಪನ ಮಾದಪ್ಪ ಎತ್ತಿ! ತಲೆದೆಸೀಗೆ ನೆಳ್ಳಾಗಿ ಕುಣೆಸ್ಕೊಂಡು

ಸರ್ಪನ ಏಳಡೆ ನೆಳ್ಳಲ್ಲಿ ಮನುಗವ್ರೆ ಮಾದೇವಾ!
ನೋಡಿ ನಮ್ಮ ಶಿವನಾ![8]

## ಮಂಗಳಾರತಿ ಮಾದೇವರಿಗೆ
### ಟಿಪ್ಪಣಿಗಳು

೧. ಕಂಸಾಳೆ ಸಾಹಿತ್ಯ ೪, ಕಿರುಗಾವಲು ಮಹಾದೇವ ಶೆಟ್ಟಿ.

೨. ಕಂಸಾಳೆ ಸಾಹಿತ್ಯ ೫, ಮಧುವನಹಳ್ಳಿ ಮಹಾದೇವ ಶೆಟ್ಟಿ ಮತ್ತು ಮಹಾದೇವ.

೩. ಕಂಸಾಳೆ ಸಾಹಿತ್ಯ ೩, ಆಲ್ಗೋಡು ಪುಟ್ಟಮಾದಯ್ಯ ಮತ್ತು ನಂಜಯ್ಯ.

೪. ಕಂಸಾಳೆ ಸಾಹಿತ್ಯ ೯, ಸಂಪಾದಕರು ಡಾ.ಕೆ. ಕೇಶವನ್ ಪ್ರಸಾದ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭.

೫. ಕಂಸಾಳೆ ಸಾಹಿತ್ಯ ೮, ಮಲೆಯ ಮಾದೇಶ್ವರ ಸಂಪುಟ ೧ ಸಂಪಾದಕ : ಪಿ.ಕೆ. ರಾಜಶೇಖರ, ಮೈಸೂರು, ೧೯೭೩. ಇದರಲ್ಲಿ ಕೆಲವು ಪದ್ಯಗಳನ್ನು ಮಾತ್ರ ಆರಿಸಿಕೊಳ್ಳಲಾಗಿದೆ.

## ಹುಟ್ಟಿ ಬೆಳೆದ ಸಾಲು
### ಟಿಪ್ಪಣಿಗಳು

೧. ೬ನೆಯ ಕಂಸಾಳೆಯ ಸಾಹಿತ್ಯವನ್ನು ಪ್ರಮುಖವಾಗಿ ಇಟ್ಟುಕೊಂಡು ೧,೨,೩,೪,೫,೬,೭,೮ ಕಂಸಾಳೆ ಸಾಹಿತ್ಯವನ್ನಿಟ್ಟುಕೊಂಡು ಪರಿಷ್ಕರಿಸಲಾಗಿದೆ.

೨. ಕಂಸಾಳೆ ಸಾಹಿತ್ಯ ೧ರಲ್ಲಿ ಬರುವ ಸಂಪೂರ್ಣ ಪಾಠವನ್ನು ತೆಗೆದುಕೊಳ್ಳಲಾಗಿದೆ-ಚಾಮುಂಡಿ ಪ್ರಕರಣ.

೩. ಕಂಸಾಳೆ ಸಾಹಿತ್ಯ ೩- ಆಲ್ಗೋಡು ಪುಟ್ಟಮಾದಯ್ಯ ಹಾಗೂ ನಂಜಯ್ಯ

೪. ಕಂಸಾಳೆ ಸಾಹಿತ್ಯ ೨- ಉತ್ತರಾಜಮ್ಮ, ಸಿವದಾಸಪ್ಪ- ವೀರಶೈವಲಿಂಗಾಯಿತರ ಮಗ ಮಾದೇಶ್ವರ ಎಂದು ಬರುತ್ತದೆ.

೫. ಕಂಸಾಳೆ ಸಾಹಿತ್ಯ ೭ರಲ್ಲಿ ಪ್ರಭುಸ್ವಾಮಿಗಳ ಹೆಂಡತಿ ಇದ್ದರು ಎಂಮ ಬರುತ್ತದೆ. (?)

೬. ಪ್ರಧಾನ ಗಾಯಕ ವಚನದ ಕೊನೆ ಸಾಲು ಹೇಳುವಾದ ಸೊಲ್ಲಿನವರು "ಹೌದಪ್ಪಾ ಹೌದು..." "ಸಿವ ಸಿವಾ... ಹೌದು" ಎನ್ನುತ್ತಾರೆ. ವಚನದ ಕೊನೆಯ ಸಾಲು ಪದ್ಯದ ಧಾಟಿಯಲ್ಲಿ ಆರಂಭವಾಗಿ ಸೊಲ್ಲನ್ನು ಅದರ ಜೊತೆಗೆ ಸೇರಿಸಿಕೊಂಡು ಹಾಡುವಾಗ ಹಿಮ್ಮೇಳದ ಸೊಲ್ಲಿನವರು ಅದಕ್ಕೆ ದನಿಗೂಡಿಸುವರು.

ಕಂಸಾಳೆ ಕಥಾಸಂಪ್ರದಾಯ ೭ರಲ್ಲಿ ಬರುವ ಕೆಲವು ಹೊಸ ಭಾಗಗಳನ್ನು ಇಲ್ಲಿ ಕೈ ಬಿಡಲಾಗಿದೆ. ಏಕೆಂದರೆ ನಾನು ಸಂಗ್ರಹಿಸಿದ ಕಂಸಾಳೆ ಕಲಾವಿದರು ಈ ಸಾಲುಗಳನ್ನು ಹಾಡಲಿಲ್ಲ. ಅವರನ್ನು ಕೇಳಿದರೆ ಹಾಡಲು ಬರುವುದಿಲ್ಲ ಎಂದು ಹೇಳುವುದನ್ನು ನೋಡಿದರೆ ಹಣದಾಸೆಗೆ ಏನೋ ಕಥೆ ಕಟ್ಟಿ ಇದಕ್ಕೆ ಸೇರಿಸಿರಬೇಕು. ಕಾವ್ಯದ ಓಟಕ್ಕೆ ಇವು ಅಪ್ರಸ್ತುತ ಎಂದು ಕೈಬಿಡಲಾಗಿದೆ. ಮಂಗಳ ಮೈಮೆಯ ಮಾದೇವ, ಆದಿಸಕ್ತಿ, ಜೀವಕೋಟಿಗಳ ತೃಷ್ಣೆ, ಎಡಗೈ ಬಲಗೈಯವರು ಹುಟ್ಟಿದ್ದು ಮುಂತಾದುವುಗಳನ್ನೂ ಬಿಡಲಾಗಿದೆ. ಒಬ್ಬ ಕಂಸಾಳೆ ಕಲಾವಿದನು ಹೇಳುವ ಪಾಠವನ್ನು ತೆಗೆದುಕೊಂಡು ಮಿಕ್ಕ ಕಂಸಾಳೆ ಕಲಾವಿದರು ಹೇಳುವ ವಿಭಿನ್ನ ಕಥೆಗಳನ್ನು ಮಧ್ಯೆ ಮಧ್ಯೆ ಜೋಡಿಸಿಕೊಂಡು ಕಥೆಗೆ ಒಂದು ರೂಪಕೊಡುವ ಪ್ರಯತ್ನ ಮಾಡಲಾಗಿದೆ.

ಕಂಸಾಳೆ ೨೦ರಲ್ಲಿ ತಳಿಗೆ ಅನ್ನವನ್ನು ಕಲ್ಲು ಬಸವನಿಗೆ ಉಣಿಸುತ್ತಾನೆ.

೭. ಕಂಸಾಳೆ ಕಥಾಸಂಪ್ರದಾಯ ೯, ಸಂ : ಡಾ.ಕೆ. ಕೇಶವನ್ ಪ್ರಸಾದ್, ಪ್ರಸಾದಲಿಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೨೧, ಪ್ರಕಟಣೆ ೧೯೯೭.

ಉತ್ತರಾಜಮ್ಮ-ಶಿವದಾಸ ಇವರ ಮಗ ಮಾದೇಶ್ವರನಾಗಿ ಹುಟ್ಟುತ್ತಾನೆ.

"ಗಂಧದ ಕರಡಿಗೆ ಉಟ್ಟಿದಂಥ ಪುಟ್ಟಲಿಂಗಪ್ಪ ಉತ್ತರಾಜಮ್ಮನ ಮಗ್ಗುಲಲ್ಲಿ ಸಣ್ಣ ಬಾಲಕನಾಗಿ ಮಲಗವರೇ ಮಾಯ್ಕಾರಾ".

೮. ಬೀರಂಕೊಲ್ಲಿ ಹಲಗೇಗೌಡನ ಪ್ರಸಂಗ

(ಒ) ಪ್ರಧಾನ ಪಾಠ ಇದರಲ್ಲಿ ಬೇವಿನ ಕೊಲ್ಲಿ ಎಂದಿದೆ. (ಕ,ಗ)ಗಳಲ್ಲಿ ಬೀರಂಕೊಲ್ಲಿ (ಘ) ಪಾಠದಲ್ಲಿ ಬೀರಂಬಳ್ಳಿ (ಛ) ಪಾಠದಲ್ಲಿ ಭೀಮನ ಕೊಲ್ಲಿ (ಕ) ಬಲ್ಲಮ್ಮ.

೯. ಕಂಸಾಳೆ ಸಾಹಿತ್ಯ ೮ ಉತ್ತರಾಜಮ್ಮ ಕಲ್ಯಾಣ ದೇವ್ರ ಮಗ ಮಾದೇಶ್ವರ ಇನಿಮಾವಿನ ಹಣ್ಣು ತಿಂದಾಗ ಉತ್ತರಾಜಮ್ಮ ಗರ್ಭಿಣಿಯಾದಳು.

೧೦. ವಿವಿಧ ಕಂಸಾಳೆ ಕಥಾಸಂಪ್ರದಾಯಗಳಲ್ಲಿ ಮಾದೇಶ್ವರ ಹುಟ್ಟು :-

ಅದ್ರೆ ಯೆಳ್ಳೀನಿ ಕೇಳವ್ವಾ! ನನ್ನ ಗನಸರಣೆ ಬೆಚ್ಚಬ್ಯಾಡ ಬೆದರ್ಬ್ಯಾಡ ತಾಯಿ! ನಿನ್ನ ನಡು ಬೆನ್ನ ಮಚ್ಚೆ ಸೀಳಿ! ನಿನ್ನ ತೊಡೆ ಮ್ಯಾಕೆ ಬತ್ತೀನಿ ಅನ್ಸುಟ್ಟು! ಅವಳು ಆಯ್ಯಾ ಈಟೆಂದ!

ಆಚೆಗೆ ನೆಗೆದು ಬತ್ತಾನಲ್ಲೋ! ಮಾದೇವೋ<br>
ಆಹಾ... ನೋಡಿ ನಮ್ಮ ಸಿವನಾ![೬]

"ಶಿವ ಶಿವಾ ಒಂಬತ್ತು ತಿಂಗಳು ತುಂಬಿ! ಬಂದಮ್ಯಾಲೆ ಮಾಯಕಾರ! ತಾಯಿ ನಿನ್ನ ಎಡದ ಕೈನ ಹೂವ ತೆಗೆದು! ಬೆನ್ನಿನ ಮ್ಯಾಲೆ ಬಾರಮ್ಮ! ಅವಾಗಲೀಗ ಬೆನ್ನಿನ ಮ್ಯಾಲೆ! ಮಡಗಿದ ಉತ್ತರಾಜಮ್ಮ! ಪಟಾಪಟ್ಟೆ ಬುಟ್ಟೋಯ್ತಲ್ಲಾ ಸ್ವಾಮಿ!

ಜಾತಿವೊಳಗೆ ಲಿಂಗಾಯಿತರ ವೀರಸೈವರ ಮಗಳು! ಉತ್ತರಾಜಮ್ಮನವರು ಸಿವ ದಾಸಪ್ಪನವರು! ಅವರಿಗೆ ಪತಿಯವರು! ಕಲ್ಲು ಮಟಕಟ್ಟಿ ಅರಣ್ಯದಲ್ಲಿ ಕಾಲಹರಣ ಮಾಡುತ್ತಿದ್ದರು! ಅವಳಿಗೆ ಶಿವ ಶಿವಾ ಪುತ್ರ ಸಂತಾನವಿಲ್ಲದಂತೆ! ನಿತ್ಯ ಕಾಲ ಸಿವಪೂಜೆಗೆ ಕೆಂದಾವರೆ ಪುಸ್ಪಗಳೇ ಬೇಕು! ಆ ಕಲ್ಲು ಮಟದ ಎದರೊತ್ತರ ಕೆಂದಾವರೆ ಕೊಳ ಇತ್ತು! ಕೆಂದಾವರೆ ಕೊಳದಲ್ಲಿ ಆ ಗ್ರಾಮದಲ್ಲಿ ಇರತಕ್ಕಂತವರೆಲ್ಲಾ! ಉತ್ತರಾಜಮ್ಮನ ಪಾದ ಪೂಜೆಗೆ! ನೂರೊಂದು ಮಂದಿ ಜಂಗಮರು ಸಿವಸಿವಾ! ಕೆಂದಾವರೆ ಕುಸುಮ! ಕೋಳಿ ಕೂಗೋ ಜಾಮಕ್ಕೆ ಎದ್ದು ಸ್ನಾನ ಮಡಿಗಳನ್ನು ಮಾಡಿ! ಸಿವಪೂಜೆಯನ್ನು ತೀರಿಸಿ! ಅವರು ಪಾದಕ್ಕೆ ಪುಸ್ಪ ತಕ್ಕಂಬಂದು ಒಪ್ಪಿಸ್ತಿದ್ರು! ಆವತ್ತಿನ ದಿನ ನೂರೊಂದು ಮಂದಿ! ಜಂಗಮರು ಹೂವಿನ ಕುಕ್ಕೆ ಕೈಲಿ ಹಿಡಿದು! ಕೆಂದಾವರೆ ಕೊಳದ ಏರಿಮ್ಯಾಲೆ

ವೋಗುವಾಗ। ಪುಸ್ಮಗಳೆಲ್ಲಾ ಮಾಯವಾಗಿತ್ತು। ಮದ್ಯದಲ್ಲಿ ಒಂದು ಪುಸ್ಮ ಉಳಿದು ಬಂದಿತ್ತು। ನೂರೊಂದು ಮಂದಿ ಜಂಗಮರ ಕೈಲಿ। ಆ ಪುಸ್ಮ ತಗಂಡು ಬರೋದಕ್ಕೆ ಅಸಾದ್ಯವಾಯಿತಂತೆ। ಉತ್ತರಾಜಮ್ಮನ ಸನ್ನಿದಾನದಲ್ಲಿ। ನೂರೊಂದು ಮಂದಿ ಸೇವಾಕರ್ತರು ಬಂದು ನಿಂತು। ತಾಯಿ ಪಾದಕ್ಕೆ ದೀರ್ಗ ದಂಡ ನಮಸ್ಕಾರ ಮಾಡಿ। ಕೈಕಟ್ಟಿ ನಿಂತರು। ಯಾಕ್ರಪ್ಪಾ ಮಗು ಅಂತೇಳಿ ತಾಯಿಯವರು ಕೇಳಿದರು। ತಾಯಿ ಕುಸುಮಗಳೆಲ್ಲಾ ಮಾಯವಾಗಿದೆ। ಮದ್ಯಕೊಳದಲ್ಲಿ ಒಂದು ಪುಸ್ಮ ಉಳಿದು ಬಂದಿದೆ। ನಮ್ಮ ಕೈಲಿ ಅಸಾದ್ಯವಾಯ್ತು ತರಕ್ಕಾಗಲಿಲ್ಲ। ಹಿಂದಿರುಗಿ ಬಂದೆವು ಅಂತೇಳಿ। ಆ ನೂರೊಂದು ಮಂದಿ ಜಂಗಮ ಮಕ್ಕಳು। ಉತ್ತರಾಜಮ್ಮನ ಸಾನಿದ್ಯದಲ್ಲಿ ಹೇಳುವಾಗ। ಉತ್ತರಾಜಮ್ಮನವರು ಆಕಾಸ ಅಂತು ನೋಡಿ। ದರಣಿ ಬಗ್ ನೋಡಿ। ಸಿವನ ಗ್ನಾನಗಳನ್ನು ಮಾಡಿ। ತಾಮ್ರದ ಪಾತ್ರೆ ಬರಿಗೈಲಿ ಹಿಡಿದು।

ಗಂಗೆ ತಡಿ ಒಳಗೆ ಬಂದು ನಿಂತರಲ್ಲಾ।
ಉತ್ತರಾಜಮ್ಮ ಸಿವ ಸರಣೆ।
ಆಹಾ ಕ್ವಾರಣ್ಕ ನೀಡಮ್ಮ ಕೋಡುಗಲ್ಲು ಮುನಿಗೆ
ಕೋಲು ಮಂಡೆ ಜಂಗಮ ದೇವರು ಕ್ವಾರಣ್ಯಕೆ ದಯಮಾಡಿದರು
ಕ್ವಾರಣ್ಕ ನೀಡಮ್ಮ ಗುರು ಕೋಡುಗಲ್ಲು ಮುನಿಗೆ

ಆ ಮಾಯಕ್ಕಾರ ಮಾದೇವರು। ಉತ್ತರಾಜಮ್ಮನವರ ಗರ್ಭದಲ್ಲಿ ಉದ್ಭವಿಸಬೇಕು ಅಂತೇಳಿ। ಗುರುವೇ ಹುಳುವಾಗಿ ದುಃಖ ಅವತಾರ ತಾಳಿ। ಬರಿ ಕೊಳದಲ್ಲಿ ಮದ್ಯ ಹೂವು ಉಳಿದಿತ್ತಲ್ಲಾ। ಕೆಂದಾವರೆ ಪುಸ್ಮ ಅದರ ಮೇಲೆ ಲಿಂಗ ಇತ್ತು। ಈ ಪೀಟದ ಮ್ಯಾಲೆ। ಈ ದುಂಬಿ ಆಕಾರದಲ್ಲಿ ಕೂತನು ಪರಮಾತ್ಮ। ಉತ್ತರಾಜಮ್ಮನವರು ಗಂಗೆ ತಡಿ ಒಳಗೆ ನಿಂತು। ಮೂರು ಕಲ್ಲು ತೆಗೆದು। ಮುನಿ ಅಂತೇಳಿ ಗಂಗೆ ತಡಿ ಒಳಗೆ। ಗಂಗೆ ಪೂಜೆಗಳನ್ನು ಮಾಡಿ। ನಮಸ್ಕಾರಗಳನ್ನು ಮಾಡಿ।

ಗಂಗೆ ಮ್ಯಾಲೆ ನಡೆದು ಬತ್ತಾವಳಲ್ಲಾ
ಉತ್ತರಾಜಮ್ಮ ಸಿವಸರಣೆ
ಕ್ವಾರಣ್ಕ ನೀಡಮ್ಮ ಕೋಡುಗಲ್ಲು ಮುನಿಗೆ।

ಆಗ ತಾಯಿಯವರು ಗಂಗೆ ತಡಿ ಒಳಗೆ ಹೋಗಿ। ಗಂಗೆ ಪೂಜೆಗಳನ್ನು ಮಾಡಿ। ಗಂಗೆ ಮ್ಯಾಲೆ ನಡೆದು ಹೋದರಂತೆ। ಆಳ ಉದ್ದ ತಿಳಿದೆ ಇರತಕ್ಕಂತ ಗಂಗೆ ಒಳಗೆ। ಗಂಗೆ ಮ್ಯಾಲೆ ನಡೆದು ಹೋಗಿ ನಿಂತು। ಉತ್ತರಾಜಮ್ಮನವರು ಪುಸ್ಮಕ್ಕೆ ಕೈನೀಡಿ ಕೀಳುವಾಗ। ಗಂಗೆಗೆ ಇಳಿದರು ಪರಮಾತ್ಮ ಅಂತೇಳಿ ಬಾಯಿ ತೆರೆದರಂತೆ। ಗಂಗೆ ಗರ್ಭಕ್ಕೆ ನುಗ್ಗಿತು।

ಗಂಗೆ ಚಂಬಾಳೆ ನುಗ್ಗಾವನಲ್ಲಾ
ಕೆಂಡಗಣ್ಣ ಮಲೆ ಮಾದಯ್ಯ
ಕ್ವಾರಣ್ಕಗಳ ನೀಡಮ್ಮಾ ಗುರು ಕೋಡುಗಲ್ಲು ಮುನಿಗೆ

"ರಾಮಾಂಬಿಕೆ ಅನ್ನೋವರೇ ರಾಮವ್ವ| ಶಿವದಾಸಪ್ಪ ಅನ್ನುವವನೇ ಮೂಗಪ್ಪ| ಗಂಡ ಹೆಂಡತಿ ದಂಪತಿಗಳು| ಲೋಕದ ಮ್ಯಾಲೆ ಒಂದು ಮನಸಾಗಿ ಬಕ್ತಿಯಿಂದಿದ್ದಾರೆ| ಇವರ ತಾಯಿ ತಂದೆ ಪಡೆದುಕೊಳ್ಳಬೇಕು ಅಂತೇಳಿ|

ಅವರ ಹತ್ತಿರ ಮೆಲ್ಲಮೆಲ್ಲನೆ ಬರ್ತವ್ರೆ ಮಾದೇವಾ
ಆಹಾ ನೋಡಿ ನಮ್ಮ ಶಿವನಾ
ಮಲೆಯೋ ಮಾದೇವ ಬರುವಾ ಚಂದವಾ
ನೋಡಿ ನಮ್ಮ ಶಿವನಾ"

ಹೀಗೆ ಹೇಳಿ ಉತ್ತರಾಜಮ್ಮ ತಾವರೆ ಪುಸ್ಪ ಎತ್ತಿ ಮೂಸಿಕೊಂಡಿದ್ದಾರೆ ಮೂಸಿದ ತಕ್ಷಣ ನನ್ನ ಮಹಾಗುರು ಉತ್ತರಾಜಮ್ಮನ ದೇಹವನ್ನು ಸೇರವರೇ ಮಾದೇವ"

"ಸ್ವಾಮಿ ಮುದ್ದೂ ಮಾದಪ್ಪನವರು ಕೈಲಾಸ ಮೂರ್ತಿ| ತುಂಬಿದ ಸೋಮವಾರದ ದಿವಸ| ಸೂರ್ಯ ಹುಟ್ಟಿ ಬರುವಂತ ಹೊತ್ತಿನಲ್ಲಿ| ಸ್ವಾಮಿ ಅವರು ಪಶ್ಚಿಮ ರಾಜ್ಯಕಿಂತ|

ಪೂರ್ವ ರಾಜ್ಯಕ್ಕೆ ದೃಷ್ಟಿಮಡಗವರೇ ಮಾದೇವಾ
ಆಹಾ ನೋಡಿ ನಮ್ಮ ಶಿವನಾ|
ಮಲೆಯೋ ಮಾದೇವ ಮೆರೆವ ಚಂದಾವ|
ನೋಡಿ ನಮ್ಮ ಶಿವನ|

ಆಗಲೇ ಉತ್ತರ ಭಾಗದೊಳಗೆ| ಎಪ್ಪತ್ತೈದು ವಯಸ್ಸಿನ ಮುಪ್ಪಿನ ಮುದುಕಿ| ಶಿವ ಶಿವಾ ಎಪ್ಪತ್ತೈದು ಮುಪ್ಪಿನ| ಕಾಲ ಆಗಿದ್ರೂ ಕೂಡ| ಆ ಉತ್ತರಾಜಮ್ಮನ ಪತಿದೇವ ಚಂದ್ರಸೇಖರಮೂರ್ತಿ| ಆ ಚಂದ್ರಸೇಕರ ಮೂರ್ತಿ ಇಮಾಚಲ ಪರ್ವತ ತಪ್ಪಲಿನಲ್ಲಿ ಏಳು ಬಾಯಿ ಹೊನ್ನುತ್ತದೊಳಗೆ ಶಿವನು| ಆಗಲೀಗ ಮಕ್ಕಳಿಲ್ಲ ಅಂತ ಚಿಂತೆಯಿಂದ|

ಅವರು ತಪ ಮುನಿಯಾಗಿ ತಪ ಮಾಡ್ತವರೇ ಮಾದೇವಾ
ಆಹಾ ನೋಡಿ ನಮ್ಮ ಶಿವನಾ

ಆಗಲೀಗ ತಪ ಮಾಡುವಂತ ಕಾಲದಲ್ಲಿ| ಆ ಚಂದ್ರಶೇಖರ ಮೂರ್ತಿಯವರು| ಅವರ ಗಡ್ಡ ಮೀಸೆಯೆಲ್ಲಾ| ಪಾತಾಳದಲ್ಲಿ ಪಾದ ಬೇರುಬಿಟ್ಟು ಬಿಟ್ಟವಂತೆ| ಅಷ್ಟು ಕೂಡ ತಪ ಮಾಡ್ತಿದ್ರೂನೂ| ಶಿವನು ಅವನಿಗೆ ಸಂತಾನ ಫಲ ನೀಡಿರ್ಲಿಲ್ಲ| ಆಗಲೀಗ ಉತ್ತರಾಜಮ್ಮನವರು ಎಪ್ಪತ್ತೈದು ವಯಸ್ಸಿನ ಕಾಲ ಬಂದ್ರೂ ಕೂಡ ಆ ಶಿವಲಿಂಗದ ಮೇಲೆ| ವೆಜ್ಜಾಳದಿಂದ ನೂರೊಂದು ಕೊಡ ನೀರನ್ನು ಬಿಟ್ರು| ಆ ಜಾತಿಗೊಂದು ಬಗೆ ಕುಸುಮವನ್ನು ತಂದು| ಆ ಶಿವಲಿಂಗದ ಮೇಲಿಟ್ಟು| ನೀರನ್ನು ಉಯ್ಯುವಂತ ಕಾಲದಲ್ಲಿ| ಹೂವು ಒಂದು ತರ ಉರುಳೋಗದು| ನೀರೊಂದು ಕಡೆ ಬಿದ್ಹೋಗದು| ಆದರೂ ಲಿಂಗದ ಮ್ಯಾಲೆ| ಒಂದು ಚೂರು ನೀರೂ ಕೂಡ ತಗಲ್ತಾ ಇರ್ಲಿಲ್ಲ| ಆಗಲೀಗ ಉತ್ತರಾಜಮ್ಮ ಅಯ್ಯೋ ಪರಮಾತ್ಮ| ನಾನೇನಪ್ಪಾ ಜಗತ್ತಿನಲ್ಲಿ ಇಂತ ಅನ್ಯಾಯಮಾಡ್ದೇ? ಸಿವಸಿವಾ ನಿನ್ನ ಲೀಲೆ ನನಗೆ ತೋರ್ಲಿಲ್ಲ|

ಎಂಬುದಾಗಿ ಅವಳು ದುಕ್ಕ ಮಾಡುತವಳೆ। ಜಗದೊಡೆಯಾ।
ಆಹಾ ನೋಡಿ ನಮ್ಮ ಸಿವನಾ।

ಆಗಲೀಗ ಸಿವಸರಣೆಯಾದ ಉತ್ತರಾಜಮ್ಮ। ಚಿಂತೇಸ ಮಾಡುತ್ತಾ ಸಿವಸಿವಾ। ನಾನು ಎಷ್ಟು ತಪ ಮುನಿಯಾಗಿ। ಬಕ್ತಿಯಿಂದ ಸಿವನನ್ನು ಬೇಡಿದರೆ। ನನ್ನ ಕೈಸ ಪುಸುಮದ ಸಿವಸಿವಾ। ಇಟ್ಟಂತ ಪುಸುಮ ಕೂಡ। ಸಿವನ ಲಿಂಗದ ಮ್ಯಾಲೆ ಬೀಳುವುದಿಲ್ಲ। ನಾ ಬಿಟ್ಟಂತ ನೀರು ನೀಸು ಸ್ವೀಕರಿಸುವುದಿಲ್ಲ। ಇದಕೇನು ಮಾಡಬೇಕು ಎಂಬುದಾಗಿ। ಒಂದು ಒನಕೆಯನ್ನು ತಂದು ನೆಟ್ಟುಬುಟ್ಟು। ಒನಕೆ ಮೇಲೆ ಇಂಬೆಹಣ್ಣ ಮಡ್ಗಿ ಸಿಷ್ಲೇ। ನಿಂಬೆಹಣ್ಣಿನ ಮ್ಯಾಲೆ ಗುಂಡುಸೂಜಿ ಮಡುಗ್ಬುಟ್ಟು

ಅವಳು ಸಿರಸವನ್ನು ಕೆಳಗಿಟ್ಟವಳೆ ಜಗದೊಡೆಯಾ
ಅಹಾ... ನೋಡಿ ನಮ್ಮ ಸಿವನ

ಆಗಲೀಗ ತಪವನ್ನು ಒಪ್ಪತ್ತು ಮಾಡಿದ್ರಂತೆ। ದಿನಾ ಒಪ್ಪತ್ತು ತಪ ಮಾಡ್ಬುಟ್ಟು। ಉತ್ತರಾಜಮ್ಮನವರು ಆಗಲೀಗ। ಪರಮಾತ್ಮನಾದ ಮುದ್ದು ಮಾದಪ್ಪನವರು। ಈ ಹೆಣ್ಣು ಮಗಳ ತಪವನ್ನು ನೋಡ್ಬುಟ್ಟು। ಅಯ್ಯೋ ಜಗತ್ತಿನಲ್ಲಿ ಇಂತವ। ಕೋಟಿಗೊಬ್ಬ ಕುಲಕೊಬ್ಬ ಸಿಕ್ಕನು। ಬಾಳ ಕಸ್ಟ ಜಗತ್ತಿನಲ್ಲಿ। ಇವಳು ಮಕ್ಕಳಿಲ್ಲವೆಂಬ ಮಮತೆಯಿಂದ। ಇಸ್ಟು ದುಕ್ಕವನ್ನು ಮಾಡಿ ತಪವನ್ನು ಮಾಡ್ತವಳೆ। ಸಿವಲಿಂಗದ ಮೇಲೆ ಪುಸ್ಮ ಇಡ್ತವ್ಳೆ। ಆ ಪುಸ್ಮ ಕೂಡ ಉರುಳೋಗುತ್ತೆ। ನೀರು ಬಿಟ್ಟಂತೆ ನೀರೂ ಸಹ ಉರುಳೋಗುತ್ತೆ। ನಾನು ಇವಳ ವೊಟ್ಟೆ ವಳಿಗೆ ವುಟ್ಟಬೇಕು। ನನಗೆ ತಾಯಿಯಾಗಿ ಪಡೀಬೇಕು। ಇವಳನ್ನು ಇಂತ ಸರಣೆಯರು। ಸಿಕ್ಕಿದರೆ ಸಾಕು ಎಂಬುದಾಗಿ। ಸಿವನು ಆಗಲೇ ಸಿವಸಿವಾ। ಆ ಗಿಣಿಮಾವಿನ ಮರದಲ್ಲಿ। ಎಳಲೆ ಬಿಟ್ಟು ಎಳೆಲೆ ಚಿಗುರುವಂತ ಸ್ತಳದಲ್ಲಿ। ಸ್ವಾಮಿಯವರು ಆವಾಗಲೀಗ। ಮೊಗರು ಚಿಗುರಾದವಂತೆ। ಮೊಗರು ಚಿಗುರಾಗಿ ಬಿಟ್ಟು ಪರಮಾತ್ಮ।

ಒಂದು ಇನಿ ಮಾವಿನಹಣ್ಣಾದ್ರು ಜಗದೊಡೆಯ
ಆಹಾ... ನೋಡಿ ನಮ್ಮ ಸಿವನಾ

ಇನಿ ಮಾವನಣ್ಣಾಗ್ಬುಟ್ಟು ಮುದ್ದು ಮಾದಪ್ಪನವರು। ಉತ್ತರಾಜಮ್ಮನ ತಪಸ್ಸಿಗೆ ಮೆಚ್ಚಿಬಿಟ್ಟು। ಆಗಲೀಗ ಸಿವನು। ಆ ಉತ್ತರಾಜಮ್ಮನ ಮೊರಳಿಗೆ ಬಿದ್ದುಬುಟ್ರಂತೆ। ಸ್ವಾಮಿ ಬಿದ್ದಂತ ಕಾಲದಲ್ಲಿ ಮೊಕಕ್ಕೆ ಕಾಣುತಂತೆ। ಉತ್ತರಾಜಮ್ಮನವರು ಆಗಲೇ ಕೈಯ ತಟ್ಟಿಕೊಂಡು। ಆ ಇನಿ ಮಾವನಣ್ಣಿಡುಕೊಂಡು। ಅಯ್ಯೋ ಏನಪ್ಪಾ ಸಿವ ಸಿವಾ। ಎಂದೂ ಇಲ್ಲದಂತ ಇಂದು। ಇಂತ ಸುಂದರವಾದ ಹಣ್ಣು। ನನಗೆ ಸಿಕ್ಕಿ ಬಿಟ್ಟಿದೆಯಲ್ಲಾ ಅಂದು। ಆ ಹಣ್ಣನ್ನು ತೆಗೆದುಕೊಂಡು ಹೋಗಿ। ತಾನ ಮಾಡದೆ ಇದನ್ನು ಸ್ವೀಕರಿಸಬಾರದು। ತಾನ ಮಡಿ ಮಾಡಿ ಸಿವಪೂಜೆಗಳನ್ನು ಮುಗಿಸಿಕೊಂಡು। ಅನಂತರ ಈ ಹಣ್ಣನ್ನು ಊಟ ಮಾಡಬೇಕು। ಎಂಬುದಾಗಿ ಬಂದು ಆ ಉತ್ತರಾಜಮ್ಮ। ಸ್ತಾನ ಮಡಿಗಳನ್ನು ತೀರಿಸಿಕೊಂಡು। ಆ ಹಣ್ಣಿನ ಹತ್ತಿರ ಬಂದು। ಕೈ ಕಟ್ಟಿಕೊಂಡು ನೋಡಿದ್ಲಂತೆ। ಬಾಳ

ಸುವಾಸನೆಯಾಗಿತ್ತು ಹಣ್ಣು। ಸಿವನೇ ಆಗಲೀಗ ಸಿವ ಸಿವಾ। ಇದನ್ನು ಕೊಯ್ದುಬುಟ್ರೆ। ಒಂದು ತೊಟ್ಟು ಬೂಮಿಗೆ ರಸ ಬಿದ್ದೋಗ್ಬುಟ್ರೆ ಚನ್ನಾಗಿಲ್ಲ। ಇದನ್ನು ಆಗೇ ಉಂಡೇನೇ ತಿಂದ್ಬುಡ್ಬೇಕು। ಎಂಬುದಾಗಿ ಅವಳು ಎತ್ತಿ।

ನಾಲಿಗೆ ಹತ್ತಿರ ತೋರಿದ ಮಾದೇವಾ
ಆಹಾ... ನೋಡಿ ನಮ್ಮ ಸಿವನಾ।

ನಾಲಿಗೆ ಹತ್ತಿರ ತೋರಿದ ತಕ್ಷಣವೇ। ಈ ಪರಮಾತ್ಮ ಇನಿ ಮಾವನಣ್ಣಾಗಿದ್ದ। ಮಾಯಕಾರ ಮಾದೇಸ್ವರನು ಅವಳ। ಆತ್ಮವನ್ನು ಸೇರ್ಬುಟ್ಟು। ಪರಮಾತ್ಮ ಅಯ್ಯೋ ಗುರುವೇ ಏನಪ್ಪಾ। ಈ ಮಾವಿನ ಹಣ್ಣನ್ನು ನೋಡಿದ ತಕ್ಷಣವೇ। ನನ್ನ ಆತ್ಮ ಸೇರ್ಬುಡ್ತಲ್ಲಾ। ರುಚಿ ನೋಡ್ಲಿಲ್ಲ, ಅಗೀಲಿಲ್ಲ ನೊಣೀಲಿಲ್ಲ , ನುಂಗಲಿಲ್ಲ ಅಂತೇಳಿ ನೋಡಿದ ತಕ್ಷಣವೇ। ಹೊಟ್ಟೆ ಒಳಗೆ ಓಗ್ಬುಡ್ತಲ್ಲಾ ಅಂತೇಳಿ। ಉತ್ತರಾಜಮ್ಮ ಬಾಳ ಸಂಕಟಪಡ್ತಾ ಇದ್ದಂತೆ। ಆಗಲೀಗ ಒಂದಾನೊಂದು ದಿವಸ। ಮದ್ಯರಾತ್ರಿ ಒಂದುವರೆ ತಿಂಗಳ ಕಾಲ। ತುಂಬಿದ ಮೇಲೆ ಆ ಪರಮಾತ್ಮ ಅಮ್ಮ ನೀನು ನುಂಗಿದಂತದ್ದು ಹಣ್ಣಲ್ಲ ತಾಯಿ।"

"ಈ ಕಲ್ಯಾಣ ಪಟ್ಟಣದಲ್ಲಿ ಏನಪ್ಪಾ ಅಂದ್ರೆ। ಮಂಚಣ್ಣ ಮಂಚಣ್ಣಾ ಅನ್ನತಕ್ಕವನೊಬ್ಬನು। ಅವನ ಪದ್ಧತಿ ಏನಪ್ಪಾ ಅಂದ್ರೆ। ಕಲ್ಯಾಣ ಪಟ್ಟಣದ ವಿಚಾರವನ್ನು ತಕ್ಕ ಬಂದು। ಉತ್ತರಾಜಮ್ಮನಿಗ್ಯಾಳದು। ಉತ್ತರಾಜಮ್ಮನ ಇಚಾರವನ್ನು ಕಲ್ಯಾಣ ಪಟ್ಟಣದ ಬಸವಣ್ಣನವರಿಗೇಳೋದು। ಮಂಚಣ್ಣನವರ ನೋಡ್ಬುಟ್ಟು। ಯಾವಾಗ ಕರಡಿಗೆ ಹಾಕ್ಕಂಬುಟ್ರೋ। ಈ ಮಂಚಣ್ಣನಿಗೆ ಯಾವ ತರ ಕಂಡ್ಬುಟ್ಟು। ಆರು ತಿಂಗಳ ಗರ್ಭಿಣಿಯಾಗಿ ಕಂಡ್ಬುಟ್ಟು। ಆಗ ಕೊಂಡಿಗ ಮಂಚಣ್ಣನವರು। ಉತ್ತರಾಜಮ್ಮನಿಗೆ ಏನೂ ಹೇಳ್ಲಿಲ್ಲ। ಏನು ಉತ್ತರಾಜಮ್ಮ ಸತ್ಯಸೀಲೆ ಪತಿವ್ರತೆ ಅಂತೇಳ್ಬುಟ್ಟು। ಇವ ನೋಡಿದ್ರೆ ಯಾರ್ರೋ ಇಟ್ಕಂಬುಟ್ಟು। ಆರು ತಿಂಗಳ ಗರ್ಭಿಣಿಯಾಗ್ ಕಾಣ್ತಾಳಲ್ಲ ಅಂತೇಳ್ಬುಟ್ಟು। ಮಂಚಣ್ಣನವರು ಬಸವಣ್ಣನವರಿಗೆ। ಯಾವತರ ಹೇಳತಾರೆ ಅಂದ್ರೆ। ಬಸವಣ್ಣಾ ಬಸವಣ್ಣಾ ಬೂಲೋಕಕೇ ದೊಡ್ಡ ಬಸವಣ್ಣವರೇ। ಈತರವಾಗಿ ಉತ್ತರಾಜಮ್ಮನವರು। ಮಹಾ ಪತಿವ್ರತೆ ಅಂತೇಳಿದ್ರಲ್ಲಾ। ಯಾರ್ರೋ ಇಟ್ಕಂಬುಟ್ಟು ಆರು ತಿಂಗಳ ಗರ್ಭಿಣಿ ಆಗವಳೆ।

ಅಂತಾರೆ ಮಂಚಣ್ಣಾ
ಆಹಾ... ನೋಡಿ ನಮ್ಮ ಸಿವನಾ"

ಈ ತರವಾದ ಮಾತನ್ನ ಬಸವಣ್ಣನವರು ಕೇಳ್ಬುಟ್ಟು। ಹರಹರಾ ಸಿವಸಿವಾ ಅಂತ್ಕೊಳ್ಬುಟ್ಟು। ಬಸವಣ್ಣನವರು ಎರಡು ಕಿವೀನೂ ಮುಚ್ಕಂಡು। ಏನಂತ ಹೇಳ್ತಾರೆ ಮಂಚಣ್ಣ ಮಂಚಣ್ಣ ಬಾಪ್ಪಾ ಇಲ್ಲಿ ಅಂತೇಳ್ಬುಟ್ಟು ನೀನು ಈ ಹೊತ್ತು। ಆ ಸತ್ಯಸೀಲೆ ಉತ್ತರಾಜಮ್ಮನನ್ನು। ನಾಳೆ ಇಷ್ಟೊತ್ಗೆ ನ್ಯಾಯಾಸ್ತಾನಕ್ಕೆ ಬಾ ಅಂತನ್ಬುಟ್ರೆ। ಯಾರು? ಆ ಬಸವಣ್ಣನವರು। ಮಾತ್ ಕೇಳಿದ ತಕ್ಷಣ ಮಂಚಣ್ಣನವರು ಆವಾಗ ಬಂದು। ಏನು

ಹೇಳ್ತಾರೆ। ಇಷ್ಟು ದಿವಸ ತಾಯಿ ಉತ್ತರಾಜಮ್ಮ ಅಂತಿದ್ದವ್ಳು। ಆವತ್ತ ದಿನ ಬಂದು। ಯಾವ ತರವಾಗಿ ಮಾತಾಡಿಸ್ತಾನೆ। ಅಮ್ಮ ಉತ್ತರಾಜಮ್ಮ ಯಾಕೋ। ಬಸವಣ್ಣನವರು ನಿನ್ನನ್ನು ನ್ಯಾಯಾಸ್ತಾನಕ್ಕೆ ಬರೇಳಿದ್ರು ಅಂದ್ರಂತೆ। ಆವಾಗ ಉತ್ತರಾಜಮ್ಮನು। ಬಾಳ ದುಕ್ಕ ಬಂದ್ಬುಟ್ಟು। ಇದೇನಪ್ಪಾ ನಾನು ಕಳ್ಳಿಲ್ಲ। ಪರಪುರುಷರ ಕಣ್ಣೆತ್ತಿ ನೋಡ್ಲಿಲ್ಲಪ್ಪಾ। ಏತಕ್ಕೋಸ್ಕರ ನ್ಯಾಯಾಸ್ಥಾನಕ್ಕೆ ಬರೇಳ್ತಾರೆ ಅನ್ಬುಟ್ಟು। ಆ ಉತ್ತರಾಜಮ್ಮನವರು।

ಅಲ್ಲಿ ದುಕ್ಕ ಮಾಡ್ತವ್ಳೇ ತಾಯಮ್ಮ
ಹ್ಹಾಂ... ನೋಡಿ ನಮ್ಮ ಶಿವನಾ।

ಯಾವಾಗ ದುಕ್ಕ ಮಾಡ್ಕಂಬುಟ್ಟು। ಉತ್ತರಾಜಮ್ಮನವರು ಕೈಕಾಲು ಮುಕ ತೊಳ್ಕಂಡು। ಅರಿಸಿನ ಕುಂಕುಮ ಗಂದ ಇಬೂತಿ ಇಕ್ಕಂಬುಟ್ಟು। ತಲೆ ತುಂಬಾ ಸೆರ್‍ಗಕ್ಕಂಬುಟ್ಟು।

ನ್ಯಾಯಾಸ್ತಾನಕ್ಕೆ ಪೊಯ್ತಾ ಅವ್ಳೆ
ಇ್ಲ... ನೋಡಿ ನಮ್ಮ ಶಿವನಾ

ನ್ಯಾಯಾಸ್ತಾನಕ್ಕೆ ವೋಂಟು ನಿಂತಿರುವ ಕಾಲದಲ್ಲಿ। ಇವಳು ಕಡೆಗಣ್ಣಲ್ಲಿ ಕಣ್ಣೀರಾಕ್ತಿದ್ದಳು। ಈ ಕರಡಿಗೆನಲ್ಲಿದ್ದನಲ್ಲಾ। ತಾವರೆ ಪುಸ್ಮದಾಕಾರದಲ್ಲಿದ್ದ ಮಾದೇಸ್ವರನು। ಏನಂತೇಳ್ತಾನೆ ಅಂತ ಹೇಳಿದ್ರೆ। ತಾಯಿ ಉತ್ತರಾಜಮ್ಮನವ್ರೇ। ನಾನು ನಿಮ್ಮನ್ನು ತಾಯಿಯಾಗಿ। ಪಡೀಬೇಕು ಅಂತ ಬಂದು। ತಾವರೆ ಕೊಳದಲ್ಲಿ ತಾವರೆ ಪುಸ್ಮವಾಗಿ ಹುಟ್ಟಿದ್ದೆ। ಈವಾಗ ನಿನ್ನನ್ನು ನ್ಯಾಯಾಸ್ತಾನಕ್ಕೆ ಕರಿಸಿದ್ದರೆ ಬಸವಣ್ಣನವರು। ಅಂಜಬ್ಯಾಡಿ ಅಳಕಬ್ಯಾಡಿ ತಾಯಮ್ಮನವರೇ। ನಿಮ್ಮ ಕಣ್ಣಲ್ಲಿ ಕಡಗಣ್ಣಿನ ಗಾಳೀಲಿ। ನಾನು ಪಾಪ ದೋಸವಾಯ್ತೀನಿ ಅಂತ ಯೇಳ್ಬುಟ್ಟು। ಯಾವಾಗ ಪಲ್ಲಿ ಲೊಚಗುಟ್ಟುತ್ತದೋ। ಆತರವಾಗಿ ಯೇಳ್ತಿದ್ರಂತೆ। ಆಗ ತಾಯಿ ಉತ್ತರಾಜಮ್ಮನವರು। ನಾನು ಗುರು ಮಟದಲ್ಲಿ ಒಬ್ಬಳೇ ನಿಂತ್ಬುಟ್ಟಿದ್ದಳಲ್ಲಾ। ಯಾರು ಮನ್ಸನವತಾರದಲ್ಲಿ ಮಾತಾಡ್ತನ ಅನ್ಬುಟ್ಟು। ನಾಲ್ಕಾರು ಕಡೆ ದೃಷ್ಟಿಸಿ ನೋಡುವಂತ ಕಾಲದಲ್ಲಿ। ತಾಯಿ ಉತ್ತರಾಜಮ್ಮನವರೇ। ನಾಲ್ಕು ಕಡೆ ನೋಡ್ಬ್ಯಾಡಿ। ನಿಮ್ಮ ಕತ್ತಲ್ಲಾಕಿರೋ ಸಿವದಾರ ಕರಡಿಗೆ ತಗದ್ಬುಟ್ಟು। ಈ ಗುರುಮಟದಲ್ಲಿ ನ್ಯಾತಾಕ್ಬುಟ್ಟು। ನೀವು ಬಯಪಡಬೇಡಿ।

ನೀವು ನ್ಯಾಯಾಸ್ಥಾನಕ್ಕೆ ಹೋಗಿ ಅಂತವ್ನೇ। ಮಾದೇವಾ
ಹ್ಹಾ... ನೋಡಿ ನಮ್ಮ ಸಿವನಾ

ಯಾವಾಗ ಈತ ಹೇಳೋ ಮಾತ್ ಕೇಳ್ಕಂಡು। ಉತ್ತರಾಜಮ್ಮನವರು ಸಿವದಾರ ಕರಡಿಗೇನ ತಕ್ಕಂಡು। ಗುರು ಮಟದಲ್ಲಿ ನ್ಯಾತಾಕ್ಬುಟ್ಟು।

ಬಾಳ ದುಕ್ಕದಿಂದ ನ್ಯಾಯಾಸ್ತಾನಕ್ಕೆ ಪೊಯ್ತವ್ಳೆ। ಉತ್ತರಾಜಮ್ಮ।
ಇ್ಲ... ನೋಡಿ ನಮ್ಮ ಸಿವನಾ

ಯಾವಾಗ ಕಲ್ಯಾಣ ಪಟ್ಟಣಕ್ಕೆ ಹೋಗೋದ್ರೋ! ಬಸವಣ್ಣನವರು ಕೋಟ್ಯಾನು ಕೋಟಿ! ಸರಣರನ್ನೆಲ್ಲಾ ಸೇರಿಸ್ಬುಟ್ರಂತೆ! ತಾಯಿ ಉತ್ತರಾಜಮ್ಮನವರು! ಬಂದು ನಿಂತ್ಕಂಡಂತ ಕಾಲದಲ್ಲಿ ಬಸವಣ್ಣನವರು ಉರಿಗದ್ದೆಯನ್ನು ಇಳಿದು ಬಂದ್ಬುಟ್ರು! ಏನು ಮಾಡ್ತಾರಪ್ಪಾ ಅಂದ್ರೆ!

ನಿನಗೆ ಸರಣಮ್ಮ ತಾಯಿ ಉತ್ತರಾಜಮ್ಮ
ಹ್ಯಾ... ನೋಡಿ ನಮ್ಮ ಸಿವನಾ

ಯಾವಾಗ ಸರಣಾರ್ತಿ ಅನ್ಬುಟ್ರೋ! ಉತ್ತರಾಜಮ್ಮನಿಗೆ ಬಾಳ ದುಕ್ಕ ಬನ್ಬುಡ್ತು! ಅಯ್ಯೋ ಸ್ವಾಮಿ ಬಸವಣ್ಣನವರೇ! ಭೂಲೋಕಕ್ಕೆ ದೊಡ್ಡ ಬಸವಣ್ಣನವರು ನೀವು! ನೀವು ನನಗೆ ಸರಣು ಮಾಡ್ಬುಟ್ರಲ್ಲಾ ಅನ್ಬುಟ್ಟು! ತಾಯಿ ಉತ್ತರಾಜಮ್ಮ ನಿಂತ್ಕಂಬುಟ್ಲಂತೆ! ಆವಾಗ ಬಸವಣ್ಣನವ್ರು ನೆರೆದಿದ್ರಲ್ಲಾ! ಕೋಟ್ಯಾನುಕೋಟಿ ಸರಣಾರು! ಅವರನ್ನೆಲ್ಲಾ ಯೇಳಿಸ್ ನಿಲ್ಲಿಸ್ಬುಟ್ಟು! ಏನಪ್ಪಾ ಸರಣಾರ ಈ ತಾಯಿ ಉತ್ತರಾಜಮ್ಮನವ್ರು! ನಿಮ್ಮ ಕಣ್ಗೆ ಯಾವ ತರವಾಗಿ ಕಾಣ್ತಾರೆ! ಮರೆ ಮಾಚದೆ ಯೇಳ್ಬೇಕು ಅಂದ್ರಂತೆ! ಯಾರು? ಬಸವಣ್ಣನವರು! ಆಗ ಎಲ್ರೂ ಎದ್ದು ನಿತ್ಕಂಬುಟ್ರು! ತಾಯಿ ಉತ್ತರಾಜಮ್ಮನವರನ್ನ ಆವಳ ಅಂಗಾಲ ಉಂಗುಸ್ಟದಿಂದ! ನೆತ್ತಿಕೂದಲ್‌ವರ್ಗೂ ದೃಷ್ಟಿಸಿ ನೋಡ್ಬುಟ್ರು! ಅವರ ಕಣ್ಣಿಗೆ ಯಾವ ಲೋಪವೂ ಕಾಣ್ನಿಲ್ಲ! ಆವಾಗ ಬಸವಣ್ಣನವರತ್ರ ಬಂದ್ಬುಟ್ಟು! ಏನಂತ ಹೇಳ್ತಾರೆ ಅಂತ ಯೇಳಿದ್ರೆ! ಏನಪ್ಪಾ ಭೂಲೋಕಕ್ಕೆ ದೊಡ್ಡಬಸವಣ್ಣನವರೇ! ನಮ್ಮ ಕಣ್ಣಿಗೆ ತಾಯಿ ಉತ್ತರಾಜಮ್ಮನವರು! ಒಂದಸ್ಟು ಎಳ್ಳಸ್ಟು ಲೋಪ ದೋಸವಿಲ್ಲ ಅನ್ಬುಟ್ರಂತೆ! ಆಗ ಬಸವಣ್ಣನವರೂ ಸಹಾ ಬನ್ಬುಟ್ರು! ಅವರ ಕಣ್ಣಿಗೆ ಯಾವ ಲೋಪವೂನೂ ಕಾಣ್ನಿಲ್ಲ ಆವಾಗ ಬಸವಣ್ಣನವರಿಗೆ ಬಲು ದುಕ್ಕ ಬನ್ಬುಟ್ಟು! ನೋಡ್ದಾ ನಾನು ಈ ಮಂಚಣ್ಣನವರ ಮಾತನ್ನ ಕೇಳ್ಬುಟ್ಟು! ತಾಯಿ ಸತ್ಯಸೀಲೆಯನ್ನ! ಇಲ್ಲಿವರ್ಗೂ ಕರಸ್ಬುಟ್ಟಲ್ಲಾ ನಾನು! ದೋಸಕ್ಕೆ ಕಾರಣನಾದ್ನಲ್ಲಾ ಅಂತೇಳ್ಬುಟ್ಟು! ಆಗ ಬಸವಣ್ಣನವರು ಏನು ಯೇಳ್ತಾರೆ ಅಂತೇಳಿದ್ರೆ! ಏನಪ್ಪಾ ತಾಯಿ ಉತ್ತರಾಜಮ್ಮನವರೇ! ನಿಮ್ಮನ್ನ ಇಲ್ಲಿವರೆಗೆ ಕರಿಸಿದ್ದು ಮಹಾ ತಪ್ಪಾಯ್ತು! ನೀವು ಪೋಗಿದ್ದನ್ನವ್ವಾ ಅಂತೇಳ್ಬುಟ್ಟು! ಸರಣು ಮಾಡ್ಬುಟ್ರಂತೆ! ಆವಾಗ ಉತ್ತರಾಜಮ್ಮನವರು! ಬೂಲೋಕಕ್ಕೆ ದೊಡ್ಡ ಬಸವಣ್ಣನವರು! ಸರಣು ಮಾಡ್ಬುಟ್ರಲ್ಲಾ! ಈ ಪಾಪ ಎಲ್ಲಿ ಕಳೀಬೇಕು ಅನ್ಬುಟ್ಳು! ತಾಯಿ ಉತ್ತರಾಜಮ್ಮನವರು! ಏನಪ್ಪಾ ಬಸವಣ್ಣಾ! ಸರಣೆಗೆ ಮರಣ ಉಂಟೆ ಬಸವಣ್ಣಾ!

ಸ್ವಾಮಿ ನಿಮಗೆ ಸರಣೆಂದ ಜನರೆಲ್ಲಾ
ಹ್ಯಾ... ನೋಡಿ ನಮ್ಮ ಸಿವನಾ

ಅಯ್ಯೋ ಸ್ವಾಮಿ ನಿಮಗೆ ಸರಣು ಅನ್ಬುಟ್ಳು! ಸರಣೋ ಸ್ವಾಮಿ ಅನ್ಬುಟ್ಳು! ಸರಣಾರ್ತಿ ಮಾಡ್ಬುಟ್ಟು ಒಂಟೋದ್ಲಂತೆ ಉತ್ತರಾಜಮ್ಮನವರು! ಆಗ ಬಸವಣ್ಣನವರು

ಮಂಚಣ್ಣನವರನ್ನು ಕರೆಪ್ಬುಟ್ಟು। ಏನ್‌ಲಾ ಬಡ್ಡೀ ಗಂಡಸೇ ನಾನಿನ್ನ ಮಾತ್ ಕೇಳ್ಕಂಡು। ಉತ್ತರಾಜಮ್ಮನ್ನ ಗೊಳಗ್ ಮಾಡದ್‌ನಲ್ಲಾ। ಇದೊಂದು ಪಾಪ ಕಟ್ಕೊಂಡ್ಯಲ್ಲಾ ಅನ್ಬುಟ್ಟು। ಕೋಪ ಬಂದ್ಬುಟ್ಟು ಬಸವಣ್ಣನವರು। ಆ ಮಂಚಣ್ಣ ಅನ್ಸೋವ್ನಿಗೆ ಏನಂತ ನಾಮಕರಣ ಮಾಡ್ತಾರೆ। ಇನ್ಮೇಲಿಂದೀಚೆಗೆ ನಿನಗೆ। ಕೊಂಡಿಕ್ಕಾರ ಮಂಚಣ್ಣ ಆಗು ಅಂತ ಏಳ್ಬುಟ್ಟು। ಅದ್‌ಕೇ ನೋಡಪ್ಪಾ ಈ ಪ್ರಪಂಚದಲ್ಲಿ। ಆ ಮನೆ ಮುರಿದು ಬಿಟ್ಟು ಈ ಮನೆಗೆ ಆಕದು। ಈ ಮನೆ ಮಾತ್ ತಕ್ಕಂಡೋಗಿ ಆ ಮನಗ್ ಆಕದು। ಅಂತೊರು ಕೊಂಡಿಕ್ಕಾರ್ರು ಅಂತ ಹೆಸರು। ಈ ಪ್ರಪಂಚದಲ್ಲಿ ಬಸವಣ್ಣನವರು। ಕಟ್ಟಿದಂತಾ ನಾಮಕರಣ ಇದು। ಆವಾಗ ಕೊಂಡಿಕ್ಕಾರ ಮಂಚಣ್ಣ ಅಂತ। ಹೆಸರು ತಕ್ಕಂಡು ಬಿಟ್ಟಂತೆ। ಆವಾಗ ತಾಯಿ ಉತ್ತರಾಜಮ್ಮನವರು। ಗುರುಮಟಕ್ಕೆ ಓದ ಕಾಲ್ದಲ್ಲಿ। ಈ ಪಲ್ಲಿ ಆಕಾರದಲ್ಲಿ ಹುಡಿದ್ನಲ್ಲಾ ಸ್ವಾಮಿ। ಆವಾಗ ಕರಡಿಗೆಯನ್ನು ಬಿಚ್ಚಮ್ಮ ಅಂತ ಹೇಳಿದರು। ಆ ಕರಡಿಗೆ ಬಿಚ್ಚಿ। ಅಂಗೈ ಮೇಲೆ ಮಡಕ್ಕಂಡ್ ಮೇಲೆ। ಈ ನಮ್ಮಪ್ಪಾಜಿ ಮಾದಪ್ಪನವರು। ಅಂಗೈ ಮೇಲೆ ಮೂರು ಚೋಟುದ್ದ।

ಮೂರ್ತ ಮಾಡ್ ನಿಂತಪರೇ ಮಾದೇವಾ  
ಆ್ಹ... ನೋಡಿ ನಮ್ಮ ಸಿವನಾ  
ಮಲೆಯೋ ಹುಲಿ ವಾಹನದ ಮೇಲೆ ಬರುವಾ ಚಂದಾವ

ಅಂಗೈ ಮೇಲೆ ಮೂರು ಗೇಣುದ್ದ ನಿಂತ್ಕಂಡುಬುಟ್ರಲ್ಲಾ। ಅದನ್ನ ನೋಡ್ಬುಟ್ಟು ಉತ್ತರಾಜಮ್ಮನಿಗೆ। ಬಾಳ ದಿಗ್ಭ್ರಮೆಯಾಗ್ಬುಡ್ತು। ಏನಪ್ಪಾ ನೀನು ಯಾರು? ಆಯ್ತೋ ಯೇಳ್ತೀನಿ ಕೇಳಿ ತಾಯಮ್ಮನವರೇ। ನಾನು ಮುಗಿಲಲೇ ಉಟ್ಟಿ। ಮುಗಿಲಲೇ ಉದ್ಭವವಾದ। ಅಡವಿ ಅರಣ್ಯದಿಂದ ಬಂದತ। ನರಲೋಕದಲ್ಲಿ ಕಲಿ ಹೆಚ್ಚಾಯಿತು। ಕಟ್ಟಿ ಕಲಿ ಆಳಬೇಕು ಎಂದು ಬಂದೆ ತಾಯಿ। ಆಗ ನಾನು ನಡುರಾಜ್ಯದಲ್ಲಿ ನಿಂತ್ಬುಟ್ಟೆ। ಆಗ ನನ್ನ ಯಾರಾದ್ರೂ ಬಂದು। ನಿನ್ನ ತಂದೆ ಯಾರು? ನೀನು ಯಾರ ಮಗ। ಅಂತ ಕೇಳಿದ್ರೆ ಏನು ಜವಾಬು ಏಳ್ಬೇಕು ಅಂದ್ಬುಟ್ಟು। ಆಗ ನಾನು ದಿವ್ಯದೃಷ್ಟಿಯಿಂದ ನೋಡಿ। ನನಗೆ ಅಂಟು ಮುಟ್ಟು, ಸೂತಕ ಇಲ್ಲದೇ ಇದ್ದ। ತಾಯಿ ಪಡೀಬೇಕು ಅಂತ ಯೇಳ್ಬುಟ್ಟು। ನಾನು ದೃಷ್ಟಿಯಲ್ಲಿ ನೋಡುವಲ್ಲಿ। ತಾಯಮ್ಮ ನೀನೊಬ್ಬಳು ನನ್ನ ಕಣ್ಣಿಗೆ। ಈತರವಾಗಿ ಕಂಡೆ। ಆದ್ದರಿಂದ ನೀನು ಅಂಟಾಗಿಲ್ಲ, ಮುಟ್ಟಾಗಿಲ್ಲ। ಸೂತಕವಾಗಿಲ್ಲ ಕಣ್ ತಾಯವ್ವಾ। ಆದ್ದರಿಂದ ನಾನು ತಾವರೇ ಕೊಳದಲ್ಲಿ। ತಾವರೆ ಪುಸ್ಮವಾಗಿ ಹುಟ್ಟಿದ್ದೇ ಕಣವ್ವಾ ಅಂತೇಳ್ಬುಟ್ಟು। ನಮ್ಮಪ್ಪಾಜಿಯವರು ಇನ್ನು ನಾ ಓಗಿದ್ದು ಬತ್ತೀನಿ ತಾಯವ್ವ। ತಾಯಿ ತಂದೆ ಪಡೆದದ್ದಾತು। ಇನ್ನೂ ನಾನು ಗುರು ಪಡೀಬೇಕು ತಾಯಿ। ಗುರು ಪಡೆಯುವುದಕ್ಕೋಸ್ಕರವಾಗಿ।’

# ೩. ಸಂಕಮ್ಮನ ಸಾಲು

ಕೋಲು ಮಂಡೆ ಜಂಗಮ ದೇವರು
ಕೋರಣ್ಯಕೆ ದಯ ಮಾಡವರೆ
ಕೋರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ॥

ಕಾಡು ಕುರುಬ ನೀಲೇಗೌಡುಂಗೆ। ಏಳು ದೊಡ್ಡಿ ಸರಳೆಮ್ಮೆ। ಏಳು ದೊಡ್ಡಿ ದನಗಳು। ಏಳು ದೊಡ್ಡ ಕುರಿ ಹಿಂಡು। ದನಕರ ಕಟ್ಟುವ ಗೂಟವೆಲ್ಲ ಚಿನ್ನ ಬೆಳ್ಳಿ ಗೂಟವಂತೆ। ಕೈ ಕಾಲು ಮುಖ ತೊಳಯಾಕೆ। ಪಚ್ಚೇಕಲ್ಲಿನ ಹಾಸಂತೆ। ಏಳು ಗುರುಳಿ ದವುಸ್ವಂತೆ। ಏಳು ಗುರುಳಿ ಧಾನ್ಯವಂತೆ। ಚಂದಾಗ ಬಾಳಾಡೋ ನೀಲೇಗೌಡುರಿಗೆ। ಏಳು ಮಂದಿ ಗುಂಡು ಮಕ್ಳು ॥ ಕೋರಣ್ಯ ॥

ಪರಪರಾ ಮಾಯ್ಕಾರ ಮಾದಪ್ಪ ಕೊಟ್ಟಾಗ। ಬಾಳ ಬಾಳಾಟದಲ್ಲಿ ಚಂದಾಗಿ ಬಾಳಾಡ್ತಾ ಇರುವನಂತೆ। ಅದೂ ಅಲ್ದೆ। ಗುರುವೆ। ಒಬ್ಬೊಬ್ಬ ಮಗುಂಗೆ ಒಂದೊಂದು ಕೆಲ್ಸ ನೇಮ್ಸಿರುವನಂತೆ। ಹೊಲ ನೋಡ್ಕಳಕೊಬ್ಬ। ಮನೇ ನೋಡ್ಕಳಕೊಬ್ಬ। ದನ ನೋಡ್ಕಳಕೊಬ್ಬ। ಕುರಿ ನೋಡ್ಕಳಕೊಬ್ಬ। ಕತ್ತೆ ಕರ ಮೇಯಿಸಕೊಬ್ಬ। ಕಾಡು ಸ್ವಾಲಿಗ ನೀಲೇಗೌಡ। ಆರ್ಜನ ಗಂಡು ಮಕ್ಕಳಿಗೂ ಮದುವೆ ಮಾಡಿದ್ದಾನೆ। ಅದೂ ಅಲ್ದೆ ಕಿರಿಯೋನ್ಯಾರಪ್ಪಾಂದ್ರೆ। ಮಲೆಯ ಸ್ವಾಲಿನ ನೀಲೇಗೌಡ್ನ ಕಿರಿಯ ಮಗ ನೀಲಯ್ಯ।

ಅಣ್ಣಾ ತಮ್ಮೀರು ಕುಂತುಕೊಂಡು। ನೀಲೇಗೌಡುರಿಗೆ ಬುದ್ಧಿ ಏನೇಳ್ತಿದ್ದಾರೆ। ಕೇಳಪ್ಪ ತಮ್ಮ ನೀಲಯ್ಯ। ನಾವು ಗದ್ದೆ ಹೊಲುದ ಕೆಲ್ಸವನ್ನ ಮಾಡಿಕೊಂಡೋಯ್ತೀವಿ। ನೀನು ಏನೀನ ಮಂದೆಗೋಗಿ ದನ ಬುಟ್ಕೊಂಡು। ಕುರಿ ಮಂದೆಗೋಗಿ ಕುರಿ ಬುಟ್ಕೊಂಡು। ನೀನು ಕಾಡಿಗೋಗಿ ಮೇಯಿಸ್ಕೊಂಡಿರಪ್ಪಾ ಅಂತ ಹೇಳಿದ್ದಾರೆ। ಅಣ್ಣ ತಮ್ಮದೀರ ಮಾತ ಒಳ್ಳೆ ಕೇಳವನಲ್ಲೋ ನೀಲಯ್ಯ।

ಕೋರಣ್ಯ ನೀಡಮ್ಮ ಕೊಡುಗಲ್ಲಯ್ಯಗೇ। ಅಣ್ಣದೀರ್ ಮಾತ್ಗೆ ನೀಲಯ್ಯ ಪ್ರತಿ ಉತ್ತರ ಕೊಡ್ದಂಗೆ ಅಣ್ಣದೀರ್ ಹೇಳ್ದಂಗೆ ಆಕ್ಕಳ್ಳಿ ಅಂದಿದ್ದಾನೆ। ಅತ್ತಿಗೇರು ಮೈದುನನ ಕೈಗೆ ನೀರ್ತಂದು ಕೊಟ್ರಂತೆ। ನೀರಿಸ್ಕಂಡು ಕೈಕಾಲು ಮುಖ ತೊಳ್ಕಂಡು ನೀಲಯ್ಯ। ಮನೆ ಒಳಗೋಗಿ ಈಭೂತಿಧಾರಣೆ ಮಾಡ್ಕಂಡು। ಬಂದು ಊಟಕ್ಕೆ ಕುಂತಿದ್ದಾನೆ। ಅತ್ಗೆನಾದ್ನೀರು ಮೈದುನ್ನೆ ಪ್ರೀತಿಯಿಂದ ಊಟಕ್ಕೆ ಕುಂತಿದ್ದಾರೆ। ಊಟವನ್ನು ಮಾಡ್ಕೊಂಡು ನೀಲಯ್ಯ

ಬಾಯ್ಬುಂಬ ಈಳ್ಯವನ್ನು ಮಡ್ಕೊಂಡು। ರಾಗಿ ಹಿಟ್ಟನ್ನು ಕಟ್ಕಂಡು। ಹುರುಳಿಕಾಳು ತುಂಬ್ಕಂಡು ಗುರುವೆ ಕರುಗಳನ್ನಾದ್ರೂ ಬುಟ್ಟವ್ನೆ. ಕಾಡು ಪೋಡಿನೊಳಗೆ ಗುರುವೆ ಅಟ್ಕೊಂಡಟ್ಕಂಡು ಬರ್‍ತಾನೆ। ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೆ,"

ಕೋಲು ಮಂಡೆ ಜಂಗಮ ದೇವರು।
ಕ್ವಾರಣ್ಣಕೆ ಬಿಜು ಮಾಡವರೆ।
ಕ್ವಾರಣ್ಣ ನೀಡಮ್ಮ । ಮಾದೇವ ಗುರು ಕೋಡುಗಲ್ಲು ಮುನಿಗೆ॥

ಕಾಡು ಸ್ವಾಲಿಗ ನೀಲಯ್ಯನೊಂದಿಗೆ। ಹುಟ್ಟಿದೋರು ಅಣ್ಣ ತಮ್ಮ ಏಳು ಮಂದಿ। ಹುಟ್ಟಿದರಲ್ಲಪ್ಪಾ ಗುರುವೆ। ಅವರು ಆರರಿಗೆ ಲಗ್ನ ಆಯ್ತು। ಕೆಳಗಿಂತ ಕಿರಿಯವನಿಗೆ ಲಗ್ನ ಆಗ್ಲಿಲ್ಲವೋ ಗುರುವೇ। ಅವರಣ್ಣ ತಮ್ಮ ಏಳು ಮಂದಿ ಕೂತು ಮಾತಾಡವರೇ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ನನ್ನ ಮಲೆ ಸೋಲಿಗ ನೀಲಯ್ಯ। ಏಳಟ್ಟಿ ದನ। ಏಳಟ್ಟಿ ಆಡು। ಏಳಟ್ಟಿ ಕುರಿ ವೊಡಕೊಂಡು। ಬತ್ತವನೇ ಗುರುವೇ। ಆಗಲೇ ತಾಯಿ ತಂದೆ ಗಂಡು ಮಕ್ಕಳನ್ನು ಬಿಡಿಸಿಕೊಂಡು। ನನ್ನ ಕಡೇಲಿ ಹುಟ್ಟಿರುವಂತ ನೀಲಯ್ಯನಿಗೆ ಲಗ್ನವಿಲ್ಲ। ಅವನಿಗೆ ಸುಂದರವಾದಂಥ ಹೆಣ್ಣನ್ನು ತಂದು। ಲಗ್ನ ಮಾಡಿ ಅಂತೇಳಿ। ಅವಳು ತಂದೆ ತಾಯಿ ಮನೆಗೆ। ಬುದ್ಧಿ ತಾನೊಂದು ಹೇಳವಳೆ। ಆ ಮಾತನ್ನು ಮಲೆ ಸೋಲಿಗ ನೀಲಯ್ಯ ಕೇಳ್ಬುಟ್ಟ। ಅವನು ಏಳಟ್ಟಿ ದನ, ಏಳಟ್ಟಿ ಆಡು। ಏಳಟ್ಟಿ ಕುರಿ ಕೂಡ್ಬುಟ್ಟು। ಅಡವೀ ಆರಣ್ಯಕ್ಕೆ ಬಂದವನೇ। ಆ ಮಾತನ್ನೇ ಕೇಳವನೇ।

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಅವಾಗಲೀಗ ಮಾತಾಡುವ ಕಾಲದಲ್ಲಿ ಮಲ್ಲಾಜಿ ಬೀರಮ್ಮ। ಹಿರೀ ಸೊಸೆ ಅವಳು। ಆದ್ರೆ ಯೇಳ್ತೀನಿ ಕೇಳಿ ಮಾವಯ್ಯ। ನನ್ನ ಮೈದ ನೀಲಯ್ಯ ಅಂತಕ್ಕವನು। ಸೂರ್ಯನಂಗೆ ಉರಿತಾನೆ। ಚಂದ್ರನಂಗೆ ಹೊಳೀತಾನೆ। ತಾವರೆ ಪದ್ಮ ಯಾವ ರೀತಿ ಬೆಳಗುವುದೋ ಆ ರೀತಿ ಬೆಳಗ್ತಾನೆ। ಅವನಿಗೆ ಸುಂದರವಾದ ಹೆಣ್ಣನ್ನೇ ತಂದು। ಧಾರೆ ಮೂರ್ತ ಮಾಡ್ತೀರಿ। ಅಮ್ಮಾ ಮಲ್ಲಾಜಿ ಬೀರಮ್ಮ। ಯಾವ ಸೀಮೆ ಯಾವ ರಾಜ್ಯ। ಯಾವ ಭೂಮೀಲಿ ಸುಂದರವಾದ ಹೆಣ್ಣದೆ ಅಂತ ಕೇಳ್ತಾನೆ। ಗುರುವೇ ಆದ್ರೆ ಯೇಳ್ತೀನಿ ಕೇಳಿ। ಮಾವಯ್ಯ ನಿಮ್ಮ ಅಡ್ಡಗ್ಯಾನವೆ ಬುಡೀರಿ। ನಿಮ್ಮ ಸರಿಗ್ಯಾನದಲಿ ಕೇಳರೀ। ಹೇಳ್ತೀನಿ ಕೇಳಿ ಮಾವಯ್ಯ। ಇಂದ್ರಲೋಕಕೆ ಹೋಗಬೇಕು। ಚಂದ್ರಲೋಕಕೆ ಹೋಗಬೇಕು। ಇಂದ್ರಲೋಕ ಚಂದ್ರಲೋಕ ಇಲ್ದೇವೋದ್ರೆ ಹೆಣ್ಣಾಜಿ ಪಟ್ಟಣಕೆ ವೋಗಿ ನೀವು। ಒಪ್ಪಿದ ಹೆಣ್ಣನ್ನು ತನ್ನಿರಿ। ಏನಪ್ಪಾ ಇಂದ್ರಲೋಕ ಚಂದ್ರಲೋಕ ಅಂತ ಹೇಳ್ತಲ್ಲಾ। ಇಂದ್ರಲೋಕ ಚಂದ್ರಲೋಕ ಇಲ್ದೇ ಇದ್ದದ್ರಿ। ಸೊಸೆ ನೀನು ಮೂರು ಬುತ್ತಿ ಕಟ್ಟವ್ವಾ। ನಾನ್ ಹೆಣ್ ನೋಡಕೆ ವೋಯ್ತೀನಿ। ಆಗಲೀಗ ಮೂರು ಪಾವು ಅಕ್ಕಿ ಹಾಕಿ। ಮೂರು ಬುತ್ತೀನೂ ಕಟ್ಬುಟ್ಟು। ಗುರುವೇ

ಅವಳು ಅತ್ತೆ ಮಾವನ ಕೈಯಲ್ಲೇ ಕೊಡ್ತಾಳಲ್ಲೋ। ಮಲ್ಲಾಜಿ ಬೀರಮ್ಮಾ। ಆಗಲೀಗ ಮೊದಲ ಹಿರೇ ಮಗನಾದ ದೊಡ್ಡೇ ಗೌಡನೂವೇ। ತನ್ನ ತಾಯಿಯಾದ ಮಲ್ಲಾಜಿ ಬೀರಮ್ಮನೂವೆ। ದೊಡ್ಡಿಯ ಮೂರು ಜನೂವೇ। ಸ್ವಾಮಿ ಅಯ್ಯ ಇಂದ್ರಲೋಕಕೆ ಪೋಯ್ತಾರೇ। ಹೆಣ್ಣ ತಾವೊಂದು ನೋಡೋಕೇ। ಇಂದ್ರಲೋಕದಲ್ಲಿ ಹೆಣ್ಣು ನೋಡುವಂತ ಕಾಲದಲ್ಲಿ। ಸೂರ್ಯನಾಗಿ ಉರೀತಾನಲ್ಲ। ಚಂದ್ರನಾಗಿ ಹೋಳೀತಾನಲ್ಲೋ। ಗುರುವೇ ಅಪ್ಪ ಮಗನೇ ದೊಡ್ಡಯ್ಯ। ನನ್ನ ನೀಲಯ್ಯ ಅಂತಕ್ಕಂತವನ್ಗೆ। ಹೆಣ್ಣನ್ನು ನೋಡಿ। ಹೆಸರು ಕುಲ ಕೇಳಿ ಆ ಹೆಣ್ಣ ನೋಡಪ್ಪ। ಒಪ್ಪಿಗ್ಯಾವ ಕೊಡಪ್ಪ। ಆದ್ರೆ ಏಳ್ತೀನಿ ಕೇಳು ತಾಯಿ। ನಿಮ್ಮ ತೊಡೇಮೇಲೆ ಹುಟ್ಟಿರುವಂತ ಮಗ। ನನಗೆ ಪಾಲಿಸ್ತ ಅಂತೇಳಿ। ಕ್ಷಾಪ ಮಾಡಬ್ಯಾಡ ತಾಯಿ। ಆ ಹೆಣ್ಣು ನಮಗೆ ಬ್ಯಾಡವೋ। ಮುಂದಲ ರಾಜ್ಯಕೆ ವೋಗೋಮಾ। ಯಾಕಪ್ಪಾ ಹೆಣ್ಣು ಬ್ಯಾಡ ಅಂತ ಕೇಳ್ತಲ್ಲಪ್ಪ। ದೊಡ್ಡೇಗೌಡ ನೀನು ನೋಡಪ್ಪಾ ಹೆಣ್ಣನ್ನು। ನೋಡೋಕೆ ಅಂದವಾಗದೆ। ಚಂದವಾಗದೆ ಬಾಳ ಅಲಂಕಾರವಾಗದೆ। ಸೂರ್ಯನಂಗೆ ಹೊಳೀತಾಳೆ। ಚಂದ್ರನಂಗೆ ಹೋಳೀತಾಳೆ। ಆ ಹೆಣ್ಣಿಗೆ ಇರುವಂತ ಐಬು ನಿಮಗೇನು ಗೊತ್ತಾಯ್ತು ತಾಯಿ। ಆ ಹೆಣ್ಣು ನಮಗೆ ಬೇಡವೋ। ಮುಂದಲ ರಾಜ್ಯಕೆ ವೋಗಮಾ। ಆ ಹೆಣ್ಣಿಗೆ ಏನು ಐಬು ಅಂತ ಕೇಳ್ತಾಳೆ। ತಾಯೇ ಹೆಣ್ಣೇನೋ ಬಾಳ ಚೆನ್ನಾಗದೆ। ಕೈಯೆಲ್ಲಾ ಎಳವು ಕಣವ್ವಾ।

ಕ್ಷಾರಣ್ಯ ನೀಡಮ್ಮಾ ಕೋಡುಗಲ್ಲು ಮುನಿಗೆ।

ಆಗಲೀಗ ಮಗನ ಮಾತನ್ನು ಮೀರಿ। ಆ ಹೆಣ್ಣನ್ನು ನೋಡ್ತಾರೆ ಗುರುವೇ। ಅದಕ್ಕೆ ಕೈ ಸೊತ್ತ ಆಗಿತ್ತಲ್ಲ। ಎಳವು ಕೈ ಆಗಿತ್ತಲ್ಲ ಗುರುವೇ। ಆ ಹೆಣ್ಣು ನಮಗೆ ಬ್ಯಾಡ ಅನ್ನುಟ್ಟು। ಗುರುವೇ ಅವರು ಚಂದ್ರಲೋಕಕೆ ಪೋಯ್ತಾವ್ರೆ। ಹೆಣ್ಣು ತಾನೊಂದು ನೋಡೋಕೆ। ಚಂದ್ರಲೋಕದಲ್ಲಿ ಹೆಣ್ಣು ನೋಡುವಂತ ಕಾಲದಲ್ಲಿ। ಸೂರ್ಯನಂಗೆ ಉರಿತಾಳೆ। ಚಂದ್ರನಂಗೆ ಹೋಳೀತಾಳೆ। ಗುರುವೇ ಆ ಹೆಣ್ಣ ನೋಡಪ್ಪ। ಒಪ್ಪೀಳ್ಯ ಕೊಡಪ್ಪಾ। ಆದ್ರೆ ಯೇಳ್ತೀನಿ ಕೇಳು ತಾಯಿ। ನೀನು ಹೇಳಿದ ಮಾತಿಗೆ। ನಿನ್ನ ತೊಡೆಯ ಮ್ಯಾಲೆ ಹುಟ್ಟಿರುವಂತ ಮಗ। ಪ್ರತಿ ಮಾತಿಗೆ ಕೊಟ್ಟಂತ। ಹೇಳಿ ಕ್ಷಾಪ ಮಾಡ್ಕೋತೀರಿ ತಾಯಿ। ಹೆಣ್ಣೇಗೋ ನೋಡೋಕೆ ಚನ್ನಾಗಿದೆ ತಾಯಿ। ಆ ಹೆಣ್ಣು ನನಗೆ ಬ್ಯಾಡವೋ। ಮುಂದಲ ರಾಜ್ಯಕೆ ವೋಗವಾ। ಯಾಕಪ್ಪಾ ಹೆಣ್ಣಲ್ಲಿ ಏನಪ್ಪಾ ಐಬು ಅಂತ ಕೇಳ್ದ ತಾಯಿ। ಆದ್ರೆ ಹೆಣ್ಣೇನೋ ನೋಡೋಕೆ ಅಂದವಾಗಿದೆ ಚಂದವಾಗಿದೆ ತಾಯಿ। ಅವಳು ಕಾಲಲ್ಲಿ ಎಳವೇ ಕಾಣವ್ವಾ। ಆ ಹೆಣ್ಣು ನಮಗೆ ಬ್ಯಾಡವೋ। ನಮ್ಮ ಮಗನ ಮಾತು ಸುಳ್ಳೋ ಜಿಟವೋ ಅಂತೇಳಿ। ತಾಯಿ ವೋಗಿ ನೋಡಿದಳು ಸ್ವಾಮಿ। ಆದ್ರೆ ಕಾಲು ಐಬಾಗದಲ್ಲೋ ನನ್ನ ಮೂಡಲ ಮಲೆಯ ಮಾದೇವಾ। ಆಗಲೀಗ ಇಂದ್ರಲೋಕ ಚಂದ್ರಲೋಕ ನೋಡ್ಬುಟ್ಟು। ಅವರು ಅಯ್ಯಾ ಹೆಣ್ಣಾಜಿ ಪಟ್ಟಣಕೆ। ವೋಗವರೇ ಹೆಣ್ಣ ತಾವೊಂದ ನೋಡೋಕೆ। ಆಗ ಹೆಣ್ಣಾಜಿ ಪಟ್ಟಣಕೆ ಹೋಗುವಂತ ಕಾಲದಲ್ಲಿ। ಸೂರ್ಯನಂಗೆ ಉರೀತಾಳೆ। ತಾವರೆ ಪದ್ಮ ಯಾವ

ರೀತಿ ಬೆಳಗ್ತದೋ। ಅದೇ ರೀತಿ ಬೆಳಗ್ತಳೆ। ಆದ್ರೆ ಏಳ್ಗೀನಿ ಕೇಳಪ್ಪಾ। ನೀಲಯ್ಯಾ ಸಮ್ಮ ನೀಲಯ್ಯನಿಗೆ। ಆ ಹೆಣ್ಣು ಬಾಳ ಆನಂದವಾಗದೆ, ಅವಳಿಸ್ರು ಕುಲ ನೋಡ್ದುಟ್ಟು ಗುರುವೇ। ಹೆಣ್ಣು ನೀನು ನೋಡಪ್ಪಾ। ನೀ ಒಪ್ಪೀಳ್ಕವ ಕೊಡಯ್ಯೋ। ಆದ್ರ ಹೇಳ್ತೀನಿ ಕೇಳು ತಾಯಿ। ನಿಮ್ಮ ತೊಡೇ ಮೇಲೆ ಹುಟ್ಟಿರುವಂತ ಮಗ। ನನ್ನ ಸುಳ್ಳು ಹೇಳಿದ ಅಂತೇಳ್ತೀಯಾ ತಾಯಿ। ಹೆಣ್ಣೇನೋ ಚಂದಾಗದೆ ತಾಯಿ। ಹೆಣ್ಣು ಬ್ಯಾಡವೋ। ಮುಂದಲ ರಾಜ್ಯಕೆ ವೋಗಯ್ಯ। ಏನಪ್ಪಾ ಹೆಣ್ಣಿಗೆ ಏಬು ಅಂತ ಕೇಳಿದೆ ಸ್ವಾಮಿ। ಹೆಣ್ಣೇನೋ ಬಾಳ ಚನ್ನಾಗದೆ ಮೂಗಿ ತಾನೊಂದು ಆಗವಳೇ।

ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।

ಆಗಲೀಗ ತಾಯಿ। ಮಗನ ಮಾತನ್ನ ಮೀರಿ ಹೋಗಿ। ಹುಡುಗೀನ ಮಾತಾಡಿಸಿದಳು। ಸ್ವಾಮಿ ಅವಳು ಕೈ ಸನ್ನೆ ಬಾಯ್ಸನ್ನೆ ಮಾಡ್ತಾಳೋ। ಹಿಂದಿರುಗಿ ತಾನೊಂದು ಬತ್ತಾಳೇ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಮುಂದಿನ ರಾಜ್ಯದಲ್ಲಿ ಏನೂ ಸಿಕ್ಕಲಿಲ್ಲ ಸ್ವಾಮಿ। ಆಗ ತಂದೆ ತಾಯಿ। ತನ್ನ ಮಗನಾದ ದೊಡ್ಡೇಗೌಡ। ನನ್ನ ಮಗ ಏನು ಪಾಪ ಮಾಡಿದ್ಯೋ। ಏನು ಕರ್ಮ ಮಾಡಿದ್ಯೋ ಕಾಣೆ। ಈ ರಾಜ್ಯವನ್ನೇ ಸುತ್ತಿ। ಸುಂದರವಾದ ಒಂದು ಹೆಣ್ಣು ಸಿಕ್ಕದೆ ಹೋಯ್ತು ಅಂತೇಳಿ। ಅವರು ಬಾಳ ಗೋಳ ಗೋಳಿರೋ। ಬಾಳ ದುಃಕ್ಕ ಮಾಡಿರೋ। ಆಗಲೀಗ ದುಃಕ್ಕ ಗೋಳು ಮಾಡ್ಕೊಂಡು। ಗುರುವೇ ಬೀಸಿದ ತೋಳು ಬೆರಗಾದ್ವಲ್ಲಾ। ನಡೆದ ಕಾಲು ಒಪ್ಪೆ ಬಂತಲ್ಲಾ। ತಮ್ಮ ಪಟ್ಟಣಕೆಂದು ಹಿಂತಿರುಗಿ ಬಂದಾರಲ್ಲೋ.... ನೀಲಯ್ಯಾ। ಆಗಲೀಗ ಗಂಡು ಮಕ್ಕಳು ಸೊಸೆಯರು ಕೂತ್ಕಂಡು। ಯಾವ ರಾಜ್ಯದಲಿ ಹೆಣ್ಣು ನೋಡಿದ್ರಿ? ಯಾವ ಸೀಮೆಯಲಿ ಹೆಣ್ಣು ನೋಡಿದ್ರಿ? ಯಾವ ಭೂಮಿಲೆಣ್ಣು ನೋಡಿದ್ರಿ। ಅಂತೇಳಿ ಕೇಳ್ತಾರಲ್ಲಪ್ಪಾ। ಗುರುವೇ ನನ್ನ ಮಲೆ ಸೋಲಿಗ ನೀಲಯ್ಯ। ಏಳಟ್ಟಿ ದನ ಏಳಟ್ಟಿ ಕುರಿ। ಏಳಟ್ಟಿ ಆಡು ಕೂಡ್ಬುಟ್ಟು। ಅವನು ನಡು ಅಟ್ಟಿಯ ಬಾಕಿಲಿಗೆ ಬಂದಾನಲ್ಲೋ ನೀಲಯ್ಯಾ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಆಗ ಕೂತು ತಂದೆ-ತಾಯಿಯರು। ಅಣ್ಣ ತಮ್ಮಂದಿರು। ಕೂತು ಮಾತನಾಡುವಂತ ಕಾಲದಲ್ಲಿ। ಅವರ ತಂದೆ ತಾಯಿ ಯೇಳ್ತಾರೆ। ಗುರುವೇ ನನ್ನ ಮಗ ಕಡೇಲಿ ಉಟ್ಟಿ। ಕರ್ಮ ಮಾಡಿಬಿಟ್ಟ। ಅವನಿಗೆ ಸುಂದರವಾದ ಹೆಣ್ಣು ಯಾವ ರಾಜ್ಯದಲ್ಲೂ ಸಿಕ್ಕದೇ ವೊಯ್ತು। ಅಂತೇಳಿ ಅವನ ತಂದೆ ತಾಯಿಗಳು। ದುಃಕ್ಕ ಮಾಡುವಂತ ಸ್ಥಿತಿ ಕೇಳ್ಬುಟ್ಟು। ಮಲೆಯ ಸೋಲಿಗ ನೀಲಯ್ಯ। ಬಾಗಲಲ್ಲೇ ನಿಂತವ್ನೇ। ಆಗ ಬಾಗಲಲ್ಲಿ ನಿಂತಿದ್ದ ತಮ್ಮ ಹಿರಿಯಣ್ಣನ ಹೆಂಡತಿಯಾದವಳು। ಮಲ್ಲಾಜಿ ಬೀರಮ್ಮ ಅವಳ ಹೆಸರು। ಗುರುವೇ

ಅಯ್ಯೋ ಶಿವಶಿವಾ। ನನ್ನ ಮೈದ ಏಳಟ್ಟಿದನ ಏಳಟ್ಟಿ ಆಡು। ಏಳಟ್ಟಿ ಕುರಿ ಮೇಯಿಸಿಕೊಂಡು ಬಂದು। ಅಟ್ಟಿಗೆ ಕೂಡಾಕ್ಬುಟ್ಟು। ನಡಟ್ಟಿಗೆ ಬಂದು ನಿಂತವನಲ್ಲಾ। ನಾನು ಯಾವ ಕರ್ಮಕೆ ಒಳಗಾದೆನೋ ನಾ ಕಾಣೆ। ಯಾವ ಅನ್ಯಾಯಕ್ಕೆ ಒಳಗಾದನೋ ಕಾಣೆ। ನನ್ನ ಮೈದುನ ನನಗೆ ನೀರು ಕೊಡುವಂತೆ ಹೇಳಿ। ಅವಳು ಅಂಡೇಲಿ ನೀರು ತಕ್ಕಂಬತ್ತವಳಲ್ಲಾ ಮಲ್ಲಾಜೀ। ಕ್ವಾರಪ್ಪಾ ಮೈದ ಕೈರ ಕೈಗೆ ಅಂತ। ಗುರುವೇ ಆದ್ರೆ ಯೇಳ್ತೀನಿ ಕೇಳು। ತಾಯಿ ಪಾಪಿ ಕೈಗೆ ನೀರು ಕೊಟ್ಟು। ನೀ ಯಾಕವ್ವಾ ಕರ್ಮ ಕಟ್ಟಿಕೊಂಡೀಯೇ। ಆ ಕರ್ಮ ನಿನಗೆ ಬೇಡ ಗನಸರಣೆ ನಿಮ್ಮ ಮನೆ ಊಟ ನಮಗಿನ್ನು ಬ್ಯಾಡ ಕಣೋ ಗನಸರಣೆ। ಆಗಲೀಗ ನೀರಿಸ್ಕೊಂಡು। ಸ್ವಾಮಿ ದನೀನ ಚಾವಡಿಗೆ ಹೊಡೀತಾನಲ್ಲೋ। ಗುರುವೇ ಇವಳು ದುಕ್ಕವನ್ನು ಮಾಡ್ಕಂಡು। ಅಡ್ಡಗ್ವಾಡೆ ಮ್ಯಾಲೆ ಓಗಿ ಮಲಗ್ಬುಟ್ಟು। ಗುರುವೇ ಅವಳು ಬಾಳ ಗೋಳ ಗೋಳೀಲೋ। ಬಾಳ ದುಕ್ಕ ಮಾಡೀಲೋ। ನನ್ನ ಮೈದ ಬಂದಂತ ವ್ಯಾಳೇಲಿ। ನಮ್ಮತ್ತೆ ಮಾವನವರು ಕೂತುಕೊಂಡು। ಇಂತ ಮಾತು ಅನ್ನಬೌದೇ?। ಇದಕೆ ಬೋದವಾರ್ರು ಅಂತೇಳಿ। ಅವಳು ಬೆಳಗಾನ ದುಕ್ಕ ಮಾಡ್ಕಂತ ಕೂತ್ಕಂಡ್ಳು ಸ್ವಾಮಿ। ಇವನು ದನದ ಚಾವಡೀ ಕೂತ್ಕಂಡು। ಆಗಲೀಗ ಏಳಟ್ಟಿ ದನ। ಏಳಟ್ಟಿ ಆಡು, ಏಳಟ್ಟಿ ಕುರೀನ ಸ್ವಾಮಿ। ಇವನು ಕೋಲು ಹಿಡಿದ ಮಾತ್ರಕ್ಕೆ ಅವು ಬುಳು ಬುಳನೆ ಕಕ್ಕಂಡು ಬತ್ತವೆ ಸತ್ಯವಂತ ನೀಲಯ್ಯೋ। ಆಗಲೀಗ ದೊಣ್ಣಗಳ ತಕ್ಕಂಡು। ಏಳಟ್ಟಿ ದನ, ಏಳಟ್ಟಿ ಆಡು। ಏಳಟ್ಟಿ ಕುರಿ ಒಡ್ಕಂಡು ಅವನು ಸೂಜಿಗಲ್ಲು ಬೆಟ್ಟಕ್ಕೆ ವೋಯ್ತಾನಲ್ಲೋ ನೀಲಯ್ಯಾ। ಸೂಜಿಗಲ್ಲು ಬೆಟ್ಟಕ್ಕೆವೋದ್ಮ। ದನ ಕರನ ಬುಟ್ಬುಟ್ಟು। ಅವನು ಹೇಳ್ತೀನಿ ಕೇಳ್ರಪ್ಪಾ। ಗೋವುಗಳಾ ನನ್ನ ಇಂತ ರಾಜ್ಯಕ್ಕೋದ। ಇಂತ ಸೀಮೆಗೋದ ಇಂತ ಭೂಮಿಗೋದ ಅಂತೇಳ್ಬೇಡಿ। ಗೋವ್ಗಳ ಇವತ್ತು ಮುಂದಾದಿನ। ಈ ಬಟ್ಟ ಬಯಲನ್ನೆಲ್ಲಾ ಮೇಯ್ಕಂಡು। ದೊಡ್ಡೇಗೌಡನ ತೊಟ್ಟಿ ನೀರ ಹೀರ್ಕಂಡು। ನಿಮ್ಮ ದೊಡ್ಡಿಗೆ ನೀವು ಯೋಗ್ರಯ್ಯಾ। ಅಂತ ಹೇಳ್ತಾನಲ್ಲೋ ನೀಲಯ್ಯಾ। ಆದ್ರೆ ಹೇಳ್ತೀನಿ ಕೇಳಿ ಸ್ವಾಮಿ। ಇಲ್ಲಿ ಹುಲಿ ಕರಡಿ ಭಯವಿಲ್ಲಾ। ನಮ್ಮ ಬಿಟ್ಟು ನೀ ವೋದೀಯೋ। ಸತ್ಯವಂತ ನೀಲಯ್ಯೋ। ಆದ್ರೆ ಯೇಳ್ತೀನಿ ಕೇಳ್ರಪ್ಪಾ। ಯಾವ ಮಾರಿ ಮಸಣಿ ದುರ್ಗಿ, ಚೌಡಿ। ನಿಮ್ಮ ಹತ್ತಿರ ಬರದಂತೆ। ಹೇಳಿ ಕಟ್ಬಾಟವನ್ನು ಕಟ್ಟೀನೀ। ನಿಮ್ಮ ಕೊಂಬಿಗೆ ನಾನು ದರಿಸ್ತೀನಿ।

ಕ್ವಾರಣ್ಯ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಆಗಲೀಗ ಆ ಗೋವುಗಳಿಗೆಲ್ಲಾ ಬುದ್ಧಿವಾದ ಹೇಳ್ಬುಟ್ಟು। ನಮ್ಮಪ್ಪ ಮಾಯಕ್ಕಾರ ಮರಿದೇವರು। ಅಯ್ಯ ಮಲೆಸೋಲಿಗ ನೀಲಯ್ಯ। ಸೂಜಿಗಲ್ಲು ಬೆಟ್ಟದ ತುದಿ ಮ್ಯಾಗೆ ವೋಗವನೇ।

ಕ್ವಾರಣ್ಯ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ತನ್ನ ಕಣ್ಣಿಗೆ ಎಣ್ಣೆ ಬಿಟ್ಕಂಡು। ಯಾವ ರಾಜ್ಯದಲ್ಲಿ। ಯಾವ ಸೀಮೆಯಲ್ಲಿ। ಯಾವ ಭೂಮಿ ಒಳಗೆ। ನನಗೆ ತಕ್ಕಂತ ಸುಂದರಿ ಇದ್ದಾಳು ಅಂತೇಳಿ। ನಾಲ್ಕು ರಾಜ್ಯವ ಆರಿಸಿಕೊಂಡು ನೋಡ್ತಾನಲ್ಲೋ ನೀಲಯ್ಯಾ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಸೂಜಿಗಲ್ಲು ಬೆಟ್ಟಕ್ಕೂ ಇವನು ನೋಡಿದ್ದಕ್ಕೂ ಗುರುವೇ ಮುನ್ನೂರು ಮೂವತ್ತು ಯೋಜನೆಯಲ್ಲಿ। ಸೂಜಿ ಗಾತ್ರ ಹೊಗೆ ಕಂಡು ಬಿಡ್ತಲ್ಲೋ ಸ್ವಾಮಿ। ಆ ಹೊಗೆ ಕಂಡು ಬಂದದ್ದು ಅಲ್ಲಿ ಜನಸಂಖ್ಯೆ ಇಲ್ಲದೇ ಅಲ್ಲಿ ಪಟ್ಟಣ ಇಲ್ಲದೇ ಹೊಗೆ ಯಾಕೆ ಕಂಡು ಬಂತು ಅಂತೇಳಿ। ಮುನ್ನೂರು ಮೂವತ್ತು ಯೋಜನವಾ। ಮೂರು ಗಂಟೆಗೆ ಬಂದು ಬುಟ್ಟಲ್ಲವ್ವಾ। ಅವಳ ತಾಯಿ ತಂದೆ ಅಂತವಳೆ। ಒಂದು ಸಂತೆಗೋ ಪೇಟೆಗೋ ಹೋಗ್ಬುಟ್ಟು। ಗುರುವೆ ಈ ಸತ್ಯವಂತೆ ಮನೆಗೆ। ನಮ್ಮಪ್ಪ ಹೂವನ್ನು ತೆಗೆದುಕೊಂಡು। ಸ್ವಾಮಿ ಅಡ್ಡಗ್ವಾಡೆ ಮ್ಯಾಲೆ ಮಡಗ್ಬುಟ್ಟು। ಅವಳು ಹೂವ ಕಟ್ತಾ ಕೂತವಳೇ ಸತ್ಯವಂತೆ ಸಂಕಮ್ಮ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಅವಳ ಮನೆ ಬಾಕಲು ಸ್ವಾಮಿ। ನನ್ನ ಮಲೆ ಸೋಲಿಗ ನೀಲಯ್ಯ ಬಂದು ನಿಂತು। ಪಡಸಾಲೆ ಪಕ್ಕದಲ್ಲಿ ಕೂತ್ಕೊಂಡು। ಒಳಗಿರೋಳು ನೀನ್ಯಾರಮ್ಮ। ನೀರ ನೀನು ಕೊಡಮ್ಮ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಅಯ್ಯೋ ಯಾವ ದೇವಪುರಸನೋ ಕಾಣೆ। ದಣಿದು ಬಂದು ನೀರು ಕೇಳ್ತವ್ನೆ। ತಡಿ ಹೂವನ್ನು ಕೆಳಕ್ಕೆ ಮಡಗ್ಬುಟ್ಟು। ಅಂಡೇಲಿ ನೀರ ತಕ್ಕಂಡು। ಅವಳು ಬಾಕಲಿಂದಾಚೆ ನಿಂತ್ಕಂಡು। ಜಗಲಿ ಪಕ್ಕದಲ್ಲಿ ಕೂತಂತ ನೀಲಯ್ಯನಿಗೆ। ನೀರು ತಕ್ಕಳಿ ಸ್ವಾಮಿ। ಅಂತ ಕೊಡ್ತಾಳಲ್ಲೋ ಸಂಕಮ್ಮಾ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಆಗ ನೀರು ಕೊಡುವಂತ ಕಾಲದಲ್ಲಿ। ಪಡುವ ಮುನ್ನಾಗಿ ಮೂಡಲ ಮುನ್ನಾಗಿ ತಿರಿಕೊಂಡು। ನಿಂತು ನೀಲಯ್ಯನಪ್ಪ ನೀರು ಈಸ್ಕಂಡ್ರಲ್ಲಪ್ಪಾ ಗುರುವೇ। ಅವನ ಮುಕ ಇವಳು ನೋಡ್ಬುಟ್ಟು। ಇವಳ ಮುಖ ಅವನು ನೋಡ್ಬುಟ್ಟು। ಅವಳು ಅಲ್ಲೇ ಮೂರ್ಛೆಹೋಗಿ ಮಲಗವಳೇ। ಸತ್ಯವಂತೆ ಸಂಕಮ್ಮ।

ಆಹಾ ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಆಗ ನೀಲಯ್ಯ ನೀರು ಕುಡದಂಗೂ ಅಲ್ಲ। ಸಂಕಮ್ಮ ನೀರು ಕೊಟ್ಟಂಗೂ ಅಲ್ಲ। ಗುರುವೇ ಆಗಲೀಗ ನನ್ನ ಸತ್ಯವಂತ ನೀಲಯ್ಯನು। ಪಡುಸಾಲೇಲೆ ಕೂತವನೇ। ಅವಳ ತಂದೆ ತಾಯಿ ಬಂದವರೇ।

ಕ್ವಾರಣ್ಯ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಆಗಲೀಗ ಈ ನೀಲಿಮಲೆ ಸೋಲಿಗ। ದೇವ ಸೋಲಿಗ ನೀಲಯ್ಯ। ಕೂತಿದ್ದ ನೋಡ್ಬುಟ್ಟು। ರಾಜ ಬೀದೀಲಿ ಬರತಕ್ಕಂಥ। ತಾಯಿ ತಂದೇನ ನೋಡ್ಬುಟ್ಟು। ಆ ಮುಕವನ್ನು ನೋಡ್ಬುಟ್ಟು। ಅವರು ಮೂರ್ಛೆಯಾಗಿ ಮಲಗವರೇ। ನನ್ನ ಹುಟ್ಟು ಸೋಲಿಗ ನೀಲಯ್ಯೋ।

ಕ್ವಾರಣ್ಣ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಅವರು ಮೂರ್ಛೆಯಾಗಿ ಮಲಗಿದ್ದಂತ ಕಾಲದಲ್ಲಿ। ತಮ್ಮ ಮೂರ್ಛೆಯನ್ನು ತಾನೇ ತಿಳಿದುಕೊಂಡು। ಪಕ್ಕದಲ್ಲಿ ಕೂತಂತ। ನೀಲಯ್ಯನ ಪಡಸಾಲೆ ಮೇಲೆ ಕೂತವನೇ। ಅವರು ಕೆಳಗೆ ಬಂದು ಕೂತವರೇ। ಸತ್ಯವಂತ ನೀಲಯ್ಯೋ।

ಕ್ವಾರಣ್ಣ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಅತ್ತೆ ಮಾವಂದಿರಿಗೆ। ಒಂದು ಮಾತು ಹೇಳಿದ್ರು। ಶಿವನೇ ಈ ಹೆಣ್ಣ। ಯಾವೂರ್ಲಾರಾ ಕೇಳಿದ್ರೆ ಕೊಟ್ಬು। ಮದ್ವೆ ಮಾಡಿದ್ರೆ ಮತ್ಯಾರ್ನಾರ ಕೇಳಿದ್ರಾ। ಗುರುವೇ ಗುರು ಪಾದಕ್ಕೆ ಶರಣು। ಯಾರಿಗೆ ಕೇಳಬಾರ್ದು ಶಿವನೇ। ನನ್ನ ಇರತಕ್ಕಂತವರ ಯಾವ ರಾಜ್ಯದಲ್ಲಿ। ಯಾವ ಸೀಮೇಲಿ ಸಿಕ್ಲಿಲ್ಲ ಸ್ವಾಮಿ। ಅವಳಿಗೆ ತಕ್ಕ ವರ ನೀವೇ ಆಗಿರಬೇಕು। ನೀನೇ ಲಗ್ನ ಮಾಡ್ಕೊಳ್ಳೋ। ನನ್ನ ಸತ್ಯವಂತ ನೀಲಯ್ಯೋ।

ಅವುಳ ಚಂದ ನೋಡವನೆ। ಚಂದಾಚಾರ ನೋಡವ್ನೆ। ಚಲುವ ಭಾವ ನೋಡವ್ನೆ। ಅವ್ಳ ಸುದ್ದ ಸುಳಿಯ ನೋಡವ್ನೆ। ದಪ್ಪ ದುಡವ ನೋಡವ್ನೆ। ನಡುಗೆ ನುಡಿಗೆ ನೋಡವ್ನೆ। ಮಂಡೆ ಬಾವ ನೋಡವ್ನೆ। ಕೆಂಪು ರಂಪೂ ನೋಡವ್ನೆ। ಸಂಕಮ್ಮನನ್ನೇ ಮೆಚ್ಚುವನಲ್ಲೋ। ಮಲೆಯ ಸ್ವಾಲಿಗ ನೀಲಯ್ಯ।

ಕ್ವಾರಣ್ಣ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಸಂಕಮ್ಮನ ಮೇಲೆ ಮನಸ ಮಡಗವ್ನೆ ದೇವ ಸ್ವಾಲಿಗ ನೀಲಯ್ಯ

ಕ್ವಾರಣ್ಣ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ನಮ್ಮ ತಂದೆ ತಾಯ್ಗಳು। ನೀನು ಒಪ್ಪಿದಂತಾ ಹೆಣ್ಣ ಲಗ್ನಾ ಮಾಡ್ತೀನಿ ಅಂತ ಬಾಯ್ಬುಟ್ಟು ಹೇಳಿದ್ರು। ಈಗಲೀಗ ನಾನು ನನ್ನ ತಂದೆ ತಾಯ್ಗಳ್ಗೆ ಹೇಳ್ಬೇಕು। ಈ ಸತ್ಯಬಾವೆ ಸಂಕಮ್ಮ ಲಗ್ನ ಆಗ್ಬೇಕು ಅಂತ। ಅಯ್ಯ ಕುರಿಯ ಒಳಗೆ ಅವ್ನು ಓಡೋಡಿ ಬರ್ತಾನೆ ನೀಲಯ್ಯಾ। ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯಗೆ।

ತನ್ನ ಪೋಡಿಗೆ ಬತ್ತಾವನಲ್ಲೋ। ಮಲೆಯ<br>ಸ್ವಾಮಿ ನೀಲಯ್ಯ ॥ ಕ್ವಾರಣ್ಣ ॥

ಸೂರ್ಯ ಗುರುದೇವನು ಅಸ್ತಮಯ ಆಗುವಂತಾ ಹೊತ್ಗೆ। ದನೀನ ದೊಡ್ಡಿಗೆ ದನವನ್ನು ಕೂಡಿ। ಕುರಿಗಳ ದೊಡ್ಡಿಗೆ ಕುರಿಗಳ ಕೂಡಿ। ಎಮ್ಮೆ ದೊಡ್ಡಿಗಳಿಗೆ ಎಮ್ಮೆಗಳ ಕೂಡಿ। ಎಲ್ಲಾ ದೊಡ್ಡಿಗಳನ್ನು ಬೀಗ ಮುದ್ರೆ ಮಾಡಿ। ಹಟ್ಟಿಗೆ ಬಂದು ಕೈ ಕಾಲ್ಗೆ ನೀರಿಸ್ಕಂಡು। ತಂದೆ ತಾಯ್ಗಳ ಹತ್ರ ಅವನು ಬತ್ತವನಲ್ಲೋ ನೀಲಯ್ಯ"

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲುಯ್ಯಗೆ।

ತಂದೆ ತಾಯಿಗಳತ್ತುಕೆ ಬಂದು ಸಂತೋಷದಿಂದ ನೆಗ್ತಾ ನಿಂತಿದ್ದಾನೆ। ತಂದೆ ತಾಯಿಗಳು ಮಗನ ಮೊಕವನ್ನು ನೋಡ್ಬುಟ್ಟು। ಏನಪ್ಪಾ ನೀಲೇ ಗೌಡ। ಈವತ್ತು ಇಷ್ಟು ಸಂತೋಷದಿಂದಿದ್ದೀಯಲ್ಲಾ ಕಂದ ಅಂದ್ರಂತೆ। ತಂದೆ ತಾಯಿಗಳತ್ತ ಅವನು। ಏನಂತ ಮಾತ ನುಡುದವುನೆ।

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲುಯ್ಯಾಗೆ।

ಸಂಕಮ್ಮ ಅನ್ನಕ್ಕವಳು ಅಂದವಾದ ಮಗಳು ಚಂದವಾದ ಮಗಳು। ಬಾಳ ರೂಪು ರೇಖೆ ಸುದ್ದವಾದವಳು ಸಂಕಮ್ಮನನ್ನ ಮೆಚ್ಚಿಕೊಂಡಮ್ಮ। ತಂದ್ಕೋ ತಾಯಿ ನಿನ್ ಮನೆಗೆ।

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲುಯ್ಯಗೆ।

ಸಬಾಸ್ ನನಕಂದ ನೀಲಯ್ಯ। ಯಾವ ಹೆಣ್ ತೋರಿದ್ರೂ ಮದ್ವೆ ಆಕ್ಕಿಲ್ಲ ಅಂತ ಹೇಳಿದ್ದಲ್ಲ ಮಲ್ನಾಡ ಸೀಮೆಯಲ್ಲಿರುವಂತಾ ಹೆಣ್ಣ ಒಪ್ಕೊಂಡ್ ಬಂದಿದ್ದಿ। ನಿನ್ನಿಷ್ಟದಂತೆ ಆಗ್ಲಪ್ಪಾ ಅಂತ್ಹೇಳಿ। ಮಗನ ಮಾತ ಕೇಳ್ಕಂಡು ಗುರುವೇ ಸಂತೋಷ ಪಟ್ಟಲ್ಲೋ ತಾಯಮ್ಮ।

ತಂದೆ ತಾಯ್ಗಳು ಅಣ್ ತಮ್ದೀರೆಲ್ಲಾ ಸೇರ್ಕಂಡು ಗುರುವೆ ಸ್ವಾಲಗ್ರ ಜಾತಿಯ ಮಗಳಾದ ಸಂಕಮ್ಮನನ್ನು ನೋಡ್ಬೇಕು ಅಂತ ಐದು ಜನ ಮುತ್ತೈದೇರ ಕಟ್ಕೊಂಡು। ತುಂಬೇ ಸ್ವಾಲುಗನ ದೊಡ್ಡಿಗೆ ಬಂದರು। ಬಂದು ಕರಚೆಳ್ವೆ ಸಂಕಮ್ಮನನ್ನು ನೋಡಿದ್ದಾರೆ। ಹೆಣ್ಣಿನ ಚಂದ ನೋಡ್ಬುಟ್ಟು ಗುರುವೆ। ಹೆಣ್ಣ ಕೇಳದೆ ಬತ್ತಾರೆ।

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲು ಮ್ಯಾಲೆ।

ತುಂಬೆ ಸ್ವಾಮಿಗೆ ನಿಮ್ಮ ಮಗಳ್ನ ನಮ್ಮಗಳಂತೆ ನೋಡ್ಕೊತೀನಿ। ನೀವ್ ಮಾತ್ರ ಮನಸ್ನಲ್ಲಿ ಬ್ಯಾರೆ ಮಡುಗ್ಬೇಡಿ ಅಂದರು। ಆಗ್ಲಿ ತಾಯಿ ನಿನ್ನಿಷ್ಟದಂತೆ ಆಗ್ಲಿ। ಹೆಣ್ಣುನ ಕಡೆಯವರು ಒಪ್ಪಿಳ್ಳೆ ಸಾಸ್ತ್ರ ಮಾಡವರೆ। ಕೋರಣ್ಣ। ಕುಲದವರ್ನೆಲ್ಲಾ ಕರುದವರೆ। ಮಡದವರ್ನೆಲ್ಲ ಕರುದವರೆ ಜಾತೀರ್ನೆಲ್ಲ ಕರುದವರೆ। ಮದ್ವೆ ಮಾಡೋದ್ಕೆ ಗುರುವೆ। ಏರ್ಪಾಡನ್ನೇ ಮಾಡವ್ರೆ।

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲುಯ್ಯನಿಗೆ।

ಆಗಲೀಗ ಹೇಳುವಂತ ಕಾಲದಲ್ಲಿ। ಆಗ ಪುರೋಹಿತರತ್ರ ಹೋಗಿ। ಶಾಸ್ತ್ರ ಸಂಬಂಧ ಕೇಳ್ಬೇಕು। ಗುರುವೇ ಊರ ಗೌಡನ ಕಟ್ಕೊಂಡು। ಶಾಸ್ತ್ರ ಸಂಬಂಧ ಕೇಳಿ ಗುರುವೇ। ಆಗ ನಿನಗೆ ಲಗ್ನಾವು ಒದಗಿತಲ್ಲೋ। ನೀಲಯ್ಯೋ।

ಕ್ವಾರಣ್ಣ ನೀಡಮ್ಮ ಸಿವ ಕೋಡುಗಲ್ಲು ಮುನಿಗೆ।

ಆಗಲೀಗ ಲಗ್ನವನ್ನು ಕಟ್ಟುಟ್ಟು। ಮಲೆ ಸ್ವಾಲಿಗ ನೀಲಯ್ಯಾ। ಸ್ವಾಮಿ ಮುನ್ನೂರು ಮೂವತ್ತು ಯೋಜನೆಯನ್ನು। ಅವನು ಮೂರು ಗಂಟೇಗೋಗವನೇ ಸತ್ಯವಂತ ನೀಲಯ್ಯೋ।

ಕ್ವಾರಣ್ಯ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಆಗಲೀಗ ತನ್ನ ಅತ್ತಿಗೆಯಾದ। ಮಲ್ಲಾಜಿ ಬೀರಮ್ಮನು। ಮೈದುನನನ್ನು ನೋಡ್ಬುಟ್ಟು। ಬಾಳ ಸಂತೋಷ ಪಟ್ಕೊಂಡು। ಅಪ್ಪಾ ನನ್ನ ಮಲೆ ಸೋಲಿಗ ನೀಲಯ್ಯ। ಯಾವ ರಾಜ್ಯದ ಹೆಣ್ಣು ಹುಡುಕಿ। ಯಾವ ಸೀಮೆ ಹೆಣ್ಣು ಹುಡುಕಿ। ಯಾವ ಭೂಮಿಯೊಳು ನನ್ನ ಪಾದ ಬಿತ್ತೇನು। ನನಗೆ ಸ್ವಲ್ಪ ಹೊತ್ತು ಹೇಳಪ್ಪಾ। ಸತ್ಯವಂತ ನೀಲಯ್ಯಾ।

ಕ್ವಾರಣ್ಯ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಆದ್ರೆ ಹೇಳ್ತೀನಿ ಕೇಳು ತಾಯಿ। ನನ್ನ ಕಾಲು ಕೈಗೆ ನೀರು ಕೊಡು। ನನಗೆ ಊಟ ಬಡಸು। ಊಟ ಉಂಡಮ್ಯಾಲೆ ಇಂತ ರಾಜ್ಯ। ಇಂತ ಸೀಮೆ ಅಂತ। ಯೇಳ್ತೀನಿ ತಾಯಿ ಅಂತ ಹೇಳಿ। ಅವನು ಊಟ ತಾನೊಂದು ಮಾಡವನೇ ಮಲೆ ಸೋಲಿಗ ನೀಲಯ್ಯ।

ಕ್ವಾರಣ್ಯ ನೀಡಮ್ಮ ಶಿವ ಕೋಡುಗಲ್ಲು ಮುನಿಗೆ।

ಆಗಲೀಗ ಎಲ್ಲಾ ಸಂತೋಸ ಮಾಡಿಕೊಂಡು। ಗುರುವೇ ಅವನು ತಾಯಿ ತಂದೆ ಕರ್ಕೊಂಡು। ಆಗಲೀಗ ಲಗ್ನಕ್ಕೆ ವೋದರು ಗುರುವೆ। ನೆಂಟ್ರಿಷ್ಟರಿಗೆ ಹೇಳ್ಕಂಡ್ರು। ಬರುವಾರ ಸುಟ್ಟ ಸುಕ್ರವಾರದ್ದಿನ। ಲಗ್ನ ಮಾಡ್ತೀವಿ ಅಂತೇಳ್ಬುಟ್ರು। ಅದೇ ಪ್ರಕಾರವಾಗಿ। ಲಗ್ನಕ್ಕಾಗುವಂಥ ಸಾಮಾನು ಜೋಡಿಸ್ಕಂಡು। ವಾರವಾರ ಎಂಟುದಿನ ತುಂಬೋಪೊತ್ತಿಗೆ। ಸುಟ್ಟ ಸುಕ್ರವಾರದ್ದಿನ ಸೂರ್ಯೋದಯವಾಗುವ ಹೊತ್ನಲ್ಲಿ। ಒಂದು ಸೀತಾಳ ಚಪ್ಪರ। ಹಾಕವರೆ।

ಹೊಲೆರ ಹೊನ್ನಯ್ಯ। ಬಂದವರೆ,
ವಾದ್ಯನ್ನಾದರೆ। ಮಾಡವರೆ,
ನೀಲಿ ಮಡಿಯ ಕಟ್ಟವರೆ।
ಹನ್ನೆರಡು ತೋರಣ ಕಟ್ಟವರೆ,
ಮಲೆಯ ಸ್ವಾಲಿಗ ನೀಲಯ್ಯ।
ಒಂದು ಕಂಬ ಮೂರ್ತ ಮಾಡವರಂತೆ।
ಮಲೆಯ ಸ್ವಾಲಿಗ ನೀಲಯ್ಯ ॥ ಕ್ವಾರಣ್ಯ ॥

ಕಂಬ ಮೂರ್ತವನ್ನು ಮಾಡಿ। ಸುಟ್ಟ ಸುಕ್ರವಾರದ್ದಿನ। ದುಂಡೇಗೌಡನ ಪೋಡಿಗ್ಹೋಗಿ। ಹೆಣ್ಣನ್ನೇ ಕರಕೊಂಡು ಬಂದರು। ಆ ಸ್ವಾಲುಗರ ಪದ್ಧತಿಯಂತೆ। ಆವಾಗ ನೆಂಟರೆತ್ತರೆಲ್ಲಾ ಸೇರ್ಕಂಡು।

ಅಯ್ಯಾ ಸ್ವಂತಕ ಸೋದರು ಬಂದವರೆ।
ನೀಲಯ್ಯಾದ್ರೆ ಕರೆದವರೆ,
ಹಸೆಯ ಮೇಲೆ ಕೂಡಿಸವರೆ।
ಕಂಕಣಧಾರಣೆ ಮಾಡವರೆ।
ಸ್ವಂತಕ ಸೋದರು ಬಂದವರೆ।
ಸಂಕಮ್ಮನ್ನಾದ್ರೂ ಕರೆದವರೆ।
ಮಲೆಯ ಸ್ವಾಲಿಗ ನೀಲಯ್ಯಾ ॥ ಕ್ವಾರಣ್ಯ ॥

ತಿರುಗ ಬೆಳಗಾಗುತಲೇ ಎದ್ದು। ಆವಾಗ ಅವ್ರು ಜಾತಿ ಪದ್ಧತಿ ಕುಲ ಪದ್ಧತಿಯಂತೆ। ಹೆಣ್ಣೋರು ಗಂಡ್ನೋರು ಸೇರಿಕೊಂಡ್ರು। ಕುಂಬಾರ ಗುಂಡಯ್ಯನಿಂದ ದೇವರ ಗಡಿಗೆ ತರಿಸ್ಕಂಡು। ಅವರ ಮನೆದೇವ್ರು ಕುಲದೇವ್ರು ತಂದು। ಆವಾಗ ಚಪ್ಪರದಟ್ಟೀಲಿ ಮಡಗ್ಬಟ್ರು। ಆವಾಗ ಒಳ್ಳೇ ಗಳಿಗೆ ಒಳಗೆ। ನೀಲೇಗೌಡನಿಗೆ ಧಾರೆ ಮೂರ್ತ ಮಾಡ್ಬೇಕಂತೇಳಿ।

ಅಯ್ಯಾ ಕೆಲ್ಸಿ ಕುಳ್ಳಯ್ಯ ಬಂದವರೆ।
ತೊಂಡಾಲು ಬಾಸಿಂಗ ತಂದವರೆ।
ವಾಜರ ಮಲ್ಲಯ್ಯ ಬಂದವ್ರೆ।
ಮಾಂಗಲ್ಯ ಮಾತ್ರ ತಂದವರೆ।
ಕಾಸಿಪುರೋಯಿತ್ರು ಬಂದವರೆ
ಸಂಬಂಧ ಮಾಲೆ ತಂದವರೆ,
ಧರ್ಮ ದೇವತೆ ಬಂದವರೆ।
ಧಾರೆಗಾದರೆ ನಿಂತವರೆ।
ಐದು ಜನ ಮುತ್ತೈದೇರು ಬಂದವರೆ।
ಶಾಸ್ತ್ರನ್ನಾದರೆ ಮಾಡವರೆ
ಸೋಬಾನನಾದರೆ ಹೇಳವರೆ।
ಒಳ್ಳೇ ಗಳಿಗೆ ನೋಡವರೆ।
ಧಾರೆ ಮೂರ್ತಕೆ ನಿಲ್ಲವರೆ।
ಸುಬಂಧ ಮಾಲೆ ಕೊಟ್ಟವರೆ।
ಹೆಣ್ಣಿನ ಕೈಲಿ ಕೊಟ್ಟವರೆ
ಗಂಡಿನ ಕೈಲಿ ಕೊಟ್ಟವರೆ
ಒಳ್ಳೇ ಗಳಿಗೆ ನೋಡವರೆ
ಸಂಬಂಧಮಾಲೆ ಮಾಡವರೆ ॥ ಕ್ವಾರಣ್ಯ ॥

ಕಾಸಿ ಪುರೋಹಿತ್ರು ಹೆಣ್ಣಿನ ಕೈಲಿ ಗಂಡಿನ ಕೈಲಿ। ಸಂಬಂಧ ಮಾಲೆಯನ್ನು ಕೊಟ್ರು। ನೋಡಪ್ಪ ನೀಲೇಗೌಡ ಶಿವಶರಣೆಯಾದ ಸಂಕಮ್ಮ। ಹೆಣ್ಣು ಗಂಡಿಗೆ ಅಂದ್ರೆ ಈವೊತ್ತು ನಿಮ್ಗೆ ಮನ ಬೆರತುಕೊಳ್ಳಬೇಕು। ಹೆಣ್ಣು ಗಂಡು ಒಂದಾಗ್ಬೇಕು। ಅದಕ್ಕೋಸ್ಕರವೆ ಸಂಬಂಧ ಮಾಲೆ ಅಂತ್ಹೇಳಿ। ಹೆಣ್ಣಿನಿಂದ ಗಂಡಿಗೆ ಗಂಡಿನಿಂದ ಹೆಣ್ಗೆ। ಸಂಬಂಧ ಮಾಲೆಯನ್ನು ಹಾಕಿಸಿದ್ರು। ಸಂಬಂಧಮಾಲೆ ಅಂದ್ರೆ ಬಿಲ್ಪತ್ರೆದಾಳ। ಆ ಸಂಬಂಧ ಮಾಲೆಯನ್ನು

ಹಾಕಿಸ್ಬುಟ್ಟು। ಆವಾಗ ಎಳ್ಳು ಜೀರಿಗೆ ಕೈಗೆ ಕೊಟ್ರು। ನೀಲೇಗೌಡ ಸಂಕಮ್ಮ। ಗಂಡನಿಗೆ ಹೆಂಡ್ತಿ ಸಾಕ್ಷಿ ಹೆಂಡ್ತಿಗೆ ಗಂಡನೇ ಸಾಕ್ಷಿ। ಹೆಂಡಿರ ಮಾತ ಗಂಡ ಮೀರಬಾರದು। ಗಂಡನ ಮಾತ ಹೆಂಡ್ತಿ ಮೀರಬಾರದು ಅಂತ್ಹೇಳಿ।

ಅಯ್ಯಾ ಒಳ್ಳೇ ಗಳಿಗೆ ನೋಡವರ
ಎಳ್ಳು ಜೀರಿಗೆ ಬಿಟ್ಟವರ ॥ ಕ್ವಾರಣ್ಯ ॥

ಒಳ್ಳೇ ಗಳಿಗೇಲೆ ಗಂಡಿನ ತಲೆಮೇಲೆ ಮೂರಿಡಿ ಎಳ್ಳು ಜೀರಿಗೆ। ಹೆಣ್ಣಿನ ತಲೆಮೇಲೆ ಮೂರಿಡಿ ಎಳ್ಳು ಜೀರಿಗೆ ಬಿಡಿಸ್ತು। ಆವಾಗಲೀಗ ಹೆಣ್ಣು ಗಂಡಿಗೆ ಎರಡು ಹಸ್ತವನ್ನು ನೀಡಿಸ್ಬಿಟ್ಟು। ಅಕ್ಕಿಯನ್ನು ತುಂಬಿಸ್ಬುಟ್ಟು ತಾಂಬೂಲ ಬಾಳೆಹಣ್ಣ ಮಡಗಿ। ಬೆಲ್ಲ ತೆಂಗಿನಕಾಯಿ ಮಡಗ್ಬುಟ್ಟು। ಕಾಸಿ ಪುರೋಹಿತ್ರು ಪಕ್ಕದಲ್ಲಿ ನಿಂತ್ಕಂಡ್ರು।

ಅವರ ಸ್ವಂತಕ ನೋಡದ್ರು ಬಂದವರೆ।
ತೊಂಡಾಲು ಬಾಸಿಂಗ ಕಟ್ಟವರೆ।
ಮಂಡೆ ಕಟ್ಟಿ ಧಾರೆ ಎರೆವವರೆ।
ತಂದೆ-ತಾಯಿ ಬಂದವರೆ।
ಧಾರೆ ಮೂರ್ತ ಎರೆವವರೆ।
ನೆಂಟಾರು ಎತ್ತಾರು ಬಂದವರೆ।
ಧಾರೆನಾವರೂ ಎರೆವವರೆ ॥ ಕ್ವಾರಣ್ಯ ॥

ಆವಾಗ ಧಾರೆ ಮೂರ್ತವನ್ನು ಮಾಡಿ। ಕಾಸಿ ಪುರೋಹಿತ್ರು ಮಾಂಗಲ್ಯವನ್ನು ಈಸ್ಕೊಂಡ್ರು। ಗಂಡಿನ ಕೈಲಿ ಮಾಂಗಲ್ಯವನ್ನು ಪೂಜೆ ಮಾಡಿಸಿ। ನಮಸ್ಕಾರವನ್ನು ಮಾಡಿಸಿ। ಆವಾಗ ಐದು ಜನ ಮುತ್ತೈದೇರ ಕೈಲಿ ನಮಸ್ಕಾರ ಮಾಡ್ಸಿ। ಯಜಮಾನ್ರ ಕೈಲಿ ಮುಟ್ಟಿಸಿ ಬಿಟ್ಟು ಮಾಂಗಲ್ಯವನ್ನು। ನೀಲೇಗೌಡ್ನ ಕೈಲಿ ಕೊಡ್ತಾ ಇದ್ದಾರೆ। ಅಪ್ಪಾ ನೀಲೇಗೌಡ। ಈ ಮಾಂಗಲ್ಯವಾಗಿರಕ್ಕಂತಾದ್ದನ್ನು। ಬ್ರಹ್ಮ ವಿಷ್ಣು ಈಸ್ವರ ತ್ರಿಮೂರ್ತಿ ಋಷಿಗಳ ಕೈಲಿ। ಸಾಧ್ಯವಿಲ್ಲ ಇದನ್ನು ಬಿಚ್ಚುವುದಕ್ಕೆ। ನೀನು ಕಟ್ಟಬೇಕು। ಕಟ್ಟಿದ ಗಂಟನ್ನು ನೀನೇ ಬಿಚ್ಚಬೇಕು। ಬ್ರಹ್ಮ, ವಿಷ್ಣು, ಈಶ್ವರ ಅಂತ್ಹೇಳಿ।

ಅಯ್ಯಾ ಒಳ್ಳೆ ಗಳಿಗೆ ನೋಡವರೆ।
ಮಾಂಗಲ್ಯ ಸೂತ್ರ ಮಾಡವರೆ ॥ ಕ್ವಾರಣ್ಯ ॥
ಐದ್ದನ ಮುತ್ತೈದೇರು ಬಂದವರೆ
ಸಾಸ್ತ್ರವನ್ನಾದರೂ ಮಾಡವರ,
ಸೋಬಾನನಾದ್ರೆ ಏಳವ್ರೆ
ಹೆಣ್ಣಿನೆಸ್ರ, ಕೇಳವರೆ,
ಗಂಡಿನೆಸ್ರ, ಕೇಳವರೆ,
ಅಯ್ಯಾ ನೆಂಟಾರು ಎತ್ತಾರು ಬಂದವರೆ,
ಮುಯ್ಯನಾದರ ಮಾಡವರ

ಅಯ್ಯಾ ಒಳ್ಳೇ ಗಳಿಗೆ ನೋಡಿ ಅವರು
ವೆಚ್ಚಾಳದಲ್ಲಿ ಲಗ್ನನಾದರೂ ಮಾಡವರೆ,

ನೀಲೇಗೌಡ್ನಿಗೆ ಒಳ್ಳೇ ಗಳಿಗೇಲಿ ಲಗ್ನವಾಯ್ತು। ಆವಾಗಲೀಗ ಗಂಡ ಹೆಂಡಿರೂ। ಸಂತೋಷವಾಗಿ ನಿಂತ್ಕಂಡ್ರು।

ಅಯ್ಯ ಕುಲವವರೆಲ್ಲಾ ಕೂಡವರೆ
ಕುಲಕೆ ಊಟ ಕೊಟ್ಟವರೆ
ಕುಲಕೆ ವೀಳ್ಯ ತಿದ್ದವರೆ
ಮಲೆಯ ಸ್ವಾಲಿಗ ನೀಲಯ್ಯ।
ಬಹಳ ವೆಚ್ಚಾಳದಲ್ಲಿ ಅವರು
ಲಗ್ನನಾದರೂ ಆಗವರೇ ॥ ಕ್ವಾರಣ್ಯ ॥

ಈ ಕಡೆ ನೀಲೇಗೌಡ ಶಿವಶರಣೆಯಾದ ಸಂಕಮ್ಮ। ತಂದೆ ತಾಯಿಗಳ ಮನೆವೊಳಗೆ ತಂದೆ ತಾಯ್ಗಳ ಪಾದ್ಸೇವೆ ಮಾಡಿ। ಪತಿವ್ರತಾ ಧರ್ಮ ಉಳಿಸಿಕೊಂಡಿದ್ರು। ನೀಲೇಗೌಡ ಇದೇ ಪ್ರಕಾರವಾಗಿ। ಕುರಿಯನ್ನು ಕಾಯ್ಕಂಡು ಬರ್ತಾ ಇದ್ದಾರೆ। ತುಂಬಿದ ಬಳಗ। ಆದರೆ ಅರ್ಧನ ಅಕ್ಕಾ ತಂಗೀರು ವಾರ್‍ಗಿತ್ತೀರು। ಅತ್ತೆಗೆ ಸಂಕಮ್ಮನ ಅಂದ ಚೆಂದ ನೋಡಿ। ನಮ್ಮ ಮನೆಗೆ ಭಾಗ್ಯಲಕ್ಷ್ಮಿ ಬಂದಿದ್ದಾಳೆ। ಇವಳ ಕೈಲಿ ಕೆಲಸ ಬದ್ಧ ಮಾಡಿಸಬಾರ್‍ದು। ಅಂತ್ಹೇಳಿ ಬಾಳ ಪ್ರೀತಿಯಿಂದ ಸಾಕ್ತಾ ಇದ್ದಾರೆ। ಆರು ಮೂರು ಒಂಬತ್ತು ತಿಂಗಳು ನಡೆದುಕೊಂಡು ಬಂತು। ಸಂಕಮ್ಮನಿಗೆ ಬೇಜಾರಾಗ್ಬುಡ್ತು। ಎಲ್ಲಾ ಅಕ್ಕಾತಂಗೀರು ವಾರ್‍ಗಿತ್ತೀರು, ನೀರ್‍ಗೋಯ್ತಿದ್ದಾರೆ। ನಾನು ಒಂದು ಕೊಡ ನೀರು ತರಬೇಕಂತೇಳಿ।

ಅಮ್ಮ ಕಂಕಳಲ್ಲಿ ಹರವಿ ಇರಕವಳೆ।
ನೀರಿಗಾದ್ರೂ ಪೋಯ್ತಾ ಅವಳೆ ॥ ಕ್ವಾರಣ್ಯ ॥
ಬೆಳ್ಳೀಯ ತಟ್ಟೇಲಿ ಬಿನ್ನವ ತಂದವ್ರೆ
ಹೊಂಗಳ ಮಲ್ಲಣ್ಣನಿಗೆ
ಮುತ್ತಿನ ಕಂಸಾಳೆ ಮುನಿಗಳು ಬಂದವ್ರೆ
ಭಿಕ್ಷಾವ ನೀಡಪ್ಪಾ।

ಎಲ್ಲಾ ವಾರ್‍ಗಿತ್ತೀರ ಜೊತೆಯೊಳಗೆ। ಶಿವಶರಣೆಯಾದ ಸಂಕಮ್ಮಾ। ಕಂಕ್ಳಲ್ಲಿ ಹರವಿ ಎರೀಕೊಂಡು ನೀರ್‍ಗೋಗ್ತಾ ಇದ್ದಳು। ಅರ್ಧಾ ದಾರ್‍ಗೋದ್ರು ತಮ್ಮ ಪೋಡ್ಬುಟ್ಟು। ಮಧ್ಯ ದಾರೀಲಿ ನಿಂತುಕೊಂಡ್ರು ಎಲ್ಲಾ ವಾರ್‍ಗಿತ್ತೀರು ದಾಯಾದಿಕಾರ್‍ರು ಅತ್ತೆ ನಾದ್ನೀರು। ಸಂಕಮ್ಮನ ಮಧ್ಯ ನಿಲ್ಲಿಸ್ಕೊಂಡ್ರು ಅಕ್ಕಯ್ಯಾ ಅತ್ತೆಮ್ಮಾ। ನೋಡಿ ಈ ಸಂಕಮ್ಮನಾ। ನಮ್ಮ ಮೈದನನಾದ ನೀಲೇಗೌಡ। ನಾಲ್ಕು ರಾಜ್ಯನೇ ತಿರುಗಿದ। ಏಳೇಳು ಹದಿನಾಲ್ಕು ದೊಡ್ಡಿ ತಿರುಗ್ದ। ಅಂದವಾದ ಮಡದಿ। ನನ್ನ ರೂಪಕ್ಕೆ ತಕ್ಕಂಥ ಹೆಂಡಿರು। ಅಂತ್ಹೇಳಿ ಲಗ್ನವಾದ್ನಲ್ಲ ಈ ಸಂಕೆಣ್ಣ।

ಇವಳು ಹುಟ್ಟಿ ಬಂದ ಮೂವತ್ತು
ಮಂಡೇ ಮಾರಿ ಹನ್ನೆರಡು।
ಮೈಯಾನ ಬಣ್ಣ ಕೆಡಲಿಲ್ಲ।
ಮೊಖದ ಕಳೆಯೇ ತಪ್ಪಲಿಲ್ಲ
ದಟ್ಟಾಧರಣಿ ಸಂಕೆಣ್ಣು
ಹುಟ್ಟು ಬಂಜೆ ಸಂಕೆಣ್ಣು
ಮಕ್ಕಳ ಫಲವೇ ಮೊದಲಿಲ್ಲ
ಎದ್ದು ಮುಖವ ನೋಡಿದರೆ
ನಾವು ಬಂಜೇರಾಗುವೆವು.
ಸಂಗಡ ದನಗಳ ಕಾದಾರೆ
ದನಗಳು ಬಂಜೇರಾಗುವವು
ಮಾಡಿದ ಅಡಿಗೆ ಉಂಡಾರೆ
ನಾವು ಬಂಜೇರಾಗುವೆವು
ಮೀದ ನೀರ ದಾಟಿದರೆ
ನಾವು ಬಂಜೆರಾಯ್ತೀವಿ
ನಮ್ಮ ಮಕ್ಕಳು ಬಂಜೇರಾಗುವರು ॥ ಕ್ವಾರಣ್ಯ ॥
ಬಾ ನನ್ನ ಗುರುವೇ ಭಕ್ತರ ಗಂಡ
ಬಾಗಿದೆವು ಮಾದೇವರಾ
ನಿಮ್ಮ ಮುಟ್ಟ ಪೂಜೆ ಮಾಡವರ್‍ಯಾರೋ
ಬೇಡರ ಕನ್ನಯ್ಯ।

ಅಕ್ಕಾ ತಂಗೀರೆಲ್ಲ ಯಾವ ರೀತಿಯಾಗಿ ಮಾತ್ನಾಡಿದರೋ। ಇವರ ಮಾತ ಕೇಳಿದ ತಕ್ಷಣವೇ। ಆ ಶಿವ ಶರಣೆಯಾದ ಸಂಕಮ್ಮನಿಗೆ। ಕರ್ಣಕ್ಕೆ ಕಿವಿಗೆ ಬರ ಸಿಡಿಲೊಡೆದಪ್ಪಂದವಾಯ್ತು। ಅಯ್ಯೋ ಪರಮಾತ್ಮ। ಭೂಮಿ ತಾಯಿ ಬಗ್ಗಿ ನೋಡ್ಡಳು। ಆಕಾಸ ಅಂತ್ಲೋಡ್ತಳು। ಭೂಮಿತಾಯಿ ಆಕಾಸವೇಣಿ। ಲಗ್ನವಾಗಿ ಇನ್ನೂ ಒಂದ್ವರ್ಷ ತುಂಬ್ಲಿಲ್ಲ। ನಾನೇ ಸರಿಯೇ ದಟ್ಟಧರಣಿ। ಹುಟ್ಟು ಬಂಜೆ। ಇಂಥಾ ಮಾತ ಆಡ್ತಾ ಇದ್ದಾರೆ। ಈ ಅತ್ತೆ ನಾದ್ನೀರು ವಾರಾಡ್ತಿತ್ತೀರು। ಇಂಥಾ ಕ್ವಾಪದ ಮಾತಾಡ್ತಾ ಇದ್ದಾರೆ। ಇವರ ಮುಖ ನಾನು ನೋಡಬಾರ್ದು। ಇವರ ಕೂಡ ನಾನು ಮಾತ್ನಾಡಬಾರ್ದು। ಇವರ ಜೊತೇಲಿ ಕೂತ್ಕಂಡು। ಊಟ ಮಾಡಬಾರ್ದು। ನನ್ನ ಪತಿಯಾದ ನೀಲೇಗೌಡ ಬರುವವರೆಗೂವೆ। ನನ್ನ ರೂಮ್‌ನಲ್ಲಿರಬೇಕೂಂತ್ಹೇಳಿ। ತನ್ನ ಮಲಗೂವಂತ ಕ್ವಾಣೆವೊಳಗಿರಬೇಕೂಂತ್ಹೇಳಿ।

ಅಮ್ಮ ಕಂಕ್ಲಲ್ಲಿ ಕೊಡವ ಇರಕವರೆ
ತಮ್ಮ ಪೋಡಿಗಾದರು ಬತ್ತಾವರೇ ॥ ಕ್ವಾರಣ್ಯ ॥

ಕಂಕ್ಳಲ್ಲಿ ಬಿಂದ್ಗೆ ಎರೀಕೊಂಡು। ಶಿವಶರಣೆಯಾದ ಸಂಕಮ್ಮಾ। ತನ್ನ ದೊಡ್ಡಿವೊಳ್ಗೆ ತಂದು ಮಡಗ್ಬುಟ್ಟು। ಇವರ್‍ಕೂಡ ಮಾತ್ನಾಡ್ಲಿಲ್ಲ। ಊಟಾನೂ ಮಾಡ್ಲಿಲ್ಲ। ತಾನು

ಮಲಗುವಂತಾ ರೂಮ್‌ನಲ್ಲೀ ಇವರ ಮುಂದೆ ಎದುರಾಗಿರಬಾರದು ಅಂತ್ಹೇಳಿ। ಆವಾಗ ಸಂಕಮ್ಮ ಓಡೋಗಿ। ತಾನು ಮಲಗುವಂತ ರೂಮ್‌ನಲ್ಲೇ। ಮೊಕಣ್ಣಾಗಿ ಮಲಿಕೊಂಡಳು ಊಟ ಬುಟ್ಬುಟ್ಟು।

ಅಮ್ಮಾ ಮುಂದಕೆ ಬಾಗಿಲ ಮುಚ್ಚಿವಳೇ
ಹಿಂದಕೆ ಬಾಗಲ ತೆಗೆದವಳೇS ॥ ಕ್ವಾರಣ್ಯ ॥

ಬಡಗೂರ ಬಾಗಲ ಮಠದವರು
ಗುರುವೇ ಬೆಡಗಿನಲಿ ಚಂದದ ಶಾಲೆ,
ಉತ್ತುರ ದೇಶದ ಮಾದೇವ ನೀವು
ಹುಟ್ಟುವಾಗ ಲಿಂಗಾ।

ಮೊಕಣ್ಣಾಗಿ ಸಂಕಮ್ಮನು ತಾನು ಮಲಗುವಂತ ಕ್ವಾಣೆ ಒಳಾಕ್ಹೋಗಿ, ಮುಂದಕ್ಕೆ ಬಾಗಿಲು ಮುಚ್ಚಿಬಿಟ್ಟು। ಹಿಂದಕ್ಕೆ ಕದಾ ತೆಗ್ದಂಡ್ ಮಲೀಕಂಡಳು। ಐದು ಗಂಟೆಯಾಯ್ತು। ಸಾಯಂಕಾಲ ನೀಲೇಗೌಡ। ಕುರಿಯನ್ನ ಒಡಕೊಂಡ್ಬಂದು ದೊಡ್ಡಿ ಒಳ್ಗೆ ಕೂಡ್ಬುಟ್ಟು। ಕೊಕ್ಕೆ ಜೋಡುಮೆಟ್ಕಂಡು। ಕುರಿದೊಣ್ಣೆ ಇಡ್ಕಂಡು ಬತ್ತಾವ್ನೆ। ಮಾಳ್ಗೆ ಮನೆ ಬಾಗಿಲಿಗೆ ಬತ್ತಾ ಇದ್ದ। ಮಾಳ್ಗೆ ಮನೆ ಅಂದರೆ ಅಡ್ಗೆ ಮಾಡೋ ಮನೆ। ಆ ಬಾಗ್ಲಿಗೆ ಬತ್ತಾ ಇದ್ದ ಸಂಕಮ್ಮನ ಮೊಕ ಕಾಣ್ಲಿಲ್ಲ। ಯಾತಕ್ಕೋಸ್ಕರ ಅಂದ್ರೆ। ಲಗ್ನವಾದ್ದಿನದಿಂದ ಬಾಗ್ಲಲ್ಲಿ ಚೊಂಬಿಡುಕೊಂಡು ಕಾಯ್ತಾ ಇದ್ದಳು। ಆವೊತ್ತು ಅವಳ ಮೊಕ ಕಾಣಲಿಲ್ಲ। ಅಲ್ಲೇ ಕೋಪ ಬಂದು ಬುಡ್ತು ನೀಲೇಗೌಡ್ನಿಗೆ। ವರ್ಷ ತುಂಬಿಲ್ಲ ಕೆಟ್ಟ ಮುಂಡೆ ಮಗ।

ಅಯ್ಯಾ ಕೆಂಜರಗಣ್ಣ ಬಿಟ್ಟವನೆ
ನೊರ್ರೊರ್‍ನಲ್ಲ ಕಡದವನೆ
ಕಿಡಿ ಕಿಡಿ ಕೋಪ ತಾಳವನೆ।
ಮಾಳಿಗೆ ಮನೆಗೆ ಬಂದವನೆ।
ತಾಯಿ ತಂದೆ ಕೇಳವನೆ।
ಬಂಧೂ ಬಳಗವ ಕೇಳವನೆ
ಅಣ್ಣಾ ತಮ್ಮರ ಕೇಳವನೆ
ಅತ್ತಿಗೆ ನಾದ್ನಿರ ಕೇಳವನೆ
ಅವರ ಬಂಧು ಬಳಗ ಎಲ್ಲವನ್ನೂ
ಯೋಗವಾಗಿ ಕೇಳವನೇS ॥ ಕ್ವಾರಣ್ಯ ॥

ಎಲ್ಲುನೂ ಬಾಳ ಕೋಪ್ದಿಂದ ಕೇಳ್ತಾ ಇದ್ನಲ್ಲ। ಕಿರೀ ಮಗ ಕೋಪಿಷ್ಟ ಮನಸ ಅಂತ್ಹೇಳಿ। ತಂದೆ ತಾಯಿ ಅಣ್ಣ ತಮ್ಮ ಓಡಿ ಬಂದ್ರು। ನೀಲೇಗೌಡ ಕೋಪ ಮಾಡ್ಬೇಡ ಮಗನೆ, ನಿನ್ನ ಮಡದಿಯಾದ ಸಂಕಮ್ಮ ಎಲ್ಲೂ ಹೋಗ್ಲಿಲ್ಲ। ಇಲ್ಲೇ ಇದ್ದಾಳೆ ಬಾರಪ್ಪ ಅಂತ್ಹೇಳಿ ಸಮಾಧಾನವಾಗಿ ಕೂರಿಸ್ಕಂಡ್ರು। ನೋಡಪ್ಪ ನಿನ್ನ ಮಡದಿಯಾದ ಸಂಕಣ್ಣು। ದಾಯಿಂದಕಾರರು ಅತ್ಗೆ ನಾದ್ನೀರು। ಹೆಬ್ಬಳ್ಳದ ಕೆರೆಗೆ ನೀರ್ಗೋಗ್ತಾಯಿದ್ದರು। ತಾನೊಂದ್ಕೊಡ

ತರಬೇಕಂತ್ಲೇಳಿ। ಇವತ್ತು ಹೋದಳು। ಏನು ದಾರಿವೊಳಗೆ ಅತ್ತಿಗ್ನಾದ್ದೀರು ಸರಸಾದ ಮಾತು। ಗೇಲಿನ ಮಾತು ಗಂಧದ ಮಾತ್ನಾಡುವತ್ಗೆ ಮಗನೆ। ಕೋಪ ಮಾಡ್ಕೊಂಡು ನಿನ್ನ ಮಡದಿ। ನೀನು ಮಲಗೂವಂತ ಕ್ವಾಣೆವೊಳಗೆ ಮಲಗಿದ್ದಾಳೆ। ಹೋಗಪ್ಪಾ ಅಂದ್ರು। ನೀಲೇಗೌಡ್ರಿಗೆ ಮತ್ತಷ್ಟು ಕೋಪ ಬಂದ್ಬುಡ್ತು! ಕೆಟ್ಟಮಂಡೇ ಮಗಳಿಗೆ ಅಂಕಾರ ಬಂತಾ ಅಂತ್ಲೇಳಿ। ಹಾರೆಯನ್ನೇ ತಂದು ಕದವನ್ನು ಮೀಟಿ ಒಂದ್ಕಡೆ ಮಡಗ್ಬಿಟ್ಟು। ಮೊಕಣ್ನಾಗಿ ಮಲಗಿದ್ದ ಸಂಕಮ್ಮನ।

ಅಯ್ಯಾ ಮಾರುದ್ದ ಮಂಡೆ ಹಿಡಿದವನೇ
ಮೇಲಕ್ಕೆ ಎತ್ತಿ ನಿಲಿಸವನೇ ॥ ಕ್ವಾರಣ್ಣ ॥

ಆಲಂಬಾಡಿ ಮಾದೇವ
ಅರಗಣ್ಣ ಬಿಟ್ಟು ನೋಡಯ್ಯಾ
ಆಲರವಿ ಮ್ಯಾಲುವಿನ ದಂಡೆ
ವಾಲಾಡಿ ಬಂದೋ

ಮೇಲಕ್ಕೆ ಒಂದ್ಮಾರುದ್ದ ಮಂಡೀಯಿಂದೆಳ್ದು ಮೇಲಕ್ಕೆತ್ತಿಲಿಸ್ಕೊಂಡು। ಮಡದಿ ಮುಖ ನೋಡ್ದಾ! ಸಂಕಮ್ಮನ ಕಣ್ನಲ್ಲಿ ಧಾರಾವತಿಯಾಗಿ ನೀರು ಹರೀತಾ ಅದೆ! ಮೊಕುವೆಲ್ಲ ಕಂದು ಕಪ್ಪಾಗ್ಹೋಗಿದೆ! ಏನೇಲೇ ಮಡದಿ ಸಂಕಣ್ಣೆ ನಾನು ಕುರಿಯನ್ನು ಬಿಟ್ಟು ಹೋಗುವಾಗ। ನಿನ್ನ ಮೊಕ ಸಂಪ್ಗೆ ಹೂವಿನ ಹಾಗೆ ನಗನಗ್ತಾಯಿತ್ತಲ್ಲ ಮಡ್ದಿ। ಈವಾಗ ಮಲ್ಗೇ ಹೂವು ಬಾಡ್ದಷ್ಟಂದವಾಗಿ। ಬಾಡಿರುವುದಕ್ಕೆ ಕಾರಣವೇನು ಮಡದಿ। ಅಯ್ಯೋ ಯಜಮಾನ ಯಜಮಾನರೇ ನನ್ನ ಮಂಡೇ ಬಿಟ್ಬಿಡಿ ಯಜಮಾನ ಅಂದಳು। ಮಂಡೆ ಬಿಟ್ಟು ಯಾರೇನಂದಿದ್ದಾರೆ ಸಂಕೆಣ್ಣೆ

ಮಡದೀ ಅತ್ತೆ ಮಾವ ಏನಂದಾರು
ಭಾವ ಮೈದ್ನ ಏನಂದಾರು।
ಅತ್ತಿಗು ನಾದ್ದೀರು ಏನಂದಾರು
ಅಕ್ಕಾ ತಂಗೀರು ಏನಂದಾರು
ಸಂಗಡಗಾತಿರು ಏನಂದಾರು
ಮಡದಿ ಯಾರೇನಂದಾರು ಸಂಕೆಣ್ಣೆ!
ನನ್ನೊಂದಿಗೇಳು ಮಡದೀಯೇ ॥ ಕ್ವಾರಣ್ಣ ॥

ಅಯ್ಯೋ ಶಿವಶಿವಾ ಯಜಮಾನ್ರೇ। ಪ್ರಪಂಚದಲ್ಲಿ ಹೊಡೆದು ಹೋದಂತ ಮಡ್ಕೆ ವಾಪ್ಸು ಬರೋದಿಲ್ಲ! ಆಡಿದಂತಾ ಮಾತು ಅಮೃತಾ ಆಗೋದಿಲ್ಲ ಯಜಮಾನ। ಯಾರೇನೆಂದರೆ ನಮಗೇನಾಯ್ತು ಅಂದ್ರು। ಥೇ ಕೆಟ್ಟ ಮುಂಡೇ ಮಗಳೇ। ಯಾರೇನಂದಿದ್ದಾರೆ ಜಾಗ್ರತೆಯಾಗಿ ಹೇಳು ಮಡ್ದಿ ಅಂದ್ರು। ಯಜಮಾನ್ರೇ। ನಿಮ್ಮ ಅತ್ತಿಗೆ ನಾದ್ದೀರು ನಿನ್ನ ಅಕ್ಕಾ ತಂಗೀರು ಜೊತೆ ಹೆಬ್ಬಳ್ಳದ ಕೆರೆಗೆ ನೀರ್ಗೋದೆ। ಒಂದು ಕೊಡಾ ನೀರ್ತರೋದಕ್ಕೆ। ಆಗ ನೀರಿನ್ದಾರಿವೊಳಗೇ।

ನನ್ನ ಕ್ಯಾಣದೊಂದು ಮಾತಾಡವರೆ
ಕೇಳಲಾರೆ ಯಜಮಾನ ॥ ಕ್ವಾರಣ್ಕಾ ॥

ಎಲವೋ ಸಂಕೆಣ್ಣ! ಗಂಡನಿಗೆ ಮುಂಡಾರೀತಿ ಮಾಡ್ಬೇಡ! ಪತಿಗೆ ಪ್ರತಿ ಉತ್ತರ ಹೇಳ್ಬೇಡ! ಯಾರೇನಂದಿದ್ದಾರೆ ಹೇಳು ಅಂದ್ರು! ಯಜಮಾನ್ರೇ! ನನ್ನ ಮೈದುನನಾವ ನೀಲೇಗೌಡ ಹದಿನಾಲ್ಕು ಲೋಕ ತಿರುಗಿ! ಆಂದವಾದ ಈ ಮಡದಿ ತಂದ್ನಲ್ಲ ಈ ಸಂಕೆಣ್ಣ!

ನಾನು ಹುಟ್ಟಿ ಬಂದ ಮೂವತ್ತು
ಮಂಡೆ ಮಾರಿ ಹನ್ನೆರಡು
ಮೈಯನ ಬಣ್ಣ ಕೆಡನಿಲ್ಲ
ದಟ್ಟಾ ಧರಣಿ ನಾನಂತೆ
ಹುಟ್ಟು ಬಂಜೆ ನಾನಂತೆ
ಸಂಗಾಡ ದನಗಳ ಕಾದರೆ
ಅವು ದನಗಳು ಬಂಜೇರು ಆಗುವುವು!
ಮಾಡಿದ ಅಡಿಗೆ ಉಂಡರೆ
ಅವರೂ ಬಂಜೇರಾಗುವರು
ಮಿಂದ ನೀರ ದಾಟಿದರೆ
ಅವರೂ ಬಂಜೇರಾಗುವರು
ಅವರ ಮಕ್ಕಳು ಬಂಜೇರಾಗುವರು
ನನಗೆ ಪಾಪನ್ನಾದರು ಮಾಡಬೇಡ
ಪಾದ ಪೊತ್ತೇನು ಯಜಮಾನಃ ॥ ಕ್ವಾರಣ್ಕಾ ॥

ನೀಲೇಗೌಡ ಮಡದಿ ಮಾತ ಕೇಳಿದ! ಮತ್ತಷ್ಟು ಕೋಪ ಬಂದ್ಬುಟ್ತು! ಆದರೆ ಸಂಕೆಣ್ಣ! ಗಂಡ ಹೆಂಡತಿ ಅಂದ್ರೆ ಹೆಣ್ಣು ದೇವ್ರು ಗಂಡು ದೇವ್ರು! ಇವತ್ತು ನಿನ್ನನ್ನಾಡಿದ್ದಾರೆ ನಾಳೆ ನನ್ನನ್ನಾಡ್ತಾ ಇದ್ದಾರೆ! ಹಾಗಾದ ಪಕ್ಷದಲ್ಲಿ ಈ ದಾಯಿಂದಕಾರರು! ಈ ಅಣ್ಣ ತಮ್ಮ ಅತ್ಗೆ ನಾದ್ನೀರ ಕೂಡ ನಾವು ಇರ್ಬಾರ್ದು ಅಂತ್ಹೇಳಿ! ಹೊರಗಡೆ ಬಂದು ಕೂತ್ಕಂಡು ಕೋಪದಲ್ಲಿ ನೀಲೇಗೌಡ,

ಅವ್ರ ತಂದೆ ತಾಯಿ ಕರೆದವನೆ
ಬಂಧು ಬಳಗ ಕರೆದವನೆ
ಅಣ್ಣಾತಮ್ಮಾರ ಕರೆದವನೆ!
ಕುಲದವರೆಲ್ಲ ಕೂರ್ಸವನೆ
ಜಾತಿಯವರೆಲ್ಲ ಸೇರ್ಸವನೆ
ನ್ಯಾಯ ಪಂಚಾಯಿತಿ ಮಾಡ್ಸವನೆ
ಮಲೆಯ ಸೋಲುಗ ನೀಲಯ್ಯ!
ಆಯ್ಯಾ ಬರತಕ್ಕ ಭಾಗ ತಗದವನೆ!
ಬೇರೆ ಮನೆಯ ಮಾಡವ್ನೇ ॥ ಕ್ವಾರಣ್ಕಾ ॥

ಆಲಂಬಾಡಿ ಮಾದೇವ।
ಹಾಲರವಿ ಮಾದೇವರಿಗೇ।
ಹಾಲರವಿ ಮ್ಯಾಲೂವಿನ ದಂಡ ವಾಲಾಡಿ ಬಂದೊ।

ಇವರ ಕೂಡ ನಾನಿರಬಾರದು ಅಂತ್ಹೇಳಿ। ನ್ಯಾಯ ಪಂಚಾಯ್ತಿಯನ್ನು ಮಾಡಿ। ಬರುವಂಥ ಭಾಗ ತಕ್ಕೊಂಡು ನೀಲೇಗೌಡ। ಗಂಡ ಹೆಂಡಿರು ಒಂದು ರೂಮ್ನಲ್ಲಿ ವಾಸಮಾಡ್ತಾರೆ। ಒಂದು ಮನೇ ಮಾಡ್ಕಂಡು ಗಂಡಾ ಹೆಂಡಿರು। ಕಾಲ ಮಾಡ್ತಾ ಇದ್ದಾರೆ। ಅಂಥ್ರೆ ನನ್ನ ಕೆಲಸ ಬಿಟ್ಟ ಬಿಡ್ಲಿಲ್ಲ। ಕುರಿಯನ್ನೇ ಕಾಯ್ಕೊಂಡ್ ಬತ್ತವ್ನೆ। ಅವರವರ ಅಣ್ಣ ತಮ್ಮದೀರೆಲ್ಲ ಅವರವರ ಕೆಲ್ಸ ಮಾಡ್ತಾರೆ।

ಆಲಂಬಾಡಿ ಮಾದೇವ
ಅರಗಣ್ಣ ಬಿಟ್ಟು ನೋಡಯ್ಯಾ
ಹಾಲರವಿ ಮ್ಯಾಲ್ಲೂವಿನ ದಂಡೆ
ವಾಲಾಡಿ ಬಂದೇ॥

ಮಲೆಗಳ ನೋಡಯ್ಯಾ ಮಾದೇವ
ಹೊನ್ನೇ ಗಿಡಗಳ ನೋಡಯ್ಯ
ಮಲೆಯಲ್ಲಿರುವ ಮಾದಯ್ಯ ನಿಮ್ಮ
ಐಭೋಗ ನೋಡಯ್ಯಾ

ಮಲೆಯ ಸ್ವಾಲಿಗ ನೀಲೇಗೌಡ। ತಂದೆ ತಾಯಿ ಬಂಧು ಬಳಗ। ಕುಲದೋರು ಜಾತಿಯವ್ರ ಕರ್ದು। ಬೇರ ಮನೆ ಮಾಡ್ಕಂಡು। ಗಂಡ ಹೆಂಡ್ತಿರಿಬ್ರೂ ಕೂಡ ಒಂದ್ಮನೆಯಲ್ಲಿ ವಾಸ ಮಾಡ್ಕಂಡು ಬದುಕ್ತಾ ಇದ್ದಾರೆ, ಇದೇ ರೀತಿಯಾಗಿ ನೀಲೇಗೌಡ। ತನ್ನ ಕೆಲ್ಸ ಬದುಕ್ಕೆಲ್ಲ ಮಾಡ್ಕಂಡು ಬರ್ತಾ ಇದ್ದಾನೆ।

ಇಳಿದರು ಇಳಿದಾರು ಮಾದೇವಾ।
ಗಿರಿಯಿಂದ ಇಳಿದರು ಮಾದೇವಾ। ॥ ಪ ॥
ಬಂಗಾರು ಪಟ್ಟ ತೇಜಿಯ ಮೇಲೆ।
ಗಿರಿಯಿಂದ ಇಳಿದಾರು ಮಾದೇವ।
ಹೊನ್ನ ಬಣ್ಣಾದ ಬರಗನ ಮೇಲೆ
॥ ಗಿರಿಯಿಂದ ॥
ಗೆಜ್ಜಲ ಹಟ್ಟೆ ಕೋಡುಗಲ್ಲೊಳಗೇ
॥ ಗಿರಿಯಿಂದ ॥
ಮಕ್ಕಳ ಮನೆಯ ಮುರಿದವರೇ
॥ ಗಿರಿಯಿಂದ ॥
ಗಂಡುಗಲಿಯ ಮ್ಯಾಲೆ ಗದ್ದುಗೆಯೋ ॥ ಗಿರಿಯಿಂದ ॥
ಕ್ವಾರಣ್ಕ ನೀಡಮ್ಮ ಕೋಡುಗಲ್ಲಿನ ಮ್ಯಾಲೆ
ಕೋಲು ಮಂಡೆ ಜಂಗಮ ದೇವರು ಕ್ವಾರಣ್ಕೆಂದು ಸಾರವರೇ।
ಕ್ವಾರಣ್ಕ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ನೀನು ಎಲ್ಲಿಗೋಗ್ಬೇಕು। ಯಾಕಪ್ಪ ಅಂತ ಕೇಳಿಯಪ್ಪ। ಮಲೆ ಸ್ವಾಲಿಗ ನೀಲಯ್ಯ ಅಂತ। ಕೀಳ್ತಾಳಲ್ಲೋ ಗುರುವೇ। ನಾನು ಹೋಗುವಂತ ಸ್ಥಳ ಯೇಳ್ತೀನಿ ಕೇಳೇ ಸತ್ಯವಂತೆ ಸಂಕೆಣ್ಣೆ। ನಿನ್ನ ಅಡ್ಡಗ್ನಾನವ ಬಿಡೆಣ್ಣೆ। ನಿನ್ನ ಸರಿ ಗ್ನಾನದಲ್ಲಿ ಕೇಳೆಣ್ಣೆ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಕಾಣಬಾರದ ಕಾನಿಯಲ್ಲಿ। ಮೂರು ಕೂಡದ ಕೋವಲ್ಲಿ ಮುದ್ದು ಬೆಟ್ಟದ ಮೊಗ್ಗದಲ್ಲಿ। ಒಕ್ಕಾಲು ಕೊನೆ ಬೋರೆಯಲ್ಲಿ ಗೊಜ್ಜುಲಿನ ಮನೆಯೊಳಗೆ। ಒಂದು ಪತ್ರ ಮಾಡಕ್ಕ ಓಗುವ। ನಡಿಯೆ ನನ್ನ ಸತ್ಯವಂತೆ ಸಂಕೆಣ್ಣೆ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮ್ಯಾಲೆ।

ಯೇಳ್ತಿನಿ ಕೇಳಪ್ಪ ನೀಲಯ್ಯ। ಕಾಣಬಾರದ ಕಾನಿ। ಮುಸಕಲು ಬೆಟ್ಟದ ಮಗ್ಗುಲು। ವಿಷಂಪಾರಿ ಒತ್ತು ಅಂತದಲ್ಲೋ ದಮ್ಮಯ್ಯಾ। ಕಾಗಿಲ್ಲ, ಗೂಗಿಲ್ಲ, ಅನ್ಸೋ ನರಮನ್ಸ। ನಮ್ಮನೀಲಯ್ಯನೋರೇ। ನಾನು ಕಾಡಿನಲ್ಲಿ ಹುಟ್ಟಿ, ಕಾಡಿನಲ್ಲಿ ಬೆಳದೆ ನೀಲಯ್ಯ। ನನ್ನ ಜನ ಜಾತ್ರೆ ಬಿಡಬೌದೇ। ನಿನ್ನ ಸಂಗಡ ನಾನು ಬರಬೌದೇ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಹೇಳ್ತೀನಿ ಕೇಳೆಣ್ಣೆ ಸಂಕೆಣ್ಣೆ। ನನಗೆ ಯಾರೂ ವೊಂದ್ಗುಟ್ಟಿದವರಿಲ್ಲ। ಸಂಗಡ ಬೆಳೆದೋರಿಲ್ಲ। ನನ್ನ ಒಂದುಗುಟ್ಟಿರೋರ್‍ನಾರೂ ಬೆಳೆದೋರ್‍ನಾರು ಹೆಣ್ಣೇ ಅಂತ ಕೇಳ್ದೆ ಗುರುವೇ। ನಾನು ತಾಯಿ ತಂದೆ ಉಳ್ಳವಳು। ಮೈದ ಭಾವ ಉಳ್ಳವಳು। ಅಕ್ಕ ತಂಗಿ ಉಳ್ಳವಳು। ಅತ್ತೆ ಮಾವ ಉಳ್ಳವಳು। ಹಿಂದೇಳು ಬಳಗ ಉಳ್ಳವಳು। ಮುಂದೇಳು ಬಳಗ ಉಳ್ಳವಳು। ಇಂಥ ಹಿಂಡು ಬಳಗನ ಬಿಡಬೌದೇ। ನಿನ್ನ ಸಂಗಡ ನಾನು ಬರಬೌದೇ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಅಪ್ಪಪ್ಪಾ ನೋಡ್ಡ್ಯಾ। ಹೆಣ್ಣಿನ ಬೆಡಗಿನ ಮಾತನ್ನು। ನನಗೆ ಅಣ್ಣ ತಮ್ಮ। ಅಕ್ಕ ತಂಗಿ। ಬಂಧು ಬಳಗ ಅದೆ ಅಂತೇಳಿ। ಬಹಳ ಆಗ್ತದಲ್ಲಾ ಬಾಳ ಸಂಪತ್ತು ಸ್ವಾಮಿ। ಆದ್ರೆ ಯೇಳ್ತೀನಿ ಕೇಳೇ ಸಂಕಣ್ಣೆ। ನಿನ್ನ ಅಣ್ಣನಿಗೆ ಮಕ್ಕಳಿದ್ರೆ। ಅವರ ಹೆಂಡ್ತಿ ಮಕ್ಕಳು ಉಣ್ತಾರೆ। ನಿನ್ನ ತಂಗಿಗೆ ಮಕ್ಕಳಿದ್ದರೆ। ಅವರ ಗಂಡು ಮಕ್ಕಳು ಉಣ್ತಾರೆ। ನಿನಗೆ ಬಂದ ಭಾಗ್ಯವೇನು?। ನಿನಗೆ ಬಂದ ಸಂಪತ್ತೇನು?। ಕೇಳು ಸಂಕೆಣ್ಣೆ। ನಿನಗೆ ಬಂಜೇ ಅನ್ನೋ ಹೆಸರು ತಪ್ಪೋದೇನೇ। ನನ್ನ ಸತ್ಯವಂತ ಸಂಕೆಣ್ಣೆ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಸತ್ಯವಂತೆಯಾದ ಸಂಕಣ್ಣ। ಆಕಾಸ ಅಂತು ನೋಡಿ ಭೂಮಿತಾಯಿ ಬಗ್ಗಿ ನೋಡಿ। ಕೈ ಹಿಡಿದ ಸತಿ ಪತಿಗಾಗಬೇಕು। ಪತಿ ಸತಿಗಾಗಬೇಕು ದಮ್ಮಯ್ಯ। ಯಾರ್‍ಗಾರೂ ಆಗಲ್ಲ ಸ್ವಾಮಿ। ನನ್ನಣ್ಣ ತಮ್ಮ ಅಕ್ಕ ತಂಗಿ। ಬಂಧು ಬಳಗ ಅವರು

ಬದುಕುವಂತ ಕಾಲ್ದಲ್ಲಿ। ನಾವು ಕಡೇ ಕಾಣ್ತೇವಿ ಅಂತೇಳ್ಬುಟ್ಟು। ಅವಳು ಗಂಡನ ಪಾದ ಹಿಡ್ದವಳೇ। ಸತ್ಯವಂತೆ ಸಂಕೆಣ್ಣಿ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ,
ಸಂಕೆಣ್ಣೀ। ಮಕ್ಕಳ ಬೋಗ ಮೊದಲಿಲ್ಲ।
ಮೈಯಿನ ಬಣ್ಣ ಕೆಡಲಿಲ್ಲ।
ತೋಳಿನ ಬಾವ ನೋಡಿದರೆ
ಬಾಳೆಯ ಮರದ ಲಪ್ಪಂದ
ತೊಡೆಯ ಬಾವ ನೋಡಿದರೆ
ತಿದ್ದಿದ ಗೌರಮ್ಮನಾಗ।
ನಿನ್ನ ಯಜಮಾನನ ನೋಡಿದರೆ।
ಆಹಾ ಕ್ವಾರಣ್ಣಗಳ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ನಮ್ಮ ಸತ್ಯವಂತ ನೀಲಯ್ಯನೋರು। ಈ ತರ ಇರುವಂತ ಹೆಂಗಸನ್ನು। ಯಾವ ರೀತಿ ಕರ್ಕೊಂಡೋಗ್ಬೇಕು ಅಂತೇಳಿ। ಗುರುವೇ ಮತ್ತೇನು ಗ್ಯಾನ ಮಾಡವ್ನೇ। ಮಲೆಯ ಸೋಲಿಗ ನೀಲಯ್ಯ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ

ಆಗಲೀಗ ಕೇಳ್ತೀನಿ ಕೇಳೆ ಸಂಕೆಣ್ಣಿ। ನಾವು ಕಾಡು ವನವಾಸಕ್ಕೆ ವೋಯ್ತೀವಲ್ಲ। ತಕ್ಕಂತ ಸಾಮಾನು ತಕ್ಕಂತೀನಿ ನಿಂತ್ಕಳೇ ಅಂತೇಳ್ಬುಟ್ಟು। ಅವನು ಗುಡುಗುಡಾನೆ ಹೋಗವನೆ।

ಹೆಜ್ಜೇನು ಗಡಿಗೆ। ತಂದವನೇ।
ಕಿರುಜೇನು ಗಡಿಗೆ। ತೆರೆದವನೇ।
ಬಿದರಕ್ಕಿಯ। ತಂದವನೇ।
ಮಾಕಳಿಬೇರು। ತೆಗದವನೇ।
ನೇಗಲಗೆಡ್ಡೆ। ತೆಗೆದವನೇ।
ಕರ್ಜೂರದಣ್ಣು। ತೆಗೆದವನೇ।

ಅಯ್ಯಾ ತಕ್ಕಂತ ಸಾಮಾನು ತಕ್ಕಂಡು ಬಾಗಿಲಿಗೆ ಬಂದವನೇ।
ಆಹಾ ಕ್ವಾರಣ್ಣಗಳ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆದ್ರೆ ಯೇಳ್ತೀನಿ ಕೇಳೇ ಸಂಕೆಣ್ಣೆ। ನಾನು ಊಟ ಮಾಡುವಂತ ಸಾಮಾನು ತಂದಾಯಿತು। ನನ್ನ ಜಾತಿ ಕಸುಬು ಕುಲುದ್ಯೋಗ। ನಾನು ಕಾಡು ಮೃಗ ಜಿಂಕೆ। ಬೇಟೆಗೆ ವೋಗುವಂತಾಗಿ ಆಯಾ ಸಾಮಾನ್ ತಕ್ಕಂಡು ಬತ್ತೀನಿ। ನೀನು ಕಾಲು ಗಳಿಗೆ ನಿಲ್ಲೆ। ನೀನು ಸತ್ಯವಂತೆ ಸಂಕೆಣ್ಣೆ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆವಾಗಲೀಗ ಮಲೆ ಸ್ವಾಲಿಗ ನೀಲಯ್ಯ। ಎತ್ತನೀಗ ನಿಲ್ಲುಸ್ಬಿಟ್ಟು ಗುಡುಗುಡಸೆ ಓಗಿ ಸ್ವಾಮಿ। ಬಂದೂಕ ತಾನೇ ತೆಗೆದವನೇ। ನಡೀಗೆ ತಾನು ಬಿಗಿದವನೆ। ಬಾಕಾಲನ್ನ ತೆಗದವನೇ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಮಲೆಸ್ವಾಲಿಗ ನೀಲಯ್ಯನೂವೆ। ಸತ್ಯವಂತೆಯಾದ ಸಂಕೆಣ್ಣೆ। ಇಬ್ಬರೂವೆ ಸ್ವಾಮಿ। ಅಲ್ಲಿ ಕಾಡು ವನವಾಸಕ್ಕೆ ವೊಯ್ತಾರೇ। ನನ್ನ ಮಲೆಯ ಸೋಲಿಗ ನೀಲಯ್ಯ।

ಕೋಲು ಮಂಡೆ ಜಂಗಮದೇವರು ಕ್ವಾರಣ್ಯಕೆ ದಯಮಾಡಪರೆ।

ಆಗಲೀಗ ಸಂಜೆ। ಏಳು ಗಂಟೆ ಹೊತ್ತಿಗೆ। ಸ್ವಾಮಿ ಕಾಣಬಾರದ ಕಾನೆಯಲ್ಲಿ। ಮೂರು ಗುಟುಕು ನೀರಿಲ್ಲ। ಮುಸುಕಿನ ಬೆಟ್ಟದ ಮೊಗ್ಗಿಲ್ಲ। ವಿಷಂಪಾರಿ ಒತ್ತಲ್ಲ। ಸೀಗೆ ಸಿರಿಗಂಧ ಮಲೆಯಲ್ಲ। ನನ್ನ ಕಾಡ್ನ ನಡುಮಲೆಗೆ। ಸ್ವಾಮಿ ಬಂದುಬಿಟ್ಟು। ಮಲೆಗೆ ಮಲೆಗೆ ಹೋಗೋನಲ್ಲ। ಮಲೆ ಸ್ವಾಲಿಗ ನೀಲಯ್ಯ।

ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಮಲೆ ಸ್ವಾಲಿಗ ನೀಲಯ್ಯ। ತಕ್ಕಂತ ಸಾಮಾನು ಮಡಿಗ್ಬುಟ್ಟು। ಸ್ವಾಮಿ ಎಂಟು ದಿಕ್ಕು। ಹದಿನಾರು ಮೂಲೆ ಪರಿಸೋಧನೆ ಮಾಡ್ಬುಟ್ಟು ಸ್ವಾಮಿ।

ಅಯ್ಯ ಪಟ್ಟೆ ಗುದ್ಲಿ। ತೆಗೆದವನೆ।
ಗರಿಕೆ ಮಾಳ। ತೆಗೆದವನೇ।
ಕಗ್ಗಲ ಕಾರಾಚಿ। ತೆಗೆದವನೆ।
ಕವ್ವ ತಾವೊತ್ತು। ಮಾಡವ್ನೇ।
ನುಗ್ಗೆ ಮರವ। ಕಡಿದವನೆ।
ಜಂಬವ ತಾನೊಂದ। ಮಾಡವನೆ।
ಕಕ್ಕೆ ಗಳವನ್ನ। ತಡದವನೆ।
ಅಂಕಣ ಕೊಂದ। ಬೀಸವ್ನೆ।
ಬಿದಿರ ಗೋಡೆ। ತೆಗೆದವನೆ।
ಅಂತದ ತಾವೊಂದ। ಮಾಡವ್ನೆ।
ಅಯ್ಯ ಉಗ್ನಿ ಸೊಪ್ಪು। ತಂದವನೆ।
ಒಪ್ಪಾದ ಗುಡ್ಲ ಕಟ್ಟವನೇ॥
ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಸೋಲಿಗ ನೀಲಯ್ಯನಿಗೆ। ತನ್ನ ಸತ್ಯವಂತೆಯಾದ ಸಂಕಮ್ಮನೂವೆ। ಸೊಪ್ಪಿನ ಗುಡ್ಲಲ್ಲಿ ವಾಸ ಮಾಡ್ತಿದ್ದಾಳಲ್ಲ। ಗುರುವೇ ಹೆಜ್ಜೇನು ತುಪ್ಪ। ಕಿರುಜೇನು ತುಪ್ಪ। ಬಿದಿರು ಅಕ್ಕಿ ನೇಗಿಲು ಗೆಡ್ಡೆ ಗೆಣಸು। ಮಾಕಾಳಿ ಬೇರು ಕಿತ್ತುಕೊಂಡು। ಸ್ವಾಮಿ ಆದ್ರೆ ಯೇಳ್ತೀನಿ ಕೇಳಿ। ಸಂಕೆಣ್ಣೆ ನಾನು ಹೆಜ್ಜೆಯ ಮಲೆಗೆ ಓಗಿ। ಹೆಜ್ಜೇನು ತುಪ್ಪ ಕಿರುಜೇನು

ತುಪ್ಪ! ತರಕ್ಕೆ ಒಯ್ದೀನಿ ಕಣೆಣ್ಣ! ನಿನ್ನ ಬಲಗೈ ಬಾಸೆಯ ಕೊಟ್ಟರೆ! ನಾನು ಹೆಜ್ಜೇನು ಮಲೆಗೆ ವೋಗುವೇ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಆದ್ರೆ ಹೇಳ್ತೀನಿ ಕೇಳಿ ಸ್ವಾಮಿ! ನಿಮ್ಮ ಕೈ ಹಿಡಿದು ಹನ್ನೆರಡು ವರ್ಸವಾಯ್ತು! ಋತು ಸಾಂತಿಯಾಗಿ ಹನ್ನೆರಡು ವರುಸವಾಯಿತು! ಇಪ್ಪತ್ನಾಲ್ಕು ವರುಸದಿಂದ! ಕಳ್ಳನ ಕಾನ್ನೆಲ್ಲ! ಸುಳ್ಳನ ಕಾಣಲಿಲ್ಲ! ಗುರುವೇ ನೀವು ಎಂದೂ ಇಲ್ಲದ! ನೀಲಯ್ಯ ಇಂದು ಬಾಸೆ ಕೇಳಬಹುದೇ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಆದ್ರೆ ಯೇಳ್ತೀನಿ ಕೇಳೇ! ಸತ್ಯವಂತೆಯಾದ ಸಂಕೆಣ್ಣೆ! ಇಂದೇ ಕಳ್ಳನ ಮಾಡ್ದೆ! ಅಂತ ಕೇಳ್ತಿಲ್ಲ ಸಂಕೆಣ್ಣೆ! ಮುಂದೆ ಬರುವಂತಾ ಉದ್ದೇಸಕ್ಕಾಗಿ! ನಿನ್ನ ಬಾಸೆ ಕೇಳ್ತೀನಿ ಹೆಣ್ಣೆ! ನಿನ್ನ ಬಲಗೈನ ಬಾಸೆ ಕೊಟ್ಟರೆ! ನಾನು ಹೆಜ್ಜೇನು ಮಲೆಗೆ ಹೋಗುವೇ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಆದ್ರೆ ಯೇಳ್ತೀನಿ ಕೇಳೇ ಸಂಕೆಣ್ಣೆ! ಶ್ರೀರಾಮನ ಹೆಂಡ್ತಿಯಾದ ಸೀತಾದೇವಿಯನ್ನು! ರಾವಣನು ಕದ್ದುಕೊಂಡು! ವನವಾಸಕ್ಕೋದ ಸಂಕೆಣ್ಣೆ! ಆದ್ರೆ ಸಿವಸಿವಾ ರಾಮಾ ರಾಮಾ ಅಂತೇಳಿ ಅವಳು ವನವಾಸವಿದ್ದಂತ ಕಾಲದಲ್ಲಿ ನಮ್ಮ ಅಂಜನೇಯನು ಹೋಗಿ! ಅವಳ ಕೈನ ಮುದ್ರೆ ಉಂಗುರವನ್ನು! ಸಂಕೆಣ್ಣೆ ಆಗಲೀಗ! ಆಕಾಸದಿಂದ ಹೋದಂತ ಕಾಲದಲ್ಲಿ! ಬಿಳಿಹಕ್ಕಿ ಕಂಡು ಬಂತಂತೆ! ಸಂಕೆಣ್ಣೆ ಆಗಲೀಗ ಭೂತಾಯಿ! ಈಚಿಗೆ ನೋಡಿದ್ದಂತೆ ಸಂಕೆಣ್ಣೆ! ಆಗ ಕೇಳೆಣ್ಣೆ! ಕಾಣಬಾರದಲ್ಲೂ ತಂದಯ್ತಂತೆ ಸಂಕೆಣ್ಣೆ! ಆದ್ರೆ ಹೆಣ್ಣಿನ ಬುದ್ಧಿ ಮೀನಿನ ಬುದ್ಧಿ ನೆಚ್ಚಲಾರೆ ಸಂಕೆಣ್ಣೆ

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಆದ್ರೆ ಯೇಳ್ತೀನಿ ಕೇಳಪ್ಪಾ! ನನ್ನ ಮುದ್ದಿನ ಮಲೆ ಸೋಲಿಗ ನೀಲಯ್ಯ! ಹುಟ್ಟು ಬಂಜೆ ಸ್ವಾಮಿ! ನನ್ನ ಕೈನ ಬಾಸೆ ಕೊಟ್ಟಿದ್ರೆ ಉಂಟಾದ್ರೆ! ಕಾಮ ಕರೆಯೋಲ್ಲ! ಭೂಮಿ ಬೆಳೆಯೋಲ್ಲ! ಸೂರ್ಯ ಚಂದ್ರ ಆಡ್ಡಾಡ್ತಕಿಲ್ಲ ಕಣ್ಮ್ಮಯ್ಯ! ನನ್ನ ಬಂಜೆ ಕೈನ ಬಾಸೆ ನಿನಗೆ ತರವಲ್ಲ ಕಣೋ! ನೀಲಯ್ಯಾ!!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಅಪ್ಪಪ್ಪಾ ನೋಡಿದ್ರಾ ಹೆಣ್ಣಿನ ಬೆಡಗಿನ ಮಾತನ್ನು! ಯಾವ ರೀತಿಯಾಗಿ ಮಾತನ್ನು ಆಡ್ತಾಳೆ! ಅಂತೇಳಿ ಬಾಳ ಕ್ವಾಪ ಬಂದುಬುಡ್ತು ಸ್ವಾಮಿ!

ಜಡಿಮು ಮುಂದಲೆ ಇಡ್ದವನೆ!
ಚಾಕು ಚೂರಿ ಇಡ್ದವನೇ!

ದುಮ್ಮ ದುಮ್ಮನಿದ್ದವನೇ।
ಕಟ್ಟಿದ ತಲವ ಕಟ್ಟೆಣ್ಣೆ।
ನಿಮ್ಮಪ್ಪನ ಮನೆಗೆ ಹೋಗೆಣ್ಣೆ।
ಆಹಾ ಕ್ವಾರಣ್ಣಾ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ನೀಲಯ್ಯ ಕೇಳಿದ ಮಾತಿಗೆ। ಹೆಡ್ತಿ ಪತಿಗೆ ಉತ್ತರ ಕೊಡಲಾಗಲಿಲ್ಲ ದಮ್ಮಯ್ಯ। ಆಗಲೀಗ ಸತ್ಯವಂತೆಯಾದ ಸಂಕೆಣ್ಣೆ। ದಮ್ಮಯ್ಯ।

ಉಟ್ಟಿದ ಸೀರೆ ಅಳಿದವಳೇ।
ತೊಟ್ಟಿದ ಕುಪ್ಪಸವ ಕಳೆದವಳೇ।
ಕತ್ತಿನ ಪದಕವ ಕಳೆದವಳೇ।
ಮೂಗಿನ ಸಿರಿಯ। ಕಳೆದವಳೇ।
ವಾಲು ಬ್ಯಾಗ್ಯ ಕಳೆದವಳೆ।
ತೋಳು ಬಾಪುರಿ ಕಳೆದವಳೆ।
ಅಯ್ಯಾ ಎಲ್ಲವನ್ನೂ ಕಳೆದವಳೆ।
ಹುಟ್ಟಿದ ನಿರ್ವಾಣ ನಿಂತವಳೆ।
ಆಹಾ ಕ್ವಾರಣ್ಣಗಳ ನೀಡಮ್ಮ ಕೋಡುಗಲ್ಲಿನ ಮೇಲೆ।

ಆಗಲೀಗ ಹೇಳ್ತೀನಿ ಕೇಳಪ್ಪ। ನೀ ಕೊಟ್ಟಂತ ನಗನಾಣ್ಯ ಒಡವೆ ವಸ್ತ ನಾ ಕೊಟ್ಟೀನಿ ದಮ್ಮಯ್ಯ। ಇನ್ನೇನು ಕೊಡಲಿ। ನನ್ನ ಮಲೆ ಸೋಲಿಗ ನೀಲಯ್ಯ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಮಲೆಯ ಸೋಲಿಗ ನೀಲಯ್ಯ। ಮುತ್ತಗ ಸೊಪ್ಪಿನ ಮಲೆ ಮಾಡಿಬಿಟ್ಟ। ಉಗನಿ ಸೊಪ್ಪನ್ನು ತಂದು ಉಡುಗೆ ಸುತ್ತಿಬಿಟ್ಟು। ದಮ್ಮಯ್ಯ। ಅಷ್ಟೇ ಚಿಕ್ಕ ಮನೆಗೆ ಕೂಡವನೇ। ಚಿಲಕ ಬೀಗ ಹಾಕವನೆ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಚಿಕ್ಕ ಮನೆಗೆ ಕೂಡಿಬಿಟ್ಟು। ಚಿಲಕ ಬೀಗ ಹಾಕ್ಕಿಟ್ಟು। ಎತ್ತ ಬಾರದ ಬಾಗಲಿಗೆ ಅಡ್ಡ ಮಡಗ್ಬುಟ್ಟು। ಗುರುವೇ ಅವನು ಮತ್ತೇನು ಗ್ಯಾನ ಮಾಡವನೇ। ಮಲೆ ಸ್ವಾಲಿಗ ನೀಲಯ್ಯ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಮಲೆ ಸ್ವಾಲಿಗ ನೀಲಯ್ಯ। ಆರು ಮಂಡಲ ಬರೆದವನೆ। ಮೂರು ಮಂಡಲ ಬರೆದವನೇ। ಕೊಳಕು ಮಂಡಲ ಬರೆದವನೆ। ಜಲಕು ಮಂಡಲ ಬರೆದವನೆ। ಜಜ್ಜು ಮಂಡಲ ಬರೆದವನೇ। ಸ್ವಾಮಿ ಅಯ್ಯಾ ಸೊಪ್ಪಿನ ಗುಡ್ಲ ಸುತ್ತ ಮಂಡಲ ಬರೆದುಬಿಟ್ಟು। ಮಲೆ ಸ್ವಾಲಿಗ ನೀಲಯ್ಯ। ಆಗಲೀಗ ನಾಕು ಮೂಲೇಲೂ। ನಾಕು

ಗೂಬೆ ನಿಲ್ಲಿಸವನೇ ಗುರುವೇ। ಯಾವ ಸೂರ್ಯ ಪರಮಾತ್ಮನೇ ಬರಲಿ। ದೇವ ಮಾನವನೇ ಬರಲಿ। ಈ ಸೊಪ್ಪಿನ ಗುಡ್ಡಲ್ಲಿ ನೀವು ಕಾವಲಿರಬೇಕು। ಅಂತೇಳಿ ಸಿವಸಿವಾ ಆವನು। ಎಲ್ಲಾ ತಾಕ್ತಿ ಮಾಡವನೇ ಮಲೆ ಸೋಲಿಗ ನೀಲಯ್ಯ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಆ ಬಾಕಲೊಳಗೆ। ಏಳು ಮಲೆ ಸರ್ಪ ತಂದು ನಿಲ್ಲಿಸ್ಬುಟ್ಟ। ಗುರುವೇ ಆದ್ರೆ ಏಳ್ತೀನಿ ಕೇಳಪ್ಪಾ। ನೀಲಯ್ಯ ಕಾ ಅನ್ನೋಕೆ ಕಾಗಿಲ್ಲ। ಗೂ ಅನ್ನೋಕೆ ಗೂಗಿಲ್ಲ। ನರಮಾನವನ ಸದ್ದು ಮೊದಲಿಲ್ಲ। ನೀನು ಹೆಜ್ಜೇನು ಮಲೆಗೆ ಒಯ್ತೀನಿ। ಅಂತ ಯೇಳ್ತೀಯಲ್ಲಾ ದಮ್ಮಯ್ಯ। ನೀನು ವೋಗೋದು ಬರೋದು ಎಲ್ಲ। ಎಷ್ಟು ತಿಂಗಳಪ್ಪಾ ಗುರುವೇ ಅಂತ ಕೇಳಿದ್ದು। ಗುರುವೇ ಆದ್ರೆ ಯೇಳ್ತೀನಿ ಕೇಳೆ ಸಂಕೆಣ್ಣೆ। ನಾ ಓಗೋದು ಮೂರು ತಿಂಗಳಾಯ್ತದೆ। ಬರೋದು ಮೂರು ತಿಂಗಳಾಯ್ತದೆ। ಇರೋದು ಮೂರು ತಿಂಗಳು ಆಯ್ತದೆ ಸಂಕೆಣ್ಣೆ। ಎಲ್ಲಾ ಸೇರಿ ಒಂಬತ್ತು ತಿಂಗಳಾಯ್ತದೆ ಕಣೆ ಸಂಕೆಣ್ಣೆ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆದ್ರೆ ಯೇಳ್ತೀನಿ ಕೇಳೇ ಸಂಕಣ್ಣೆ। ನಾನು ವೋಗದು ಬರೋದು। ಎಲ್ಲನೂ ಕೇಳ್ತೀಯಲ್ಲ ಸಂಕೆಣ್ಣೆ। ಯಾರ್ನಾರ ಕರ್‍ಕವೋಗ್ಬೇಕು ಅಂತ ಗ್ಯಾನ ಇದ್ದದ ಸಂಕೆಣ್ಣೆ ಅಂತ ಕೇಳ್ತಾನೆ ದಮ್ಮಯ್ಯ। ಅಯ್ಯಾ ಸ್ವಾಮಿ ಕಾ ಅನ್ನಕ್ಕೆ ಕಾಗಿಲ್ಲ। ಗೂ ಅನ್ನೋಕೆ ಗೂಗೆ ಇಲ್ಲ। ನರ ಮಾನವರ ಸದ್ದೆ ಮೊದಲಿಲ್ಲ। ದನಕರುಗಳ ಮಕ್ಕಳ ಸಬ್ದ ಮೊದಲಿಲ್ಲ ಗುರುವೇ। ಈ ಅಡವೀ ಅರಣ್ಯಕೆ। ಚದುರ ಮದ್ಯಕ್ಕೆ। ಸ್ವಾಮಿ ಯಾರು ಬಂದಾರು ನೀಲಯ್ಯ। ಪಾಪದ ಗುರಿಯಾ ಬೇಡಯ್ಯ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆದ್ರೆ ಏಳ್ತೀನಿ ಕೇಳೇ ಸಂಕೆಣ್ಣೆ। ಬಡಗಲ ರಾಜ್ಯದಿಂದ ಬಳೆಗಾರ ಒಬ್ಬ ಬರ್ತಾನೆ ಸಂಕೆಣ್ಣೆ। ಬಳೆಗಾರ ಬಂದಾಗ ನಿನ್ನ ಅಂದಕ್ಕೊಂದು ಬಳೆಯಿದೆ। ನಿನ್ನ ಚಂದಕ್ಕೊಂದು ಬಳೆ ಇದೆ। ನಿನ್ನ ರೂಪಕ್ಕೊಂದು ಬಳೆಯಿದೆ। ನಿನ್ನ ಲಾವಣ್ಯಕೆ ಒಂದು ಬಳೆ ಇದೆ ಸಂಕೆಣ್ಣೆ। ಕೊಡೋಣ ಅಂದ್ರೆ ದುಡ್ಡಿಲ್ಲ। ಮನೆ ಒಳಗೆ ದವಸ ಧಾನ್ಯವಿಲ್ಲ ಸಂಕೆಣ್ಣೆ। ಆಗಲೀಗ ಬಳೆ ಅಂತ ಸಾರಿದಾಗ। ಸೋಲಿಗ ಕೈ ತುಂಬ ಬಳೆ ತೊಡಿಸ್ತಾನೆ ಸಂಕೆಣ್ಣೆ। ಆಗ ಅವನ ಮುಕ ನೀನೋಡ್ತೀಯಾ। ನಿನ್ನ ಮುಖ ಅವನು ನೋಡ್ತಾನೆ ಸಂಕೆಣ್ಣೆ। ಮಲೆಯಾಳದ ಬೂದಿ ಮಾಯಕ್ಕಾರ ತಕ್ಕಂಡು ನಿನ್ನ ಮಗ್ಗಲಾಗ್ತನೆ। ಬೂದಿ ತಕ್ಕಂಡು। ಆಗಲೀಗ ನೀಲಯ್ಯನ ಮ್ಯಾಗಲ ಗ್ಯಾನ ತಪ್ಪೋಯ್ತದೆ ಸಂಕೆಣ್ಣೆ। ನೀನು ಬಳೆಗಾರನೊಂದಿಗೆ ವೋದೀಯೇ। ನನ್ನ ಬಾಯಿಗೆ ಮಣ್ಣು ಹಾಕೀಯೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಒಂದು ನರಮುರಿ ಜೋಡ ಮೆಟ್ಟವರೆ
ಚಿಕಳಾದ ಚಡ್ಡಿ ಇಕ್ಕವರೆ
ಹನುಮಂತ ರೇಕ ಧರಿಸವರೆ
ಮೂರು ನಾಮ ಹಣೆಯಲ್ಲಿ
ದಾರದ ಟೋಪಿ ತಲೆಯಲ್ಲಿ
ಬಾರಿ ಬಂದೂಕ ತಗದವನೆ
ಚಿಲಕಾದ ನಾಮ ತಗದವನೆ
ಬಲಗೈಲಾದ್ರೆ ಹಿಡಿದವನೆ।
ಆಯ್ಯಾ ಬೀಸು ಮಚ್ಚ ತಗದವನೆ
ಕೈಯೊಳಗಾದರೆ ಹಿಡಿದವನೆ
ಅಂಡೆ ಮೂರುಂಡೆ ತಗದವನೆ
ಗ್ವಾಟೆವೊಳಗೇ ಮಡಗವನೆ।
ಅಯ್ಯಾ ಸುತ್ತ ಭಾವ ಸಂಕಮ್ಮನ ಬಿಟ್ಟ।
ಹೆಜ್ಜೇನು ಮಲೆಗೆ ಹೋಯ್ತಾವನೆ ॥ ಕ್ವಾರಣ್ಯ ॥
ಕೋಗುಲೆ ಎದ್ದು ಕೊಂಬೆಯ ಮೇಲೆ
ಕೂಗುತವೆ ಮಾದೇವರಾ
ರಾಗವೆತ್ತಿ ಪಾಡುತವೆ
ಮಾದೇವರ ಪಾದವಾ

ಆಗಲೀಗ ನನ್ನ ಮಲೆ ಸ್ವಾಲಿಗ ನೀಲಯ್ಯ। ಅಂತ ಸತಿ ಉತ್ತರ ಕೊಡುವಂತ ಕಾಲದಲ್ಲಿ। ಗುರುವೇ ನೀಲಯ್ಯ ನೀನೊಬ್ಬಳೇ ಸಂಕೆಣ್ಣೆ ಅಂತೇಳಿ। ಗುರುವೇ ಹೆಜ್ಜೇನು ಗಿರಿಗೆ ಓಯ್ತವನೇ। ಮಲೆ ಸ್ವಾಲಿಗ ನೀಲಯ್ಯ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಮಲೆ ಸೋಲಿಗ ನೀಲಯ್ಯ। ಹೆಜ್ಜೇನು ಮಲೆಗೆ ವೋದಂತ ಕಾಲದಲ್ಲಿ। ಸತ್ಯವಂತೆಯಾದ ಸಂಕಮ್ಮ। ಸೊಪ್ಪಿನ ಗುಡಲಲ್ಲಿ ಕೂತ್ಕೊಂಡು। ಸ್ವಾಮಿ ಏನು ಯೋಚನೆ ಮಾಡ್ತಾಳೆ। ಏನು ದುಕ್ಕ ಮಾಡ್ತಾಳೆ ಅಂದರೆ। ಗುರುವೇ ಅವಳು ಬಾಳ ಗೋಳೀಳೋ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಅಯ್ಯೋ ಸಿವನೆ ನನ್ನ ಹೊಟ್ಟೆ ಒಳಗೆ। ಪುತ್ರ ಸಂತಾನ ಇಲ್ಲದೆ ವೋದದಕ್ಕೆ। ಗಂಡ ನೀಲಯ್ಯ ಕಾಡು ವನವಾಸ ತಂದು। ಕಾ ಅನ್ನೋಕೆ ಕಾಗೆ ಇಲ್ಲ। ಗೂ ಅನ್ನಕ್ಕೆ ಗೂಗೆ ಇಲ್ಲ। ನರಮಾನವರ ಸಬ್ದ ಇಲ್ಲ। ಗುರುವೆ ಇಂತ ಅಡವಿ ಅರಣ್ಯಕೆ। ಚದುರೆ ಮದ್ಯೆ ತಂದು ಸೇರಿಸಿಬುಟ್ನಲ್ಲ। ಗುರುವೇ ಅಂತೇಳಿ। ನಾ ಏನು ಪಾಪ ಮಾಡಿದ್ನೋ? ಬಾಯಲ್ಲಿ ದೀಪ ಉರುಬಿದ್ನೋ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಹೇಳ್ತೀನಿ ಕೇಳೋ। ನನ್ನ ಅಕ್ಕ ತಂಗೀರ ಬಾಯೆತ್ತಿ ಒಂದೂ ಕಾಣೆ। ಕಕ್ಕೆ ತುಂಬಿ ಒಂದೂ ಕಾಣೆ। ಗುರುವೇ ಅಂತೇಳಿ। ಅವಳು ಬಾಳ ಗೋಳ ಗೋಳೀಳೋ। ಬಾಳ ದುಕ್ಕ ಮಾಡೀಳೋ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ನನ್ನ ಹಾರುದ್ದ ಮಂಡೆಯ। ತುಂಬಿದ ಕೆರೆ ಒಳಗೆ ವೋಗಿ। ತೊಳ್ದದ್ದ ಕಾಣೆ। ನನ್ನ ತಲೆಯ। ಏರಿ ಮೇಲ್ನಿಂತ್ಕಂಡು ತಿಕ್ಕಿದ್ದ ಕಾಣೆ। ಆಗ ನನ್ನ ಕೂದ್ಲು ನೀರಿಗೆ ಬಿದ್ಹೋಯ್ತು ಕಾಣೆ। ಈಗ ನೀರು ಕುಡಿದಾಗ ನನ್ನ ಬಾಯಿಗೆ ಸಿಕ್ಕೋಯ್ತು ಕಾಣೆ। ಅದಕ್ಕಾಗಿ ನಾನು ಮಾಡುವಂತ ಕರ್ಮಕ್ಕೆ ಸ್ವಾಮಿ। ನನಗೆ ಸಿಸುವಿನ ಬೋಗ ಮೊದಲಿಲ್ಲ। ಸೊಪ್ಪಿನ ಗುಡುಲಲ್ಲಿ ಕೂತುಕೊಂಡು। ಆಗ ಯೋಚನೆ ಮಾಡಿ। ಬಾಳದುಕ್ಕ ಮಾಡುವಂತ ಕಾಲದಲ್ಲಿ। ತನ್ನ ಕಣ್ಣೀರ್ನೆಲ್ಲಾ ತೆಗೆದು। ಈಚೆಗೆ ಬೀಸಾಕ್ಬುಟ್ಟಲ್ಲೋ ಗುರುವೇ। ಅದು ಒಂದು ಹೊಳೆಯಾಗಿ ಇನ್ನೂ ನಿಂತದ್ಯೋ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಅತ್ತಂತ ಕಣ್ಣೀರನ್ನು ಕಂಡು ಬಿಟ್ಟು। ಗೋವುಗಳಿಗೆ ಅಯ್ಯಾ ನಾಗಾಲೋಟದಲ್ಲಿ ಬತ್ತಾವೇ। ನನ್ನ ಗೋವಿನ ಹಿಂಡು ಬತ್ತಾವ್ರೋ.

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಬಂಜೆ ಕಣ್ಣೀರ ಮೂಸಿ ನೋಡಿದೋ। ನಾವು ಬಂಜೆ ಆದಾವು। ನಮ್ಮ ಮಕ್ಕಳು ಬಂಜೆರಾದರು। ನಮ್ಮ ದನ ಕರು ಬಂಜೆರಾದರು। ನಮ್ಮ ಕರುಗಳು ಬಂಜೆಯಾಯ್ತವೆ ಅಂತೇಳಿ। ಅವು ಬಾಳ ದುಕ್ಕ ಮಾಡೀವ್ರೋ। ಬಾಳ ಗೋಳ ಮಾಡೀವ್ರೋ।

ಕೋಲು ಮಂಡೆ ಜಂಗಮ ದೇವರು ಕ್ವಾರಣ್ಯಕೆ
ದಯ ಮಾಡಿದರು।
ಕ್ವಾರಣ್ಯ ನೀಡಮ್ಮ ವೀರತ್ತ ಮುನಿಗಳಿಗೆ।
ಕೋಲು ಮಂಡೆ ಜಂಗಮದೇವರು ಮಾದೇವ
ಕ್ವಾರಣ್ಯಕ ದಯ ಮಾಡವರೇ।
ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಹರಹರಾ ಸಮ್ಮಪ್ಪಾಜಿ ಏಕಾಂಗವಸ್ತು। ಏಳುಮಲೆ ಕರತು। ಮಾಯಕ್ಕಾರ ಮಾದೇಸ್ವರ। ಅಡವಿ ಅರಣ್ಯ ಗೋರಾರಣ್ಯ। ಏಳು ಮಲೆ ಕೈಲಾಸ। ಸೀಗೆ ಸಿರಗುಂದ। ಹಾಡು ಬಾಗಿಲವತ್ತಿನಲ್ಲಿ। ಒರಗಿರುವಂತ ಕಾಲದಲ್ಲಿ। ಸರಗೇ ಸತ್ಯವೆಂತೇ ಸಂಕಮ್ಮ ಎಂಬುವಳ ಪತಿಯಾದಂತ ದೇವ ಸ್ವಾಲಿಗ ನೀಲೇಗೌಡ। ಸಂಕಮ್ಮನಿಗೆ ಕೊಲಬಾರದ ಕೊಲೆ। ಮಾಡಬಾರದ ಸಿಕ್ಷೆಯನ್ನು ಮಾಡಿಬಿಟ್ಟು ಹೆಜ್ಜೇನು, ಕಿರುಜೇನು ಬೇಟೆಗೆ ಹೋದಂತ ಕಾಲದಲ್ಲಿ। ಆದರೆ ಸರಣೆ ಸಂಕಮ್ಮನವರು। ಅಯ್ಯೋ ಪರಮಾತ್ಮ। ಕೆಟ್ವಾಗ

ನೆಂಟರಿಲ್ಲ! ತಿರುಪೆ ಕೊಂಡು ತಿನ್ನುವಾಗ ದೇವರಿಲ್ಲ ಅಂತ ಹೇಳಿ! ಈ ನನ್ನ ಕಷ್ಟವನ್ನು ಯಾವ ದೇವರಾದ್ರೂ ಆಗಲಿ! ನನ್ನ ಗಂಡನ ಮನೆಯ ದೇವರಾಗಲಿ! ನಮ್ಮಪ್ಪನ ಮನೆ ದೇವರಾಗಲಿ! ನನ್ನ ಕಷ್ಟವ ಕಾಯಕ್ಕಿಲ್ಲವ ಅಂತೇಳೀ ಅಯ್ಯಾ ಮಕ್ಕ ಮಾಡವಳೆ! ಶಿವನಿಗೆ ಸೋಕ ಮಾಡವಳೆ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಆಗಲೀಗ ಮಾಯ್ಕಾರ ನಿದ್ರೆ ಮಾಡುವಂತ ಕಾಲದಲ್ಲಿ ನನ್ನ ಗುರುವೇ! ಎಡದಿಂದ ಬಲಕ್ಕೆ ಬಂದ್ನಲ್ಲಾ ಗುರುವೇ! ನಾಗಬೆತ್ತದಲ್ಲಿ ನಾಲ್ಕನಿ ಬಿದ್ದಿದೆ ಗುರುವೇ! ಮುತ್ತಿನ ಜೋಳಗೇಲಿ ಮೂರನಿ ಬಿದ್ದಿದೆ! ಗುರುವೇ ಸ್ವಾಮಿ ಏನಪ್ಪಾ! ಬಡಗಲದಿಂದ ಹೊಸ ಸುದ್ದಿ ಬಂದಿದ್ಯಲ್ಲಾ ಅಂತ್ಹೇಳಿ ಗುರುವೇ ಅಯ್ಯಾ! ಹುಲಿಯ ತಾನು ಹಿಡಿದುಕೊಂಡು ಬಡಗಲ ರಾಜ್ಯಕೆ ಬರುತ್ತಾನೆ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ನಮ್ಮಪ್ಪಾಜಿ ಗುರುದೇವ! ಆ ಚಿಕ್ಕವನೆ ಬ್ಯಾಡರ ಗಂಪಣ್ಣನ ಮಗ! ಬ್ಯಾಡರ ಕನ್ನಯ್ಯನ ಕರೆದು! ಏನಪ್ಪಾ ನನ್ನ ಕಂದ ಕೊಂಗನಾಡು ಸೀಮೆ ಒಳಗೆ ತಿರುಗಾಡಿ! ನನ್ನ ಪುಟ್ಟ ಪಾದ ಸವೆದಿರುವುದು! ಯಾರೋ ನಡುಕಾಡಿನ ಒಳಗೆ ಸೋಕ ಮಾಡ್ತಾ ಇದ್ದಾಳೆ! ಆ ಹೆಣ್ಣು ಮಗಳು! ಅವಳ ಕಷ್ಟ ಪರಿಹಾರ ಮಾಡಿ ಬರಬೇಕು! ಅವಳ ಕಷ್ಟ ಪರಿಹಾರ ಮಾಡ್ದೆ ಹೋದ್ರೆ ಮೇಗದಲ್ಲಿ ಮಳೆ ಹುಯ್ಯೋದಿಲ್ಲ! ಭೂಮಿಲಿ ಬೆಳೆ ಬೆಳ್ಯೋದಿಲ್ಲ! ಅಗ್ನಿ ದೇವತೆ ಹತ್ತೋದಿಲ್ಲ! ನನ್ನ ಕಂದಾ ಯಾವ್ದಾರ! ಒಂದು ಬರಗಾನ ಎತ್ತುಕೊಂಡು ಬಾರಪ್ಪಾ! ಬಾರೋ ಗನಸರಣಾ ಅಡವಿ ಸಟ್ಟಮ್ ಸಮ್ರಾತ್ರಿ ಒಳ್ಗೆ! ಕಾಡೆಮ್ಮೆ ಕಟ್ಟಾದ ಹೊತ್ತು! ಹುಲಿಗಳೆದ್ದು ಮೆರೆಯುವ ಹೊತ್ತು ದೇವಾದಿ ದೇವತೆಗಳು! ಶಿವಪೂಜೆ ಮಾಡೋ ಹೊತ್ತು! ನಾರಾಯಣ ಸ್ವಾಮಿ ನಾಮದ ಸೇವೆ ಹೊತ್ತು! ನಾನು ಯಾವುದನ್ನು ನೋಡ್ಲಪ್ಪಾ ಮಾದೇವ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!

ಅಂಜಬ್ಯಾಡ ಬೆಚ್ಚಬ್ಯಾಡ! ಬೇದರಿ ಬೆಟ್ಟ ಸೇರಬೇಡ! ನನ್ನ ಕಂದ! ಬಾಡ ಬಾಗಲ ಒತ್ತಿ! ಬಿದರ ಸೀಳೆ ಸೀಗೆ ಗುತ್ತಿ ಒಳಗೆ ಹೋಗಬ್ಯಾಡ! ನನ್ನ ಕಂದಯ್ಯ! ಏಳು ಮಲೆ ಊಬತ್ತಿ ಉಂಡೆ! ನಿನ್ನ ಕೈಗೆ ಕೊಡ್ತಾ ಇದ್ದೀವಿ! ಒಂದ ಬರ್ಗನ ಮ್ಯಾಲೆ ಉಫ್ ಅಂತ ಉರುಬು! ಉರುಬಿ ಬಿಟ್ರೆ! ಕುದುರೆ ಮರಿ ಹಾಗೆ ಬಂದು ನಿಂತು ಕೇಳ್ತಾದೆ ನನ್ನ ಕಂದ! ಅದರ ನೆತ್ತಿಯ ಮ್ಯಾಗಲ ಜುಟ್ಟು ಹಿಡಿದು! ಪಕ್ಕ ಹಿಡಿದು ಎಳೆಯಯ್ಯ!

ಕೋಲು ಮಂಡೆ ಜಂಗಮರು ಕ್ವಾರಣ್ಯಕೆ ದಯ ಮಾಡವರೆ!

ಬ್ಯಾಡರ ಕನ್ನಪ್ಪ ಬಲದ ಕೈ ಒಡ್ಡಿ! ಎಪ್ಪತ್ತೇಳು ಮಲೆ ಊಬತ್ತಿ ಉಂಡೆ ಈಸಿಕೊಂಡು! ಹೋಗಿ ನಿಂತುಕೊಂಡು ಬ್ಯಾಡರ ಕನ್ನಪ್ಪ ಹುಟ್ಟರೆ ಬಂಡೆ ಮೇಲೆ ನಿಂತಕೊಂಡು! ಬ್ಯಾಡರ ಕನ್ನಪ್ಪ ಒಂದೊಂದಾಗಿ! ಬರಗನ ಕೂಗ್ತಾ ಇದ್ದರೆ, ಹೇ ಬಾ!

ಕ್ವಾನಾಚೆ ಕೊಲಗಯ್ಯ ಬಾ।
ಕಾರೆ ಕುತ್ರೆ ಸಂಕೋಲೆ ಬಾ।
ಕೊತ್ತಿಯ ಮೆಳೆಯ ಬೆಕ್ಕೆ ಬಾ।
ಯಕ್ಕದ ಮೆಳೆಯ ಮಲ್ಲೊ ಬಾ।
ನೊಕನಳ್ಳಿ ಕುಳ್ಳ ಬರಗ ಬಾ।
ಇಕಡಳ್ಳಿ ಚುಂಚು ಬರಗ ಬಾ।
ಗುಳ್ಳದ ಗುಂಟು ಬರಗ ಬಾ।
ಉಳ್ಳುದೊರೆ ಕುಳ್ಳ ಬರಗ ಬಾ।
ಕೌದಳ್ಳಿ ಕರುಬರಗ ಬಾ।
ಸಂತೆಕಾನಿ ತಲೆದೂಗ ಬಾ।
ಒಡಕೆ ಹಳ್ಳದ ಕೆಂಬರಗ ಬಾ।
ತಾಳಬಾಯ ಮ್ಯಾಳ ಮುರುಕ ಬಾ।
ಕುಂತೂರು ಮಠದ ಗುರುಗಳ್ ಕೊಟ್ಟ।
ಹನ್ನೆರಡೆಜ್ಜೆ ಬರಗ ಬಾ।
ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।

ಕುಂತೂರು ಮಠದ ಪ್ರಭುಸ್ವಾಮಿ ಕೊಟ್ಟಿರೋವಂತ ಹನ್ನೆರಡು ಹೆಜ್ಜೆ ಕರುಬರಗ ಬಾಳ ರಭಸದಲ್ಲಿ ಬರ್ತಾ ಇದೆ। ಉಫ್ ಅಂತ ಊದಿದ್ದಾರೆ। ಕುದುರೆ ಮರಿಯಾಗಿ ದಂಡಕ್ಕ ಬಂತು। ಏಳು ಗಿಣ್ಣಿನ ಬೆತ್ತ ತೆಗೆದುಕೊಂಡು ಮೂಡಲ ಮಲೆ ಕೈಲಾಸಕ್ಕೆ ಒಡಕೊಂಡು ಬತ್ತಾ ಇದ್ದಾರೆ ಏನಪ್ಪಾ ಗುರುವೇ ಗುರು ಪೀಠವೇ। ನನ್ನ ತಂಡ ಏಕಾಂಗಿ ವಸ್ತು। ಏಳು ಮಲೆ ಹೆತ್ತಯ್ಯಾ। ನೀವು ಒಪ್ಪೀದ ಬರಗ ತಂದಿವ್ನಿ। ಗುರುವೆ ಒಪ್ಪಿಸಿಕೊಳ್ಳಿ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲ ಮುನಿಗೆ

ಹರಹರಾ ನಮ್ಮಪ್ಪಾಜಿ। ಏಕಾಂಗಿ ವಸ್ತು। ಏಳು ಮಲೆ ಹೆತ್ತಯ್ಯ ಬ್ಯಾಡರ ಕನ್ನಪ್ಪ ಕೂಗಿದ ಮಾತು ಕೇಳಿಕೊಂಡು। ಪಡುವಲ ಬಾಗಿಲ ಗುಡಿ ದೊರೆ। ಸಿರ ಬಾಗಿಲು ನೋಡುತ್ತಾ ಇದ್ದರೆ। ಸಬಾಸ್ ನನ್ನ ಕಂದ। ನಾನೇ ಗನಸರಣ ಅಂತೇಳ್ಕೊತಿದ್ದೆ। ನನಗಿಂತ ಹೆಚ್ಚಿನ ಗನಸರಣ ಬ್ಯಾಡರ ಕನ್ನಪ್ಪ। ಒಂದು ಬರಗನ ಒಡಕೊಂಡು ಬಾ ಅಂದ್ರೆ। ಎಪ್ಪತ್ತೇಳು ಬರಗನ ಎಣಿಸಿ ಒಡಕಂಡು ಬಂದಿದ್ದೀಯಲ್ಲಾ ಕಂದ। ಒಂದೊಂದಾಗಿ ಹಲ್ಲಿಡಿದು ನೋಡು ಬ್ಯಾಡರ ಕನ್ನಪ್ಪ। ಮೊಳಲ್ಲಾಗಿರೋ ಬರಗನ್ನ ಬರೀ ಕಲ್ಲಿಗೆ ಕಟ್ಟುಬಿಟ್ಟು। ಮಿಗಿಲಾದ ಬರಗಗಳನ್ನೆಲ್ಲಾ। ಅವರ ಕಾಡ್ಗಟ್ಟುಬುಡು ಅಂತೇಳ್ಬುಟ್ಟು। ಬ್ಯಾಡರ ಕಣ್ಣಿನಿಗೆ ಬುದ್ಧಿ ಹೇಳವರಲ್ಲೋ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।

ನಮ್ಮಪ್ಪಾಜಿ ಆಡಿದ ಮಾತು ಕೇಳಿಕೊಂಡು। ಬ್ಯಾಡರ ಗಂಪಣ್ಣನ ಮಗ। ಬ್ಯಾಡರ ಕನ್ನಯ್ಯ ಒಂದೊಂದಾಗಿ। ಹಲ್ಲು ಹಿಡಿದು ನೋಡ್ತಾ ಇದ್ದಾನೆ। ಕುಂತೂರು ಮಟದ

ಪ್ರಭುಸ್ವಾಮಿ। ಕೊಟ್ಟಿರುವಂತ। ಹನ್ನೆರಡು ಹೆಜ್ಜೆ ಕರುಬರಗ ಮೊದಲಾಗಿ ಸಿಕ್ಕಿಬಿದ್ದು। ಕವಳಿ ಅಂಬಿನ ಕಡಿವಾಣ। ಉಗಿನಿ ಅಂಬಿನ ಅಂಬಾಕಿ। ಬರೀ ಕಲ್ಲಲ್ಲಿ ಕಟ್ಟಿದ್ದಾನೆ। ಮಿಗಿಲಾದ ಬರಗಗಳನ್ನೆಲ್ಲಾ ಕಾಡಿಗಟ್ಟಿ ಬಿಟ್ಟು। ನಮ್ಮಪ್ಪಾಜಿ ಮಾದೇಶ್ವರ। ಒಪ್ಪಿದ ಬರಗನ್ನ ಕಟ್ಟದ್ದೀನಿ ಅಂತೇಳುಬಿಟ್ಟು। ಏಳು ಮಲೆ ಕಂದ। ಕಾಡೆಂಬತ್ತು ನಡುಕಾಡಿಗೆ ಹೋಗಬೇಕು ಅನ್ನುಟ್ಟು। ತುಂಬಿದ ಸೋಮವಾರ ನಾನು ಸ್ನಾನ ಮಾಡಬೇಕು। ಲಿಂಗದ ಪೂಜೆ ಮಾಡ್ಕೊಳ್ತಾ ಇದ್ದೀನಿ ಅಂತೇಳಿ। ಲಿಂಗವಂತರು ಮಾದೇಸ್ವರ ಬ್ಯಾಡರ ಕನ್ನಯ್ಯನಿಗೆ ಮಾತು ಹೇಳ್ಬಿಟ್ಟು। ಕರುಬರಗನ ಸ್ಯಂಗಾರ ಮಾಡಿ ಅಂತ ಹೇಳವ್ರೆ। ಕೊಂಗಳ್ಳಿ ಮಲ್ಲಪ್ಪ ಬ್ಯಾಡರ ಕನ್ನಯ್ಯನ ಕೇಳಿಕೊಂಡು। ಮತ್ತೆ ಕಟ್ಟಾಕಿರುವಂತ। ಹನ್ನೆರಡು ಹೆಜ್ಜೆ ಕರು ಬರಗನ ಸ್ಯಂಗಾರ ಮಾಡಿ। ಅಯ್ಯಾ ಚಿನ್ನದ ಕಡಿವಾಣದಲ್ಲಿ ಹಾಕವರೆ। ಮುತ್ತಿನ ಕಡಿವಾಣ ಹಾಕವ್ರೆ। ಬೆಳ್ಳಿಗೌಸನು ಹಾಕವರೆ। ಹಿಂದಲ ಪಾದಕ್ಕೆ ಇನ್ನೂರು ಗಗ್ಗರ। ಮುಂದಲ ಪಾದಕ್ಕೆ ಮುನ್ನೂರು ಗಗ್ಗರ। ಬರಗನ ಸ್ಯಂಗಾರ ಮಾಡಿ। ಮೂಡಲಮಲೆಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಹರಹರಾ ನಮ್ಮಪ್ಪಾಜಿ। ಬರಗನ ಸ್ಯಂಗಾರ ಮಾಡಿದ್ದೀನಿ। ನೀವು ಶಿವ ಪೂಜೆ ತೀರಿಸಿಕೊಳ್ಳಿ। ಅಂತ ಹೇಳ್ತಾ ಇದ್ರಿ ನನ್ನಪ್ಪಾ ಮೂಡಲಮಲೆ ಮಾಯಕಾರ। ಕಂಚಿನ ಬಟ್ಟಲ ಕೈಯಲ್ಲಿ ಹಿಡಿದುಕೊಂಡು। ಮುತ್ತಿನ ಜೋಳಿಗೆ ಮುಂಗೈಲಿ ಆಧಾರ ಮಾಡಿಕೊಂಡು। ನಾಗ ಬೆತ್ತ ಹಿಡಿದು ಕಂಕಳಿಗೆ ಧರಿಸಿಕೊಂಡು। ನಮ್ಮಪ್ಪಾಜಿ ಹಿಂದಿನ ಪಾದಕ್ಕೆ ಇನ್ನೂರು ಜಂಗು। ಮುಂದಿನ ಪಾದಕ್ಕೆ ಮುನ್ನೂರು ಜಂಗು। ಎಳಗಾವಿ ಎಳೆದೊದ್ದು। ಸುಳಿಗಾವಿ ಮುಸುಕಿಟ್ಟುಕೊಂಡು। ಕೊರಳು ತುಂಬಾ ರುದ್ರಾಕ್ಷಿ ಮೊಕವ ತುಂಬಾ ಭಸ್ಮ ಧರಿಸಿಕೊಂಡು। ಪುಟ್ಟ ಪಾದ ಎತ್ತಿ ನೆತ್ತಿಗೆ ಮೆಲ್ಲಗೆ ಮಡಗಿಕೊಂಡು। ಏಳು ನನ್ನ ಕಂದ। ಹಿಂದ್ಲಟ್ಟೆ ಒಳಗೆ ಒಯ್ತಾ ಇದೆ। ಹೋಗೋದು ಬರೋಗಂಟ ನೋಡು ನನ ಕಂದ ಬ್ಯಾಡರ ಕನ್ನಯ್ಯ। ಆಲಂಬಾಡಿ ದೇವಸ್ಥಾನಕ್ಕೆ। ಪಾರಿವಾಳದ ಹಿಂಡು ಜ್ವಾಕೆ। ಸತ್ಯವಂತ ಸಂಕಮ್ಮನ ಮನೆಗೆ ಹೋಗಿ ಕಷ್ಟ ಪಾರು ಮಾಡಿ ಬರುತ್ತಾ ಇದ್ದೇನೆ। ಅಂತೇಳಿ ಬಾರಿಯ ಬರಗ ಏರವರೆ। ನನ್ನ ಮೂಡಲ ಮಲೆಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಸೊಪ್ಪನ ಗುಳ್ಳಿನತ್ತುಕೆ ಬಂದು ಮಾದೇವ। ಗುಳ್ಳಿನ ಸುತ್ತಾಮುತ್ತಾ ಕಟ್ಟಾಕಿರುವಂತ। ನೂರೊಂದು ಜೀವರಾಸಿಗಳನ್ನೆಲ್ಲಾ ನೋಡಿ। ಆಹಾ ನಾವೇ ಹೆಚ್ಚು ಅಂತಿದ್ದಲ್ಲ। ನರುಲೋಕದ ನರಮುಂಡೆಮಗ ಯಾವನೋ। ಈ ಮೂಕ ಪ್ರಾಣಿಗಳನ್ನೆಲ್ಲಾ ಮಾಡಬಾರದ ಜಾಟ್‌ವಿದ್ಯಾ ಮಾಡವ್ನಲ್ಲ। ಕೊಪಬಾರದ ಕೊಲೆ ಕೊಟ್ಟವನಲ್ಲಾ। ಹಾಗನುತೇಳಿ ಮಲೆ ಮಾಯಕ್ಕಾರ ಮಾದಪ್ಪ। ಮುತ್ತಿನ ಜೋಳಿಗಿಗೆ ಕೈ ಹಾಕಿ। ಮಾಯದ ಬೂದಿ ಹಸ್ತದಲ್ಲಿ ಮಡಗಿಕೊಂಡು। ಗುರುವೇ ಜೀವ ರಾಸಿ ಮೇಲುರುಬವನಲ್ಲೋ। ಮೂಡಲ ಮಲೆಯ ಜಗದೊಡೆಯಾ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೆ।
ಮುದ್ದು ಮಾಯ ಬಲ್ಲವನ್ಯಾರೆ।
ಮೂಡಲು ಮಲೆಯ ಜಗದೊಡೆಯಾ।
ಮನವನ್ನ ಹೊಕ್ಕಿ ದುಡುಮನ ನೋಡು
ದುಂಡುಳ್ಳ ಮಾದೇವ।

ಗುರುವೆ ಮಲೆಯ ಮಾಯಕ್ಕಾರ ಮಾದೇವ। ಮಾಯದ ಬೂದಿಯನ್ನು ಉರುಬಿದ ತಕ್ಷಣ। ಸೊಪ್ಪಿನ ಗುಳ್ಳಸುತ್ತ ಇದ್ದಂತ ಜೀವರಾಸಿಗಳೆಲ್ಲಾ। ಮಾಯವಾಗೊಂಟೋಗ್ಬುಟ್ವಂತೆ। ಹೋಗುವಂತ ಕಾಲದಲ್ಲಿ ಗುರುವೆ। ನಮ್ಮ ಸೆರೆ ತಪ್ಪುಸ್ಕಾಣಪ್ಪ। ಮುದ್ದುಮಲೆ ಮಾಯಕ್ಕಾರ ಮಾದೇವ। ಹಾಗೆನುತೆಂದು ಪಕ್ಷಿ ಪ್ರಾಣಿಗಳೆಲ್ಲಾ। ಮಾದೇವನ ಗ್ನಾನ ಮಾಡಿಕೊಂಡು। ತಾವು ತಮ್ಮ ತಮ್ಮ ಗೂಡು ಸ್ಥಳುಗಳ್ಗೆ ಹೋದ್ವಂತೆ। ಎಪ್ಪತ್ತೇಳು ಮಂಡಲಗಳೆಲ್ಲಾ ತಿಪ್ಪೆ ಬೂದಿಯಂತೆ ತೆಪ್ಗಾದ್ವಂತೆ। ಸೊಪ್ಪಿನ ಗುಳ್ಳೀಗೆ ಬತ್ತಾವನಲ್ಲೋ ಮೂಡಲ ಮಲೆಯ ಮಾದೇವ್ರೋ।

ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೇ।

ಸಂಕಮ್ಮನಿರುವ ಸೊಪ್ಪಿನ ಗುಳ್ಳ ಮೂಲ್ಕಳ್ಳ ಬಂದು। ಮುಂಬಾಗಲ್ಲಿ ನಿಂತ್ಕೊಂಡ್ರಂತೆ ಮಾದೇವಾ। ನೀಲೇಗೌಡ ನಿಲ್ಲಿದ್ದಂತ ರಾಕ್ಷಸನ ಗೊಂಬೆ। ಕತ್ತಿ ಎತ್ಕಂಡು ಇದ್ದಕೆ ಬಂದ್ಬುಡ್ತಂತೆ। ಸ್ವಾಮಿ ಪುಟ್ಟ ಪಾದ ಎತ್ತವುರೆ। ಗೊಂಬೆ ನೆತ್ತಿ ಮ್ಯಾಲೆ ಮಡುಗವರೆ ಹನ್ನೆರಡಾಳುದ್ದ ಜಲುಕ್ಕೆ ತಳ್ಬುಟ್ರಂತೆ ಮಾದಪ್ಪ। ಆಗ ನಮ್ಮಪ್ಪಾಜಿ ಸತ್ಯ ಸರಣೆ ಸಂಕಮ್ಮನ। ಸತ್ಯ ದುಡಾ, ಪರೀಕ್ಷೆ ಮಾಡಬೇಕು ಅಂತ್ಹೇಳಿ। ಸೊಪ್ಪಿನ ಗುಳ್ಳಿನ ಮುಂದೆ ನಿಂತ್ಕಂಡು। ಮಾಯದ ಜಂಗಮರ ಯಾಸ ತಾಳ್ಕಂಡು। ದೊಡ್ಡಿ ಬಾಕಲಲ್ಲಿ ನಿಂತ್ಕಂಡು ಮಾದೇವ ಮಾಯದ ಬಿಕ್ಷಾ ಸಾರವರೇ।

ಕ್ವಾರಣ್ಣ ನೀಡಮ್ಮಾ ಕೋಡುಗಲ್ಲಯ್ಯನಿಗೆ।"

ಹರಹರಾ ನಮ್ಮಪ್ಪಾಜಿ। ಕಾಡೆಂಬತ್ತು ನಡು ಕಾಡಿನೊಳಗೆ ಬರುವಾಗ। ಹೆಣ್ಣು ಮಗಳ ಸೊಪ್ಪಿನ ಗುಳ್ಳಿನ ಮುಂಬಾಗದಲ್ಲಿ। ಮೂರ್ತ ಮಾಡಿದ್ದಾನೆ ನಮ್ಮ ತಂದೆ। ಹರಹರಾ ಹರನ ಬಿಕ್ಷ। ಗುರು ದೇವರ ಕ್ವಾರಣ್ಣ ಬಿಕ್ಷ। ಯತಿಗಳ ಮುನಿಗಳ ಬಿಕ್ಷ। ಬಂದಿರುವಾತನ ಬಿಕ್ಷ। ನಾಲ್ಕು ಪಾದದ ಜೋಳಗೆ ಬಿಕ್ಷೆ। ನನ್ನ ದೀಕ್ಷೆ ಮಾಡಿದಂತ ಪ್ರಭುಸ್ವಾಮಿಗಳ ಬಿಕ್ಷ। ತಾಯಿ ಉತ್ತರಾಜಮ್ಮನ ಬಿಕ್ಷ ಅಂತೇಳಿ ಪಂಚೇಳು ಅಕ್ಷರವ ಸಾರವರೆ। ನನ್ನ ಮೂಡಲ ಮಲೆಯ ಮಾದೇವ।

ನೀಲೇಗೌಡ ತನ್ನ ಮಡದಿ ಸತ್ಯವಂತೆ ಸರಣೆ ಸಂಕಮ್ಮನಿಗೆ। ಕೊಲಬಾರದ ಕೊಲೆ। ಮಾಡಬಾರದ ಸಿಕ್ಷೆ ಮಾಡಿದ್ದಾನೆ।

ಕರ್ಣಕೆ ಸೂಜಿ ಚುಚ್ಚವನೆ,
ಬಾಯಿಗೆ ಬೀಗ ಹಾಕವನೆ
ಕೈಯಿಗೆ ಸಂಕೋಲೆ ಕಟ್ಟವನೆ।
ಎತ್ತ ಬಾರದ ಗುಂಡು ತಂದು।
ಬೆನ್ನಿನ ಮೇಲೆ ತಂದವನೆ।
ಎಡಗಡೆ ಚೇಳನ ಕಾವಲು।
ಬಲಗಡೆ ಸರ್ಪ ಕಾವಲು।
ಕೊಲಬಾರದ ಸಿಕ್ಷೆ ಕೊಟ್ಟು।
ಹೆಜ್ಜೇನು ಮಲೆಗೆ ಹೋಗವನೆ।
ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ।

ಹರಹರಾ ಸಿವ ಸಿವಾ। ಮಂಡೆ ಮ್ಯಾಲೆ ಎಪ್ಪತ್ತೇಳು ಊಬುತ್ತಿ ಉಂಡೆ ನುರುಕಿ। ನುಚ್ಚು ನೂರು ಮಾಡಿಕೊಂಡು। ಉಫ್ ಅಂತ ಮಾಡಿಬಿಟ್ಟು। ನನ್ನ ಮಹಾ ಗುರು ಮಾದೇವನ।

ಆರು ಮಂಡಲ ಆರೋಯ್ತು।
ತೂರು ಮಂಡಲ ಎದ್ದೋಯ್ತು
ಕೊಳಕು ಮಂಡಲ ಕೊಳತೋಯ್ತು
ಕಾಳಿಂಗ ನಾಗರ ಕಡದೋಯ್ತು
ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ

ಹರಹರಾ ಎಡಗಡೆ ಬಲಗಡೆ ಇರುವಂತ। ರಾಕಾಸಿ ಎಂಬ ಗೊಂಬೆ। ನಾಗಬೆತ್ತದ ಮ್ಯಾಲೆ, ಒಂದು ಏಟು ಹೊಡೆದಿದ್ದಾನೆ. ಕಿರೋ ಅಂತ ಕಿರುಚ್ಕೊಂಡು। ಮೊಕ್ಕಡೆನಾಗಿ ಬಿದ್ದೋಗ್ಬುಡ್ತು। ಎಡದ ಪಾದ ಎತ್ತಿ ನೆತ್ತಿ ಮ್ಯಾಲೆ ಮಡಿಕ್ಕೊಂಡು। ರಾಕಾಸಿ ಅನ್ನೋ ಗೊಂಬೆನ। ಭೂಮಿಗೆ ತುಳಿದ್ಬಿಟ್ಟಿದ್ದಾರೆ. ನನ್ನ ಗುರು। ಹೊಸ್ತಿಲ ಒಳ ಭಾಗದಲ್ಲಿ। ಸಿರ ಭಾಗಿ ನೋಡ್ತಾ ಇದ್ದಾರೆ। ಸಿವ ಸರಣ ಮಹದೇಶ್ವರ। ಹೆಣ್ಣು ಮಗಳಿಗೆ ಕೊಲಬಾರದ ಕೊಲೆ। ಮಾಡಬಾರದ ಸಿಕ್ಷೆ ಮಾಡ್ಬಿಟ್ಟು ಹೋಗಿದ್ದಾನೆ। ಕರುಳು ಚುರುಕ್ ಅನ್ನುಟ್ತು। ಹೆಣ್ಣು ಮಗಳಿಗೆ ಎಂತ ಕಸ್ಟ ಕೊಟ್ಟಿದ್ದಾನೆ ಮುಂಡೆ ಮಗನು ಅಂತೇಳ್ಬುಟ್ಟು। ಸೊಪ್ಪಿನ ಗುಳ್ಳಿಗೆ ಮಾಯದ ಬೂದಿ ಪಿಡಿದವರಲ್ಲಾ ಮಾದೇವಾ।

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ

ಹರ ಹರಾ ಸಿವ ಸಿವಾ। ಸೊಪ್ಪಿನ ಗುಳ್ಳಿಗೆ ಮಾಯದ ಬೂದಿ ಪಿಡಿದಾಗ। ನಮ್ಮಪ್ಪಾಜಿ ಮಾದೇಸ್ವರ। ಕಣ್ಣಿನ ಸೂಜಿ ಕಳೆದೋಯ್ತು। ಕರ್ಣದ ದಬ್ಬಳ ಬಿದ್ದೋಗ್ಬುಡ್ತು। ಹಿಂಗಟ್ಟು ಮುಂಗಟ್ಟು ಬಿಚ್ಕೋಯ್ತು। ಬೆನ್ನಿನ ಮ್ಯಾಲೆ ಮಡಗಿರುವಂತ। ಬಾರಿಗುಂಡು ಬೆದರಿ ಬೆದರಿ ಬೆಟ್ಟ ಸೇರ್ಬುಡ್ತು। ಎಡಗಡೆ ಬಲಗಡೆ ಸರ್ಪದ ಸೆರೆ ಬಿಚ್ಕೋಯ್ತು ಬ್ಯಾಸಿಗೆ ಬಿಸಿಲಿನಲ್ಲಿ ಒಣಗಿದ್ದ ತರಗೆಲ್ಲಾ ಗುಡಿಸಿ ಗುಡ್ಡೆ ಹಾಕಿಕೊಂಡು। ಹುಟ್ಟಿನ

ನಿರ್ವಾಣದಲ್ಲಿ ಕೂತಿರುವ ಸಿವಸರಣೆ ಸತ್ಯವಂತೆ ಸಂಕಮ್ಮ ಗೋಳಗೋಳನೆ ಅಳುತವಳೇ। ಬಾಳ ಸೋಕ ಮಾಡವಳೇ। ಕೇಳು ನನ ಕಂದ ದುಕ್ಕ ಸೋಕ ಮಾಡಬೇಡ। ಹೆಣ್ಣು ಮಗಳೇ ಮೊಟ್ಟ ಮೊದಲು ಸೊಪ್ಪಿನ ಗುಳ್ಳಿಗೆ ಬಿಕ್ಷಕೆ ಬಂದಿದ್ದೇನೆ ನನ್ನ ಕಂದ। ಯಾವ್ದಾರ ಬಿಕ್ಷೆ ನೀಡಮ್ಮ। ನನ್ನ ಮೂಡಲ ಮಲೆಗೆ ಕಳುಹವ್ವಾ।

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ

ಯಾರಪ್ಪಾ ಸಿವ ಜಂಗಮರೇ। ಈ ಕಾಡು ಒಂಟಿ ದೊಡ್ಡಿ ಒಳಗೆ। ನನ್ನ ಯಜಮಾನ ದೇವ ಸ್ವಾಲಿಗ ನೀಲೇಗೌಡ। ಹೆಜ್ಜೇನು ಗಿರಿಮಲೆಗೆ ಕಿರುಜೇನು ಮಲೆಗೆ। ಹುಟ್ಟಿದ ಲಾವಣ್ಯವನ್ನೆಲ್ಲಾ ಕಳುಕೊಂಡು। ತನ್ನ ಗ್ವಾಟಿ ಒಳಗೆ ಇರಿಸಿಕೊಂಡು। ಎಕ್ಕದ ಎಲೆ ಇಟ್ಟು ಬುಟ್ಟು। ತೇಗಿನ ಎಲೆ ಬೆನ್ನಿಗೆ ಮುಸುಕಿಟ್ಟು ಬುಟ್ಟು। ಉಗ್ಗಿ ಸೊಪ್ಪಿನ ಉಡ್ಗೆ ಉಡಸ್ಬುಟ್ಟು। ಹೋಗವನೇ ನನ್ನ ಮನೆ ಒಳಗೆ। ನನ್ನ ಗುರುವೆ ಗುರು ತಂದೆ। ಆಕಕ್ಕೆ ನವದಾನ್ಯವಿಲ್ಲ। ಹೊಕ ನೋಡ್ತಿನಿ ಅಂದ್ರೆ ತಾಮ್ರದ ಕಾಸು ಮೊದಲಿಲ್ಲ. ಎತ್ತಲ ನಾಡೀನ ಜಂಗಮರೋ ಹೇಳಿ ಕೊಡಿ ಮಾದೇವ।

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲು ಮುನಿಗೆ

ಕೇಳು ನನ್ನ ಕಂದಾ। ಪಾತಾಳಲೋಕವಲ್ಲಿ ಪಾದಕ ಪೂಜ। ಮೇಗ ಲೋಕದಲ್ಲಿ ಸಿರಸ್ಸಿಗೆ ಪೂಜ। ಮರ್ತ್ಯ ಲೋಕದಲ್ಲಿ ನರಮಾನವರ ಪೂಜ। ನನ್ನ ಕಂದ ಹೆಣ್ಣು ಮಗಳೇ। ಮೂಡಲ ಮಲೆ ಕಡೇ ಕೈಲಾಸದ ಕಂಪಣ ರಾಜ್ಯದಲ್ಲಿ। ಮುದ್ದು ಮಾದೇಸ್ವರ ಅಂತೇಳಿ ನಾಮಕರಣ ಮಾಡಿದ್ದಾರೆ। ಮೂಡಲ ಮಲೆ ಕೈಲಾಸದಿಂದ ಬಿಕ್ಷಕ್ಕೆ ಬಂದಿದ್ದೀನಿ। ಹೊತ್ತ ಮೊದಲು ಮೂಡಲ ಮಲೆಗೆ ಹೋಗಬೇಕು। ನನ್ನ ಕಂದ ನನಗೆ ಏನಾರ ಬಿಕ್ಷ ನೀಡಮ್ಮಾ ಮೂಡಲ ಮಲೆಗೆ ಕಳಿಸವ್ವ।

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ।*

ಆಗಲೀಗ ನಮ್ಮಪ್ಪ ಮಾಯಕಾರ ಮಾದೇವ। ಗಂಡುಗಲಿ ಗಂಡ ಹುಲಿವಾಹನವವನು। ಹುಚ್ಚು ಮಹದೇವ ಸ್ವಾಮಿ। ಏನಮ್ಮಾ ನಿನ್ನ ಮನೆ ಒಳಗೆ ದಾನ ಕೊಡೋಕ್ಕೆ। ಏನೂ ಇಲ್ಲವೇ ಅಂತ ಕೇಳ್ತಾನಲ್ಲಪ್ಪ। ನನ್ನ ಮಲೆ ಮಾದೇಶ್ವರ ಸ್ವಾಮಿ। ಕೊಡೋಣವೆಂದರೆ ದವಸ ಧಾನ್ಯವಿಲ್ಲ ಏನೂ ಇಲ್ಲ। ಏನು ಕೊಡಲಿ ಸ್ವಾಮಿ ಅಂತ ಕೇಳ್ತಾಳೆ ಗುರುವೆ। ನಿನ್ನ ಮನೆ ಒಳಗೆ ಏನೂ ಇಲ್ಲದಂತ ಸಾಮಾನಿಗೆ। ನಾನು ಚಿತಾವಣೆ ಮಾಡಿದ್ದೇ ಉಂಟಾದ್ರೆ ನಾನು ಕೇಳ್ದಂತ ದಾನವನ್ನು ಕೊಡ್ತೀಯಮ್ಮಾ ಅಂತ ಕೇಳ್ತಾನೆ। ದಮ್ಮಯ್ಯ ಸಿವಸಿವಾ ಆದ್ರೆ ಹೇಳ್ತೀನಿ ಕೇಳೋ ದಮ್ಮಯ್ಯ। ನನ್ನ ಮನೆ ಒಳಗೆ ಏನೂ ಇಲ್ಲದ ನೀನು। ಉತ್ಪತ್ತಿ ಮಾಡದೆ ದಾನವಾಗಿ ಕೊಡು ಅಂತ ಕೇಳ್ತಾನೆ। ಗುರುವೇ ಆಗಲೀಗ ನಮ್ಮಪ್ಪ ಮಾಯಕ್ಕಾರ ಮಹದೇವಸ್ವಾಮಿ। ಅಯ್ಯಾ ಮಾಯದ ದೂಳತ ತೆಗೆದವನೇ। ಮಾಯದ ದೂಳತ ಎಸೆದವನೇ।

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ

ಆಗಲೀಗ ನಮ್ಮಪ್ಪ ಮಾಯಕಾರ ಮಾದೇವ। ಗಂಡುಗಲಿ ಗಂಡ। ಹುಲಿವಾಹನದವನು। ಹುಚ್ಚು ಮಹದೇವಸ್ವಾಮಿ। ಅವಳ ಗಂಡ ಕಟ್ಟಿದಂತಾ ಸೊಪ್ಪಿನ ಗುಡ್ಲನ್ನು। ಅರಮನೆ ಕಿರುಮನೆ ಮಾಡವನೆ। ಮಾಡಿ ಮುಚ್ಚು ಮಾಡವ್ನೆ ಸ್ವಾಮಿ। ವಜ್ರ ವೈಢೂರ್ಯ ಮಾಡವನೆ ಸ್ವಾಮಿ। ಗಾಜಿನ ತೋರಣ ಮಾಡವನೆ ಸ್ವಾಮಿ। ಆಗಲೀಗ ನಮ್ಮಪ್ಪ ಮಾಯಕಾರ ಮಹದೇವ। ಗಂಡುಲಿ ಗಂಡ ಹುಲಿವಾಹನದವನು। ಹುಚ್ಚು ಮಹದೇವ ಸ್ವಾಮಿ। ನನಗೆ ದಾನ ತಂದು ಕೊಡವ್ವಾ। ನನ್ನ ಸತ್ಯವಂತೆ ಸಂಕಮ್ಮ

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ

ಆಗಲೀಗ ಹೇಳ್ತೀನಿ ಕೇಳು ಸ್ವಾಮಿ। ನನ್ನ ಗಂಡ ನೀಲಯ್ಯ। ಹೆಜ್ಜೇನು ಮಲೆಗೆ ಹೋಗುವಂತ ಕಾಲದಲ್ಲಿ ಗುರುವೇ ಮುತ್ತುಗದ ಸೊಪ್ಪಿನ ಮರೆ ಮಾಡವ್ನೆ। ಉಗನಿ ಸೊಪ್ಪನ್ನು ತಂದು। ಉಡುಗೆ ಸುತ್ತವನೆ ಸ್ವಾಮಿ। ತೇಗದ ಎಲೆ ಮೈಗೆ ಅಂಟಿಸವ್ನೆ ಸ್ವಾಮಿ। ಹೆಣ್ಣು ಅಂತಕ್ಕದ್ದು ಬರೋದು ಹ್ಯಾಗೆ ಸ್ವಾಮಿ। ಯಾವ ರೀತಿಯ ದಾನವ ಕೊಡಲಪ್ಪೋ ಮಾದೇವಾ।

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ

ಆದ್ರೆ ಯೇಳ್ತೀನಿ ಕೇಳಮ್ಮಾ। ನಿನ್ನ ಸೀರೆ ರವಕೆ ಸೃಷ್ಟಿ ಮಾಡ್ತೀನಿ। ಸಂಕಮ್ಮ ಬೇಗನೆ ಉಟ್ಟುಕೊಂಡು ದಾನ ನೀನು ಕೊಡಮ್ಮಾ। ಸತ್ಯವಂತೆ ಸಂಕಮ್ಮಾ।

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ

ಆಗಲೀಗ ನಮ್ಮಪ್ಪ ಮಾಯಕಾರ ಮಾದೇವ। ಗಂಡುಗಲಿ ಗಂಡ ಹುಲಿವಾಹನದವನು। ಹುಚ್ಚು ಮಹದೇವ ಸ್ವಾಮಿ। ಮಾಯದ ಮಾಳವ ತೆಗೆದು। ಅರಮನೆಗೆ ಬೀಸಾಕ್ಬುಟ್ಟಿಲ್ಲೋ ಸ್ವಾಮಿ। ಬಾಳೆ ಪಟ್ಟಿನ ಬಣ್ಣ। ಸೀಗೆ ಮೊಗ್ಗಿನ ರವಕೆ ಸೃಷ್ಟಿ ಮಾಡ್ಬುಟ್ಟು ಸ್ವಾಮಿ। ನನ್ನ ಮುತ್ತಿನ ಜೋಳಿಗೆಗೆ ದಾನವ ಎದ್ದು ನೀ ಕೊಡಮ್ಮ।

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ

ಸೀರೆ ಉಟ್ಕಂಡು ಸ್ವಾಮಿ। ಕುಪ್ಪಸ ತೊಟ್ಟುಕೊಂಡು। ಅವಳು ಸ್ವಾಮಿ। ನವರತ್ನ ತುಂಬಿಕೊಂಡು। ಅವಳು ಸ್ವಾಮಿ। ಕಾಣಿಕೆ ಮಾಡಿಕೊಂಡು ಅವಳು ಮುತ್ತುವಜ್ರ ತುಂಬಿಕೊಂಡು। ದಾನಕೊಡೋಕೆ ಬಾಗಿಲಿಗೆ ಬಂದಾವಳಲ್ಲೋ ಸಂಕಮ್ಮಾ।

ಆಹಾ ಕ್ವಾರಣ್ಕ ನೀಡಮ್ಮಾ ಕೋಡುಗಲ್ಲು ಮುನಿಗೆ"

ಸ್ನಾನ ಜಳಕ ಮಾಡಿ। ಮೂರು ಮಡಿ ಉಟ್ಕಂಡು। ಬೆತ್ತದ ಮೊರ ಎತ್ಕಂಡು। ಮುತ್ತು ಮೂಗನ ವಜ್ರನಾಗರ ತುಂಬಿಕೊಂಡು। ಆದರೆ ಮಡ್ಡಿ ಕೈ ಬೆಜ್ಜಲು ಕೆಂಡಕ್ಕೆ

ಧೂಪ ಹಾಕ್ಕಂಡು। ಕರ್ಪೂರದ ಮಂಗಳಾರತಿ ಅಂಟಿಸ್ಕೊಂಡು। ಅಯ್ಯಾ ಕ್ವಾರಣ್ಣಾವಾ ತತ್ತಾವಳಲ್ಲೋ ಸತ್ಯವಂತೆ ಸಂಕಮ್ಮ

ಆಹಾ ಕ್ವಾರಣ್ಣಾಗಳ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ

ಆವಾಗಲೀಗ ಸಂಕಮ್ಮನವರು। ಕ್ವಾರಣ್ಣ ತಕ್ಕಂಡು ಬಂದು। ಬಾಗಿಲಲ್ಲಿ ನಿಂತ್ಕಂಡು ನೋಡುವಾಗ। ಯಾವ ಕಡೆ ನೋಡಿದ್ರೂ ಬಾಗಿಲೇ ಇಲ್ಲವಂತೆ ಅಯ್ಯೋ ಗುರುವೇ। ನಮ್ಮಪ್ಪನ ಮನೆ ಮಾಯಕಾರ ಮರಿದೇವರೇ। ಯಾವ ಕಡೆಯೂ ಬಾಗಲಿಲ್ಲವಲ್ಲಾ। ಎಲ್ಲಿ ಬಂದು ನಿಮಗೆ ಕ್ವಾರಣ್ಣ ನೀಡಬೇಕು ದಮ್ಮಯ್ಯ। ಸಬಾಸ್ ಕೇಳು ನನ್ನ ಕಂದ ಅಂತೇಳಿ। ನಾಗಬೆತ್ತ ಎತ್ತಿ ಗೋಡೆ ಮ್ಯಾಲೆ ಮಡಗಿದ್ರಂತೆ। ಏಳು ಬಾಗಿಲು ಲೆಕ್ಕ ಮಾಡ್ಕಂಡೋದಳಂತೆ ಆವಳು

ಒಂದು ಬಾಗಿಲ ತೆಗೆದವಳೆ। ಒಂದು ಬಾಗಿಲ ಕಡೆದವಳೆ।
ಒಂದು ಬಾಗಿಲ ತೆಗೆದವಳೆ। ತಂದೆ ತಾಯಿ ನೆನೆದವಳೆ।
ಎರಡು ಬಾಗಿಲ ಕಡೆದವಳೆ। ಅತ್ತೆ ಮಾವನ ನೆನೆದವಳೆ।
ಮೂರು ಬಾಗಿಲು ಕಡೆದವಳೆ। ಅಣ್ಣ ತಮ್ಮರ ನೆನೆದವಳೆ।
ನಾಲ್ಕು ಬಾಗಿಲ ಕಡೆದವಳೆ। ಅಕ್ಕ ತಂಗೀರ ನೆನೆದವಳೆ।
ಐದು ಬಾಗಿಲ ಕಡೆದವಳೆ। ಸುತ್ತೇಳು ಬಳಗ ನೆನೆದವಳೆ।
ಆರು ಬಾಗಿಲ ಕಡದವಳೆ। ಕೈಹಿಡಿದ ಗಂಡನ ನೆನೆದವಳೆ।
ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆವಾಗಲೀಗ ಆರು ಬಾಗಿಲು ಕಡೆದು। ಏಳನೇ ಬಾಗಿಲಿಗೆ ಬಂದು ನಿಂತುಕೊಂಡಳು। ಕರ್ಪೂರ ಮಂಗಳಾರತಿ ತೆಗೆದುಕೊಂಡು ತಲೆ ತುಂಬಾ ಸೆರಗು ಹಾಕ್ಕೊಂಡು। ಬೆತ್ತದ ಮೊರ ಎರಡು ಕೈಲಿಡಕಂಡು। ಕ್ವಾರಣ್ಣ ತಕ್ಕಳಿ ಗುರುವೇ। ಮಾಯಕ್ಕಾರ ಮಾದೇವ।

ಆಹಾ ಕ್ವಾರಣ್ಣ ನೀಡಮ್ಮಾ ಕೋಡುಗಲ್ಲು ಮುನಿಗೆ

ನಿನ್ನ ಮಕ್ಕಳ ಈಟಿ ಕರ್ಮಮ್ಮ। ಕಷ್ಟ ದೂಳತ ಇಕ್ಕೇನು। ಇವಳ ಮುಕ ಅವ್ನು ನೋಡ್ತಾನೆ। ಅವನ ಮುಕ ಇವಳು ನೋಡ್ತಾಳೆ। ಸತ್ಯವಂತೆಯಾದ ಸಂಕಮ್ಮ ರಟ್ಟಿ ಗಾತ್ರ ಕಣ್ಣೀರು ಪಕಪಕನೆ ಕೀಳ್ತಾಳೆ ಸಂಕಮ್ಮ। ಯಾಕೆ ಸಂಕಮ್ಮ। ಮುತ್ತು ರತ್ನ ವಜ್ರ ವೈಢೂರ್ಯ ಕೊಡಬೇಕು ಅಂತ ದುಕ್ಕ ಮಾಡ್ತೀಯಮ್ಮಾ। ನಿನ್ನ ಕಷ್ಟ ಏನು ಹೇಳಮ್ಮಾ ಸತ್ಯವಂತೆ ಸಂಕಮ್ಮ।

ಆಹಾ ಕ್ವಾರಣ್ಣ ನೀಡಮ್ಮಾ ಕೋಡುಗಲ್ಲ ಮ್ಯಾಲೆ।

ಗುರುವೇ ಗುರುಪಾದಕೆ ಸರಣು। ನನ್ನ ಹೊಟ್ಟೆಹೊಳಗೆ ಪುತ್ರ ಸಂತಾನ ಕೊಡಲಿಲ್ಲವಲ್ಲಪ್ಪಾ। ನಾ ಎಲ್ಲಾಕೆ ಕರೀಲಿ ನಿಮ್ಮ ಪಾದ ಒತ್ತೇನು ಗುರುವೇ। ಈ ಪಾಪಕ್ಕೆ ನಾನು ಗುರಿಯಾದೆನಲ್ಲಾ। ಈ ಅನ್ಯಾಯಕ್ಕೆ ನಾನು ಒಳಗಾದೆನಲ್ಲಾ। ಏನೀ ಮುತ್ತು ರತ್ನ ವಜ್ರ ವೈಢೂರ್ಯಗಳ ಮೇಲೆ ಆಸೆ ಮಾಡಿದ್ದೇ ಉಂಟಾಗಿ। ನನ್ನ ಮುತ್ತಿನ ಜೋಳಿಗೆ ಜಡ್ಡಿದ್ದೇ ಉಂಟಾಗಿದ್ರೆ। ನಾಗ ಬೆತ್ತ ನನ್ನ ನಾಗಮಲೆಯಲ್ಲೆಲ್ಲಾ।

ಬರದಾಗೋದಲ್ಲಾ! ನನ್ನ ನಾಲ್ಕು ರಾಜ್ಯವೆಲ್ಲಾ ಬಿದ್ದೋಗೋದಲ್ಲಾ! ಅಂತೇಳ್ಬುಟ್ಟು!
ನಿನ್ನ ಬಂಜೇ ಕೈನ ಬಿಕ್ಷೆ ನನಗೆ ಬ್ಯಾಡಕಣೋ ಸಂಕಮ್ಮಾ!

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲ ಮ್ಯಾಲೆ!

ಗಂಡುಗಲಿ ಗಂಡ! ಸ್ವಾಮಿ ಅಯ್ಯಾ ಸುದ್ದಿ ಮೂಡಲಾಗಿ ಒಯ್ತಾನೋ ಏಳು ಮಲೆ ಮಾದೇವಾ!

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲ ಮ್ಯಾಲೆ!

ಗುರುವೇ ಗುರು ಪಾದಕೇ ಸರಣು! ನನ್ನ ಗಂಡ ಕಟ್ಟಿರುವಂತ ಸೊಪ್ಪಿನ ಗುಡ್ಲನ್ನು ಮಾಡಿ ಮಚ್ಚು ಮಾಡಿದೆ! ಅರಮನೆ ಕಿರುಮನೆ ಮಾಡಿದೆ! ಬಾಳೆಪಟ್ಟೆ ಬಣ್ಣ ಕೊಟ್ಟೆ! ಸಿರಿಗಂಬಕ್ಕೆ ರವಿಕೆ ಕೊಟ್ಟೆ! ವಜ್ರ ವೈಡೂರ್ಯ ಕೊಟ್ಟಿದ್ದೀಯೇ! ನೀವು ಒಳ್ಳೇ ಮಾತ್ನಲ್ಲಿ! ನನ್ನ ಹೊಟ್ಟೆ ವಳಗೆ! ಪುತ್ರ ಸಂತಾನ ಕೊಟ್ರೆ ಸಮವಾಯಿತು! ಇಲ್ದೇ ಹೋದ್ರೆ ನನ್ನ ಜೀವ ಇಡ್ಡಂಡು! ನಿಮ್ಮ ಪಾದದ ಮ್ಯಾಲೆ ಬಿದ್ದು ಪ್ರಾಣ ಬಿಡ್ತೀನಿ! ಅಂತಾಳೆ ಸಂಕಮ್ಮಾ!

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲ ಮ್ಯಾಲೆ!

ಆದ್ರೆ ಯೇಳ್ತೀನಿ ಕೇಳು ಸಂಕಮ್ಮ! ನಿನ್ನ ವೊಟ್ಟೆವೊಳಗೆ ಪುತ್ರ ಸಂತಾನ ಇಲ್ಲವಲ್ಲ! ಮದ್ಯಕಾಲದಲ್ಲಿ ನಿನಗೆ ಪುತ್ರಸಂತಾನ ಕೊಟ್ಟಿದ್ದೇ ಉಂಟಾದ್ರೆ! ಮಕ್ಕಳ ಫಲವ ಕೊಟ್ಟೇನು! ಮತ್ತೇನು ಕೊಟ್ಟೇಯೇ ಸಂಕಮ್ಮ!

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲ ಮ್ಯಾಲೆ!

ನಮ್ಮಪ್ಪಾಜಿ ಪಾನಕ ದಾನ ಕೊಡಿಸ್ತಾ ಇದ್ದೀನಿ! ಹುಟ್ಟುವಂತ ಕಂದನ ಕೈಲಿ ಬರುವಂತ ಪರಿಸೆಗೆ ಸರ್ವಸ್ವ ತಣ್ಣಗೆ ಮಾಡಿಸ್ತಾ ಇದ್ದೀನಿ! ಇದಕ್ಕಾದ್ರೂ ಒಪ್ಪಿಕೊಂಡು! ನನಗೆ ಮಕ್ಕಳ ಫಲ ಕೊಟ್ಟೋಗಿ! ನನ್ನಪ್ಪಾಜಿ ಮಾಯಕ್ಕಾರ ಅಂದಾಗ! ಏಳು ಮಲೆ ಕಂದ ಹೆಣ್ಣು ಮಗಳಿಗೆ ಒಂದೊಂದು ಮನೆಯಲ್ಲಿ ಒಂದೊಂದು ತಿಂಗಳಿಗೊಬ್ಬ ಬರ್ತಾ ಇದ್ದಾರೆ ಅವರೇ ಕಲ್ಲು ಸಕ್ಕರೆ ಪಾನಕದ ದಾನ ಮಾಡ್ತಾ ಇದ್ದಾರೆ! ಕೌದಳ್ಳಿಯಿಂದ ತಾಳು ಬೆಟ್ಟದವರೆಗೂ ರಸ್ತೇಗೇಯಿಸ್ತಾ ಇದ್ದೀನಲ್ಲಾ! ತಾಳು ಬೆಟ್ಟದವರೆಗೂ ನಾನು ಸೋಪಾನ ಹಂತ ಮಾಡಿಸ್ತಾ ಇದ್ದೇನೆ! ನೀವು ಮಕ್ಕಳ ಫಲ ಕೊಟ್ಟೋಗಿ!

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲ ಮುನಿಗೆ!

ಕೌದಳ್ಳಿ ಕೋಮಟಿಗೆ ಶೆಟ್ಟಿ ಯಾಪಾರಸ್ತರು ಹರಕೆಯನ್ನು ಮಾಡಿಕೊಂಡು! ಕೈ ಮುಗಿತಾ ಇದ್ದಾರೆ! ಅಂತ ಬಡಸ್ತನದ ಮಾತು ಹೇಳಬ್ಯಾಡ! ನನ್ನ ಕಂದ ಮಗಳೇ! ಮಕ್ಕಳ ಫಲವಾ ಕೊಟ್ಟರೆ! ನನಗೇನು ಕೊಡ್ತೀ ಕಂದಮ್ಮಾ! ನಿನಗೆ ಹನ್ನೆರಡು ಹೆಜ್ಜೆ ಬರಗನ ಗೇಯಿಸ್ತಾ ಇದ್ದೀನಿ! ರುದ್ರಾಕ್ಷಿ ಮಂಟಪ ಮಾಡಸ್ತಾ ಇದ್ದೀನಿ! ಸ್ನಾನ ಮಾಡುವುದಕ್ಕೆ ಕೊಳ ಗೇಯಿಸ್ತಾ ಇದ್ದೀನಿ ಅದನಾದ್ರೂ ಒಪ್ಪಿ ನನಗೆ ಮಕ್ಕಳ ಫಲ ಕೊಟ್ಟೋಗಿ!

ಕ್ವಾರಣ್ಮ ನೀಡಮ್ಮಾ ಕೋಡುಗಲ್ಲ ಮುನಿಗೆ।

ಇನ್ನೊಂದು ಹರಕೆ ಮಾಡ್ಕತೀನಿ। ಅದಾದ್ರೂ ನಿಮ್ಮ ಪಾದಕ್ಕೆ ಅರಿವಾಗಲಿ। ಆಹಾ ನನ್ನ ಹೊಟ್ಟೆ ಒಳಗೆ। ಬಂಜೆ ಅನ್ನೋ ವಾಕ್ಯ ಬಯಲಾಗಿ। ಗಂಡು ಮಕ್ಕಳ ಸಂತಾನವಾದರೆ। ನಿಮಗೆ ಹನ್ನೆರಡು ಅಂಕಣ ಗುಡಿ ಸುತ್ತ ಚಂದ್ರಸಾಲೆ ಉರಿಗದ್ದುಗೆ ಒಳಗೆ ಪಟ್ಟಗೇಯಿಸ್ತಾ ಇವ್ನಿ ನೆತ್ತಿನ ಮ್ಯಾಲೆ ಮುತ್ತಿನ ಕೊಳಗ ತಂದು ಸಲ್ಲಿಸ್ತೀನಿ। ಆನೆ ವಾಹನ ಕುದುರೆ ವಾಹನ। ಬಸವ ವಾಹನ ಕೆತ್ತಿಸ್ತೀನಿ। ಮಕ್ಕಳ ಫಲವಾ ಕೊಟ್ಬೋಗು। ನಮ್ಮಪ್ಪನ ಮನೆ ಹೆತ್ತಯ್ಯಾ।

ಆಹಾ ಕ್ವಾರಣ್ಮ ನೀಡಮ್ಮಾ ಕೋಡುಗಲ್ಲ ಮ್ಯಾಲೆ।

ಇದಕೆ ಬೇರೆ ಬಗುತರ ಮಡಗಿವ್ನಿ। ಎಲ್ಲಿ ಅಂದ್ರೆ ಆಲಂಬಾಡಿ ಒಳಗೆ। ಪುಟ್ಟೇಗೌಡ ಹಾಲುಮತದ ಬಕ್ತ ನಿಮಗೆ ಆನೆ ವಾಹನ ಕುದುರೆ ವಾಹನ। ಬಸವನ ವಾಹನ। ಬರಗನ ವಾಹನ ಕೆತ್ತಿಸ್ತೀನಿ। ಗಂಡು ಮಕ್ಕಳು ಕೊಟ್ಬೋಗಿ ನೀವು ಗಂಡುಲಿ ಮೇಲೆ ಮೆರೆಯೋರೇ।

ಆಹಾ ಕ್ವಾರಣ್ಮ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ।

ಕೇಳು ಕೇಳು ನನ್ನ ಕಂದ। ಇದು ನಿನ್ನ ಕೈಲಿ ಸಾಧ್ಯವಿಲ್ಲ ಮಗಳೇ। ಇದಕ್ಕೆ ಬೇರೆ ಉತ್ತರ ಮಡಿಗಿವ್ನಿ। ಯಾರು। ಅಂದರೆ ಬರಗೂರು ಬೆಟ್ಟದ ತಮ್ಮಡಿಗಳು।[5]

ಆಹಾ ಕ್ವಾರಣ್ಮ ನೀಡಮ್ಮಾ ವೀರತ್ತ ಮುನಿಗೆ।

ಅಪ್ಪಾ ನನಗೆ ಗಂಡು ಮಕ್ಕಳಾಗಲಿ। ಹೆಣ್ಣು ಮಕ್ಕಳಾಗಲಿ ಕೊಟ್ರೆ। ನನ್ನ ಮೈನ ಬಣ್ಣ ಕೆಡಿಸಿದ್ರೆ। ನನ್ನಪ್ಪಾಜಿ ನಾನು ಬೇಕಾದ ಹರಕೆನೆಲ್ಲಾ ಮಾಡ್ತೀನಲ್ಲಾ। ಇವಕ್ಕಾದ್ರು ಒಪ್ಪಪ್ಪ। ಅದು ಕೂಡದಮ್ಮ। ಇನ್ಯಾವುದಾದರೂ ಒಪ್ಪಿಕೋ ಅಂತ ಹೇಳಿದ್ರು। ಅಯ್ಯೋ ಶಿವನೇ ಎಲ್ಲಾ ಒಪ್ಪಿಕೊಂಡಾಯ್ತು। ಇನ್ಯಾವುದಪ್ಪಾ ನಾನು ಹರಕೆ ಮಾಡುವುದು ಸ್ವಾಮಿ। ನೋಡಪ್ಪಾ ಆಲೋಚನೆ ಮಾಡು। ನಿನ್ನಾಲ್ಲಾಗುವಂತ ಕೆಲಸ। ನನ್ನಲ್ಲಿ ಕೊಡುವಂತ ಪುತ್ರ ಬಿಕ್ಷೆ। ಎರಡು ಮಾತ್ರ ಉಳಿವಿಕೆ। ಏನು ಗೊತ್ತಿಲ್ಲವಲ್ಲಪ್ಪಾಜಿ। ಹೇಳಿಕೊಡಬೇಕೇನಮ್ಮಾ ಹೇಳಿದಂತೆ ಕೇಳುತ್ತೀಯಾ ಅಂದನಂತೆ। ಅಗತ್ಯವಾಗಿ ಕೇಳ್ತೀನಿ ತಂದೆ। ನಿನ್ನ ಹೊಟ್ಟೆಯಲ್ಲಿ ಗಂಡು ಮಕ್ಕಳು ಹುಟ್ಟಿದರೆ ಕಂದ। ಮಾದೇವಾ....... ಮಾದೇವಾ.......

ಕ್ವಾರಣ್ಮ ನೀಡಮ್ಮಾ ಕೋಡುಗಲ್ಲು ಮ್ಯಾಲೆ ।

ನೋಡಮ್ಮ ಕಂದ। ಮೊದಲನೆಯವನು ಕಾರಯ್ಯ ನನ್ನ ಕಂದ। ಹಿಂದಿನವನು ಬಿಲ್ಲಯ್ಯ। ಮಧ್ಯ ಹುಟ್ಟಿದವನು ಆದಿಸೇಸಮೂರ್ತಿ ಅಂತೇಳಿ ನಾಮಕರಣ ಮಾಡಬೇಕು. ಕೇಳಪ್ಪಾ। ಸ್ವಾಮಿ ನಾನು ಅದೇ ರೀತಿ ನಾಮಕರಣ ಮಾಡ್ತೀನಿ। ಆದರೆ ಹೆಸರು ಕಟ್ಟಿದ ತಕ್ಷಣ ಆಗಲಿಲ್ಲ ಕಂದ। ಆ ಮಕ್ಕಳನ್ನು ನನ್ನ ಜೋಳಿಗೆ ಒಳಗೆ ನೀಡ್ತೀನಿ ಅಂತ ಪ್ರಮಾಣ ಮಾಡಿ। ಅತ್ತೆ ಮಾವನ ಪಾದದಾಣೆ; ತಂದೆ ತಾಯಿ ಪಾದದಾಣೆ। ಕೈ ಹಿಡಿದ ಪತಿ

ದೇವನ ಪಾದದಾಣೆ। ನಿನ್ನ ಗುರುದೀಕ್ಷೆ ಮಾಡಿದ ಗುರುದೇವನ ಪಾದದಾಣೆ। ಇಷ್ಟು ಕೆಲಸಗಳ ಮಾಡಿಕೊಟ್ಟರೆ। ನಾನು ನಿನಗೆ ಸತ್ಯವಾಗಲೂ। ಮಕ್ಕಳ ಸಂತಾನ ಕೊಡ್ತೀನಿ। ಪುತ್ರ ಭಿಕ್ಷೆ ಎಂಬುದಾಗಿ ನೀನು ಕೊಟ್ಟು। ಜಗತ್ತಿನಲ್ಲಿ ಈ ಪವಾಡಗಳನ್ನು। ಮೂರು ರಾಜ್ಯದಲ್ಲೂ ಕೊಂಡಾಡ್ತೀನಮ್ಮಾ। ಇದಕ್ಕೆ ಒಪ್ಪಿದರೆ ನಿನಗೆ ಮಕ್ಕಳ ಸಂತಾನ ಕೊಡುವೆನು। ಮೈಯ ಬಣ್ಣ ಕೆಡುವುದು ಕಂದಮ್ಮಾ।

ಆಹಾ ಕ್ವಾರಣ್ಣ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ।

ನಾನು ಈ ಮಾತನ್ನು ಒಪ್ಪಿ ನೆರವೇರಿಸಿ ಕೊಡ್ತೀನಿ। ಅಂತ ಪಾದ ಹಿಡಿದು ಪ್ರಮಾಣ ಮಾಡಿಬಿಟ್ಟಳು। ಆಗಲೀ ಕಂದ। ಆಗಲೀಗ ಸ್ವಾಮಿಯವರು ಮೂರು ರಸಬಾಳೆ ಹಣ್ಣನ್ನು ತರಿಸಿ ಪಿಂಡ ಪ್ರಸಾದಗಳನ್ನು ಕೊಟ್ಟರಂತೆ। ಆಗಲೀಗ ನಮ್ಮಪ್ಪಾಜಿ। ನೋಡವ್ವಾ ಅಗೀಬೇಡ ಈ ಹಣ್ಣನ್ನು। ಹಾಗೇ ನಿನ್ನ ಜನ್ಮಕ್ಕೆ ನುಂಗಿ ಬಿಡು। ಇದೇ ನಿನಗೆ ಸೂತಕವಾಗದೆ। ಗರ್ಭಧಾರಣೆಯಾಗುತ್ತದೆ। ಆಗಲೇ ತಿಂಗಳು ಲೆಕ್ಕ ಕಣವ್ವಾ। ಇನ್ನು ನಾನು ಕೈಲಾಸ ಮಲೆಗೆ ಹೋಗ್ತೀನಿ ಅಂತೇಳಿ। ಪರಮಾತ್ಮ ಏಳು ಬೆಟ್ಟದ ಮಾದೇಸ್ವರರು। ಪಿಂಡ ಪ್ರಸಾದಗಳನ್ನು ಕೊಟ್ಟು ಬಿಟ್ಟು। ನಮ್ಮಪ್ಪಾಜಿ ಮಾಯವಾದ।

ಆ ಸರಣೆಯಾದ ಸಂಕಮ್ಮನಿಗೆ ಒಂದು ತಿಂಗಳ ಕಾಲ ತುಂಬಿ ಬಿಡ್ತು। ಎರಡು ತಿಂಗಳು ಕಾಲ ತುಂಬಿ ಬರುವಂತ ಕಾಲದಲ್ಲಿ ಹುಟ್ಟಿ ಬರುತ್ತದಲ್ಲಾ ಸಿವನೇ। ಮೂರು ತಿಂಗಳ ಕಾಲದಲ್ಲಿ ಸರಣೆ ಸಂಕಮ್ಮನಿಗೆ। ಸಿವ ಸಿವಾ ಸುಮುಖದಂತೆ ಪ್ರಕಾಸ ಉಳ್ಳವಳಾಗಿ। ತಾನ ಮಡಿ ಮಾಡಿಕೊಂಡು। ನಿಲುಗನ್ನಡಿ ಮುಂದೆ ನಿಂತುಕೊಂಡು ನೋಡಿದ। ಮುಖವು ಅಂದವಾಗಿ ಕಂಡುಬಿಡ್ತು। ನನಗೆ ಮಕ್ಕಳು ಆಗ್ತವೆ ಇನ್ನು ಅಂತೇಳಿ। ಬಾಳ ಆನಂದವಾಗಿ। ಮಂಚದ ಮ್ಯಾಲೆ ಕುಳಿತುಕೊಂಡು। ಸಿವಸಿವಾ ಪರಮಾತ್ಮನನ್ನ ಭಕ್ತಿಯಿಂದ ಬೇಡುತವಳೆ। ಗುರುದೇವಾ।

ಆಹಾ ಕ್ವಾರಣ್ಣ ನೀಡವ್ವಾ ಕೋಡುಗಲ್ಲಿನ ಮ್ಯಾಲೆ ।

ಮಂಚದ ಮೇಲೆ ಕುಳಿತುಕೊಂಡು। ಬೇಡುವಂತ ಕಾಲದಲ್ಲಿ ಸ್ವಾಮಿಯವರು ನೋಡಬೇಕು। ಇವಳ ದುಡಮನವ ಅಂತೇಳಿ। ಬಿಳಿಗೌಳಿಯಾಗಿ ಬಂದು। ಮೂರು ಸೊಲ್ಲುಗಳನ್ನು ಕೊಟ್ಟ ಕಾಲದಲ್ಲಿ। ಆ ನಮ್ಮಪ್ಪನ ಮನೆ ಮಹಾದೇವ। ನಿನ್ನ ಧರ್ಮ ಎಲ್ಲಾ ಅಂತೇಳಿ। ಕರವೆತ್ತಿ ಕೈ ಮುಗಿದವಳಪ್ಪಾ। ಮಾದೇವ। ಎಲ್ಲಿ ಮರೆಯಾದೆಯಪ್ಪಾ ದೇವಾ ಆಹಾ ನಮ್ಮಪ್ಪನ ಮನೆ ಭಾಗ್ಯ ದೇವರು ಮಾದೇವ। ಮೂರನೇ ತಿಂಗಳಿಂದ ನಾಲ್ಕನೇ ತಿಂಗಳ ಕಾಲ ತುಂಬಿದ ಕಾಲದಲ್ಲಿ ಈ ಹೆಣ್ಣು ಮಗಳಿಗೆ ಸಿವಸಿವಾ। ಬಾಯಿ ನೀರು ಕಿತ್ತುಕೊಂಡು ವಾಂತಿ ಬರುವಂತ ಹೊತ್ತು ಉಂಟಾಯಿತು ಪರಮಾತ್ಮ। ಆಗಲೀಗ ನಮ್ಮಪ್ಪಾಜಿ ಗುರುವೇ। ಗುರು ತಂದೆಯೇ। ಏಳುಮಲೆ ಪೆತ್ತಯ್ಯ। ಬೂದಿರೆಸಿದ ಕೆಂಡ ಭೂಲೋಕದ ಒಡೆಯ। ಐದು ತಿಂಗಳು ಬಂದು ಬಿಡ್ತು। ಆರು ತಿಂಗಳ ಕಾಲ ತುಂಬಿ

ಬಂದು ಬಿಡ್ತು! ಆರು ತಿಂಗಳ ಕಾಲ ತುಂಬಿ ಬರುವಂತ ಕಾಲದಲ್ಲಿ! ಈ ಹೆಣ್ಣು ಮಗಳಿಗೆ ಬಯಕೆ ಆಗಿಬಿಡ್ತು! ಏನೇನು ಬೇಕಪ್ಪಾ ಅಂತ ಬಯಕೆ ಆದಾಗ! ಶಿವನೇ ಚಿಗುರುಣಸೆಕಾಯಿ ತಿನ್ನಬೇಕು! ತೊಗರು ಮೆಣಸಿನ ಕಾಯಿ! ಬ್ಯಾಲದ ಕಾಯಿ! ಕೆರೆ ಮೊಕ್ಕಲ ಮಣ್ಣು! ಇಂತ ನಾಲ್ಕು ಪದಾರ್ಥಗಳನ್ನು ತಂದು ಕೊಡುವುದಕ್ಕೆ ನಾನೇ! ತಿಂದು ವೆಚ್ಚಾಳ್ದದಿಂದ ಬೆಳಗಿನ ಜಾವದಲ್ಲಿ ಸ್ನಾನ ಮಾಡಿಕೊಂಡು! ನಿಲುಗನ್ನಡಿ ಮುಂದೆ ಹೋಗಿ ನಿಂತುಕೊಂಡು ನೋಡಿದಳು! ಮೊಕವೆಲ್ಲಾ ಗದರು ಒಡಕೊಂಡು! ಬಾಳ ಕಾಂತಿಯಾಗಿ ಕಂಡುಬುಟ್ಟು ಹೆಣ್ಣು ಮಗಳು ಹೊಟ್ಟೆ ನೋಡಿದಳಂತೆ! ಹೊಟ್ಟೆ ಮುಂಬಾರವಾಗಿ ಬಂದವಲ್ಲಾ ಮುದ್ದಿನ ಮಾದೇವಾ!

ಆಹಾ ಕ್ವಾರಣ್ಣಾ ನೀಡವ್ವಾ ಕೋಡುಗಲ್ಲಿನ ಮ್ಯಾಲೆ ।

ಏಳು ತಿಂಗಳ ಕಾಲ ತುಂಬಿ ಬಿಡ್ತು! ಎಂಟು ತಿಂಗಳ ಕಾಲ ತುಂಬಿ ಬಿಟ್ಟರೆ! ಎಂಟು ತಿಂಗಳು ತುಂಬಿ ಒಂಬತ್ತು ತಿಂಗಳು ನಡೆದು ಬಂದು ಬಿಡ್ತು! ಇನ್ನೂ ಬರನಿಲ್ಲ ಕೆಟ್ಟಮುಂಡೆ ಮಗ ದೇವ ಸ್ವಾಲಿಗ ನೀಲೇಗೌಡ![೪]

ಆಹಾ ಕ್ವಾರಣ್ಣಾ ನೀಡಮ್ಮಾ ಕೋಡುಗಲ್ಲು ಮ್ಯಾಲೆ ।

ಹೆಜ್ಜೇನು ಮಲೆಗೆ ಪೋದಂತ ನೀಲಯ್ಯ! ಸಾಕಾಗಿ ಉರಿದು ಉಕ್ಕಿ ಸ್ವಾಮಿ ಅಯ್ಯ! ಬಿಸಿಲಲ್ಲಿ ದಣಿದು ತಬ್ಬಿಬ್ಬಾಗಿ ಬರ್ತಾವ್ನೆ ಗುರುವೇ! ಮಲೆಸೋಲಿಗ ನೀಲಯ್ಯನಿಗೆ ಕೆಟ್ಟ ಕನಸು ಕಂಡು ಬಂತು ಗುರುವೇ! ಏನು ನನ್ನ ಹೆಂಡ್ತಿ ಯಾರ್ನೋ ಮಾಡಿಕೊಂಡು! ಅರಮನೆ ಕಿರುಮನೆ ಮಾಡಿ ಮಬ್ಬು ಕಟ್ಟವ್ಳೆ! ಅಂತೇಳ್ಬುಟ್ಟು ಗುರುವೇ! ಏಳು ಕಂಡುಗ ಹೆಜ್ಜೇನು ತುಪ್ಪ! ಏಳು ಕಂಡುಗ ಕಿರುಜೇನು ತುಪ್ಪ! ನರಿಯ ಮಾಂಸ ಬಿದುರು ಅಕ್ಕಿ! ನೇಗಿಲು ಗೆಡ್ಡೆ ಸ್ವಾಮಿ! ಮುಳ್ಳು ಗೆಣಸು ಸ್ವಾಮಿ! ತೂಯ್ದು ಎಸೆದುಬಿಟ್ಟು ಸ್ವಾಮಿ! ಬಾರ್ಕೋಲ ತಕ್ಕಂಡೋನು ಅಯ್ಯಾ! ಮೂರು ಗಾವುದಕ್ಕೆ ಬತ್ತವನೇ! ಮಲೆ ಸ್ವಾಲಿಗ ನೀಲಯ್ಯ!

ಆಹಾ ಕ್ವಾರಣ್ಣಾ ನೀಡಮ್ಮಾ ಕೋಡುಗಲ್ಲು ಮುನಿಗೆ ।

ಅಯ್ಯೋ ಹೆಜ್ಜೇನು ತುಪ್ಪ! ಕಿರುಜೇನು ತುಪ್ಪವೆಲ್ಲಾ ಹೊಳೆಯಾಗಿ ಹರಿದು ಹೋಯ್ತಲ್ಲಾ ದಮ್ಮಯ್ಯ! ಯಾರನ್ನೋ ಮಾಡ್ಕಂಡು! ಈ ರೀತಿ ಇದ್ದಾಳೆ ಅಂತೇಳಿ! ಬಾಕನಿಗ ಚನ್ನಾಗಿ ಉಜ್ಜುಕೊಂಡು! ಒಂದೇ ಏಟಿಗೆ ಹೊಡಿಬೇಕು! ಅಂತೇಳಿ ಅವನು ಬೇಗನೆ ಬಂದು ನಿಂತವನೇ! ಮಲೆ ಸ್ವಾಲಿಗ ನೀಲಯ್ಯ!

ಆಹಾ ಕ್ವಾರಣ್ಣಾ ನೀಡಮ್ಮಾ ಕೋಡುಗಲ್ಲು ಮ್ಯಾಲೆ ।

ಆದ್ರೆ ಯೇಳ್ತೀನಿ ಕೇಳೋ! ಸತ್ಯವಂತ ಸಂಕಮ್ಮ ಹೆಜ್ಜೇನು ಕಿರುಜೇನು ಮಲೆಯಿಂದ ಬಂದು ನೀಲಯ್ಯ ನಡಟ್ಟಿ ಒಳಗೆ ನಿಂತವನೆ! ಸಂಕಮ್ಮ ನಿನ್ನ ಗಂಡನಿಗೆ! ನೀನು ಆರತಿ

ತಕ್ಕ ಹೋಗಮ್ಮ ಅಂತ ಹೇಳ್ದಲೇ। ಗುರುವೇ ಗುರು ಪಾದಕೆ ಶರಣು। ನನ್ನ ಮಲೆಸ್ವಾಲಿಗ ನೀಲಯ್ಯ। ಬಾಳ ಕ್ವಾಪಗಾರ। ಬಾಳ ದುಷ್ಟವಂತನು ದಮ್ಮಯ್ಯ। ನೀವು ಕಾವಲಾಗಿರಬೇಕು ಕಾಣೋ। ನಮ್ಮಪ್ಪನ ಮನೆಯ ಮಾದೇವ।

ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮ್ಯಾಲೆ ।

ಅಯ್ಯೋ ನನ್ನ ಮಲೆ ಸ್ವಾಲಿಗ ನೀಲಯ್ಯ। ಹೆಜ್ಜೇನು ಮಲೆ ಕಿರುಜೇನು ಮಲೆಯಿಂದ। ಬಂದವ್ನಲ್ಲಾ ಅಂತೇಳಿ। ಮುತ್ತಿನ ಆರತಿ ಮಾಡಿಕೊಂಡು। ರತ್ನದ ಆರತಿ ಮಾಡಿಕೊಂಡು। ಬಾಗಿಲಿಗಿನ್ನು ಬಂದವಳೇ। ಸತ್ಯವಂತೆ ಸಂಕಮ್ಮಾ

ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮ್ಯಾಲೆ ।

ಆಗಲೀಗ ಮಲೆ ಸ್ವಾಲಿಗ ನೀಲಯ್ಯ। ಯಾರನ್ನು ಮಾಡ್ಕಂಡು। ಇಸ್ಟು ಚಂದ, ಅರಿಸಿನ, ಕುಂಕುಮ ಇಟ್ಕಂಡು। ಬಾಳೆಪಟ್ಟೆ ಬಣ್ಣ ತೊಟ್ಕಂಡು। ಸೀಗೆಮೊಗ್ಗಿನ ರವಕೆ ತೊಟ್ಟಂಡು ನನಗೆ ಮುತ್ತಿನ ಆರತಿ ರತ್ನದ ಆರತಿ ತಂದೀಯಾ ಚಂಡಾಳಿ ಅಂತೇಳ್ಬುಟ್ಟು। ಅವನು ಕೈಲಿಡಿದಂಥ ಚಂದ್ರಾಯುಧವನ್ನು। ಸ್ವಾಮಿ ಅವಳ ಮೇಲೆ ಕೈ ಎತ್ತವನೇ। ಬೀಳ್ಳಿಲ್ಲ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।
ನೀ ಎತ್ತಿದ ಚಂದ್ರಾಯುಧ ಭೂಲೋಕದ ಭಾರವಾಗೋಯ್ತಲ್ಲಪ್ಪಾ।

ಚಂದ್ರಾಯುಧವನ್ನು ಕೆಳಕ್ಕೆ ಎತ್ತಿಬುಟ್ನಲ್ಲ। ಮೇಲಕ್ಕೆ ಎತ್ತಾನ್ನಲ್ಲಪ್ಪಾ ಗುರುವೇ। ಯೇಳ್ತೀನಿ ಕೇಳೇ ಸಂಕೆಣ್ಣೆ। ನಿನ್ನ ಒಂದೇ ಏಟಿಗೆ। ಎರಡು ತುಂಡು ಮಾಡ್ಬೇಕು ಅಂತ ಕತ್ತಿ ಎತ್ತಿ। ಕತ್ತಿ ಕೆಳಕ್ಕೆ ಬಿದ್ದೋಯ್ತು। ಸಂಕೆಣ್ಣೆ ಅಂತಾ ಪತಿವ್ರತೆಯಂತ। ಸತ್ಯವಂತೆ ನೀ ಆದ್ದೆ ಉಂಟಾದ್ರೆ। ನನ್ನ ಚಂದ್ರಾಯುಧವ ಕೆಳಕ್ಕೆ ಮಡಗಿದ್ದೆ ನೀನು ಸಂಕೆಣ್ಣೆ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।

ಆಗ ನನ್ನ ಸತ್ಯ ನಿಜವನ್ನು। ನಂಬಬೇಕಾದರೆ ನೋಡ್ಕೋಪ್ಪಾ। ನೀಲಯ್ಯ ಅಂತ ಗುರುವೇ। ಗುರು ಪಾದಕೆ ಸರಣು ಎತ್ತಿದಂತ ಚಂದ್ರಾಯುಧವನ್ನು ಇಳುಕಿಬಿಡಪ್ಪಾ ಅಂತೇಳಿ। ಮಾದೇವನ ಪಾದವನ್ನು ನೆನೆದವಳೇ। ಮೂಡಲ ಮನೆಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ ।

ಮಾದೇವನ ನೆನೆವಂತ ಕಾಲದಲ್ಲಿ। ಚಂದ್ರಾಯುಧ ಕೆಳಕ್ಕೆ ಮಡುಗ್ಬುಟ್ನಲ್ಲಾ ಗುರುವೇ। ಆಗ ನನ್ನ ಸತ್ಯಧರ್ಮ ನಂಬೀನಪ್ಪಾ ನೀಲಯ್ಯ। ಅಂತ ಕೇಳಿದಲ್ಲೋ ದಮ್ಮಯ್ಯ। ಆದ್ರೆ ಯೇಳ್ತೀನಿ ಕೇಳೇ ಸಂಕೆಣ್ಣೆ। ನೀ ಒಳಗಿಂದ ತಂದಿದ್ದೀಯೋ। ಕತ್ತಿ ಮಂತ್ರಗಾರ್ನ ಮಾಡಿಕೊಂಡಿದ್ದೀಯೋ।

ಆಹಾ ಕ್ವಾರಣ್ಕ ನೀಡಮ್ಮ ಕೋಡುಗಲ್ಲು ಮುನಿಗೆ ।

ಬೆಚ್ಚಲು ಬೇಡ ಕಂದಮ್ಮ
ಅಂಜಲು ಬೇಡ ಕಂದಮ್ಮ
ನಾನಿರುವಾಗ ನಿನಗೇನು ಭಯ ಕಂದಮ್ಮ।
ಬಿಳಿಯ ಪಲ್ಲಿಯಾಗಿ ಬತ್ತಿವ್ನಿ।
ನಿನ್ನ ಬೆನ್ನು ಹಿಂದುಗಡೆ ಕಾದಿವ್ನಿ।
ಹೊನ್ನ ದುಂಬಿಯಾಗಿ ಬಂದಿವ್ನಿ।
ನಿಮ್ಮಹೊಸ್ತಿಲಲ್ಲಿ ನಿಂದಿವ್ನಿ।
ಕಕ್ಕ ದುಂಬಿಯಾಗಿ ಬಂದಿವ್ನಿ।
ನಿಮ್ಮ ನಡುಮನೆಯಲ್ಲಿ ನಿಂತಿವ್ನಿ।
ನಾನಿದ್ದ ಮೇಲೆ ನಿನಗೆ ಭಯಬೇಡ ಕಂದಮ್ಮ।
ಬೆಚ್ಚಲು ಬ್ಯಾಡ ಸಂಕಮ್ಮ।"

ಏನ್ಲೇ ಮಡದಿ ಸತ್ಯವಂತೆ ಹೆಣ್ಣು ಮಗಳೇ। ಗಾಡಿಕಾರ್ನೋ ಮೋಡಿಕಾರ್ನೋ। ಮರಾಠಿಯವನೋ ಮಾಪಿಳ್ಳೆಯವನೋ। ಸೊಪ್ಪಿನ ಗುಡಿಸಲ ಹೋಗಲಾಡಿಸಿ ಬಿಟ್ಟು। ಮಾಡಿ ಮಚ್ಚು ಕಟ್ಟಿಸಿಕೊಂಡಿದ್ದೀಯಾ। ಮುಂಗೈಗೆ ಹನ್ನೆರಡು ಮಾರುದ್ದ ಕೂದಲ ಮುಂಗೈಗೆ ಸುತ್ತುಕೊಂಡು। ಕೊಲ ಬಾರದ ಕೊಲೆ ಮಾಡವನಲ್ಲಾ। ದೇವ ಸ್ವಾಲಿಗ ನೀಲಯ್ಯ।

ಆಹಾ ಕ್ವಾರಣ್ಕ ನೀಡಮ್ಮ ಕೋಡುಗಲ್ಲು ಮುನಿಗೆ ।

ನನ್ನ ಪತಿ ಯಜಮಾನ। ನೀಲೇಗೌಡ। ಯಾವ ಅಂತ್ರಗಾರನೂ ಬರಲಿಲ್ಲ। ಮಂತ್ರಗಾರನೂ ಬರನಿಲ್ಲ। ಮಾಪಿಳ್ಳೆಯವನೂ ಬರನಿಲ್ಲ। ಗಾಡಿಗಾರನೂ ಬರನಿಲ್ಲ। ಮೋಡಿ ವಿದ್ಯೆದವನೂ ಬರನಿಲ್ಲ। ನಮ್ಮಪ್ಪನ ಮನೆ ವಂಸ ಉದ್ದಾರ ಮಾಡತಕ್ಕಂತ। ಮಾದೇಸ್ವರ ನನ್ನ ಕಷ್ಟ ಪಾರು ಮಾಡಿದ್ದಾನೆ। ಬಡಸ್ತಾನ ಬಯಲು ಮಾಡಿದ್ದಾನೆ। ನನ್ನಪತಿ ಸಿರಸ್ತಾನ ಉಂಟು ಮಾಡಿದ್ದಾನೆ। ಐಸ್ವರ್ಯ ಸಂಪತ್ತು ಕೊಟ್ಟಿದ್ದಾನೆ। ಮಾದೇವ ಕೊಟ್ಟ ಭಾಗ್ಯ ಮನೆಯೆಲ್ಲಾ ತುಂಬಿದೆ ಮಾದೇವಾ।

ಆಹಾ ಕ್ವಾರಣ್ಕ ನೀಡಮ್ಮ ಕೋಡುಗಲ್ಲು ಮುನಿಗೆ।"

ಒಳಗಿಂದ ಯಾರವ್ನು। ಮಂತ್ರಿಸಿ ಮಾಡ್ಕೊಂಡಿದ್ದೋನು। ಇನ್ನು ಏನು ಯೇಳಿಯೋ ಯೇಳು ಅಂತ ಕೇಳ್ತಾಳೆ ಗುರುವೇ। ಅಂತ ಸತ್ವಂತೆ ಅಂತ। ನಿಜವಂತೆ ಆದ್ರೆ ಉಂಟಾದ್ರೆ। ಏಳು ಖಂಡುಗ ಹೆಜ್ಜೇನು ತುಪ್ಪ ತತ್ತೀನಿ। ಏಳು ಕೊಪ್ಪರಿಕೆ ಒಳಗೆ ಮಳ್ಳಸ್ತೀನಿ। ಅದರೊಳಗೆ ನೀನು ಸ್ನಾನ ಮಾಡಿ ಮಡಿ ಉಟ್ಟು। ಈಚೆಗೆ ಬಂದಿದ್ದೇ ಉಂಟಾದ್ರೆ ನಿನ್ನ ಸತ್ಯ ನಾನು ನಂಬೀನೋ।

ಆಹಾ ಕ್ವಾರಣ್ಕ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಮಳೆ ಸ್ವಾಲಿಗ ನೀಲಯ್ಯನವರು ಏಳು ಖಂಡುಗ ಹೆಜ್ಜೇನು ತುಪ್ಪವನ್ನು ಮೂರು ಕೊಪ್ಪರಿಕೆ ಉಯ್ದು ಬಿಟ್ಟನು। ಗುಳು ಗುಳನೆ ಮಳ್ಳಿಸಿ ಬಿಟ್ಟನು ಸ್ವಾಮಿ। ನೀನು

ಓಗಮ್ಮ। ಅದರಲ್ಲಿ ಸ್ನಾನ ಮಾಡಬೇಕು। ಮಡಿ ಮಾಡಬೇಕು। ಅದರಲ್ಲಿ ಊಟ ಮಾಡಿಕೊಂಡು। ಈಚಿಗೆ ಬರಬೇಕು ಅಂತೇಳಿ। ಅವನು ಅಯ್ಯಾ ಹೆಜ್ಜೇನು ಕಳಿಸ್ತಾನೆ। ಮಲೆ ಸೋಲಿಗ ನೀಲಯ್ಯೋ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಗುಳು ಗುಳುನೆ ತುಪ್ಪವನ್ನು ಮಳ್ಳಿಸಿ ಬಿಟ್ಟು। ಒಂದನೇ ಕೊಪ್ಪರಿಕೆಗೆ ಓಗಿ ಸ್ನಾನ ಮಾಡಿಕೊಂಡು। ಎರಡನೇ ಕೊಪ್ಪರಿಕೆಗೆ ವೋಗಿ ಬಟ್ಟೆ ಹಿಂಡಿಕೊಂಡು। ಮೂರನೇ ಕೊಪ್ಪರಿಗೆಗೆ ಹೋಗಿ ಅವಳು। ಸ್ವಾಮಿ ಅವಳು ಅರಿಸಿನ ಕುಂಕುಮ ಧರಿಸಿಕೊಂಡು। ಅವುಳು ಏಳ್ತೀನಿ ಕೇಳಪ್ಪಾ। ಮಲೆ ಸ್ವಾಮಿ ನೀಲಯ್ಯ। ನಾ ಕೊಪ್ಪರಿಕೆ ಒಳಗೆ ನಿಂತೀನಿ। ನನ್ನ ಸತ್ಯ ನಂಬಯ್ಯೋ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ನೋಡೆ ಮೂರುವರೆ ಖಂಡಗ ಬ್ಯಾಳೆ। ಮೂರುವರೆ ಕಂಡಗ ಅಕ್ಕಿ ಎಳ್ಳು ಎಲ್ಲಾ ಬೆರಸ್ಬುಡ್ತೀನಿ ಸಂಕೆಣ್ಣೆ। ಅಕ್ಕೀಬ್ಯಾಳೆ ಎಳ್ಳು। ಬ್ಯಾರೆ ಬ್ಯಾರೆ ಉಂಟುಮಾಡಿದ್ರೆ। ನಿನ್ನ ಸತ್ಯ ನಾನು ನಂಬೀನೋ। ನಿನ್ನ ನಿಜವ ನಾನು ನಂಬೀನೋ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮ್ಯಾಲೆ।

ಆವಾಗಲೀಗ ನಮ್ಮಪ್ಪ ಮಾಯಕಾರ ಮಾದೇವನ ಪಾದವ ನೆನೆಕೊಂಡ್ಲು ಸ್ವಾಮಿ। ಆಗ ಮೂರು ಕಂಡುಗ ಎಳ್ಳು ಮೂರು ಖಂಡುಗ ಅಕ್ಕಿ ಬೇಳೆ ಬೆರಸಿ ರೂಮಿಗೆ ತುಂಬಿಬುಟ್ಲು।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆದ್ರೆ ಯೇಳ್ತೀನಿ ಕೇಳೇ ಸಂಕೆಣ್ಣೆ। ಏಳು ಖಂಡುಗ ಮಲ್ಲಿಗೆ ಹೂವ ತತ್ತೀನಿ। ದಾರ ಎಳಕೊಳ್ದೆ ಕಟ್ಟಿದರೆ ನಿನ್ನ ಸತ್ಯ ನಂಬೇನು। ನಿನ್ನ ನಿಜವ ನಂಬೇನು।

ಈಗಲಾದರೂ ನನ್ನ ಸತ್ಯ ನಿಜ ನಂಬಪ್ಪ। ಮಲೆಸೋಲಿಗ ನೀಲಯ್ಯ ಅಂತ। ಹೇಳಿದ್ದಲ್ಲಪ್ಪ ಗುರುವೇ। ಆದ್ರೆ ನಿನ್ನ ನಂಬಲಾರೆ ನೆಚ್ಚಲಾರೆ ಸಂಕೆಣ್ಣೆ। ಆದ್ರೆ ಇನ್ನೊಂದು ಹೇಳ್ತೀನಿ। ಕಡ್ಡಿ ವಂದ್ರಿ, ತಕ್ಕಂಡು। ತಾವರೆಕಟ್ಟೆಯಿಂದ ನೀರು ಒಡ್ಕಂಡು ಬಂದದ್ದೇ ಉಂಟಾದ್ರೆ ನಾನು ನಂಬೀನೋ। ನಿನ್ನ ನಿಜವ ನಾನು ನಂಬೀನೋ.

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಗುರುವಿನ ಪಾದಕೆ ಸರಣು ಅಂತೇಳಿ। ಕಡ್ಡೊಂದ್ರಿ ತಕ್ಕಂಡು। ತಾವರೆ ಕಟ್ಟೆಗೋಗಿ। ನೀರೊತ್ಕಂಡು ಬಂದು ಗಂಡನ ಮುಂದಕ್ಕೆ ಮಡಗದ್ದಲ್ಲಪ್ಪಾ ಗುರುವೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ನಾನು ಬೆಟ್ಟಕ್ಕೆ ಹೋಗಿ। ಏಳು ಗಾಡಿ ಸಿರಿಗಂಧ ಸೌದೆ ತರ್ತೀನಿ। ಸಂಕೆಣ್ಣೆ। ತಂದು ಓತುಬುಡ್ತೀನಿ। ಸಿರಿಗಂಧ ಸೌದೆ ಮೇಲೆ ನಿನ್ನ ಮಲಗಿಸ್ಬುಟ್ಟು ಬೆಂಕಿ ಹಚ್ಚಿ ನಿನ್ನ ಬೇಯಿಸ್ತೀನಿ। ಅದರೊಳಗಿಂದ ಎದ್ದು ಬಂದದ್ದೇ ಆದ್ರೆ। ನಿನ್ನ ಸತ್ಯ ನಾನು ನೆಚ್ಚೇನೋ। ನಿನ್ನ ನಿಜವ ನಾನು ನಂಬೇನೋ।

ಆಗಲೀಗ ಸೌದೆ ಮೇಲೆ ಮಲಗಿಸ್ಬುಟ್ಟು। ಆ ಬೆಂಕಿಯಲ್ಲಿ ಬೇಯುವಂತ ಕಾಲದಲ್ಲಿ। ಸ್ವಾಮಿ ಆ ಸತ್ಯವಂತೆ ಸಂಕಮ್ಮ ಸತ್ತು ಓದಳೆಂದು ಲಬಲಬನೆ ಬಾಯಿ ಬಡಿದಾನು। ಮಲೆ ಸ್ವಾಲಿಗ ನೀಲಯ್ಯಾ

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಸತ್ಯವಂತೆಯಾದ ಸಂಕಮ್ಮ। ಆಕಾಸಕ್ಕೂ ಭೂಮಿಗೂ ಉರಿ ಬೇಯುವಂತ ಕಾಲದಲ್ಲಿ। ನನ್ನ ಗುರು ಗುರುಪಾದಕ್ಕೆ ಶರಣು ಅಂತೇಳಿ। ಮಾದೇವನ ಪಾದವನ್ನು ನಂಬಿಬಿಟ್ಟು। ಸ್ವಾಮಿ ಎಲೆ ಅಡಿಕೆ ಹಾಕಿಕೊಂಡು। ಬಾಳೆಯ ಪಟ್ಟೆಯ ಬಣ್ಣ ಹಾಕ್ಕೊಂಡು। ಸೀಗೆ ಮೊಗ್ಗಿನ ರವಕೆ ತೊಟ್ಕಂಡು। ಸ್ವಾಮಿ ಹೂವಿನ ಚವುಕ ಹಿಡಕೊಂಡು ಸ್ವಾಮಿ ಅವಳು ಬೆಂಕಿ ಒಳಗೆ ನಿಂತವಳೆ ಸತ್ಯವಂತೆ। ಸಂಕಮ್ಮಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ನೀಲಯ್ಯ। ಲಬಲಬನೆ ಬಾಯಿ ಬಡುಕೊಳ್ಳುವಂತ ಕಾಲ್ದಲ್ಲಿ। ಯಾಕಪ್ಪಾ ನೀಲಯ್ಯಾ ಬಡ್ಕಂಡು ಬಂದ್ಯಾ। ಬಾಪ್ಪ ಜೀವಂತವಾಗಿವ್ನಿ। ಅಂತೇಳಿ ಅಯ್ಯಾ ಉರಿ ಒಳಗೆ ನಿಂತ್ಕಂಡು। ಸತ್ಯವಂತ ಸಂಕಮ್ಮಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ನೀನು ಸಾಯಲಿಲ್ಲವೇ ಸಂಕಮ್ಮ। ನೀನು ಇನ್ನು ಜೀವಂತವಾಗಿದ್ದೀಯಾ ಅಂತೇಳ್ಬುಟ್ಟು। ಆದ್ರೆ ಯೇಳ್ತೀನಿ ಕೇಳು ಸಂಕೆಣ್ಣೆ। ನಿನ್ನ ಎರಡು ಕಾಲಿಗೂ ಎರಡು ಬಳೆ ಹಾಕ್ತೀನೆ। ಅದ್ರ ಮೇಲೆ ಮಲಗಸ್ತೀನಿ ಸಂಕೆಣ್ಣೆ। ಗುಂಡನ್ನು ತತ್ತೀನಿ। ಆ ಗುಂಡು ನಿನ್ನ ಮ್ಯಾಲೆ ಹರಕೋ ಪೋದ್ರೆ ಉಂಟಾದ್ರೆ। ನಿನ್ನ ಸತ್ಯ ನಾನು ನಂಬೇನೂ। ನಿನ್ನ ನಿಜವ ನಾನು ನಂಬೇನೂ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆಗಲೀಗ ಕಲ್ಲು ಬರುವಂತ ರಬಸದಲ್ಲಿ। ನಮ್ಮಪ್ಪ ಮಾಯಕ್ಕಾರ ಮಾದೇವ। ತನ್ನ ನಾಗ ಬೆತ್ತವನ್ನು ತಕ್ಕಂಡು। ಅಡ್ಡ ಮ್ಯಾಲೆ। ಕಲ್ಲು ಒಂಟೋಯ್ತಲ್ಲೋ ಗುರುವೇ। ನನ್ನ ಸತ್ಯವಂತೆ ಸಂಕಮ್ಮ। ಈವತ್ತು ಪ್ರಾಣ ಬಿಟ್ಟು ಬಿಟ್ಟಳು। ಮೂಳೆ ಮಾಂಸವೆಲ್ಲ ನಗ್ಗಿ ಓಂಟೋಯ್ತು। ಈ ಕಲ್ಲು ಹೋಗೋ ರಬಸಕ್ಕೆ। ಅವನು ಲಬಲಬನೆ ಬಾಯಿ ಬಡ್ಕಂಡು ಬರುತಾನೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಯಾಕಪ್ಪಾ ನೀಲಯ್ಯಾ! ನೀನು ಬಾಯಿ ಬಡಕೊಂಡೇ। ನಾನು ಜೀವಂತವಾಗಿ ಇವ್ನಿ! ಬಾರಪ್ಪ ಅಂತೇಳಿ ಗಂಡನ್ನ ಕೂಕ್ಕಂಡ್ಲು! ಗುರುವೇ ಅಪ್ಪಪ್ಪಾ ನೋಡ್ಪಾ! ಹೆಣ್ಣಿನ ಬೆಡಗಿನ ಮಾತನ್ನ! ಇದರಲ್ಲೂ ಗೆದ್ದೋಗ್ಬುಟ್ಟಳಲ್ಲ! ಅಂತೇಳಿ

ಒಂದು ಸುಣ್ಣದ ಗೂಡು ಗೇಯ್ತಾ ಇದ್ದೀನಿ! ಹನ್ನೆರಡಾಳುದ್ದ ಗುಳಿ ತೆಗೆದುಬಿಟ್ಟು! ಒಂದು ಸಿರಿಗಂಧದ ಸೌದೆ ತುಂಬ್ತಾ ಇದ್ದೀನಿ! ಬೆಜ್ಜಲು ಕೆಂಡ ಮಾಡ್ತಾ ಇದ್ದೀನಿ! ಬೆಜ್ಜಲು ಕೆಂಡದೊಳಗೆ ಹನ್ನೆರಡಾಳುದ್ದ ಚಪ್ಪಡಿ ತಳ್ತಾ ಇದ್ದೀನಿ! ದೊಡ್ಡವರ ಮನೆ ಸೊಸೆಯಾಗಿ! ಮಲ್ಲಿಗೆ ಹೂವ ಮಾಡಿಸ್ತಾ ಇದ್ದೀನಿ! ಪಟ್ಟೆ ಸೀರೆ ಉಡಿಸಿ! ಕುಪ್ಪರಿಸಿದ ಕುಪ್ಪಸ ತೊಡಿಸ್ತಾ ಇದ್ದೀನಿ! ಆ ಮುಡಿದ ಮಲ್ಲಿಗೆ ಹೂವು ಮುಗ್ಗೋಗಕ್ಕಿಲ್ಲ! ಉಟ್ಟಿರಂತಾ ಸೀರೆ ಒಳಗೆ ಸಟೀಗ ಕಪ್ಪಾಗಕಿಲ್ಲ! ಏಳು ಮಲೆ ಮಾದೇಸ್ವರನ ಸತ್ಯ ನೋಡಬೇಕಾದ್ರೆ! ಈ ಬೆಜ್ಜಲು ಕೆಂಡದ ಮ್ಯಾಲೆ! ಒಂದು ರಾತ್ರಿ ಮಲಗಿ ಬರಬೇಕು! ಹನ್ನೆರಡು ಮೊಳುದ್ದ ಜಾಡು ತೆಗೆದುಕೊಂಡು ಬಂದು! ಚಪ್ಪಡಿ ಮ್ಯಾಲೆ ಮಡಗ್ಬುಟ್ಟು! ಹೌದು ಏಳು ಮಗ್ಗಲು ಕಾವಲು ಮಡಗ್ತಾ ಇದ್ದೀನಿ! ಹೇಳಿದ ಸತ್ಯ ಖಂಡಿತವಾಗಲೂ ಮಾಡಬೇಕು! ಗುರುದೇವ ಗುರುಪೀಠವೇ! ನನ್ನ ಪತಿ ಯಜಮಾನ ನೀಲೇಗೌಡ ಹೇಳಿದ ಸತ್ಯವ ಮಾಡ್ತೀನಿ! ನನ್ನ ಯಜಮಾನ ನೀಲಯ್ಯ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಹನ್ನೆರಡು ಆಳುದ್ದ ಮಣ್ಣಿನ ಗುಳಿ ಒಳಗೆ! ಆರಾಳುದ್ದ ಚಪ್ಪಡಿ ಎತ್ತಿ ಮೇಲಕ್ಕೆ ಇಳಿಸ್ತಾ ಇದ್ದಂತೆ! ದೊಡ್ಡೋರ ಮನೆ ಸೊಸೆಯಾಗಿ! ಕಿಲಕಿಲನೆ ನೆಗೆದು ಬರ್ತಾ ಇದ್ದಾಳೆ! ನೋಡ್ತಾ ಇದ್ದಾನೆ! ಮಲ್ಲಿಗೆ ಹೂವು ಮಗ್ಗಿಲ್ಲ! ಉಟ್ಟಿರುವಂತ ಪಟ್ಟೆಸೀರೆ ಕಪ್ಪಾಗಿಲ್ಲ! ದೇವಪ್ಪಾಲಿಗ ನೀಲೇಗೌಡ! ಹೆಣ್ಣೇ ಗರತಿಯಾ ಕಾಣೋ ಸಂಕೆಣ್ಣೆ! ಗರತಿ ಕಾಣೋ ಸಂಕೆಣ್ಣೆ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ!"

ಎಲಾ ಪಾಪಿ ನಿನ್ನ ಮುಕಾನೂ ನಾನು ಕಣ್ಣಿನಿಂದ ನೋಡಬಾರದು! ನಿನ್ನ ನಂಬಿ ನಾನು ಬಿಟ್ಟುವೋದ್ದಕ್ಕೆ! ನನಗೆ ಮೋಸ ಮಡ್ಡಲ್ಲಾ! ಬಾಚಮಚ್ಚನೀಗ ಎತ್ತಿದ ಒಂದೇ ಏಟಿಗೆ ಮಾಯದ ಗೊಂಬೆಗೆ ಹೊಡೆದವನಲ್ಲಾ ನೀಲಯ್ಯ ಗನಸರಣ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಆವಾಗಲೀಗ ನೀಲೇಗೌಡ! ಮಾಯದ ಗೊಂಬೆ ಯಾವಾಗ ಒಡೆದನೋ! ಸಿರಸ ಬೇರೆ ಆಯಿತು! ಮುಂಡ ಬೇರೆ ಆಯಿತು! ಅಯ್ಯೋ ಸಿವನೇ ನನ್ನ ಮಡದೀಗೆ! ಈ ಭಾಗ್ಯ ಯಾರಿಂದ ಬಂತು! ಇಂತ ಐಸ್ವರ್ಯ ಯಾತರಿಂದ ಬಂತು! ಅಂತ ಅನ್ನದಾ ನಾ

ಒಂದೂ ಅವಳ ಕೇಳಲಿಲ್ಲವಲ್ಲಾ! ಆಲೋಚನೆ ಮಾಡಿ ತಳಾರದಲ್ಲಿ! ನಾನು ಅವಳನ್ನು ಕೇಳಲಿಲ್ಲಲ್ಲಾ! ಪಾಪಿ ನಾನು ಮಾಡಿದುದು ಸರ್ವತಾ ತಪ್ಪು! ಆಹಾ ಅನ್ಯಾಯದಲ್ಲಿ ಒಂದೇ ಏಟಿಗೆ! ನಾನು ಕೇಳದೆ ಮಾಡದೇ ಕೊಂದು ಬಿಟ್ಟೆನಲ್ಲಾ! ಈ ಜನ್ಮ ಯಾತಕ್ಕಾಗಿ ಇರಬೇಕು! ನನ್ನ ಮಡದಿ ಹೋದ ಮ್ಯಾಲೆ ನನ್ನ ಕತ್ತಿಗೆ ಕತ್ತಿಯನಾದರ ಮಡಗವನಲ್ಲಾ ನೀಲಯ್ಯಾ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮುನಿಗೆ!

ನನ್ನ ಪ್ರಾಣಾನೂ ನಾನೇ ಬಿಡಬೇಕು! ಇವಳ ಪಾದದಲ್ಲಿ ನಾನು ಇರಬಾರದು! ಬಾಕು ಮಚ್ಚು ತಕ್ಕಂಡು! ತನ್ನ ಸಿರಕ್ಕೆ ಮಡಿಕಂಡ! ಆಹಾ ಓಡಿ ಬಾ ಕಂದ! ನನ್ನ ಯಜಮಾನ ಪ್ರಾಣ ಕೊಂದಾಕತವನೆ! ಜಾಗ್ರತಿ ಇಲ್ಲ ಅವನ ಮುಂದೆ ಹೋಗಿ ನಿಂತ್ಕೋ! ನಮ್ಮಪ್ಪಾಜಿ ಮಾಯದಲ್ಲಿ ಹೇಳಿದ! ಓಡಿ ಬಂದು ಅವನ ಪಾದದಲ್ಲಿ ನಿಂತುಕೊಂಡವಳೇ ಪ್ರಾಣವ ನೀವು ಬಿಡಬೇಡಿ! ಯಜಮಾನನ ಪಾದ ತೊಳೆದಳಲ್ಲಾ ಸತ್ಯಬಾಮೆ ಸಂಕಮ್ಮ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮ್ಯಾಲೆ!

ಕೇಳಿ ಕೇಳಿ ಯಜಮಾನ್ರೇ! ಮಾಯದ ಗೊಂಬೆ ಮಾಡಿ ಬಾಗಿಲಲ್ಲಿ ನಿಲ್ಲಿಸಿದ್ದಿ! ಅದನ್ನು ಮಾತ್ರ ನೀವು ಕೊಂದಿದ್ದಿರೇ ಹೊರತು! ನನ್ನ ಮಾತ್ರ ನೀವು ಕೊಂದಿಲ್ಲ! ನಾನು ಪ್ರಾಣ ಬಿಟ್ಟಿಲ್ಲ ಪ್ರಾಣ ಬಿಡಬೇಡಿ! ಬಾಕು ಮಚ್ಚನ್ನು ದೂರ ಬೀಸಾಡಿ! ಪಾದವ ನೀವು ತೊಳೀಲೂಬೇಡ! ಮುಟ್ಟಲೂ ಬೇಡ! ದೂರ ಹೋಗೇ ಸಂಕೆಣ್ಣೆ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮುನಿಗೆ!

ನೀಲೇಗೌಡ ಒಂದು ಒಣ ಹುಣಸೆ ಕೊಂಬೆನೀಗ ತಂದ! ಜಾಲದ ಕಟ್ಟೆ ಏರಿ ಮ್ಯಾಲೆ! ಆ ಒಣ ಹುಣಸೆ ಕೊಂಬೆನೀಗ ನೆಟ್ಟುಬಿಟ್ಟ! ನಿನ್ನ ಧರ್ಮ ಇದ್ದರೆ! ನಿನ್ನ ಪತಿವ್ರತಾ ಧರ್ಮ ನಿನ್ನ ತಾವ ಇದ್ದರೆ! ನೀ ಸತ್ಯ ಶರಣೆಯಾದರೆ! ಗಂಗಾ ನೀರಿಗೋಗಿ ಸ್ನಾನ ಮಾಡಿಕೊಂಡು! ನಿನ್ನ ನೆತ್ತಿ ಮ್ಯಾಲೆ ಉರಿಸಂಗಿ ನಾಗರ ಹಾವು ಆಗಬೇಕು! ಆ ಉರಸಂಗಿ ನಾಗರ ಹಾವಿನ ಸಿಂಬಿ ಮ್ಯಾಲೆ! ನಿನ್ನ ಅರವಿ ಮಡಿಕೊಂಡು! ಆ ಒಣ ಹುಣಸೆ ಕೊಂಬೆಗೆ ಬಂದು! ನೀನು ಗಂಗನೀಗ ಬಿಟ್ಟಾಗ! ನಿನ್ನ ಸತ್ಯ ಇದ್ದರೆ ಅಲ್ಲಿ ಪಚಪಚನೆ ಚಿಗುರಾಗಿ! ಹೂವು ಕಾಯಾಗಿ! ಅದು ಹಣ್ಣಾಗಿ ಹಣ್ಣನ್ನು ತಂದು! ನನ್ನ ಪಾದಕ್ಕೆ ಒಪ್ಪಿಸಿದ್ರೆ! ಆಗ ಸತ್ಯವ ನಾನು ಒಪ್ತೀನಿ ಕೇಳು ಕೇಳೇ ಸಂಕೆಣ್ಣೆ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮುನಿಗೆ!

ಈ ರೀತಿಯಾಗಿ ಗಂಗಾ ನೀರಿಗೆ ಓಗಿ! ಸ್ನಾನ ಮಾಡಿಕೊಂಡಳು! ಸ್ನಾನ ಮಾಡಿ ಕೋಡು ಮಾದೇವ ಅಂದ್ಲೂ! ಓ ಕಂದ ನೀ ಹೆದರಬೇಡ ನಾನಿದ್ದೀನಿ! ಹಸಿ ಮರಳು ಗೋಪಿರ ಅರಿವೆ ಆಯ್ತು! ಮಾದೇವ ಅಂದ! ಉರಸಿಂಗಿ ನಾಗರ ಹಾವು ಆಗಿ ಬಂದು

ುಬಿ ಮ್ಯಾಲೆ ಕೂತುಕೊಂಡ। ಆ ಹಸಿ ಮರಳ ಅರಿವಿಯೊಳಗೆ। ಗಂಗನೀರ ಮೊಕ್ಕಂಡು।
ಸಿಂಬಿ ತಲೆಮ್ಯಾಲೆ ಮಡೀಕಂಡು। ಕಿಲಕಿಲನೆ ಹಣೆ ತುಂಬಾ ಅರಸಿನ ಕುಂಕುಮ
ಟ್ಕಂಡು। ಮುಡಿ ತುಂಬಾ ಮಲ್ಲಿಗೆ ಹೂವು ಮುಡಿಕೊಂಡು। ಆಗ ಒಂದು ಒಣ
ಬನ್ನುಣಸೆ। ಕೊನೆಗೆ ನೀರು ಬಿಟ್ಟಳು। ಪಲಾಪಲನೆ ಚಿಗುರು ಒಡೆಯಿತು। ಹೂವಾಯಿತು
ಾಯಾಯಿತು ಹಣ್ಣಾಯಿತು। ಆ ಹಣ್ಣ ತಂದು ಯಜಮಾನನ ಪಾದದ ಮುಂದೆ
ಎಡಗಿದಳು। ನನ್ನ ಸತ್ಯವ ಈಗ ಒಪ್ಪಳ್ಳಿ। ಈಗ ನೀವು ಕಾಡು ಸ್ವಾಲಿಗ ನೀಲಯ್ಯ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಅವಾಗಲೀಗ ನಮ್ಮಪ್ಪಾಜಿ ಏಕಾಂಗಿವಸ್ತು। ಏಳು ಮಲೆ ಕರ್ತೃ। ಮಾಯಕಾರ
ಏರಿದೇವರು। ಆದರೆ ಇನ್ನಾವ ಸತ್ಯ ಮಾಡಿಸ್ತಾನೋ ನೋಡಬೇಕು ಅಂತೇಳಿ। ಮಡದಿ
ಾದ್ರೆ ತುಂಬಿದ ಅಮಾವಾಸ್ಯೆ ದಿವಸ। ಕಲ್ಲು ನೀರು ಕರ್ಗ್ಹೋ ಹೊತ್ತಿನಲ್ಲಿ। ಸಪ್ಪಟ ಸರಿ
ಾತ್ರಿಯಲ್ಲಿ ಕರ್ಕಂಡೋಗಿ। ನಿನ್ನ ಕೂರಿಸಿಬಿಟ್ಟು ಬರ್ತೀನಿ। ವತಾರೆ ನೀರನ್ನು ತರಬೇಕು
ಾಂದ್ರೆ। ಆದರೆ ಮಣ್ಣಿನಲ್ಲಿ ಗಡಿಗೆ ಮಾಡಕೂಡದು। ಸಣ್ಣ ಮರಳಲ್ಲಿ ಏಳು ಗಡಿಗೆ
ಮಾಡಬೇಕು। ನಿಂತ ನೀರ ತುಂಬಕ್ಕಿಲ್ಲ। ಹರಿಯೊ ನೀರ ತುಂಬಕ್ಕಿಲ್ಲ। ಮಳೆ ಹೊಯ್ದು
ೀರು ತುಂಬಕ್ಕಿಲ್ಲ। ಬೆಳಗಿನ ಜಾವದಲ್ಲಿ ಆ ಮಂಜಿನಲ್ಲಿ ಏಳು ಗಡಿಗೆ ಬರ್ಶಿ
ಮಾಡಿಕೊಂಡು। ಏಳು ತಲೆ ಸರ್ಪದ ಸಿಂಬಿ ಸುತ್ತಿಕೊಂಡು। ಏಳು ಹೆಡೆ ಮ್ಯಾಲೆ ಏಳು
ಡಿಗೆ ಮಡಿಕ್ಕೊಂಡು। ತಕ್ಕಂಬಂದು। ನನ್ನ ಪಾದಕ್ಕೆ ಒಪ್ಪಿಸಿದ್ದೇ ಉಂಟಾದ್ರೆ। ನಿನ್ನ
ಸತ್ಯಾನೂ ಮಾದೇವನ ಸತ್ಯನೂ ಒಪ್ತೀನಿ। ಸರಿಯಾ ಎಣ್ಣೆ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮುನಿಗೆ।

ಹರನೀಗೆ ದುಃಕ್ಕ ಶಿವನಿಗೆ ಸೋಕ ಮಾಡುವಂತ ಕಾಲದಲ್ಲಿ। ಆಹಾ ಹೆಣ್ಣು ಮಗಳು
ಧರೆ ಮೇಲೆ ಕಣ್ಣೀರು ಮಡಗ್ತಾ ಅವಳಲ್ಲ। ಅವಳ ಕಣ್ಣೀರು ಧರೇ ಮೇಲೆ ಬಿದ್ದದ್ದೇ
ಉಂಟಾದ್ರೆ। ಅಗ್ಗಮ್ಮ ಅರಿಯಾಗ್ತಳೆ। ಗಂಗಾದೇವಿ ಮರೆಯಾಯ್ತಳೆ। ಆಡಿದ ಮಾತು
ಕಟ್ಟದಲ್ಲಿ ನಡೆದಾರಿ ಸವೆಯೋದಿಲ್ಲ। ಮಳೆ ತಪ್ಪೋಯ್ತದೆ। ಭೂಮಿಲಿ ಬೆಳೆ ತಪ್ಪೋಗ್ತದೆ.
ನಾರಾಯಣನಿಗೆ ನಾಮಸೇವೆ ಇಲ್ಲ। ಶಿವನಿಗೆ ಶಿವ ಪೂಜೆ ತಪ್ಪೋಗ್ಬುಡ್ತದೆ। ಅಂತೇಳಿ
ದಮ್ಮಯ್ಯ। ಆದರೆ ಎದೆ ಚಿಜ್ಜಿಲಿಂಗ ತೆಗೆದು। ಈಚೆಗೆ ಬುಟ್ಟುಟ್ರಂತೆ। ಚಂದ್ರ ಯಾವ
ಪ್ರಕಾಸ ಕೊಡ್ತಾನೋ ಅದೇ ಪ್ರಕಾಸವಾಗ್ಬುಡ್ತಂತೆ। ಮೂರು ಚೋಟುದ್ದ ಮುಹೂರ್ತವಾಗಿ।
ಅಯ್ಯೋ ಯಜಮಾನ ನಿಂತವ್ರಲ್ಲೋ ಮಾಯಕ್ಕಾರ ಮಾದೇವ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮುನಿಗೆ।

ಇದೇ ಪ್ರಕಾರವಾಗಿ। ದೇವ ನಮ್ಮಪ್ಪಾಜಿ ಏಕಾಂಗಿ ವಸ್ತು। ಯಾಕ್ ನನ್ನ ಕಂದ
ದುಕ್ಕ ಮಾಡಬ್ಯಾಡ। ನಿನ್ನ ಕೈ ಮುಟ್ಟಿ ಏಳು ಮರಳುಗುಡ್ಡ ಮಾಡ್ಬಿಟ್ಟು। ಒಂದು ಕಡೆ
ಮಲಿಕ್ಕಂಡು। ನಿದ್ದೆ ಮಾಡಮ್ಮ ಅಂತೇಳಿ। ಅವಳ ಕೈನಲ್ಲಿ ಏಳು ಮರಳು ಗುಡ್ಡೆ

ಮಾಡಿಸ್ಬುಟ್ಟು। ಒಂದು ಮಾಯದ ಬೇಳ್ಮೆ ಬೂದಿ ಉರುಬಿದರಂತೆ। ಏಳು ಮರಳು ಗಡಿಗೆ ಅದ್ದಂತೆ। ಆದರೆ ದೇವೇಂದ್ರನ್ನ। ಮಾಯದಲ್ಲಿ ಕರೆದ್ರಂತೆ। ಏನಪ್ಪಾದೇವೇಂದ್ರ। ನನಗೆ ಬಂದ ಕಷ್ಟ ನಿನಗೆ। ನಿನಗೆ ಬಂದ ಕಷ್ಟ ನನಗೆ। ಈ ಏಳು ಮರಳು ಗಡಿಗೆಗೂ ಮಂಜು ತುಂಬಿ ಏಳುತಲೆ ಸರ್ಪ ಸುತ್ತಿಕೊಂಡು ಬಂದ್ರಂತೆ।

ಒಂಬತ್ತು ತಿಂಗಳ ಗರ್ಭಿಣಿ। ಅಸ್ಲೋ ಉಸ್ಲೋ ಅಂತೇಳಿ। ಬಲಮಗ್ಗುಲಾಗಿ ಮೇಲ್ಕೆದ್ದು ಕೂತ್ಕಂಡಳು ಯಜಮಾನ। ನಿನ್ನ ಪಾದ ಒತ್ತೇನು ದಮ್ಮಯ್ಯಾ। ನನ್ನ ಪ್ರಾಣ ಹೋದ್ರೂ ಪೋಗ್ಲಿ ಯಜಮಾನ। ಇನ್ನು ಇದೊಂದು ಉದ್ಧಾರ ಮಾಡಬೇಕು ಎಂದ್ರು। ಥೇ ಕೆಟ್ಟ ಮುಂಡೆ ಮಗಳೇ। ನನಗೇನು ಮಕ್ಕಳು ಹುಟ್ಟಲಿಲ್ಲ। ಆರು ತಿಂಗಳು ಬಿಟ್ಟೂ ಹೋಗಿದ್ದೀ। ನಿನ್ನ ಆರು ತಿಂಗಳು ಬರೋವತ್ತಿಗೆ ಗರ್ಭಿಣಿಯಾಗಿದ್ದಿ ಮಡದಿ। ಮಾದಪ್ಪ ಮಾದಪ್ಪ ಅಂತೇಳಿ। ಕಾಡು ಜಂಗಮನನ್ನು ಕೂಡುಕೊಂಡಿದ್ದೀಯ। ಕೆಟ್ಟ ಮುಂಡೆಮಗಳೇ। ಇವತ್ತಿನ ರಾತ್ರಿ ಸತ್ಯ ಮಾಡದೇ ಪೋದ್ರೆ। ಹಿಜ್ಜೇನು ಕತ್ತಿಲಿ ನಿನ್ನ ತುಂಡೆರೆಡು ಮಾಡ್ತೀನಿ। ಯಾರು ಸಪೋರ್ಟ್ ಜನರ ಕೊಡ್ತಾರೆ ನಿನಗೆ। ಕಾಡು ಕಟ್ಟವ್ನು ನೋಡು ಕಟ್ಟವ್ನು। ಯಂತ್ರಗಾರ ಮಂತ್ರಗಾರ। ಬರ್ತಾರೆ ನನ್ನ ಕಾಣದಾಗೀ। ಅದರಿಂದ ಗೆಲ್ತಾ ಇದ್ದೀಯಾ। ಇವತ್ತು ಅರಮನೆ। ಒಳಗೆ ನಿನ್ನ ಸತ್ಯ ಮಾಡಿಸ್ತೀನಿ ಅಂದ್ರು। ಯಜಮಾನ। ಒಂಬತ್ತು ಮಾಸ ತುಂಬೋಗ್ತುಡ್ತು। ನಾಳೆ ಬೇಕಾದ್ರೆ ಹೇಳ್ದಾ ಸತ್ಯ ಮಾಡ್ತೀನಿ। ಹೇಳ್ದಾ ಸತ್ಯಕ್ಕೆ ಒಳಗಾಗುತ್ತೀನಿ ಅಂದಳು।'

ಆವಾಗಲೀಗ ಸರಣೆ ಸತ್ಯವಂತೆ ಸಂಕಮ್ಮನಿಗೆ ನವಮಾಸ ತುಂಬೋಗ್ಬುಡ್ತು। ಹೆರಿಗೆ ಹೊಟ್ಟೆ ನೋವು ಕಂಡೋಗ್ಬುಡ್ತಂತೇ। ಅಯ್ಯೋ ಪರಮಾತ್ಮ ಈ ಅಡವಿ ಅರಣ್ಯ ಗೋರಾರಣ್ಯದಲ್ಲಿ। ನನ್ನ ಯಾಕ ಅಸ್ಸೋವ್ರು। ನನ್ನಂತ ಹೆಣ್ಣು ಪ್ರಾಣಿಯನ್ನು। ಒಂದು ನೋಣವಾದರೂ ಇಲ್ಲವಲ್ಲ ಶಿವನೇ ಏನು ಗತಿ ಮಾಡಬೇಕೆಂಬುದಾಗಿ। ನೀ ಎಲ್ಲಿದ್ದೀಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಸಬಾಸ್ ಸಿವಸಿವ। ಮೂರನೇ ಕಣ್ಣೀರು ಧರೆ ಮ್ಯಾಲೆ ಆಕ್ಬುಟ್ಲಂತೆ। ಆ ಕಣ್ಣೀರು ಅಂತಕ್ಕಂತಾದ್ದು। ಎಲ್ಲಿಗೆ ಅರಿವಾಯಿತು ಅಂದ್ರೆ। ಏಳು ಮಲೆ ಕೈಲಾಸಕ್ಕೆ। ಒಳ್ಳೆ ಅರಿವಾಯ್ತಲ್ಲೋ ಕಣ್ಣೀರು।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮುನಿಗೆ।

ಈ ಏಳು ಮಲೆ ಕೈಲಾಸದಲ್ಲಿ। ನಮ್ಮಪ್ಪಾಜಿ ಇಷ್ಟೆಲ್ಲಾ ಕಷ್ಟ ಕಾದು। ಈ ಕಷ್ಟ ನಾನು ಕಾಯ್ದಿದ್ದ ಮೇಲೆ ಸಾರ್ತಕವೇನು ದಮ್ಮಯ್ಯ। ತಾಳುಬೆಟ್ಟಕೆ ಬಂದವರೇ ಭಾಗ್ಯ ಕೊಟ್ಟವರು ಇವರೇ। ನನ್ನ ಕಷ್ಟವೆಲ್ಲಾ ಪರಿಹಾರ ಮಾಡ್ಬುಟ್ಟು। ಬಾಗ್ಯ ಕೊಟ್ಬುಟ್ಟು। ನನ್ನ ಮಕ್ಕಳಿಗೆ ಫಲ ಕೊಟ್ಟವ್ರು ಇವರೇ। ಯಜಮಾನ್ರೇ ಈಗಲಾದ್ರೂ ನನ್ನ ಸತ್ಯ ಒಪ್ಪಳಿ

ಅಂದ್ಲು! ಹೆಣ್ಣೇ ನಿನ್ನ ಸತ್ಯ ನಾನು ಒಪ್ಪಿದೆ। ನಿನ್ನ ಪತಿವ್ರತಾ ಧರ್ಮ ಬಿಟ್ಟಿಲ್ಲ! ನೋಡಿದ ಮಹಾಪ್ರಭು ಮಾಯಕಾರ ನಿಂತಿದ್ದಾರೆ! ಬಾಗಲಿಲ್ಲ! ಆಗ ಮಾದೇವನ ಗ್ನಾನ ಮಾಡಿದಳಲ್ಲಾ ಸತ್ಯವಂತೆ ಸಂಕಮ್ಮ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮ್ಯಾಲೆ।

ಮೂಕಳ್ಳಿ ಮಾರಮ್ಮನ ಕರೆದವರೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ತಾಳು ಬೆಟ್ಟಕೆ ಬಂದು! ಮೂಕಳ್ಳಿ ಮಾರಮ್ಮನ ಕರೆದು! ಅವರಿಕೆ ಚಪ್ಪೆ ಮುರಿದು! ಬಲಗ್ಗೆಲಿ ಹಿಡ್ಕಂಡು! ಅಯ್ಯಾ ಮೂಕಳ್ಳಿ ಮಾರಮ್ಮನ ಕರೆದವನೇ। ಒಳ್ಳೆ ಮೂರು ಎಳೆತವ ಎಳೆದವನೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮುನಿಗೆ।

ಆ ಮೂರು ಎಳೆತ ಎಳೆದಂತ ಕಾಲದಲ್ಲಿ! ಅಣ್ಣಯ್ಯಾ ಅಣ್ಣಯ್ಯಾ ಸಿರಸಾ ವಹಿಸಿ ಮಾಡ್ತೀನಿ! ಏನು ಮಾಡಬೇಕಣ್ಣಯ್ಯ ದಮ್ಮಯ್ಯ। ಕೇಳು ನನ್ನ ಕಂದ ಮೂಕಳ್ಳಿ ಮಾರಿ। ನಿನಗೆ ಬಂದ ಕಷ್ಟ ನನಗೆ। ನನಗೆ ಬಂದ ಕಷ್ಟ ನಿನಗೆ। ನನ್ನ ಏಳು ಮಲೆ ಕೈಲಾಸಕ್ಕೆ ಬರೋವಂತ ಪರಿಸೆ ಕೈನಲ್ಲಿ! ತಾಳುಬೆಟ್ಟ ಹತ್ತುವುದಕ್ಕೂ ಮುಂಚಿತವಾಗಿ! ಆಹಾ ಕಾಸಿನ ರೂಪ ಹಾಕಿ। ಕರವೆತ್ತಿ ಕೈ ಮುಗೀತಾ ಇದ್ದೀನಿ। ಈ ಅಡವಿ ಅರಣ್ಯದಲ್ಲಿ! ಹೆಣ್ಣು ಮಗಳಿಗೆ ಮೂರು ಮಕ್ಕಳ ಸಂತಾನ ಕೊಟ್ಟು ಬಂದಿವ್ನಿ। ಈಗ ಅವಳಿಗೆ ಪ್ರಸವದ ವ್ಯಾಳೆ ಬಂದೋಗ್ಬುಡ್ತು! ಈ ಹೆರಿಗೆಗೆ ನೀನು ಹೋಗಿ। ಸೂಲಗಿತ್ತಿ ವ್ಯಾಸ ತಾಳಕೊಂಡು। ಹೋಗಿ ಹೆರಿಗೆ ಮಾಡಿಬಿಟ್ಟು! ಹನ್ನೊಂದು ದಿವಸ ಇದ್ದು ಸೂತಕ ತೆಗೆದುಬಿಟ್ಟು! ಆ ಮಕ್ಕಳಿಗೆ ನಾಮಕರಣ ಮಾಡಿಬಿಟ್ಟು! ನನಗೆ ಏನು ಹೇಳ್ತಾರೆ ನನಗೆ ಬಂದು ಒಪ್ಪಿಸಬೇಕು ಅಂತೇಳಿ। ಅಯ್ಯಾ ಬೇಗನೆ ಬುದ್ಧಿ ಹೇಳಪ್ಪೆ। ಒಳ್ಳೇ ಮೂಕಳ್ಳಿ ಮಾರಮ್ಮನ ಕಳುಗವ್ರೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲ ಮುನಿಗೆ।<br>
ಬಣ್ಣ ಉಟ್ಟವಳೇ। ತಾಯಿ ಬಳೆಗಳ ತೊಟ್ಟವಳೆ।<br>
ಕಣ್ಣು ಮಣಿ ಕಾಲುಂಗರದವಳೆ ಮೂಕಳ್ಳಿ ಮಾರಿ।

ಅವಾಗಲೀಗ ಮೂಕಳ್ಳಿ ಮಾರಮ್ಮ ಬರೋವಷ್ಟರಲ್ಲಿ ಸಂಕಮ್ಮನ ಹೊಟ್ಟೆ ಒಳಗೆ। ಆದರೆ ಮಕ್ಕಳು ಒಡದು ಮಾತಾಡವ್ರಂತೆ। ಯಾವ ರೀತಿ ಮಾತಾಡ್ತವರೆ ಅಂದ್ರೆ। ನಮಗೆ ಬರೋವಕ್ಕೆ ಸ್ಥಳವಾ ತೋರವ್ವ। ನಮ್ಮ ಜನ್ಮಿಸಿದಂತಾ ತಾಯವ್ವಾ!

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮುನಿಗೆ।

ಅಯ್ಯಯ್ಯೋ ಪರಮಾತ್ಮ। ನಮ್ಮಪ್ಪಾಜಿ ಮನೆ ದೇವರು। ನನಗೆ ಎಂಥ ಮಕ್ಕಳ ಕೊಟ್ಟರೋ ಗೊತ್ತಿಲ್ಲವಲ್ಲ ಸಿವನೇ। ನನ್ನ ಹೊಟ್ಟೆ ಒಳಗೆ ಒಡೆದು ಮಾತಾಡ್ತಾವ್ರೆ।

ಏನಪ್ಪಾ ನನ್ನ ಕಂದಗಳಿರಾ। ಆದರೆ ಪ್ರಪಂಚದಲ್ಲಿ। ಎಲ್ಲರೂ ಯಾವ ರೀತಿ ಬರ್ತಾರೋ। ನೀವು ಅದೇ ರೀತಿ ಬನ್ರಪ್ಪಾ। ಕೇಳು ತಾಯಿ ನಾಟು ಕೋಟಿ ಒಳಗೆ ಬಂದ್ರೆ। ನಾವು ಏಳುಮಲೆ ಕೈಲಾಸಕ್ಕೆ ಸಲ್ಲೋದಿಲ್ಲ। ನಿನ್ನ ಬಾಯೊಳಗೆ ಬಂದ್ರೆ ಎಂಜಲಾಗ್ಬುಡ್ತಿವಿ। ಮೂಗಿನಲ್ಲಿ ಬಂದ್ರೆ ಮುಸುರೆ ಆಗ್ಬಿಡ್ತೀವಿ। ಕಿವಿ ಒಳಗೆ ಬಂದ್ರೆ ಗುಗ್ಗೆ ಅಂತ ಕರೀತಾರಲ್ಲಮ್ಮ। ಕಣ್ಣಲ್ಲಿ ಬಂದೆವಾ। ಆ ನನ್ನ ಕಂದ ಜಿಬುರು ಜಿಬುರು ಅಂತಾರಲ್ಲಮ್ಮ। ಆದರೆ ಇನ್ನೆಲ್ಲೋ ನನಗೆ ಗೊತ್ತಿಲ್ಲ। ನನ್ನ ಕಂದಗಳಿರಾ। ನಿಮ್ಮ ಇಷ್ಟ ಎಲ್ಲಿ ಬರ್ತ್ತವೋ ಅಲ್ಲಿ ಬರಬಹುದು ಅಂದ್ರು। ಕೇಳು ತಾಯೆ ಆದ್ರೆ ಬೆನ್ನು ಮಚ್ಚದಲ್ಲಿ। ಎಳ್ಳು ಅಗಲ ಜಾಗ ಕೊಟ್ಟಿದ್ದೇ ಆದರೆ ಬರ್ತೀನಿ ಕಣಮ್ಮಾ। ಹಾಗೇ ಬನ್ನಿಯಪ್ಪಾ ಅಂದವಂತೆ। ಬೆನ್ನ ಮಚ್ಚದಲ್ಲಿ ಚಿಳ್ಳುಗಿರಿನಲ್ಲಿ ಸೀಳಿಕೊಂಡು ಬರೋದಕ್ಕೂ। ಮೂಕಳ್ಳಿ ಸೂಲಗಿತ್ತಿ ಯಾಸದಲ್ಲಿ ಹತ್ತಿರಕ್ಕೆ ಬರೋದಕ್ಕೂ ಸರಿ ಹೋಯಿತು। ಅವರಿಬ್ಬರು ಮಕ್ಕಳನ್ನು ತಕ್ಕಂಡು। ಬಾಳೆ ಎಲೆ ಹಾಸಿ। ಮೂಕಳ್ಳಿ ಮಾರಮ್ಮ ಬೇರೆ ಮಲಗಿಸಿದ್ಲಂತೆ ಕಡೆ ಒಳಗೆ ಚಾಟು ಕೋಟಿ ಒಳಗೆ ಬಂದಂತ ಮಲ್ಲಣ್ಣ ಅಂತಕ್ಕವನು। ಆ ಮಗುವನ್ನು ಸಂಕಮ್ಮನ ತೊಡೆಮ್ಯಾಲೆ ಕೊಟ್ಲಂತೆ। ಆದ್ರೆ ಅವನು ಎದೆ ಹಾಲು ಊಟ ಮಾಡಿದ್ವಂತೆ। ಇವರಿಬ್ರೂ ಎದೆ ಹಾಲು ಊಟ ಮಾಡ್ತಿರಲಿಲ್ಲವಂತೆ। ಹನ್ನೊಂದು ದಿವಸ ಇದ್ದು। ಮೂಕಳ್ಳಿ ಮಾರಮ್ಮ ಸೂತಕ ತೆಗೆದುಬಿಟ್ಟು। ಆದರೆ ಬೆನ್ನು ಮಚ್ಚೆಯಲ್ಲಿ ಹುಟ್ಟಿದವರಿಗೆ ಕಾರಯ್ಯ ಬಿಲ್ಲಯ್ಯ ಅಂತ ನಾಮಕರಣ ಮಾಡಿಬಿಟ್ಟು। ಕಡೆವೊಳಗೆ ಹುಟ್ಟಿದಂತಾ ಮಗನಿಗೆ ಮಲ್ಲಯ್ಯ ಅಂತ ಹೆಸರ ಕಟ್ಟಿಬಿಟ್ಟು। ಅಯ್ಯಾ ಮೂಕಳ್ಳಿ ಮಾರಮ್ಮ ಹೋಯ್ತಾ ಅವಳೆ। ಒಳ್ಳೆ ವರದಿಯನ್ನು ಒಪ್ಪಿಸವಳೇ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಸಂಕಮ್ಮ ಏನೀ ಯಜಮಾನ ನಮ್ಮಪ್ಪನ ಮನೆ ಮಾದೇವ' ಮಕ್ಕಳ ಪಾಪಕ್ಕೆ ಹೋಗ್ತಾ ಅವ್ರೆ ಅಂತೇಳಿ। ಮನೆ ಕೋಣೆ ತಾರಿಸಿ। ಸುದ್ದಿ ಮಾಡಿಕೊಂಡು ಮಿಂದು ಮಡಿಯುಟ್ಟು। ಅವರ ಪಾದ ತೊಳ್ಕಂಡು ಬರ್ತೀನಿ। ಮಕ್ಕಳನ್ನು ನೋಡಿಕೊಳ್ಳಿ ಅಂತೇಳಿ ಮಕ್ಕಳನ್ನು ಮಲಗಿಸಿಬಿಟ್ಟು ನೀರಿಗೋದ್ಲಂತೆ। ಆ ತಿರಿಕ್ಕಂಡು ತಿನ್ನ ಜಂಗಮಯ್ಯನಿಗೆ। ಆ ಮಕ್ಕಳನ್ನು ಕೊಡಬೇಕು ಅಂತವಲ್ಲ। ಆರು ಮೂರು ಒಂಬತ್ತು ತಿಂಗಳು ಹೊತ್ತು। ಅವನ್ನು ಇವಳು ಎಂಗೆ ಕೊಟ್ಟಾಳು। ಅವನು ಎಂಗೆ ತಕ್ಕೊಂಡೋಗ್ತಾನೋ ನೋಡಬೇಕು ಅಂತೇಳಿ। ಮೂರು ಮಕ್ಕಳನ್ನು ಕರಿ ಕಂಬಳಿಗೆ ಗೊಪ್ಪ ಹಾಕ್ಕಂಡು। ಅಯ್ಯಾ ಕಾಡು ಪೋಡಿಗೆ ಹೋಯ್ತವನಲ್ಲೋ। ಕಾಡು ಸೋಲಿಗರ ನೀಲಯ್ಯ।

ಆಹಾ ಕ್ವಾರಣ್ಣ ನೀಡಮ್ಮ ವೀರತ್ತ ಮುನಿಗಳಿಗೆ।

ಅವಾಗಲೀಗ ಅಡವಿ ಅರಣ್ಯಕ್ಕೋಗಿ। ಕಲ್ಲುಗವಿ ಒಳಗೆ ಮಕ್ಕಳನ್ನು ಮಲಗಿಸಿಬಿಟ್ಟು। ಮಕ್ಕಳ ಮ್ಯಾಲೆ ಬಾಣಲಿ ದಬ್ಬಾಕ್ಬುಟ್ಟು। ಬಾಣಲಿ ಮೇಲೆ ತಾನು ಕೂತಕಂಡನಂತೆ।

ನಮ್ಮಪ್ಪಾಜಿ ದಿವ್ಯ ದೃಷ್ಟಿಯಲ್ಲಿ ನೋಡಿದರಂತೆ। ಇರಲೀ ಮುಂಡೇ ಮಗನೇ ನಿನ್ನ ಅಹಂಬಾವ ಅಡಗಿಸ್ತೀನಿ ಅನ್ಸುಟ್ಟು। ಎಪ್ಪತ್ತೇಳು ಹುಲಿಗಳನ್ನೆಲ್ಲಾ। ತಪ್ಪದೆ ಕರದಾ ಮಾದೇವಾ।

ಆಹಾ ಕ್ವಾರಣ್ಯ ಒಪ್ಪಿಸಿಕೊಳ್ಳಿ ಮಾದೇವಾ

ಅವನ್ನ ಕಟ್ಟಬ್ಯಾಡಿ। ಕಡೀಬ್ಯಾಡಿ। ಮುಟ್ಟಬ್ಯಾಡಿ ಮೂಸಬ್ಯಾಡಿ। ಈ ಕಡೆಯಿಂದ ಆ ಕಡೆ ನೆಗೀಬೇಕು। ಆ ಕಡೆಯಿಂದ ಈ ಕಡೆ ನೆಗೀಬೇಕು। ಆರ್ಭಟ ಮಾಡಿ। ಆದರೆ ಅವನು ತಪ್ಪು ಕಾಣಿಕೆ ಕೊಟ್ಟೋವರೆಗೂ ಬಿಡಬಾರದು। ತಪ್ಪು ಕಾಣಿಕೆ ಕಟ್ಟಂಡ ಮ್ಯಾಲೆ। ಮಾಯದಲ್ಲಿ ಬಂದು ಬಿಡಬೇಕು। ಅಂತೇಳಿ ಎಪ್ಪತ್ತೇಳು ಹುಲಿಯನ್ನೂ ತಪ್ಪದೇ ಕಳಿಸವ್ರೇ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮ್ಯಾಲೆ।

ಯಾವಾಗ ಎಪ್ಪತ್ತೇಳು ಹುಲಿಗಳು ಬಂದ್ವೋ। ಈ ಮಕ್ಕಳ ಮನೆ ಮಾಳತ್ವಾಗ। ಈ ಮಕ್ಕಳಿಂದ ನನ್ನ ಗಟ ಕಳೆದುಕೊಳ್ಳಬೇಕಲ್ಲಾ ಅಂತೇಳಿ। ತಣಾರ್ ಅಂತ ಮರಕ್ಕೆ ನೆಗೆಯೋದಕ್ಕೆ ಹೋದ್ನಂತೆ। ಆ ಮರದ ಮ್ಯಾಲೆ ಬಾಲ ಅಲ್ಲಾಡಿಸ್ತಾ ಕೂತಿತ್ತಂತೆ। ಓಹೋ ಇದು ಮಾಯಕ್ಕಾರನೇ ಹೊರತು ಬೇರೆ ಯಾರದೂ ಅಲ್ಲ। ನಾ ತಪ್ಪಿದೆ ಸ್ವಾಮಿ ನಿನ್ನ ಮಕ್ಕಳ ನಿನಗೆ ಕೊಟ್ಟುಬುಡ್ತೀನಿ ಅಂತೇಳಿ। ಮೂರು ಕಾಸೆತ್ತಿ ತಪ್ಪು ಕಾಣ್ಕೆ ಕಟ್ಟಿದ್ನಂತೆ। ಎಪ್ಪತ್ತೇಳು ಹುಲಿಗಳನ್ನೆಲ್ಲಾ ತಪ್ಪಾದೆ ಮಾಯ ಮಾಡವರೇ।

ಆಹಾ ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮ್ಯಾಲೆ।

ದೇವ ಸ್ವಾಲಿಗ ನೀಲೇಗೌಡ ಆ ಮಕ್ಕಳನ್ನು ಮೂರನ್ನು ತಕ್ಕಂಡು ಬಂದು। ಮನೇಲಿ ಮಲಗಿಸಿಬುಟ್ಟಂತೆ। ಇದೇ ನನಗೆ ಒಳ್ಳೆ ವ್ಯಾಳೆ. ದಂಪತಿಗಳ ಸಮೇತವಾಗಿ ಅವರೆ ಅಂತೇಳಿ। ಕ್ವಾರಣ್ಯ ಸಾರವರಲ್ಲೋ ಮಾಯಕಾರ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮ್ಯಾಲೆ।

ಪನ್ನೀರು ಗಿಂಡಿ ತಕ್ಕಂಡು ಬಂದು ಪಾದ ತೊಳೆದು ಪಟ್ಟಾಭಿಷೇಕ ಮಾಡಿ। ಗಂಡ ಕಾರಯ್ಯನ್ನ ಎತ್ತಂಡ್ನಂತೆ। ಹೆಂಡ್ತಿ ಬಿಲ್ಲಯ್ಯ ಎತ್ತಕಂಡು। ಮಕ್ಕಳ ದಾನ ಕೊಡ್ತಾವಳಲ್ಲೋ ಸತ್ಯವಂತೆ ಸಂಕಮ್ಮಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ಕೇಳು ನನ್ನ ಕಂದ ಸಂಕಮ್ಮ। ಆದರೆ ಇವರಿಬ್ಬರು ಮಕ್ಕಳನ್ನು ನಾನು ಕದ್ಕಂಡೊಯ್ತೀನಿ। ಕಡೇವೊಳಗೆ ಹುಟ್ಟವನಲ್ಲ ಮಲ್ಲಣ್ಣ। ಅವನನ್ನು ಮಾತ್ರ ನಿನ್ನ ವಂಸೋದ್ಧಾರಕ್ಕೆ ಮಡಿಕೋ ಅಂತೇಳಿ। ಆತನನ್ನು ಅವರ ವಸಕ್ಕೆ ಬುಟ್ಟು ಬುಟ್ಟು। ಈ ಕಾರಯ್ಯ ಬಿಲ್ಲಯ್ಯ ಅಂತಕ್ಕಂತ

ಇಬ್ಬರು ಮಕ್ಕಳನ್ನು ಕರಕೊಂಡು। ನಮ್ಮಪ್ಪಾಜಿ ಏಕಾಂಗಿ ವಸ್ತು। ಏಳು ಮಲೆ ಕರುತು। ಆವಾಗಲೀಗ ಪರಮಾತ್ಮ। ಏಳು ಮಲೆ ಕೈಲಾಸಕ್ಕೆ ಹೋಯ್ತಾವ್ರಲ್ಲೋ ಮಾದೇವ।

ಏಳು ಮಲೆ ಕೈಲಾಸದಲ್ಲಿ ಹೋಯ್ತಾ ಹೋಯ್ತಾ। ಏನು ಎಚ್ಚರ ಮಾಡ್ತವ್ರೆ ಅಂದ್ರೆ। ಆದರೆ ನಾನು ಸರಿಯಾದ ಸೇವೆ ಭಕ್ತರ ಪಡೆದಿದ್ದೇನೋ ಇಲ್ಲ್ವೋ ನೋಡಬೇಕು। ಇವರ ಸತ್ತ ದೃಡ ನಿಜ ಭಕ್ತಿ ತಿಳೀಬೇಕು ಅಂತೇಳಿ। ಕೀವು ಕಂಡ ಮೈ ಕಡಿಸ್ಕಂಡು। ಹೆಗ್ಗಜ್ಜಿ ತುರುಗಜ್ಜಿ। ಕಜ್ಜಿ ಮ್ಯಾಲೆ ಕಜ್ಜಿ। ಕೀವು ರಕ್ತ ಹರಿಸ್ಕಂಡು। ಕೊಳದ ಏರಿ ಮ್ಯಾಲೆ ಕೂತ್ಕಂಡು। ಏನಪ್ಪಾ ನನ್ನ ಕಂದಗಳಾ। ಮೈ ಕಡೀತದೆ ಸ್ವಲ್ಪ ಮೈ ಕೆರೀರಿ ಅಂದ್ರಂತೆ। ಇಬ್ಬರು ಮಕ್ಕಳು ಮೈಕೈನ ಪರಪರ ಕೆರೆದ್ರಂತೆ। ಕೈಗೆ ಕೀವು ರಕ್ತ ಮೆತ್ಕಂಬುಡ್ತು, ಇದೇ ನನಗೆ ವ್ಯಾಳೆ। ಇವರ ಸತ್ತ ನೋಡೋದ್ಕೆ ಅಂತೇಳಿ। ಬಾಳ ನೀರಿನ ದಾವು ಕೊಟ್ರಂತೆ। ಏನು ದೇವ ಗುರುದೇವ ಬಾಳ ದಾವಾಯ್ತದೆ। ನೀರು ಕುಡೀಬೇಕು ಅಂತೇಳಿದ್ರಂತೆ। ಸಬಾಸ್ ನನ್ನ ಕಂದಗಳಿರಾ। ಆದರೆ ನೀನು ಈ ಕೆಳಗಿನ ಕಟ್ಟೆಗೋಗಿ ಕುಡಿ। ಅಂದ್ರಂತೆ। ಇಬ್ಬರೂ ಹೋಗಿ ಕೈ ತೊಳೀಲೂ ಇಲ್ಲಂತೆ। ಆ ರಕ್ತ ಕೀವಿನ ಕೈಲೇ ಮೂರು ಮೂರು ಬೊಗಸೆ ನೀರೆತ್ತಿ ಕುಡಿದು ಬಿಟ್ರಂತೆ। ಸಬಾಸ್ ನನ್ನ ಕಂದಗಳಿರಾ ನಿಮ್ಮ ಸತ್ವಕ್ಕೆ ಮೆಚ್ಚಿದೆ ಅಂತೇಳಿ। ಅದು ಕಾರಯ್ಯನ ಕಟ್ಟೆಯಾಗಲಿ। ಇದು ಬಿಲ್ಲಯ್ಯನ ಕೊಳವಾಗಲಿ। ಅಂತೇಳಿ ನಾಮಕರಣ ಮಾಡಿಬಿಟ್ಟು। ಹನ್ನೇಡು ಅಂಕಣ ಗುಡಿ ಒಳಗೆ ಕರ್ಕಂಡೋಗಿ। ನಮ್ಮಪ್ಪಾಜಿ ಎಡದಲ್ಲಿ ಕಾರಯ್ಯನ್ನ ನಿಲ್ಲಿಸ್ಕಂಡು। ಬಲದಲ್ಲಿ ಬಿಲ್ಲಯ್ಯನ್ನ ನಿಲ್ಲಿಸ್ಕಂಡು। ಕೇಳಿ ನನ್ನ ಕಂದಗಳಿರಾ। ನಿಮಗೆ ನಿಂದ ಪೆಟ್ಟು ಆಗಲಿ। ನನಗೆ ಕುಂದ ಪೆಟ್ಟು ಆಗಲಿ। ಹುಲಿ ವಾಹನ ಆನೆ ಕುದುರೆ ವಾಹನದ ಮ್ಯಾಲೆ। ನೀವಾಗ ನೀವು ಮೆರಿಬೇಕು ಅಂತೇಳಿ। ಹಿಂದುಗಡೆ ಆವಾಗಲೀಗ ಬ್ಯಾಡರ ಕನ್ನಯ್ಯನ್ನ ನಿಲ್ಲಿಸ್ಕಂಡು। ಎಡದಲ್ಲಿ ಕಾರಯ್ಯ ಬಲದಲ್ಲಿ ಬಿಲ್ಲಯ್ಯ। ಮಾದೇವಾ ಬರುವಾ ನೋಡಯ್ಯಾ। ಬ್ಯಾಡರ ಕನ್ನಯ್ಯ ಬೆಳ್ಳಿಯ ಚೌಲ ಬೀಸಾದ ನೋಡಯ್ಯಾ।[1]

ಎಡದಲ್ಲಿ ಕಾರಯ್ಯ। ಬಲದಲ್ಲಿ ಬಿಲ್ಲಯ್ಯ।
ಮಂಗಳಾರತಿ ಮಹದೇವನಿಗೆ।
ಸರಣು ಸರಣಾರ್ತಿ ಮಾದೇವನಿಗೆ।
ಮಂಗಳಾರತಿ ಮಾದೇವನಿಗೆ।
ಸತ್ಯವಂತ ರಾಮಪ್ಪನಿಗೆ।
ಮಂಗಳಾರತಿ ಮಾದೇವನಿಗೆ।
ಸರಣು ಸರಣಾರ್ತಿ ಗುರುದೇವರಿಗೆ।
ಮಂಗಳಾರತಿ ಮಾದೇವನಿಗೆ।
ಉತ್ತರಾಜಮ್ಮನ ಪುತ್ರನಿಗೆ।
ಮಂಗಳಾರತಿ ಮಾದೇವನಿಗೆ।
ಸರಣು ಸರಣಾರ್ತಿ ಗುರುದೇವರಿಗೆ।
ಮಂಗಳಾರತಿ ಮಾದೇವರಿಗೆ।[2]

# ಟಿಪ್ಪಣಿಗಳು

೧. ೬ನೇ ಕಂಸಾಳೆಯನ್ನು ಪ್ರಮುಖವಾಗಿ ಇಟ್ಟುಕೊಂಡು ಈ ಸಾಲನ್ನು ಸಂಪಾದಿಸಲಾಗಿದೆ.

೨. ಕಂ.ಸಾ. ೯ರಲ್ಲಿ ಕೊಕ್ಕರ ಕೊನೆ ಬೋಳ ಬೆಟ್ಟದ ಮಾಳದಲ್ಲಿ ಹಿಂದಿ ಸ್ವಾಲಿಗರ ದೊಡ್ಡಿ ಒಳಗೆ ಬೊಪ್ಪೇಗೌಡನಿಗೆ ಆರುಜನ ಗಂಡು ಮಕ್ಕಳಲ್ಲಿ ಕಿರಿಯವನಾದ ನೀಲಯ್ಯ ಎಂದು ಬರುತ್ತೆ.

೩. ಕಂಸಾಳೆ ೪ರಲ್ಲಿ ನೀಲಯ್ಯ ಇದ್ದ ಸ್ಥಳ ಆಲಂಬಾಡಿ ಎಂದು ಬರುತ್ತದೆ. ಸಂಕಮ್ಮ ಜುಂಜೇಗೌಡನ ಕಿರಿಯ ಮಗಳು.

೪. ಪುಟ್ಟೇಗೌಡನ ಮಗ ನೀಲೇಗೌಡ ಎಂದು ಕಂಸಾಳೆ ಸಾಹಿತ್ಯ ೨ರಲ್ಲಿ ಬರುತ್ತದೆ.

೫. ಕಂಸಾಳೆ ೧ರಲ್ಲಿ ಕಾಡು ಬೆಂಡೆಕಾಯಿನಲ್ಲಿ ಪಿಂಡ ಪ್ರಸಾದ ಕೊಡುತ್ತಾರೆ ಮಾದೇಶ್ವರ. ಆದರಿಂದ ಮಕ್ಕಳಾಗುತ್ತವೆ ಸಂಕಮ್ಮನಿಗೆ.

೬. ಕಂಸಾಳೆ ೫ರಲ್ಲಿ ಜಂಬು ನೇರಳೆ ಹಣ್ಣಲ್ಲಿ ಪಿಂಡ ಪ್ರಸಾದ ಕೊಡುತ್ತಾರೆ ಮಾದೇಶ್ವರರು ಸಂಕಮ್ಮನಿಗೆ. ಕಂಸಾಳೆ ೬ರಲ್ಲಿ ಕಾಡು ಬಾಳೆಹಣ್ಣಿನಲ್ಲಿ ಪಿಂಡ ಪ್ರಸಾದ ಕೊಡುತ್ತಾರೆ ಮಾದೇಶ್ವರರು ಸಂಕಮ್ಮನಿಗೆ.

೭. ಕಂಸಾಳೆ ೯ರಲ್ಲಿ ಸಂಕಮ್ಮನಿಗೆ ಮೂರನೇ ಮಗ ಪುಲ್ಲಯ್ಯ ಹುಟ್ಟುತ್ತಾನೆ. ಕಂಸಾಳೆ ೧ರಲ್ಲಿ ಮಲ್ಲಯ್ಯ ಎಂದು ಬರುತ್ತದೆ.

೮. ಸಂಕಮ್ಮನ ತಂದೆ ತುಂಬೆ ಸ್ವಾಲಿಗ ಕಂಸಾಳೆ ೮ರಲ್ಲಿ. ನೀಲಯ್ಯನ ತಾಯಿ ನಂಜಮ್ಮ.

೯. ಕಂಸಾಳೆ ೮ರಲ್ಲಿ ಮಾದೇಶ್ವರರು ಸಂಕಮ್ಮನಿಗೆ ಬಿಲ್ಲಯ್ಯ, ಕಾರಯ್ಯ, ಅಲ್ಲಯ್ಯ ಎಂಬ ಮಕ್ಕಳ ಕೊಡ್ತಾರೆ.

# ೪. ಬೇವಿನಕಾಳಿ ಸಾಲು

ಸಿವಸಿವಾ ಗಂಡೇಳು ಕೋಟಿ। ಹೆಣ್ಣೇಳು ಕೋಟಿ। ಮಾನವರು ರುಸಿಗಳೆಲ್ಲಾ। ಪುಣ್ಯ ಪುರುಸರೆಲ್ಲಾ। ಮೂರು ಉಳ್ಳು ಉರುಳಿ ಬರಲಿ ಅಂತೇಳಿ। ಉಡಿದಾರ ಹಳ್ಳ ಪದ್ಯ ಕಟ್ಟುಬ್ಟು। ಮಲೆ ಮಾದಪ್ಪನವರು। ಮೂಡಲು ಮುನ್ನಾಗಿ ಕಡೆದು ಹುಲಿಮ್ಯಾಲೆ ಬರುವಾಗ। ಒಡಕೆ ಹಳ್ಳದ ಕೋವಿನಲ್ಲಿ। ನಮ್ಮಪ್ಪಾಜಿ ಮಲೆಯ ಮಾದಪ್ಪನವರು। ಹುಲಿ ಮ್ಯಾಲೆ ಕುಳಿತುಕೊಂಡು ಬರುತ್ತಿದ್ದಾನಲ್ಲಾ। ಆ ಹುಲಿ ಹೊತ್ತುಕೊಂಡು ಬರುತ್ತಿತ್ತು। ಹುಲಿ ಓಟದಲ್ಲಿ ಹೋಗುತ್ತಿತ್ತಂತೆ। ಓಡಿ ಹೋಗುವಂತ ಕಾಲ್ದಲ್ಲಿ। ಮಾದೇಸ್ವರರಿಗೆ ಉಬ್ಬಸ ಬಂದಂತಾಗಿತ್ತು। ಆ ಒಡಕೆ ಹಳ್ಳ ಇಳಿದು ಮೇಲಕ್ಕೆ ಹತ್ತುವಾಗ। ಅಪರಂಜಿ ಉಡಿದಾರ। ಮಲೆ ಮಾದೇಸ್ವರರದು ಒಡೆದು ಎರಡು ತುಂಡಾಗಿ। ಆ ಒಡಕೆ ಹಳ್ಳದ ಕೋವಿನಲ್ಲಿ ಬಿದ್ದೋಯ್ತಂತೆ। ಆಚೆ ದಡದಲ್ಲಿ ಹುಲಿಯನ್ನು ಹಿಡಿದು ನಿಲ್ಲಿಸಿಕೊಂಡು। ನನ್ನ ತಾಳು ಬೆಟ್ಟ ಹತ್ತತಕ್ಕಂತ ಮಾನವರ ಮಕ್ಕಳು ಸಿವಸಿವಾ ಪುಣ್ಯ ಪುರುಷರು। ಈ ಹೆಣ್ಣೇಳು ಕೋಟಿ ಗಂಡೇಳು ಕೋಟಿ। ಮಾನವರು ಬರುವಾಗ। ಒಂದೆಳೆ ಉಡಿದಾರವನ್ನು ಕಿತ್ತಾಕ್ಕೊಂಡು ಬರಲಿ। ಇದು ಉಡಿದಾರದ ಹಳ್ಳವಾಗಲಿ। ಒಡಕೆ ಹಳ್ಳವಾಗಲಿ। ಅಂತೇಳಿ ಪದ್ಯ ಕಟ್ಟುಬ್ಟು। ನಮ್ಮಪ್ಪಾಜಿ ಮಲೆ ಮಾದಪ್ಪನವರು। ಅದೇ ಹುಲಿ ಮ್ಯಾಲೆ ಕೂತುಕೊಂಡು। ಮುಂದಕ್ಕೆ ಮೂರಡ್ಜೆ ಬಂದರಂತೆ। ಹೊನ್ನುಣಸೆ ಬೇವಿನ ಕಾಳಮ್ಮ। ಅಡವಿ ಆರಣ್ಯ ಗಿಡಗೆಂಡ ತೋಪು। ಚದುರ ಮಧ್ಯದಲ್ಲಿ ಬೇವಿನ ಕಾಳಮ್ಮ ಅಂದರೆ ಬೇವಿನಮರ ಹುಣಸೇಮರ ದಂಡೆಯಲ್ಲಿ। ಒಂಟಿ ದೊಡ್ಡಿ ಅಂದರೆ। ಸೊಪ್ಪಿನ ಗುಡ್ಲು ಕಟ್ಕೊಂಡು। ವಾಸ ಮಾಡ್ತಿದ್ದರಂತೆ। ಅವರು ಜಾತಿ ಒಳಗೆ ಹಾಲು ಮತ ಕುರುಬುಗೌಡರು। ಪರಮಾತ್ಮ ಅವರಿಗೆ ಏಳು ಜನ ಗಂಡು ಮಕ್ಕಳು। ಏಳು ಜನಕ್ಕೂ ಮದ್ವೆ ಮಾಡಿದ್ರು। ಅವರಿಗೆ ಒಬ್ಬೊಬ್ಬರಿಗೆ ಒಂದೊಂದು ಮಗು ಇತ್ತು। ಏಳು ಜನ ಗಂಡು ಮಕ್ಕಳು ಮೊಮ್ಮಕ್ಕಳು ಇದ್ದರಂತೆ। ಬೇವಿನ ಹಟ್ಟಿ ಕಾಳಮ್ಮನ ಗಂಡನ ಹೆಸರು ಕೆಂಪೇಗೌಡ ಅಂತ। ಅವರು ಇಪ್ಪತ್ತಮೂರು ಜನ ಕುಟುಂಬ

ಆಹಾ ನೋಡಿ ನಮ್ಮ ಸಿವನಾ।

ಸಂತಕಾನೆ ಒಳಗೆ। ಪರಮಾತ್ಮ ಒಂದು ಪಟ್ಟಿಗೆ ಒಂಬತ್ತು ಪಟ್ಟು ಹಾಕಿಕೊಂಡು। ಆ ಬೇವಿನ ಹಟ್ಟಿ ಕಾಳಮ್ಮ ಅನ್ನುವಂತ ಹೆಣ್ಣು ಮಗಳು। ಹುಟ್ಟಿದ ಬಟ್ಟೇನೆ ಒಚ್ಚರಿ

ಸೆರಗನ್ನು ಉಟ್ಟುಕೊಂಡು। ಒಚ್ಚರಿ ಸೆರಗನ್ನು ನೀರಿಗೆ ಅಜ್ಜಿಕೊಂಡು। ಮೂರು ಮುಡ್ಡಿಗೆ ಕಡ್ಲೆ ಪುರಿ ತಕ್ಕಂಡು। ಮಡಲಿಗೆ ಕಟ್ಟಿಕೊಂಡು। ಅಯ್ಯೋ ದೇವರೇ ನಮ್ಮಪ್ಪನ ಮನೆಗೆ। ಬಾಗ್ಯ ಕೊಟ್ಟಂತ ಮಾದೇಸ್ವರ। ನೀನು ನನ್ನ ಕಷ್ಟಪರಿಹಾರ ಮಾಡಿದರೆ। ನಮ್ಮಣ್ಣಯ್ಯನ ಮನೆಯಲ್ಲಿ। ಯಾವ ರೀತಿಯಾಗಿ ಹಾಲು ಸಾಗರವಾಗಿ ಮಡಗಿ। ಏಳಟ್ಟಿ ದನ ಕರುಗಳ ಭಾಗ್ಯ ಕೊಟ್ಟು। ಗುಡಿ ಗೋಪುರವನ್ನು ಕಟ್ಟಿಸಿಕೊಂಡು। ವೆಚ್ಚಾಳದಿಂದ ಇದ್ದೆ ಪರಮಾತ್ಮ। ಅದೇ ಪ್ರಕಾರವಾಗಿ ನಾನು ಸಹ ಮಾಡ್ತೀನಿ। ನನ್ನನ್ನು ಅದೇ ತರವಾಗಿ ಉದ್ದಾರ ಮಾಡಪ್ಪ। ಎಂಬುದಾಗಿ ಅವಳು ಒದ್ದೆ ಬಟ್ಟೆಯಲ್ಲಿ ಸಂತೆ ಕಾನೆಯಲ್ಲಿ ನಿಂತು। ಆ ಪರಮಾತ್ಮನನ್ನು ಬೇಡ್ತಾ ಇದ್ದು। ಅಷ್ಟರಲ್ಲಿ ಸ್ವಾಮಿಯವರು ಎಪ್ಪತ್ತೈದು ವಯಸ್ಸಿನ ಮುಪ್ಪಿನ ಮುದುಕರಂತೆ। ಹರುಕು ಜೋಳಿಗೆ ತಕ್ಕಂಡು। ಮುರುಕು ಬೆತ್ತ ತಕ್ಕಂಡು। ಬಿಕ್ಷುಕನ ವೇಸದಲ್ಲಿ ಬಂದು ಯಾರಮ್ಮ ನೀನು ಕಂದ?

ಆಹಾ ನೋಡಿ ನಮ್ಮ ಸಿವನಾ।

ಆಗಲೀಗ ಯಾರಮ್ಮ ಅನ್ನುವಂತ ವಾಕ್ಯವನ್ನು ಕೇಳಿಬಿಟ್ಟು। ಬೇವಿನ ಕಾಳಮ್ಮ ಅಯ್ಯೋ ಪರದೇಸಿ ಮುಂಡೆ ಮಗನೇ। ಯಾರು ನೀನು, ನಾನು ಒಂದು ಬಟ್ಟೆಗೆ ಒಂಬತ್ತುಪಟ್ಟು ಹಾಕಿರುವಂತ ಸೀರೆಯನ್ನು ಉಟ್ಟುಕೊಂಡು। ನನ್ನ ಕಷ್ಟದಲ್ಲಿ ನಾನು ಹೊಟ್ಟೆಗೆ ಅನ್ನವಿಲ್ಲದೆ। ಒಂದು ಕಟ್ಟು ಹುಲ್ಲು ಮೂರು ಕಟ್ಟಾಗಿ ಮಾರಿಬಿಟ್ಟು ಬಂದಿ। ಮೂರು ದುಡ್ಡಿನ ನನ್ನ ಹೊಟ್ಟೆ ಜೀವನ ಮಾಡಕ್ಕೋಸ್ಕರವಾಗಿ। ಮೈಲಿಗೆಯಾಗಿರುವಂತ ಬಟ್ಟೆ ಮಡಿ ಮಾಡಿ ಕೊಳ್ಳಲಿಕ್ಕೆ। ಒಂದು ಬಟ್ಟೆಗೆ ಒಂಬತ್ತು ಪಟ್ಟು ಹಿಂತಿರುಗಿ ಮುಂತಿರುಗಿ। ಉಟ್ಕೊಳ್ಳಕ್ಕೆ ಗತಿ ಇಲ್ಲ। ಈ ಬಟ್ಟೆ ಒಚ್ಚರಿ ನೀರಿಗೆ ಅಜ್ಜಿಗೊಂಡು ಒಚ್ಚರಿ ಮಾನ ಕಾಪಾಡೋಕ್ಕೆ ಹಸ್ಸಿಕೊಂಡಿದ್ದೀನಿ। ನೀನು ಯಾರು ಅಂತ ಕೇಳ್ಬಿಟ್ಟೆ। ಏನಪ್ಪಾ ಕಂದ। ನಾನೊಬ್ಬ ಪರದೇಸಿ ಕಣವ್ವಾ।

ಆಹಾ ನೋಡಿ ನಮ್ಮ ಸಿವನಾ।

ಮಲೆ ಮಾದೇಶ್ವರ ಸ್ವಾಮಿ ಅವಾಗಲೀಗ। ನಗ್ತಾರೆ। ಚಿಂತೆ ಮಾಡಬೇಡ ಕಂದ। ಹಿಂದೆ ಮುಂದೆ ಬಂದ ಕಷ್ಟವೇ। ತಕ್ಷಣವೇ ಪರಿಹಾರವಾಗುವುದಿಲ್ಲ। ಕಾಲ ಬಂದಾಗ ನಿನಗೂ ಕೂಡ। ನಿಮ್ಮಣ್ಣಯ್ಯನ ಮನೆಯಲ್ಲಿ। ಎಷ್ಟು ಬಾಗ್ಯ ಇದೆ ಅಂತ ಬೇಡ್ಕೋತಾ ಇದ್ದೆ। ಅಷ್ಟೂ ಸೌಭಾಗ್ಯ ಬರ್ತದೆ ನನ್ನ ಕಂದ। ಏನಪ್ಪಾ ಜಂಗಮ ನಿಜವೇ ಈ ಮಾತು। ಹೌದು ನಿಜ ತಾಯಿ। ಯಾವಾಗ ಬರ್ತದೆ ಭಾಗ್ಯ ಅಂದರೆ। ತಕ್ಷಣವಾಗಿ ಬಂದು ಬುಡ್ತದೆಯಪ್ಪಾ। ಭಾಗ್ಯ ಬರಬೇಕಾದರೆ। ಭಯ ಭಕ್ತಿ ಸಿವನಲ್ಲಿ ಧರ್ಮ ಕಂಡು। ಅವರನ್ನೂ ಬಾಳ ಭಕ್ತಿಯಿಂದ ಕಂಡ್ರೆ। ನಿಮಗೆ ಭಾಗ್ಯ ಬರುತ್ತೆ ಕಣವ್ವಾ। ಏನಪ್ಪಾ ನಿಮ್ಮಂತವರನ್ನು ಕಂಡು ಬಿಟ್ರೆ ಬರುತ್ತೇನಪ್ಪಾ। ಹೌದು ತಾಯಿ ನಿಜವಾಗ್ಲೂ ಬರುತ್ತೆ। ಅಂತೇಳಿ ಆ ಬೇವಿನ ಕಾಳಿಯೊಡನೆ ನುಡಿದರಲ್ಲೋ ಮಾದೇವಾ।

ಆಹಾ ನೋಡಿ ನಮ್ಮ ಸಿವನಾ।

ನೀವು ಆಡಿದಂತ ವಾಕ್ಷವನ್ನು ಕೇಳಿದರೆ। ತಂದೆ ಯಾಕೋ ನನಗೆ ಬಾಳ ಭಯವಾಗುತ್ತಲ್ಲ ಸ್ವಾಮಿ। ಹೆದರಬೇಡ ಬೆದರ್ಬೇಡ। ಅಂಜಬೇಡ ನನ್ನ ಕಂದ। ನಿನಗೆ ಕಂಡಿತವಾಗಿ ಐಸ್ವರ್ಯ ಬಾಗ್ಯ ಬರ್ತದೆ। ಅದಕ್ಕೆ ಯಾವ ರೀತಿ ಇರಬೇಕಪ್ಪಾ ಸ್ವಾಮಿ। ಅದಕ್ಕೆ ನೋಡಪ್ವಾ ಸ್ನಾನ ಮಡಿಗಳನ್ನು ಮಾಡಿಕೊಂಡು। ಎಳ್ಳುದೀಪ ಹಚ್ಚಿಕೊಂಡು। ಒಂದು ಕಾಸಿನ ಕಡ್ಡಿ ಕರ್ಪೂರ ಹಚ್ಚಿಕೊಂಡು। ಬಯ ಬಕ್ತಿಯಿಂದ ಶಿವನನ್ನು ಯಾವಾಗ್ಲೂ ಬೇಡ್ತಾ ಇದ್ದರೆ। ಅದೇ ನಿನಗೆ ಮೂರು ಕೋಟಿ ಬಾಗ್ಯ। ಸಕಲ ಸಂಪತ್ತು ಎಲ್ಲಾ ಅಲ್ಲೇ ಇದೆ ಕಣಪ್ವಾ। ಅದೂ ಅಲ್ದೆ। ನಮ್ಮಂತ ಅರದೇಸಿ, ಪರದೇಸಿ, ಜಂಗಮರು। ಗುಡ್ಡಗಳು ಗುರುಗಳು ಕಾಳಾಮುಕ ಸನ್ಯಾಸಿ। ಬುಡುಬುಡಿಕೆ ಸನ್ಯಾಸಿ। ನನ್ನ ಹೆಸರನ್ನು ಯಾರು ಹೇಳಿಕೊಂಡು ಬರ್ತಾರೆ। ಅವರಲ್ಲಿ ನೀನು ವಂಚನದ ಮಾತಾಡಬೇಡ। ನಿಂದನದ ಮಾತಾಡಬೇಡ ತಾಯಿ। ಬಾಯಿಗೆ ಬಂದಂತೆ ನುಡಿ ಬಾರದಮ್ಮ। ಭಕ್ತಿಯೊಂದಿದ್ದರೆ ನಿನಗೆ ಗನ ಬಾಗ್ಯ ಕೊಡುವೆ। ಅಂದವರೆ ಜಗದೊಡೆಯ

ಆಹಾ ಕ್ವಾರಣ್ಕ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।

ತಂದೆ ಶಿವಾ। ನಮ್ಮಪ್ಪನ ಮನೆಗೆ ಬಾಗ್ಯ ಕೊಟ್ಟಂತೆ। ಬಾಗ್ಯ ಐಸ್ವರ್ಯವನ್ನು ಕೊಟ್ಟು। ನನ್ನನ್ನು ಒಕ್ಕಲು ಮಾಡಿಕೊಂಡೆ। ಸ್ವಾಮಿ ನಿನಗೆ ಮುಂದು ಬೆಳೆ ಕಟ್ಟಿದ ಕಾಣಿಕೆ ಕೊಟ್ಟು। ಮೀಸಲು ಅಂತೇಳಿ। ಒಂದು ಲಕ್ಷದ ಮೇಲೆ ತೊಂಬತ್ತಾರು ಕೋಟಿ ಗಣಂಗಳ ನಿತ್ಯ ಬೋಜನ ಮಾಡಿ। ಅನ್ನ ದಾನ ನಡಿಸ್ತೀನಿ ಸ್ವಾಮಿ। ನನಗೆ ಅಂತ ಬಾಗ್ಯವನ್ನಾದ್ರೂ ಕೊಟ್ಟು। ರಕ್ಷಣಾ ಮಾಡು ಜಗದೊಡೆಯಾ।

ಆಹಾ ಕ್ವಾರಣ್ಕ ನೀಡಪ್ವಾ ಕೋಡುಗಲ್ಲಿನ ಮ್ಯಾಲೆ।

ಏನಪ್ವಾ ಕಂದ ಹೆಣ್ಣು ಮಗಳೇ। ಈ ರೀತಿ ಕೇಳ್ತಾ ಇದ್ದೀಯಲ್ಲಾ ನನ್ನ ಕಂದ। ನಾನು ಉಣ್ಣುವುದಕ್ಕೆ ಅನ್ನವಿಲ್ಲದೆ। ಹೊದಿಯುವುದಕ್ಕೆ ಬಟ್ಟೆ ಇಲ್ಲದೆ। ಹುಲಿ ಚರ್ಮ ಉಟ್ಟವನು। ಹುಲಿ ಚರ್ಮ ಹೊದ್ದವನು। ಕಾವಿ ಕಮಂಡಲ ಬಣ್ಣ ಬಂಗಾರವಿಲ್ಲದೆ। ಹೊಟ್ಟೆಗೆ ಅನ್ನವಿಲ್ಲದೆ। ಮನೆ ಮನೆಯ ಅನ್ನವನ್ನು ಬೇಡುವಂತ ಪರದೇಸಿ। ನನ್ನನ್ನು ಬಾಗ್ಯ ಕೊಡು ಅಂತ ಹೇಳ್ತಾ ಇದ್ದೀಯಲ್ಲ ಕಂದಾ। ನಾನು ಸಾಕ್ಷಾತ್ ಪರಮಾತ್ಮನಲ್ಲ, ಬ್ರಹ್ಮ ದೇವನಲ್ಲ। ಕಂದ ನೂರಾರು ಮನೆ ಹಂತ ಹತ್ತಿ ಇಳಿಯುವಂತ ಬಡ ಜಂಗಮ ಅಂತಹರೇ ಮಾಹೇವಾ। ಈತನು ಐಸ್ವರ್ಯ ಬಾಗ್ಯ ಕೊಡ್ತಾನೆ ಅಂತ ನಂಬಿಕೊಂಡಿಯಾ? ಸ್ವಾಮಿ ನಿಮ್ಮ ಲೀಲೆಯನ್ನು ಕೇಳಿದರೆ ಯಾಕೋ ನೀವು ಐಸ್ವರ್ಯ ಬಾಗ್ಯ ಕೊಡುತಾರೆ ಅಂತ ಆಸೆ ಆಗ್ತಾ ಇದೆ। ನಮ್ಮ ಕಷ್ಟಗಳ ಪರಿಹಾರ ಮಾಡು ಜಗದೊಡೆಯಾ।

ಆಹಾ ಕ್ವಾರಣ್ಕ ನೀಡಪ್ವಾ ವೀರತ್ತ ಮುನಿಗಳಿಗೆ।

ಶಿವಶಿವಾ ಅಂತ ಐಸ್ವರ್ಯ ಬಾಗ್ಯವನ್ನು ಕೊಟ್ಟು। ಒಕ್ಕಲು ಮಾಡಿದರೆ ಕಟ್ಟಿದ ಕಾಣಿಕೆ। ಬಿಟ್ಟದ ಮೀಸಲು। ಮುಂದಲ ಬೆಳೆ। ಕಾಸಿದ ತುಪ್ಪ ಮೀಸಲು ಬೆಣ್ಣೆ ಸಹಿತ

ವೆಚ್ಚಾಳದಿಂದ ನೀಡ್ತೀನಪ್ಪಾ ಎಂಬುದಾಗಿ ಬೇಡಿಕೊಂಡಳು।' ಆಗ ಒಂಟಿ ದೊಡ್ಡಿ ಒಳಗೆ ವಾಸ। ಸ್ನಾನ ಮಾಡಿದ್ರಂತೆ ಅರಣ್ಯದಲ್ಲಿ। ಪರಮಾತ್ಮ ಬೇವಿನ ಪಟ್ಟಿ ಕಾಳಮ್ಮನಿಗೆ। ಉಟ್ಟುಕೊಳ್ಳಕೆ ಬಟ್ಟೆ ಇಲ್ಲದೆ। ಎಕ್ಕದ ಎಲೆ ಎದೆಕಟ್ಟು ಮಾಡಿಕೊಂಡು। ತೇಕದ ಎಲೆ ಮುಸುಕಿಟ್ಟು ಕೊಂಡಿದ್ರಂತೆ। ಪರಮಾತ್ಮ ತಿನ್ನಲಿಕ್ಕೆ ಅನ್ನಿಲ್ಲದೆ। ಅರಣ್ಯಕ್ಹೋಗಿ ಗೆಡ್ಡೆ ಗೆಣಸು ಕಿತ್ತುಕೊಂಡು ಬಂದು ತಿಂದು ಕಾಲಹರಣೆ ಮಾಡುತ್ತಿದ್ದರು। ಅವಳ ಗಂಡನಾದ ಕೆಂಡೇಗೌಡ। ತಾಳು ಬೆಟ್ಟದ ಕೋವಿಗೋಗಿ। ಗಳವನ್ನು ಕಡಿದು। ಕೌದಳ್ಳಿ ಪ್ಯಾಟೆಗೆ ಒತ್ತು ಮಾರಿ ಜೀವನ ಮಾಡುತ್ತಿದ್ದ। ಅಂತ ಬಡಸ್ತನ ಬಂದುಬಿಟ್ಟಿತಂತೆ। ಬೇವಿನಟ್ಟಿ ಕಾಳಮ್ಮನಿಗೆ। ಆ ಒಂಟಿ ದೊಡ್ಡಿ ಒಳಗೆ। ಆಗ ಮಲೆಯ ಮಾದಪ್ಪನವರು। ಸಿವಸಿವಾ ಬಡತನ ನೋಡ್ಬುಟ್ಟಿದ್ದೇ ಅವರಿಗೆ ಬಾರಿ ಸಂಕಟ ಬಂದುಬಿಡ್ತು। ಹುಲೀನ ಹಿಡಿದು ನಿಲಿಸ್ಕೊಂಡು। ಮೂಡಲ ಮಲೆಯ ಮುದ್ದು ಮಾದೇಸ್ವರ। ಮುತ್ತಿನ ಜೋಳಿಗೆಗೆ ಮುಂಗೈ ನೀಡಿದನಂತೆ। ಮಾಯದ ಬಸ್ಮ ತೆಗೆದು। ಮಾಯಕಾರ ಮಲೆಯ ಮಾದಪ್ಪ। ಹಣೆಯ ಮೇಲೆ ಧರಿಸಿರತಕ್ಕಂತ ಈಭೂತಿ ತೆಗೆದು। ಬಲಗೈಲಿ ಹಿಡ್ಕಂಡು ಉಪದೇಸ ಮಾಡಿದನಂತೆ। ಇದು ಮಾಯದ ಈಬೂತಿ। ಮಧ್ಯಕೆ ಈಬೂತಿ। ತಿಪ್ಪೆ ಉಪ್ಪರಿಕೆ ಮಾಡಿದಂತೆ ಈಬೂತಿ। ಉಪ್ಪರಿಕೆ ತಿಪ್ಪೆ ಮಾಡಿದ ಈಬೂತಿ। ಬಡತನ ಬಯಲು ಮಾಡ್ತದೆ। ಸಿರಿಸಂಪತ್ತು ಕೊಡುತ್ತದೆ। ಮನೆ ನಿರ್ವಯಲ ಮಾಡಿಸಿ। ಎಕ್ಕದ ಗಿಡ ಉಟ್ಟಿಸ್ತದೆ ನಮ್ಮ ಈಬೂತಿ ಅಂತೇಳಿ। ಆ ಅಮ್ಮನಿಗೆ ಎಕ್ಕದ ಗಿಡ ಹುಟ್ಟಕೂಡದು। ಸೊಪ್ಪಿನ ಗುಡಲು ಮಾಯವಾಗಲೀ। ಈ ಎಕ್ಕದ ಎದೆಕಟ್ಟು। ತೇಕದ ಎಲೆ ಮುಸುಕಿಟ್ಟು। ಉಗುನಿ ಎಲೆ ಉಡುಗೊರೆ ಮಾಡಿರತಕ್ಕಂತ। ಉಡುಪುಗಳೆಲ್ಲಾ ಮಾಯವಾಗಲಿ। ಪಟ್ಟೆ ಸೀರೆ ಫುಟ್ಟಾಣಿ ರವಿಕೆಯಾಗಲಿ। ಕಾಳಮ್ಮನಿಗೆ ಅಂದ ಮಾದೇವ। ಆಗಲೇ ಉಡುಪೇ ಪೊಂಟೊಯ್ತಂತೆ ಸಿವಸಿವಾ ವಸ್ತ್ರ ಬಂದು ಬಿತ್ತು ಮೈಮೇಲೆ। ಆಗ ಮಲೆ ಮಾದಪ್ಪ ಉಪದೇಸ ಮಾಡ್ತಾ ಅವ್ನೆ। ಮುತ್ತಿನ ಮುಂಬಾಗಲು ರತ್ನದಲ್ಲಿ ತಲೆ ಗೊಂಬೆಯಾಗಲಿ। ವಿಚಿತ್ರವಾದ ಒಳತೊಟ್ಟಿ ಸಾಲು ಗುಳಿಯಾಗಲಿ। ರಾಮಲಕ್ಷಣರಂತೇಳಿ। ಏಳು ಕಣಜ ಉಂಟಾಗಲಿ ಸಿವ ಸಿವಾ। ಅರಮನೆಗೆ ನವರತ್ನದ ಕಲ್ಲಾಗಲಿ। ಪಾದ ತೊಳ್ಕೊಳ್ಳಕೆ ನವರತ್ನದ ಪಚ್ಚೆ ರತ್ನದ ಕಲ್ಲಾಗಲಿ। ಪರಮಾತ್ಮ ಏಳು ಸಾವಿರ ಗೋವುಗಳು। ಏಳು ಸಾವಿರ ಎಮ್ಮೆ। ಏಳು ಸಾವಿರ ಕುರಿ। ಏಳು ಸಾವಿರ ಮೇಕೆ। ಏಳು ಸಾವಿರ ಆಡುಗಳಾಗಲಿ। ಒಟ್ಟುಕೂಡಿದರೆ ಇಪ್ಪತ್ತೆಂಟು ಸಾವಿರ ಕಾಲ್ನಡಿಗೆ ರಾಸುಗಳು ಹಾಲುಸಾಗ್ರವಾಗಲಿ। ಆರು ಸಾವಿರ ಆಳಿಕೆ ಆಳು ಹೆಣ್ಣು ಮಗಳೇ। ಹಾಲುಸಾಗ್ರ ಆಳಿಕೆ ಆಳುವಾಗ। ಹಾಲು ದಾನ ಅನ್ನದಾನ ಯಾಲಕ್ಕಿದಾನ, ಸಿವದಾನ। ಮಾಡುವುದಾದರೆ ಸಿವಸಿವಾ। ಚುಜಜ್ಜಲಟ್ಟಿಕಾನಿ, ಯಳಂದೂರು ಬೀದಿ। ಕಾನಕಾನಳ್ಳಿ ರಸ್ತೆ। ಮಳಗಾಳ್ನಿಂದ ವರ್ಸಕ್ಕೊಂದು ಸಾರಿ। ಸಿವರಾತ್ರಿ ಒಳಗೆ ಬರುತಾರೆ ಮಗಳೆ। ಹಾಲುದಾನ। ಅನ್ನದಾನ ಮಾಡುವುದಾದರೆ ಇನ್ನಷ್ಟು ಬಾಗ್ಯ ಕೊಡುತೀನಿ ಅಂತೇಳಿ ಕಡೆದು ಬತ್ತವರಲ್ಲೋ ಮೂಡಲ ಮಲೆಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲು ಮುನಿಗೆ
ಕೋಲು ಮಂಡೆ ಜಂಗಮರು ಕ್ವಾರಣ್ಯಕೆ ದಯಮಾಡವರೆ।
ಆಹಾ ಕ್ವಾರಣ್ಯಗಳ ನೀಡಮ್ಮ ಮಾದೇವ ಲಿಂಗರಿಗೆ।

ಬೇಡರ ಕಣ್ಣಪ್ಪನಿಗೆ ಬುದ್ದಿ ಯೇಳ್ತಾ ಅವ್ನೆ ಮಾದೇವ। ನಾನು ಕೊಂಗನಾಡು ಮಲೆ। ಕೊಯಮತ್ತೂರಿಗೆ ಹೋಗಿ ಲಿಂಗವಂತರನ್ನು ಕರೆತರುವ ತನಕ। ಸಿವ ಈ ಎಪ್ಪತ್ತೇಳು ಮಲೆ ಎಲ್ಲೆ ಕಟ್ಟನ್ನು ಗ್ಯಾನವಾಗಿ ನೋಡ್ಕಂಡಿರಬೇಕು ಭಕ್ತ ಅಂದ್ರು। ತಾತಯ್ಯ ಅದೇನು ಹೇಳು। ಬಕ್ತ ಒಂದೇ ಮಲೆ ಅಂತಿದ್ದೆ ನಾನು। ಎಪ್ಪತ್ತೇಳು ಮಲೆ ಅಂತ ಹೇಳ್ತಿದ್ದೀರಲ್ಲಾ ಕೆಲವಾರು ಮಲೆ ನೆಲೆ ಹೇಳಿದ್ರೆ। ನಿಮ್ಮ ಪಾದದಾಣೆ ನಾನು ನೋಡ್ಕಂಬರ್ತೀನಿ। ಕೊಂಗನಾಡು ಮಲೆಗೆ ಅಲ್ದೆ ಇದ್ರೆ। ಕೊಯಮತ್ತೂರಿಗೆ ಹೋಗಿ ಬನ್ನಿ ಅಂದ್ರು। ಆಗ ಆನೆಮಲೆ ಜೇನುಮಲೆ। ಗುತ್ತಮಲೆ ಗುಲಗಂಜಿಮಲೆ। ರುದ್ರಾಕ್ಷಿ ಭದ್ರಾಕ್ಷಿ ಮಲೆ। ರೊಕ್ಕಮಲೆ ಕೊಂಬುದಿಕ್ಕುಮಲೆ। ಕೂಡಗಲ್ಲು ಕೋಡಗಲ್ಲು ಮಲೆ। ಮದ್ದಮಲೆ ಮಂಜುಮಲೆ, ಗುಂಜಿ ಗುರಗಂಜಿಮಲೆ। ಎಪ್ಪತ್ತೇಳು ಮಲೆ। ಹನ್ನೆರಡು ಅಂಕಣ ದೇವಸ್ತಾನ। ಆಲಂಬಾಡಿ ಬಸವ ಪೀಠದ ಕಲ್ಲು। ಮಜ್ಜನದ ಕೊಳ। ಅಂತರಗಂಗೆ। ಸೇಸಣ್ಣ ಸಾಲೂರು ಮಠ। ತಮ್ಮಡಗೇರಿ ಬಸವಣ್ಣನವರ ಗುಡಿ। ಕತ್ತಿ ಪವಾಡದ ಕೊಳ। ಆನೆ ತಲೆತಿಂಬು ಹಾಲು ಹಳ್ಳ। ರಂಗಸ್ವಾಮಿ ಒಡ್ಡು। ತಪಸರೆ ಬಾಳ ವೆಜ್ಜಾಳದಲ್ಲಿ ನೋಡಿಕೊಂಡು ಇರುತೀನಿ ತಾತಯ್ಯ ಅಂತೇಳಿ। ನನ್ನ ಪಾದವನ್ನು ಮುಟ್ಟುವುದಾದರೆ। ನಾನು ಕೊಂಗ ನಾಡಿಗೆ ಹೋಗಿಬರುತ್ತೇನೆ। ಅಂದವರೆ ಮೂಡಲ ಮಲೆಯ ಮಹದೇವಾ."

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಕೋಲು ಮಂಡೆಯ ಜಂಗಮ ದೇವರು ಕ್ವಾರಣ್ಯಕೆ ದಯಮಾಡವ್ರೆ
ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲಯ್ಯನಿಗೆ।

ಹೋಗಿ ಬನ್ನಿ ತಾತಯ್ಯ ಅಂದನಂತೆ। ಆಗ ಮಲೆಯ ಮಾದೇಸ್ವರರು ಎಳಗಾವಿ ಎಳೆದೊದ್ದು। ಸುಳಿಗಾವಿ ಮಂಡೆಯ ಮ್ಯಾಲೆ ಮುಸುಕಿಟ್ಟು। ಏಕ ಮೊಕದ ರುದ್ರಾಕ್ಷಿ। ಮಾಯದ ಈಬೂತಿ। ಮುತ್ತಿನ ಜೋಳಿಗೆ ಒಳಗಿಟ್ಟು। ಹನ್ನೆರಡು ಅಂಕಣ ದೇವಸ್ಥಾನವನ್ನು ಬಿಟ್ಟು। ಅರಿವಿಲ್ಲದ ಮಲೆಗಳನ್ನು ತ್ಯಜನೆ ಮಾಡಿ। ಸುದ್ದ ಮೂಡಲ ಮುನ್ನಾಗಿ। ಕೊಂಗನಾಡು ಮಲೆ ಕೊಯಮತ್ತೂರು। ನಡುಬೀದಿ ಒಳಗೆ ನಡೆದು ಬರ್ತಾ ಇದ್ದರಂತೆ ಮಾದೇಸ್ವರರು। ಆ ಕೊಯಮತ್ತೂರು ನಡು ಬೀದಿ ಒಳಗೆ। ನೂರೊಂದು ಮಂದಿ ಜಂಗಮರು। ಮಾದೇಸ್ವರರ ಬೆನ್ನ ಹಿಂಬಾಲಿಸಿದರಂತೆ। ಮಾದೇಸ್ವರರು ಮುಂದೆ ಮುಂದೆ ಮಲೆಗೆ ಬಂದರಂತೆ। ಅವರ ಹಿಂದೆ ಹಿಂದೆ ನೂರೊಂದು ಮಂದಿ ಜಂಗಮರು। ಕೊಂಗನಾಡು ಮಲೆ ಕೊಂಗ ಮತ್ತೂರಿನಿಂದ ಬಂದರು ಮಾದೇಸ್ವರನ ಬೆಟ್ಟಕ್ಕೆ। ಪರಮಾತ್ಮ ತಂಗಳುಂಡು ತಣ್ಣೀರು ಕುಡಿದು। ಆಹಾರಗಳನೆ ತ್ಯಜನೆ ಮಾಡಿದರಂತೆ। ಅರಣ್ಯದಲ್ಲಿ ಒಂದೆ ನಡೆದು ಬರುವಾಗ। ಮುಂದೆ ಮಾದೇಸ್ವರರು ಹನ್ನೆರಡು ಅಂಕಣ ದೇವಾಲಯಕ್ಕೆ ಸುಗ್ಗಿ। ಪಾಸಬಟ್ಟಲ ಹತ್ತಿರ ಹೋಗಿ। ಒರಗಿ ಲಿಂಗಕ್ಕೆ ಸೇರಿದರಂತೆ। ಪರಮಾತ್ಮ ಮಾನವರು

ಕೊಂಗನಾಡು। ಮಲೆ ಕೊಯಮತ್ತೂರಿನಿಂದ ಲಿಂಗವಂತರು ಬಂದರಲ್ಲಾ। ಆ ಕಾಲದಲ್ಲಿ ಅವರು ಶಿವಸಿವಾ। ತನ್ನ ದೇಹದಲ್ಲಿ ತಾನೇ ಯೋಚನೆ ಮಾಡಿದರಂತೆ। ಪಾಸ ಬಟ್ಟಲಿಗೆ ಬಂದು ಸೇರ್‍ಬುಟ್ರಲ್ಲಾ ಗುಂಡಾಗಿಬಿಟ್ರು। ಈ ಗುಡಿಗೆ ಸೇವೆ ಮಾಡಿ ಹೋಗುವ ಅಂತೇಳಿ। ಹನ್ನೆರಡು ಅಂಕಣ ದೇವಸ್ಥಾನದಲ್ಲಿ ಆ ಮೂರು ಕೂಡಿದ ಕೋವು ಅಂದರೆ। ಸಿವಸಿವ ಅಂತರಗಂಗೆ ಹಳ್ಳದ ಕೋವಿನಲ್ಲಿ। ಕಾಡಳ್ಳು ಹುಟ್ಟಿತ್ತಂತೆ। ಕಾಡಳ್ಳು ಅಂದ್ರೆ ಮರಳು ತಂದು ಸಿವಸಿವಾ। ಆ ಬಂಡೆಮ್ಯಾಲೆ ಬೆಚ್ಚಿ ಎಣ್ಣೆ ತೆಗೆದು। ಮರಳ್ಳು ಗುದಿಸಿಕೊಂಡು ಬಂದು। ಮಾದೇಸ್ವರನ ಬೋಳು ಮಂಡೆ ಮ್ಯಾಲೆ ಚೆಚ್ಚಿ ಎಣ್ಣೆ ತೆಗೆದು। ಮಾದೇಸ್ವರನ ಬೋಳು ಮಂಡೆ ಮ್ಯಾಲೆ ಎಣ್ಣೆ ಮಜ್ಜನ ಮಾಡಿದರಂತೆ। ಕಿರುಬಿದಿರ ಅಕ್ಕಿ ತಂದು ಅನ್ನ ಮಾಡಿ। ಮಾದೇಸ್ವರರಿಗೆ ತಳಿಗೆ ಎಂದು ಬಡಿಸಿದರಂತೆ। ಕಾಡು ಬಾಳೆಹಣ್ಣು ತಂದು। ಮಾದೇಸ್ವರರಿಗೆ ಹಣ್ಣು ಮಾಡಿದರಂತೆ। ಕಾಡು ದೂಪ ತಂದು। ಮಾದೇಸ್ವರನಿಗೆ ಕೆಂಡ ಮಾಡಿ। ಕಾಡು ದೂಪದ ಹೊಗೆ ಕೊಟ್ರಂತೆ। ಕರವೆತ್ತಿ ಕೈ ಮುಗಿದು। ದೀರ್ಘದಂಡ ನಮಸ್ಕಾರ ಮಾಡಿ ಸೇವೆ ಮುಗಿಸಿಕೊಂಡ್ರು। ಕಡೆದು ಕೊಂಗನಾಡಿನ ಮಲೆ ಕೊಯಮತ್ತೂರಿಗೆ ಹೋಗುವಾಗ। ಮಾದೇಸ್ವರ ಪ್ರತ್ಯಕ್ಷವಾಗಿ ಎದ್ದು ಕೂತನಂತೆ। ಪಾಸ ಬಟ್ಟಲ ಹತ್ತಿರ ಮಾದೇಸ್ವರರ ಮುಂದೆ ಪಲಹಾರಗಳನ್ನು ಮಡಗಿದ್ರು ಮಾನವರು। ಹೆಚ್ಚಿದರು, ಕಿರುಬಿದಿರ ಅಕ್ಕಿ ಅನ್ನ ತಳಗೆ ಬಡಿಸಿದರಂತೆ। ಕಾಡು ಬಾಳೆಹಣ್ಣು ಮುರಿದಿಟ್ರು। ಮಾದೇಸ್ವರರು ಊಟ ಮಾಡಿದ್ರಂತೆ। ಮರಳೆಣ್ಣೆ ಮಜ್ಜನ ಮಾಡಿಕೊಂಡನಂತೆ। ಕಾಡು ದೂಪದ ಹೊಗೆ ಕುಡಿದ ಕೂಡಲೇ। ಕೈಕಾಲು ಒಡೆತ ಬಂದಂತೆ। ಕೊಂಗನಾಡು ಮಲೆ ಕೊಯಮತ್ತೂರಿಂದ। ಲಿಂಗವಂತರು ಬಂದು ಮರಳೆಣ್ಣೆ ತಂದು। ಬೋಳು ಮಂಡೆ ಮ್ಯಾಲೆ ಎಣ್ಣೆ ಮಜ್ಜನ ಮಾಡಿದ್ರು। ಮಾದೇವನಿಗೆ ಬಾರಿ ಕೊಂಗ ಮತ್ತು ಹಿಡಿದುಬಿಡ್ತಂತೆ। ಕಣ್ಣು ಕಾಣದೆ ಹೋಯ್ತು। ಕಿವಿ ಕೇಳದೇ ಹೋಯ್ತು। ಕೂತರೆ ಏಳೋಕ್ಕಾಗಲ್ಲ। ಎದ್ದರೆ ಕೂತ್ಕಳಕ್ಕಾಗಲ್ಲ, ಕಾಡುಬಾಳೆ ಹಣ್ಣು ತಿಂದು ಮಾದೇಸ್ವರರಿಗೆ ಗರಳು ಕಟ್ಕೊಳ್ತಂತೆ। ಹರಹರಾ ಆಕಾಸ ಅಂತು; ಧರಣಿ ಬಗ್ಗಿ ನೋಡಿ। ಮಾದೇಸ್ವರನಿಗೆ ಬಾರಿ ಆಪತ್ತು। ಬಾರಿ ಕಷ್ಟ ಏರಿಕೊಂಬಿಟ್ತು। ಅಂತ ಕಷ್ಟ ಬರುವಂತ ಕಾಲದಲ್ಲಿ। ಕೆಂಡಗಣ್ಣು ಮಲೆ ಮಾದಪ್ಪನವರು। ಸರಣಾದ ಬೇಡರ ಕನ್ನಯ್ಯನ ಕರೆದರಲ್ಲಾ। ಮೂಡಲ ಮಲೆಯ ಮಾದೇವಾ।

ಆಹಾ ಕ್ವಾರಣ್ಣ ನೀಡಮ್ಮಾ ಕೋಡುಗಲ್ಲಯ್ಯನಿಗೆ।[2]

ಮೂಡಲ ಮಲೆಯಲ್ಲಿ ಮುದ್ದು ಮಾದೇಸ್ವರ ತಂದೆ। ಬ್ಯಾಡರ ಗಂಪಣ್ಣ। ಮರಳೆಣ್ಣೆ ಮಂಡೆಗಚ್ಚಿ। ಉಚ್ಚೆಳ್ಳೆಣ್ಣೆ ಮಜ್ಜನ ಮಾಡಿದಾಗ। ಕಣ್ಣ ಕಾಣಬರದು। ಕಿವಿ ಕೇಳ ಬರದು। ತನ್ನ ಸರೀರವೆಲ್ಲಾ ಕಾದೋಗದೆ। ಇವನು ತಮ್ಮಡಿತನಕ್ಕೆ ತರವಲ್ಲ ಅನ್ಬುಟ್ಟು। ಅವರು ಅಚ್ಚೆಳ್ಳು ಬೆಳೆವ ರಾಜ್ಯ ನೋಡುತವರೇ। ಮಾದೇವಾ।

ಆಹಾ ನೋಡಮ್ಮ ಶಿವನಾ
ಮಲೆಯೋ ಮಾದೇವ ಬರುವ ಚಂದವಾ
ನೋಡಿ ನಮ್ಮ ಶಿವನಾ!"
ಮಲೆಯೋ ಮಹದೇವ ಬರುವ ಚಂದವಾ
ನೋಡಿ ನಮ್ಮ ಶಿವನಾ॥

ಹರಹರಾ ಶಿವ ಶಿವಾ! ನಮ್ಮಪ್ಪಾಜಿ ಮಾದೇವ ಮರಿದೇವ್ರು। ಏಳುಮಲೆ ಎತ್ತಯ್ಯನವರು। ಈಗ ಎಲ್ಲಾ ಒಕ್ಕಲು ಪಡೆದಾಯ್ತಲ್ಲ। ಎಳ್ಳು ಕೊಟ್ರೆ ಆ ಎಣ್ಣೆ ಮಜ್ಜನವಾಗಲಿಕ್ಕೆ। ಆ ಎಣ್ಣೆ ಮಜ್ಜನ ಮಾಡಕ್ಕೆ ಪಡೆದಾಯ್ತಲ್ಲ। ಇನ್ನು ಎಳ್ಳು ಕೊಡೋ ವೊಕ್ಕಲು ಬಂದ್ರಲ್ಲ। ಆ ಕೌದಳ್ಳಿ ವೊಳಗೆ ಕಾಳಮ್ಮ ಕಾಳಮ್ಮ ಅನ್ನೋವಳಿಗೆ। ಭಾಗ್ಯ ಕೊಟ್ಟಿವಲ್ಲಾ! ಅವಳನ್ನು ಎಳ್ಳು ಕೂಡಬೇಕು ಅಂತೇಳಿ। ಒಕ್ಕಲು ಪಡೀಬೇಕು ಅಂತ ಯೇಳ್ಬಿಟ್ಟು। ನಮ್ಮಪ್ಪಾಜಿ ಮಾಯಕ್ಕಾರ ಮರಿದೇವರು। ಏನಪ್ಪಾ ಚಿಕ್ಕವನೇ ಮಗನೇ। ನಾನು ಎಳ್ಳನ್ನು ಕೊಡುವಂತ ಒಕ್ಕಲನ್ನು। ಕೌದಳ್ಳಿ ಒಳಗೆ ಪಡೆದು ಮಡಗಿವ್ನಿ ಕಣಯ್ಯ। ಕಾಳಮ್ಮ ಕಾಳಮ್ಮ ಅಂತೇಳಿ। ನೀನೋಗಿ ಚಿಕ್ಕವನೆ ಕಾರಯ್ಯ! ಅರವಟ್ಟಿಗೆ ಕ್ವಾರಣ್ಯಕೆ ವೋಗ್ಬಾ ಅಂತವರೇ। ಮಾದೇವಾ.

ಆಹಾ.... ನೋಡಿ ನಮ್ಮ ಶಿವನಾ।
ಮಲೆಯೋ ಮಾದೇವ ಬರುವ ಚಂದವಾ।
ಕಾಡಿ ಬೇಡಿ ಶಿವನಾ।

ಯಾವಾಗ ಅಪ್ಪಟ್ಟಿಗೆ। ಕ್ವಾರಣ್ಯಕೆ ಹೋಗಿ ಬಾ ಅನ್ನುಬುಟ್ರೋ ಮಾದಪ್ಪನವರು। ಕಾರಯ್ಯನವರಿಗೆ ಬಾಳ ದುಕ್ಖ ಬನ್ನುಡ್ತು। ಅಯ್ಯೋ ಗುರುವೇ ಗುರುಶ್ರೀ ಪಾದವೇ। ತಂದೆ ಹೇಳ್ತೀನಿ ಕೇಳ್ ದಮ್ಮಯ್ಯ। ನಾನು ಒಂದು ಮಾತೇಳ್ತೀನಿ। ಕ್ವಾಪ ಮಾಡ್ಬ್ಯಾಡಿ ಅಂದ್ಬುಟ್ಟು। ಅದೇನು ಮಾತು ಅಂದ್ರೆ ಹೇಳ್ತೀನಿ ಕೇಳಿ ಸ್ವಾಮಿ। ಯಾರು ಸುದ್ದಿ ಹೇಳಿದ್ರೂ। ಕೌದಳ್ಳಿ ಕಾಳಮ್ಮನ ಸುದ್ದಿ ಮಾತ್ರ ನನಗೆ ಹೇಳಬ್ಯಾಡಿ। ಅಂತವ್ನೋ ಕಾರಯ್ಯಾ।

ಆಹಾ.... ನೋಡಿ ನಮ್ಮ ಶಿವನಾ।
ಮಲೆಯೋ ಹುಲಿವಾಹನ ಬರುವ ಚಂದವಾ
ನೋಡಿ ನಮ್ಮ ಶಿವನಾ।

ಯಾಕಪ್ಪಾ ಅಂತ ಕೇಳಿದ್ರು। ಏಳ್ತೀನಿ ಕೇಳಿ ಗುರುವೇ। ಅವರು ನಮ್ಮಂತ ದಾಸ ಜೋಗಿ, ಗುಡ್ಡ ಜಂಗಮರ ಕಂಡ್ರೆ। ನೀಡಿದ್ ಕಾಲ ತೆಗೀನಿಲ್ಲ। ಬಗ್ಗಿದ ತಲೆ ಮೇಲಕ್ಕೆತ್ತಲಿಲ್ಲ, ನಮ್ಮನ್ನು ಯಾರು ಅಂತ ನೋಡಿ ದಮ್ಮಯ್ಯ। ಅದಕ್ಕಾಗಿ ಸ್ವಾಮಿ। ಅವರಟ್ಟಿ ಒಳಗೆ ಹೋಗಳಿಕೆಯ ತರಹ। ಯಾರಾದ್ರೂ ದಾಸ ಗುಡ್ಡ ಜೋಗಿ। ಯಾರಾದ್ರೂ ಬಂದುಬಿಡ್ತಾರೆ ಅಂತ। ಅಟ್ಟಿ ಒಳಕ್ಕೆ ಬರ್ತಾರೆ ಅನ್ನುಟ್ಟು। ಹಟ್ಟಿ ಮುಂದೆ ಏನು ಪಾರ ಮಡಗು ಅಂತ। ಕಾಳಿಂಗ ಸರ್ಪಾನೇ ಕಾವಲು ಮಡಗವ್ರೆ। ಬಿಚ್ಚುಗತ್ತಿ ಪಾದ ಮಡ್ಗವ್ರೇ ದಮ್ಮಯ್ಯ। ಅದಕ್ಕಾಗಿ ಅವಳ ಸುದ್ದಿ ನನಗೆ ಹೇಳ್ಬ್ಯಾಡಿ ಅಂತವನೇ। ಕಾರಯ್ಯ।

ಆಗಲೀಗ ನಮ್ಮಪ್ಪಾಜಿ ಮಾಯಕಾರ ಮರಿದೇವರು। ಸಬಾಸ್ ನನ್ನ ಕಂದ। ಕಾರಯ್ಯ ಆಗಿದ್ದ ಪಕ್ಷದಲ್ಲಿ। ನೀನು ಇಲ್ಲೇ ಇರು। ನಾನು ಬಿಕ್ಷಕ್ಕೋಗಿ ಬತ್ತೀನಿ। ಇಲ್ಲದಿದ್ದರೆ ನಾನು ಅವಳ ಹಾಲು ಕೊಡಮಾಡಿ ಬರ್‍ತೀನಿ ಕಂದಯ್ಯ। ಆ ಚಂದ ಮಗನೇ। ನಾನು ಬರೋತನ್ಕ ಈ ಗುಡಿ ಗೋಪ್ರರ। ಚೆನ್ನಾಗಿ ನೋಡಿಕೋಬೇಕು। ಬಂದೋರ ಕೈಲಿ ದೂಪ ತಕ್ಕೋಬೇಕು। ಬರದವರ ತಪ್ಪು ಕಾಣಿಕೆ ತಕ್ಕೋ ಬೇಕು ಅಂತೇಳ್ಬುಟ್ಟು। ಕಂದ ಕಾರಯ್ಯನಿಗೆ ಬುದ್ಧಿ ಹೇಳಿ। ಅಪ್ಪಾಜಿಯವರು ಏಳುಮಲೆ ಹೆತ್ತಯ್ಯನವರು। ಬೇವಿನ ಹಟ್ಟಿಗೆ ಬಿಕ್ಷೆಗೆ ಬತ್ತವ್ರೇ। ಮಾದಯ್ಯನವರು।

> ಆಹಾ.... ನೋಡಿ ನಮ್ಮ ಶಿವನಾ।
> ಮಲೆಯೋ ಕಿಡುಗಣ್ಣ ಬರುವ ಚಂದಾವಾ
> ಕಾಡಿ ಬೇಡಿ ಶಿವನಾ।

ಬೇವಿನ ಹಟ್ಟಿಗೆ ಬಿಕ್ಷೆಗೆ ಬರುವುದರೊಳಗಾಗಿ ಇಲ್ಲಿ ಕಾಳಮ್ಮನಿಗೆ ಯಾವ ತರಹವಾಗಿ। ಹೇಗೆ ಐಸ್ವರ್ಯ ಬಂದ್ಬುಟ್ಟಿದೆ ಅಂತ ಹೇಳಿದ್ರೆ। ನಲವತ್ತೇರು ಒಟ್ಟು ಒತ್ತುಟುಕೇ ಎಂಬತ್ತೇರು ಆರಂಬ ಮಾಡ್ತಾರಂತೆ ಹೊಲದಲ್ಲಿ। ಅದೂ ಅಲ್ಲದೇ ಕಾಳಮ್ಮನಿಗೆ। ಏಳು ಜನ ಜೀತದಾಳುಗಳು। ಏಳು ಜನ ಕಂಬಳಿಕಾರರು। ಏಳು ಜನ ತಮ್ಮ ಗಂಡು ಮಕ್ಕಳು। ಎಲ್ಲ ಇಪ್ಪತ್ತೊಂದು ಜನ ಕೆಲಸ ಮಾಡ್ತಾರೆ ಹೊಲದಲ್ಲಿ। ಆಗ ಕೆಲಸ ಮಾಡುವಂತ ಕಾಲದಲ್ಲಿ। ಏಳು ನೂರೆಪ್ಪತ್ತು ಕಂಡುಗ ಎಳ್ಳು ಬೆಳೆದು। ಬಗಲು ರಾಸಿ ಆಕ್ಬುಟ್ಟವ್ರೆ। ಆದ್ರೆ ಕಾಳಮ್ಮ ಅಂತಕ್ಕವಳು। ಏಳು ನೂರೆಪ್ಪತ್ತು ಕಂಡುಗ ಎಳ್ಳು। ಮುಗಿಲ ರಾಸಿ ಮೇಲೆ। ಎಪ್ಪತ್ತೇಳು ಮೊಳಸೀರೆ ಒಂದೇ ಸುತ್ತು ಸುತ್ತುಕೊಂಡು ಕೂಡಿರುವಂತೆ ಐಸ್ವರ್ಯ ಬಂದುಬುಡ್ತು ಕಾಳಮ್ಮನಿಗೆ ಅಲ್ಲಿಗೆ। ಬೇವಿನಕಾಳಿ ಕಾಲು ತೊಳೆಯಲಿಕ್ಕೆ। ನಡಟ್ಟಿ ಒಳಗೆ ಪಚ್ಚದ ಕಲ್ಲು। ಮೂಡಲ ಬರೋ ಸೂರ್ಯನಿಗೆ। ಮೂಡಲ ಮುಕ ಹಾಕ್ಕಂಡು। ಎಡಬಲ ರಾಮ ಕಣಜ ಲಕ್ಷ್ಮಣ ಕಣಜ। ದನ ಕುರಿಗಳಿಗುಂಟು ಅಪರಂಜಿ ಗುಂಟು। ಗುರುವೇ ಚಿನ್ನದ ಕಲಗಚ್ಚಿನಲ್ಲಿ। ಗುಂಚಕ್ಕಿ ನೀರು ಕುಡೀತಾವೆ ಅಂತೇಳಿ। ಮಾಯದ ಬಲೇನ ಬುಟ್ಟಿದ್ಲಂತೆ। ರಾಗಿ ಸುತ್ತ ಬೆಜ್ಜಲು ತರಿಗೆಂಡ ಬಿಟ್ಟಿದ್ದ ಕಾಳಮ್ಮ।[a]

ಒಂದನೇ ಬಾಕಲಲ್ಲಿ ದನ ಕಟ್ಟವ್ರೆ। ಎರಡನೇ ಬಾಗಿಲಲ್ಲಿ ಕಡ್ಕೋ ನಾಯಿ ಕಟ್ಟವ್ರೆ। ಮೂರನೇ ಬಾಕಲಲ್ಲಿ ಬಂದೂಕದಲ್ಲಿ ಪಾರ ಮಡಗವ್ರೆ। ನಾಕನೇ ಬಾಗಿಲಲ್ಲಿ ಬಿಚ್ಚುಗತ್ತಿ ಪಾರ ಮಡಗವ್ರೆ।[b]

> ರಾಗಿ ಬೀಸೋ ಕಲ್ಲೆಲ್ಲ ಚಿನ್ನ ಬೆರಳಿ ಅಪರಂಜಿ।
> ಕಲ್ಲು ಕಟ್ಟೆ ಮೇಯವು ಇಪ್ಪತ್ನಾಲ್ಕು ಏರೆತ್ತು।
> ನಲವತ್ತೆಂಟ್ ಏಡ್ಕಟ್ಟಿ ಆರಂಬ ಮಾಡಿಸ್ತಿರುವಳು।
> ನಲವತ್ತೆಂಟ್ ಜನ ಜೀತಗಾರ್‍ರ ತಡದವಳೆ।

ಕಾಳಮ್ಮಂಗೆ ಏಳು ಸಲುಗೆ ಕುರಿಯಾದವಂತೆ।
ಏಳು ಸಲುಗೆ ದನವಾದವಂತೆ।

ಬೇವುನ್ನಟ್ಟಿ ಒಳಗೆ ಕಾಳಮ್ಮ। ಸಿರಿಸಂಪತ್ತಿನಲ್ಲಿ ವಾಲಾಡ್ತಾ ಇದ್ದಾಳೆ। ಆರು ಸಾವ್ರಕೆ ಚುಜ್ಜಲಟ್ಟಿ ಕಟ್ಟವಳೆ। ಮೂರು ಸಾವ್ರಕೆ ಬೇವುನ ಹಟ್ಟಿ ಕಟ್ಟವಳೆ। ಬೇವಿನಟ್ಟಿಗೆ ಚುಜ್ಜಲಟ್ಟಿಗೆ। ಹಿಡುದ ಕತ್ತಿ ಪಾರ। ಮೊರ್ದು ಬರುವಂತ ಹಾವುನ ಪಾರ।[3]

ಡೊಳ್ಳು ಮುರಿದು ಮುಂಗೈ ಮೇಲೆ ಮಡಿಕ್ಕಂಡು ಕೂತವಳಂತೆ। ಕಾಳಮ್ಮನಿಗೆ ಕಣ್ಣೇ ಕಾಣ ಬರೋಲ್ಲವಂತೆ। ಆತರ ಕಾಳಮ್ಮ ಹೊಲದಲ್ಲಿ! ಎರಡು ಕಡೆ ಕೆಲಸ ಮಾಡಿಸ್ಕಂಡು ಕುಂತವ್ಳಂತೆ। ಈ ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಅಲ್ಲಿಗೆ ಬೇವಿನ ಹಟ್ಟಿಗೆ ಬಿಕ್ಸೆಗೆ ಬರುವಂತ ಕಾಲದಲ್ಲಿ! ಆಗ ಇನ್ನೊಂದು ಆಲೋಚನೆ ಮಾಡ್ತಾರೆ! ಇದ್ದಕ್ಕಿದ್ದಾಗೆ ನಾನು ಇವಳಟ್ಟಿಗೆ ಬಿಕ್ಸೆಗೆ ಹೋಗಬಾರದಲ್ಲ। ಮೊದಲಾಗಿ ಎಲ್ಲಾದ್ರೂ ಒಂದು ಕಡೆ ಕೂತ್ಕಂಡು। ಇವಳ ಆಡಳಿತವನ್ನೆಲ್ಲಾ ನೋಡ್ಬುಟ್ಟು। ಆಮ್ಯಾಕೆ ತಣತಣ ಅಂತ ಹೋಗಬೇಕು। ಅಂತ ಅಪ್ಪಾಜಿಯವರು ಬೇವಿನ ಮರದ ಮೇಲೆ ನೋಡ್ತಾ ಕುಂತವ್ರೇ। ಮಾದೇವಾ।

ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವ ಚಂದವಾ
ಕಾಡಿ ಬೇಡಿ ಸಿವನಾ।

ಬೇವಿನ ಮರದ ಮೇಲೆ ಆಡಳಿತ ನೋಡ್ತಾ ಕುಂತಿರುವಂತೆ। ಆಗ ಕಾಳಮ್ಮನಂತಕ್ಕಂತವಳು। ಏಳು ನೂರೆಪ್ಪತ್ತು ಕಂಡುಗ ಎಳ್ಳು ಬೆಳೆದು ಬಿಟ್ನಲ್ಲಾ! ಆಗಲೇ ಮದ್ದಾನ ಆಗೋಯ್ತು! ಅಲ್ಲೀ ಆದ್ರೆ ಕಾಳಮ್ಮ ಏನ್ ಮಾಡ್ತಾಳೆ ಅಂತ ಹೇಳಿದ್ರೆ! ಏನಯ್ಯಾ ನಾನು ಹೋಗಿ ನಾನು ಉಡ್ಕಂಡು। ನಿಮಗೆಲ್ಲಾ ಹಿಟ್ಟೊತ್ಕೊಂಡು ಬರ್ತೀನಿ ಅನ್ನುಟ್ಟು। ಅವರನ್ನೆಲ್ಲಾ ಕರೆದು ಬುದ್ದಿ ಹೇಳ್ಬುಟ್ಟು। ಕಾಳಮ್ಮನಂತವಳು ಹಿಟ್ಟು ಮಾಡಿಸ್ಕಂಬರಕ್ಕೆ ಅವಳು ಬೇವಿನ ಹಟ್ಟಿಗೆ ಬರ್ತಾಳೆ। ಅವಳು।

ನೋಡಿ ನಮ್ಮ ಸಿವನಾ।

ಅಲ್ಲಿಗೆ ಬೇವಿನ ಹಟ್ಟಿಗೆ ಬಂದು। ಸೊಸೇನ ಕೂಗಿದಂತಾ ಕಾಲದಲ್ಲಿ! ಏಳು ಜನ ಸೊಸೆಯರು। ಏನಪ್ಪಾ ಅಂತೇಳಿದ್ರೆ। ಆಲಾಜಿ ಬ್ಯಾಲಾಜಿ, ನಿಂಗಾಜಿ, ನೀಲಾಜಿ। ಸುವರ್ಣೆ ಪದ್ಮಾವತಿ। ತನ್ನ ಅಣ್ಣನ ಮಗ ಜುಂಜೇ ಗೌಡನ ಮಗಳು ದ್ಯಾವಾಜಮ್ಮ। ಹಾಲಿದ್ದಾ ದ್ಯಾವಾಜಮ್ಮ ಅನ್ನುಟ್ರಂತೆ। ಹಾಲಿದ್ದಾ ಅತ್ತೆಮ್ಮಾ ಅಂತಾ ಓಡಿ ಬಂದ್ಲಂತೆ। ಕೈಕಾಲಿಗೆ ನೀರು ಕೊಟ್ಟಳಂತೆ ದೇವಾಜಮ್ಮ। ಆಗ ಹೋಗಿ ನಡು ಮಲೆಯಲ್ಲಿ ಕೂತುಕೊಂಡು ಬಿಟ್ಟ ಕಾಲದಲ್ಲಿ! ಏನಮ್ಮ ನಾನು ಏಳ್ನೂರ ಎಪ್ಪತ್ತು ಕಂಡುಗ ಎಳ್ಳು ಬೆಳೆದಾಕ್ಬುಟ್ಟು ಬಂದಿವ್ನಿ! ಏನಾದ್ರೂ ಮುಂಡೆ ಮಕ್ಕಳು। ತಲೆಗೊಂದಿಡಿ ಅಂತ ಎತ್ಕಂಬುಟ್ರೆ। ನನ್ನ

ಎಳ್ಳಿನ ರಾಶಿ ಕಮ್ಮಿ ಆಗೋಯ್ತದೆ ಅಂತೇಳ್ಬುಟ್ಟು। ಬಿರ್ರ ಬಿರ್ರನೆ ಅಡಿಗೆ ಮಾಡಿ ಅನ್ನುಟ್ಲಂತೆ। ಆಗ ದ್ಯಾವಾಜಮ್ಮನೆಂಬವಳು। ಆರು ಜನ ವಾರ್ಗಿತ್ತೀರ್ನ ಕರೆದ್ಬುಟ್ಟು। ಇಗೋ ನೀವೆಲ್ಲಾ ಅಂಬಲಿ ಹಿಟ್ಟು ಉಳ್ಳಿಕಾಳು ಮಾಡಿ ಅನ್ನುಟ್ಟು। ನಮ್ಮ ಅತ್ತೆಮ್ಮ ಎಳ್ಳು ಕಣಕ್ಕೆ ಹೋದ್ರೆ। ಬರೋದು ಇನ್ನೆಷ್ಟು ದಿನವಾದ್ದೋ ಅನ್ನುಟ್ಟು। ಸತ್ಯವಂತೆ ದ್ಯಾವಾಜಮ್ಮ ನಾಗಿರತಕ್ಕಂತವಳು। ಅವರಣ್ಣನ ಮಗಳು ದ್ಯಾವಾಜಮ್ಮ। ಅವಳು ಏನ್ಮಾಡಿದ್ಲಪ್ಪಾ ಅಂತ ಹೇಳಿದ್ರೆ। ತಮ್ಮ ಅತ್ತೆಮ್ಮನಿಗೆ। ಬೇಗ ಅಡಿಗೆ ಮಾಡ್ಬೇಕು ಅಂತ ಹೇಳ್ಬಿಟ್ಟು। ಹಾಲು ಅನ್ನ ಪಾಲು ಪಂಚಾಮೃತ ಮಾಡಿಬಿಟ್ಟಳಂತೆ। ಮಾಡ್ಬುಟ್ಟು ಅತ್ತೆಮ್ಮಾ ಅತ್ತೆಮ್ಮ ಕೈ ನೀಡಿ ಅಂದ್ಲಂತೆ। ಕೈ ನೀಡಿ ಇಸ್ಕಂಬುಟ್ಲು। ಕಾಲು ತೊಳ್ಕಂಬುಟ್ಲು। ಅವಳ ಮುಂದೆ ತೇವಟಗೆ ಮಡಗಿದ್ಲಂತೆ। ಏನು ಕೂತ್ಕಂಬುಟ್ಲು। ಏನ್ ಕೇಳ್ತಾಳೆ ಅಂದ್ರೆ। ಏನಮ್ಮಾ ನನಗೆ ಅಡಿಗೆ ಮಾಡಿದ್ದೀಯೋ। ಹಿಟ್ಟು ಮಾಡಿದ್ದೀಯೋ ಅಂತ ಕೇಳಿದ್ಲಂತೆ। ಆಗ ಹೇಳ್ತಾಳೆ ದ್ಯಾವಾಜಮ್ಮ। ಅತ್ತೆಮ್ಮ ಅತ್ತೆಮ್ಮ ನೀವು ಎಳ್ಳು ಕಣಕ್ಕೆ ಹೋದ್ರೆ ಬರೋದು ಎಷ್ಟು ದಿನವಾದ್ದೋ ಅನ್ನುಟ್ಟು। ಹಾಲು ಅನ್ನ ಪಾಲು ಪಂಚಾಮೃತ ಮಾಡ್ದೆ। ಆವಾಗ ಬೇವಿನ ಕಾಳಮ್ಮನಿಗೆ ಬಾಳ ಕೋಪ ಬನ್ಬುಟ್ಟು। ಏನಲೇ ನನ್ನ ಸವತಿ ಮಗಳೇ। ಹಾಲು ಅನ್ನ ಪಾಲು ಪಂಚಾಮೃತ ಮಾಡಿದ್ರೆ। ಇಷ್ಟು ಗಾತ್ರ ಬದುಕನ್ನು ನಾನು ಸಂಪಾದ್ನೆ ಮಾಡಿದ್ದು। ನಿಮ್ಮಪ್ಪನ್ನ ತಿನ್ನೋವ್ನ ಮಗಳೇ। ಅಂದ್ಬುಟ್ಟು ಸತ್ಯವಂತೆ ದ್ಯಾವಾಜಮ್ಮನಿಗೆ ಅಲ್ಲೇ। ಕೀನ ಕಟ್ಟಾವಾಗಿ ಬಯ್ತಾ ಅವಳೇ।

ನೋಡಿ ನಮ್ಮ ಸಿವನಾ।
ಮಲೆಯೋ ಕಿಡುಗಣ್ಣ ಬರುವ ಚಂದವಾ।

ಸರಿ ಅತ್ತೆಮ್ಮನವರೇ ನನಗೆ ತಿಳೀಲಿಲ್ಲ। ಏನ್ ಮಾಡಬೇಕು ಅಂತ ಹೇಳಿ ಅಂತ ಕೇಳಿದ್ಲಂತೆ। ಆಗ ದ್ಯಾವಾಜಮ್ಮನು ಹೇಳ್ತೀನಿ ಕೇಳು। ಸವತಿ ಮಗಳೇ ಮೂರು ಹೊಲದಲಿ ಬೆಳೆದು ಮಾಡಿರತಕ್ಕಂತ। ಮಗ್ಗುಲು ರಾಗಿ ಒಂದು ಮಾನ ಅಳ್ಕಂಬನ್ನುಟ್ಟು। ನೀನು ನನಗೆ ಅರೆದು ಅಂಬಲಿ ಕಾಯಿಸತಕ್ಕಂತವಳೇ। ಕಾಳವ್ವಾ।

ಆಹಾ.... ನೋಡಿ ನಮ್ಮ ಸಿವನಾ।

ಯಾವಾಗ ಅರೆದು ಅಂಬಲಿ ಕಾಯಿಸು ಅಂತ ಹೇಳ್ಬುಟ್ಳೋ। ದ್ಯಾವಾಜಮ್ಮನಿಗೆ ಬಾಳ ದುಕ್ಕ ಕೋಪ ಬಂದ್ಬುಟ್ಟು। ಅಯ್ಯಯ್ಯೋ ಸಿವನೇ ಎಂತ ಬಡಸ್ನಾನದ ಮಾತು ಹೇಳಿಬುಟ್ಲು ನಮ್ಮ ಅತ್ತೆಮ್ಮಾ। ಹೆಜ್ಜೆಗೊಂದು ಗುಳಿ। ಗೇಣಿಗೊಂದು ಗುಳಿ। ದವಸವೇ ತಂದು ತುಂಬವಳೇ। ನಮ್ಮ ಅತ್ತೆಮ್ಮಾ। ಇಂತ ಬಡಸ್ನನದ ಮಾತು ಹೇಳಿದ್ಲಲ್ಲಾ ಅನ್ನುಟ್ಟು। ನನಗೇನು ಅತ್ತೆಮ್ಮಾ। ಹೇಳಿದಂತೆ ಮಾಡ್ಬೇಕು। ಅತ್ತೆ ಕೈಲಿ ಸೊಸೆ ಸರಿ ಅನ್ನುಟ್ಟು। ಅಲ್ಲಿಂದ ದ್ಯಾವಾಜಮ್ಮನಾದಂತಕ್ಕವಳು। ಒಂದು ಮಾನ ರಾಗಿ ಅಳ್ಕಂಡು ಬಂದ್ಬುಟ್ಟು ಸರಸ್ವತಿ ಒಳಗೆ ಸಣ್ಣಗೆ ಬೀಸಿ। ಹಿಟ್ಟು ತೊಳಿದು ಎತ್ಕಂಬುಟ್ಟು। ಒಂದು ಅರುವಿ ನೀರ್ಬುಟ್ಬುಟ್ಟು। ಅತ್ತೆಮ್ಮಾ ಅಂಬಲಿ ತಯಾರಾಯಿತು ಅಂದ್ಬುಟ್ಲಂತೆ। ಆಲ್ಲಿಗೆ ತತ್ತಮ್ಮ

ಅಂತ ಇಸ್ಕಂಬುಟ್ಳು। ಮೂರು ಗಾತ್ರ ಮುರಿದು। ಮುಂಗೈ ಮೇಲೆ ಮಡಕ್ಕಂಡು ಕೂತ್ಗಂಬುಟ್ಟಂತೆ! ಆಗಲೀಗ ಕಾಳಮ್ಮ ಕೂತ್ಕಂತಿದ್ದ ಕಾಲದಲ್ಲಿ। ಸತ್ಯವಂತೆ ದ್ಯಾವಾಜಮ್ಮ। ಅಂಬಲಿ ಕಾಯಿಸಿ ತಂದು। ತಣಗೆ ಹುಯ್ಯುವಂತ ಕಾಲದಲ್ಲಿ। ಕಾಳಮ್ಮ ನಾಗಿರತಕ್ಕಂತವಳು। ಅಂಬಲಿ ಗಟ್ಟಿಗಿದ್ದೋ ತೆಳ್ಗಿದ ಕಾಯ್ಯವಳೋ ಅಂದ್ಬುಟ್ಟು। ಕಾಳಮ್ಮ ಅಂಬಲಿಗೆ ಬೆಟ್ ಹಾಕಿ ನೋಡ್ತಾ ಅವ್ಳೆ। ಕಾಳಮ್ಮಾ।

ಆಹಾ.... ನೋಡಿ ನಮ್ಮ ಶಿವನಾ।

ಯಾವಾಗ ಅಂಬಲಿಗೆ ಬೆಟ್ ಹಾಕಿ ನೋಡ್ಬುಟ್ಳೋ। ಕಾಳಮ್ಮ ಅವಳ ಕಣ್‌ಗೆ। ಸ್ವಲ್ಪ ಗಟ್ಟಿಗೆ ಕಂಡ್ಬುಡ್ತು। ಅಲ್ಲಿಗೆ ಅಂತವಳೇ। ಏನಮ್ಮಾ ದ್ಯಾವಾಜಿ ದ್ಯಾವಾಜಿ ನಿಮ್ಮಪ್ಪನ್ನ ತಿನ್ನವ್ಳೆ। ಬಾಯಿಲ್ಲಿ ಅಂತ ಕರದ್ಬುಟ್ಳು। ಆಗ ಕೋಣೆಯಿಂದ ಬಂದು। ಏನತ್ತೆಮ್ಮ ಎಂದು ತಲೆ ಬಗ್ಗಿಸಿ ನಿಂತಕೊಂಡು। ಅಲ್ಲ ಕಣೆ ಸವತಿ ಎತ್ ಮಗಳೇ। ಇನ್ನೂ ಪಸಿ ತೆಳ್ಗೆ ಕಾಯಿಸಿದ್ರೆ। ನಿಮ್ಮಪ್ಪನ ಮನೆಯಿಂದ ತರ್ತಿದ್ದ್ಯಾ ನೀರಾ। ನಿಮ್ಮಪ್ಪನ ಮನೆಯಿಂದ ತರ್ತಿದ್ದ್ಯಾ ಸೌದ್ಯಾ ಅಂದ್ಬುಂತೆ। ಅತ್ತೆಮ್ಮ ನಾನು ಕಾಣೆ ಅನ್ಬುಟ್ಳು। ತಿರುಗಿ ತಕ್ಕಂಡೋಗುಯ್ದು ಬುಟ್ಟು। ಇನ್ನೊಂದರವಿ ನೀರೂದುಬುಟ್ಟು। ಇನ್ನೊಂದು ಉರಿಹಾಕಿ। ಇನ್ನೊಂದು ಮರಳ ಮರಳಿಸಿಬಿಟ್ಟು। ತಕ್ಕಂಬಂದು ತಣಿಗ್ಗೆ ಬಗ್ಗಿಲ್ದಂತೆ। ಆಗ ಕಾಳಮ್ಮ ಅಂತಕ್ಕವಳಿಗೆ। ಅವಳ ಮೂಡಲ ಗಾತ್ರ ಡೊಳ್ಳು ಅಂತಾದ್ದು ಕಂಡು ಬಂದ್ಬುಡ್ತು। ನೀರು ಹಾಕಿರೋ ಅಂತ ಗೆರೆ, ಅಂಚುಗಳೆಲ್ಲೆಲ್ಲಾ। ಅದರೊಳಗೆ ಕಂಡು ಬಂದುಬುಡ್ತು। ಆಗ ಸಂತೋಸ ಬಂದ್ಬುಡ್ತು। ಕಾಳಮ್ಮನಿಗೆ। ಸಂತೋಸ ಬಂದ್ಬುಡ್ತು। ಈ ದ್ಯಾವಾಜಿ ನಮ್ಮಣ್ಣನ ಮಗಳು। ಹಿರಿ ಸೊಸೆ ನೀನು। ನಾನು ಎಳ್ಳು ಕಣಕ್ಕೆ ಬರೋದು ಎಷ್ಟು ದಿವಸವಾದ್ದೋ ಏನೋ। ಅದರೊಳಗೆ ನಿನಗೆ ಮೂರು ಬುದ್ಧಿ ಮಾತು ಹೇಳ್ಕೊಡ್ತೀನಿ। ಕೇಳು ಬಾ ಅಂತ ಕರೆದು। ತೊಡೆ ಮೇಲೆ ಕೂರಿಸಿಕೊಂಡು। ಸೊಸೆಗೆ ಬುದ್ಧಿ ಹೇಳ್ತಾ ಕುಂತವಳೇ ಕಾಳಮ್ಮ

ಆಹಾ.... ನೋಡಿ ನಮ್ಮ ಶಿವನಾ।

ಸೊಸೆಗೆ ಯಾವತರ ಬುದ್ಧಿ ಹೇಳ್ತಾವ್ಳೆ ಅಂತ ಹೇಳಿದ್ರೆ। ಏನಮ್ಮಾ ದ್ಯಾವಾಜಿ ಅಣ್ಣನ ಮಗಳೇ। ನನ್ನ ಹಿರೇಸೊಸೇನೇ ಮನೆಗೆ ದೊಡ್ಡವಳು। ಇದೋ ನಾನು ಹೋದ ಮ್ಯಾಲೆ। ನಾನು ಎಳ್ಳು ಕಣಕ್ಕೆ ಹೊಂಟೋದ್ಮೇಲೆ। ಯಾರಾದ್ರೂ ಕಾಳಮ್ಮ ಬದುಕ್ವಾಳೆ, ಬಾಳ್ತಾಳೆ, ಅಂತೇಳ್ಬುಟ್ಟು। ಕೆಟ್ಟಾಗ ನೆಂಟರಿಲ್ಲ ತಿರ್ಕಂಡು ತಿನ್ನುವಾಗ ದೇವರಿಲ್ಲ ಅಂದಾಗೆ। ಈವಾಗ ಕಾಳಮ್ಮ ಬದುಕ್ತಾಳೆ ಅನ್ಬುಟ್ಟು। ಯಾರಾದ್ರೂ ಅಯ್ಯಗಳು ಅಪ್ಪಗಳು। ಗುಡ್ಡಗಳು ಜೋಗಿಗಳು। ಜಂಗಮರು ಬರ್ತಾರೆ। ಅವರಿಗೆಲ್ಲಾ ಒಂದೊಂದಿಡಿ ರಾಗಿ ಕೊಡ್ತಾ ಬಂದ್ರೆ। ನನ್ನ ಮನೇಲಿ ಏಳು ಸೇರು ರಾಗಿ ಕಾಲಿ ಆಗ್ಬುಡದೆ। ಆ ಏಳುಸೇರು ರಾಗಿ ತಂದ್ಬಿಟ್ಟು। ಸರಸ್ವತಿ ಒಳಗೆ ಸಣ್ಣ ಬೀಜ ತೆಗೆದ್ಬುಟ್ಟು। ಹಸಿಟ್ಟು ತೊಳೆದು ಎತ್ಕಂಬುಟ್ಟು। ಹಾಲಿಗ್ ಒಂದೊಂದ್ ಬ್ಯಾಲದ ಕಾಯಿಗಾತ್ರ। ಒಂದೊಂದು ಏಳು ಮುದ್ದೆ ಹಿಟ್ಟು ಮಾಡಿಬಿಟ್ಟು।

ಏಳು ಜನ ಗಂಡು ಮಕ್ಕಳಿಗೆ ಕೊಟ್ಟಿದ್ದೆ ಆದ್ರೆ। ನನ್ನ ಕಣ್ಣಾಮಣಿಗಳೇ। ಅವರು ಇನ್ನೂ ಬದ್ರಾಗೆ ಬರ್ತಾರೆ ಕಣಮ್ಮಿ। ದ್ಯಾವಾಜೀ...

ಆಹಾ.... ನೋಡಿ ನಮ್ಮ ಸಿವನಾ।

ಅವರು ಇನ್ನೂ ಬದ್ರಾಗೆ ಉಳಿದಾವ್ರೆ ದ್ಯಾವಾಜಿ। ಇದರೊಳಗೆ ಇನ್ನೊಂದು ಮೂರು ಮಾತು ಹೇಳ್ತೀನಿ। ಕೇಳು ದ್ಯಾವಾಜಿ। ನನ್ನಟ್ಟಿವಳಿಗೆ ಎಲ್ಲಾ ಹೋಗ್ತಕ್ಕಂತ। ನಡುದಾರಿ ಇದು। ಯಾರಾದರೂ ವೋಗ್ತೀರೋ ಅಂತ ಕಾಲದಲ್ಲಿ। ಇಗೋ ಪಸಿ ಸುಣ್ಣ ಕೊಡಮ್ಮಿ ಅಂತ ಕೇಳ್ಬುಟ್ರೆ। ಏನಾದ್ರೂ ಒಂದು ಸಾಸುವೆ ಗಾತ್ರ ಸುಣ್ಣ ಈಸ್ಕಂಬುಟ್ರೆ। ಯಾರಾದ್ರೂ ಪಟಪಟ ಒದ್ದಾಡ್ಬುಟ್ಟು। ಪ್ರಾಣ ವೋಗ್ತಿದೆ ಅನ್ಬುಟ್ರೆ। ಒಂದು ತೊಟ್ಟು ಬಾಯಿಗೆ ನೀರು ಬಿಟ್ಟು ಗಿಟ್ಟೇ। ಇಗೋ ಇನ್ನೊಂದು ಮಾತು ಹೇಳ್ತೀನಿ ಕೇಳಮ್ಮಿ। ನೀನು ಸರಸ್ವತಿ ಒಳಗೆ ಸಣ್ಣಗೆ ಬೀಸಿದ ರಾಗಿ। ಅದರೊಳಿಗೆ ಒಂದೊಂದು ಸಣ್ಣ ರಾಗಿ ಕಾಳು ಉಳ್ಕೊಂಡು ಬುಡ್ತವೆ। ನಿನಗೆ ಕಣ್ಣು ತಪ್ಪಿಸಿ ಉಳ್ಕಂಡು ಬುಡ್ತವೆ। ಅದ್ ಜ್ಞಾಪಾನ ದ್ಯಾವಾಜಿ। ಸರಿ ಅತ್ತೆಮ್ಮಾ। ನನ್ನ ಕಣ್ ತಪ್ಪಿಸಿ ಉಳ್ಕೊಂಡ ರಾಗಿಗೆ। ನಾನ್ ಏನ್ ಮಾಡ್ಲಿ ಅತ್ತೆಮ್ಮಾ ಅಂದ್ಲು। ಆ ರಾಗಿ ಕಲ್ಲಿನ ಸುತ್ತ ದ್ಯಾವಾಜಿ ನೀನು ಉಕ್ಕಿನ ಸೂಜಿಯಾಗೆ ಉಳಿಸವ್ವಾ।

ಆಹಾ.... ನೋಡಿ ನಮ್ಮ ಸಿವನಾ।

ಅದಾಯ್ತು ಇನ್ನೊಂದು ಮಾತೇಳ್ತೀನಿ ಕೇಳು ದ್ಯಾವಾಜಿ। ನನ್ನಟ್ಟಿ ಒಳಗೆ। ರಾತ್ರಿ ಹೊತ್ತು ಅವ್ವ ಮಾಡ್ಕಂತ। ಅಂಬಲಿ ಹಿಟ್ಟು ಉಳ್ಳಿ। ಅದೂ ತಂಗಳು ಮಜ್ಜಿಗೆ ಅದಲ್ಲಾ। ಏನಾರ ಮಿಕ್ಕಂಡ್ರೆ ಅದನ್ನ ತಕ್ಕಂಡೋಗಿ। ಹಿಂದ್ಲಟ್ಟಿ ಕಲ್ಗಚ್ಚಿಗೆ ಸುರಿತಿದ್ದೆ। ಆ ಕಲ್ಗಚ್ಚಿನಲ್ಲಿ ನನ್ನ ಆ ಎತ್ಗಳು ಕ್ವಾಣಗಳು। ಕುಡಿದೇ ಇನ್ನೂ ಬದ್ರಾಗವೇ ಕಣ್ ದ್ಯಾವಾಜಿ। ಅದೆಲ್ಲಾ ಹಿಂದ್ಲಟ್ಟಿ ಒಳಗೆ ಹಾಕಿದ್ದೆ। ಕಾಗೆ ಎತ್ಕಂಡೋಗ್ತವೆ। ಹದ್ದು ಹಿಟ್ಟು ಹೊತ್ತಕಂಡೋಗ್ತವೆ। ಪಾರ್ವಾಳಗಳು ಬರ್ತಾವೆ। ಕಾಳ ತಿನ್ಕಂಡು ಹೊರಟೋಗ್ತಾವೆ ದೇವಾಜಿ। ಅಲ್ಲಾ ಅತ್ತಿಗೆಮ್ಮಾ ನಾನು ಮುಂದಟ್ಟಿ ಒಳಗೆ ಇರ್ತೀನಿ। ಹಿಂದ್ಲಟ್ಟಿ ಒಳಗೆ ಕಾಗೆ, ಗುಬ್ಬಚ್ಚಿ, ಹದ್ದು ನಾ ಕಂಡಿರ್‍ತೀನಾ ಅತ್ತೆಮ್ಮಾ। ಅವೆಲ್ಲಾ ಬರ್‍ದೆಯಿದ್ದಂಗೆ ಮಾಡ್ಬೇಕಾದ್ರೆ। ನಾ ಹೇಳ್ತೀನಿ ಕೇಳು ದೇವಾಜಿ। ನನ್ನ ಹಿಂದ್ಲಟ್ಟಿ ಒಳಗೇ। ನೀನು ಮಂಜಿನ ಬಲೆಯ ಬೀಸವ್ವಾ।

ಆಹಾ.... ನೋಡಿ ನಮ್ಮ ಸಿವನಾ।
ಮಲೆಯೋ ಬೆಳ್ಳಿ ವಾಹನ ಬರುವ ಚಂದವಾ
ಮಲೆಯೋ ಮಾದೇವ ಬರುವ ಚಂದವಾ
ಕಾಡಿ ಬೇಡಿ ಸಿವನಾ

ಕಾಳಮ್ಮ ಈ ತರ ಬುದ್ಧಿಯೇಳ್ಬುಟ್ಟು। ಅಮ್ಮಾ ಹೇಳ್ತೀನಿ ಕೇಳಮ್ಮಾ। ದ್ಯಾವಾಜಿ ಉಸಾರಾಗಿರ್‍ಬೇಕು ಅಂತ ಹೇಳ್ಬುಟ್ಲು ಆ ಬೇವುನ ಕಾಳಿ ಕಿರಿಸೊಸೆ ನಿಂಗಾಜಿ। ಇತ್ಲಿದ್ದ ಕಡ್ಡಿಯ ಅತ್ಲಗಾಕೋ ಹಂಗಿಲ್ಲ। ಉಕ್ಕಂಡುಣಕೊಂಡ ಗುಣ್ ಕಲ್ನಂಗೆ। ಮೂಲೇಲಾದರೂ

ಕುಂತವಳೆ। ನೋಡಮ್ಮಾ ಶಿವನಾ। ನೋಡ್ದ ಬೇವುನ ಕಾಳಮ್ಮ। ಅಲ್ ನನ್ನ ಸವತಿ ಮಗಳೆ। ಉಣ್ಣಂಡುಂಣ್ಣಂಡು ಗುಣ್ಣಲ್ಲಂಗ ಮೂಲೇಲಿ। ಕುಂತಿದ್ದೀಯಾ ಅಂತ್ಹೇಳಿ। ಬೇವುನ್ನಾಳಿ ಅವಳ ಮುಂದಲೆ ಹಿಡ್ಕಂಡು। ಬೆನ್ನುನ ಮ್ಯಾಲೆ ಒಂದ್ ಗುದ್ದು ಗುದ್ದುದ್ದಂತೆ। ಅಕ್ಕ ದ್ವಾವಾಜಿ ಅಂತ ಕಿರಿಸೊಸೆ ಕೂಕ್ಕೋತಿದ್ರೆ। ದ್ವಾವಾಜಮ್ಮ ಓಡ್ಬಂದು ತಂಗಿ ಬುಡುಸ್ತ! ಇವರ್ದೆಲ್ಲ ತಕ್ಕಾದ ಕೆಲಸ ಕೊಡ್ಡಿದ್ರೆ ಕಳ್ ಬಿದ್ದೋಯ್ತವೆ। ನನ್ನ ಆಸ್ತಿ ಐಸ್ವರ್ಯವೆಲ್ಲಾ ಹಾಳಾಗೋಯ್ತದೆ। ಹೋದ್ರೆ ಇವರ ಅಪ್ಪಂದೋತೋ ಅಂತ್ಹೇಳಿ। ಬೇವಿನ ಕಾಳಮ್ಮ ಏಳು ಮಂದಿ ಸೊಸೆರ್ನ ಕರ್ದ್ಲು। ಏನತ್ತಮ್ಮ ಏನತ್ತಮ್ಮ ಅಂತ್ಹೇಳಿ ದಂಡ್ಕಕ್ಕೆ ಬಂದ್ರಂತೆ। ಏನ್ಲಾ ಸೊಸೇರೆ ನಾನು ಕಣಕ್ಕೋಗ್ಬೇಕು। ಮುನ್ನೂರು ಮೂವತ್ತು ಪಲ್ಲ ಎಳ್ ಒಕ್ಣೆ ಆಯ್ತಾದೆ। ಜೀತಗಾರ್ರ ನಂಬಕೆ ಸಾಧ್ಯವಿಲ್ಲ। ಯಾನಾರ ದುಡುಗೆಟ್ ಮುಕ್ಕಿ ರಾಸ್ಯಕೆ ಕೈಹಾಕಿ। ಎಳ್ಳುಕ್ಕಿ। ಎಲ್ಲಿ ಎಂಜುಲ ಮಾಡ್ಬುಟ್ಟಾವೋ ಕಾಣೆ। ನಮ್ಮನೆ ದೇವರು ಕುಲದೇವರು ನೋಡಿದ್ರೆ। ಬೆಳ್ ತೋರ್ಬುದ್ರೆ ಹಸ್ತಾ ನುಂಗ್ತಾನೆ। ಇಂತೆ ಕುಲಗೆಟ್ ದೇವರ್ಗಳು ನಮ್ಮವು। ನಾನು ಬ್ಯಾಗನೆ ಕಣಕೋಯ್ತಿದ್ದೀನಿ। ನಾನತ್ತಗೋದ್ದೆ। ನೀವಾತ್ತಗೇನ್ಮಾಡ್ತೀರಿ। ನೀವೇಳದ ಕೆಲ್ಸ ಮಾಡ್ತೀವಿ ಅತ್ತಮ್ಮ। ಬೇವುನ ಕಾಳಮ್ಮ ಸುತ್ತ ಮುತ್ತಾ ಕಣ್ಣಾಡುಸ್ತ। ಬೀಸುವ ಕಲ್ಲುನ ಸುತ್ತಾ ಸಣ್ಣಿರವೆ ಸಾಲಿಟ್ಟಿದ್ದೋ। ಅವ್ವೆ ಅವ್ವೆ ಹಾಳು ಮುಂಡೇರೆ। ನೀವೆಲ್ಲ ಸೇರಿ ನಮ್ಮನೆ ಹಾಳ್ಮಾಡ್ಬುಡ್ತೀರಿ। ಎರಾಗಳ್ ಬಂದು ರಾಗೀನೆಲ್ಲಾ ಎಳಕಂಡೋಯ್ತಾ ಅವಲ್ಲಾ। ಏನ್ಲಾ ಸೊಸಯಂದಿರಾ ಯಾರು ರಾಗಿ ಬೀಸ್ದೋರು। ಅಂತ। ಸೊಸೆರೆಲ್ಲಾ ಗಡಾಗಡ್ನೆ ನಡೀಕಂಡು ನಿಂತಿದ್ರೆ। ಕಿರಿಸೊಸೆ ನಿಂಗಾಜಿ ಗರುಡ ಗಂಬದಾಗೆ ನಿಂತಿದ್ಲು। ಯಾರ್ಲ ಅವ್ಳು ಅಲ್ಲಿ ಮಾರಿ ನಿಂತರೊಂಗೆ ನಿಂತಿರೋಳು। ಬಾರ್ಲಾ ಇತ್ತಾಗಿ ಅಂತ ಕೂಗ್ದ। ಕಿರಿಸೊಸೆ ಗರಬವೇ ನಡುಗೋಯ್ತು। ಈ ಕೆಟ್ಟುಂಡೆ ಮಾತ ಕೇಳಿದ್ರೆ। ಇನ್ನೇನು ಕೊಲೆ ಕೊಟ್ಟಾಳೋ ಅಂತ್ಹೇಳಿ। ಅತ್ತಮ್ಮ ಸರಣು ಅಂತ್ಹೇಳಿ। ಸಿರು ಬಗ್ಗಿ ನಮಸ್ಕಾರ ಮಾಡಿದ್ದಾಳೆ। ಕೆಟ್ಟ ಮಗಳೆ ಹೇಳದ್ದು ತಿಳೀನಿಲ್ವ। ರಾಗಿ ತರೀವೆಲ್ಲಾ ಎರಾಗಳು ಎಳ್ಕೊಂಡೋಯ್ತವೆ। ರಾಗಿ ಕಲ್ಲತ್ತುಕೆ ಎರ ಬರದಂತೆ ತರಿಗೆಂಡವ। ಸುತ್ತ ಸುರಿ ಅಂದವಳು ಕಾಳಮ್ಮ।

ನೋಡಿ ನಮ್ಮ ಶಿವನಾ।

ಬೇವಿನಕಾಳಿ ಮಾತನ್ನು ಕೇಳಿ। ಕಿರಿ ಸೊಸೆ ನಿಂಗಾಜಿ ಹಂಗೆ ಮಾಡ್ತೀನಿ ಅತ್ತಮ್ಮಾ ಅಂತ ಹೇಳ್ದ। ಉಳುದ ಸೊಸೆರೆಲ್ಲಾ ಹಂಗೆ ನಿಂತಿದ್ರಲ್ಲಾ। ಹಿರಿ ಸೊಸೆ ದ್ವಾವಜಮ್ಮನಿಗೆ। ನನ ಕಂದ ದ್ವಾವಾಜಿ। ನನ್ನನೆಗೆ ನೀನೇ ಹಿರೇಸೊಸೆ। ನಾನು ಎಳ್ಳುನ ಕಣದಿಂದ ಬರೋಗಂಟ। ಮನೆ ಒಗತನ ಎಲ್ಲಾ ನಿನ್ನದು ನನ ಕಂದ। ಏನಿಲ್ಲ ಏನೈತೆ ಅದ ನೋಡ್ಕಳದು ನಿನ್ ಭಾರ, ಏಳಟ್ಟೆ ಎಮ್ಮೆ ಕರೆಯದು ನಿನ್ದು। ಏಳಟ್ಟೆ ದನ ಕರೆಯುವುದು ನಿನ್ದು। ನಾನು ಕಣದಿಂದ ಬಂದೇಟ್ಗೆ। ಬೆಣ್ಣೆಯನ್ನು ತೂಗ್ತಿದ್ದೇನೆ। ನಮ್ಮಪ್ಪನ ದೆಸೆಯವರ ಆಕಳ್ಳಿ। ನಿಮ್ಮಪ್ಪನ ದೆಸೆಯವ್ರೆ ಅಕ್ಕಳ್ಳಿ। ಬಂದವರ ಕೈಗೆ ನೀರು ಕೊಡಬೇಡ। ನೀರ್ಕೊಟ್ಟು ಉಣ್ಣಕ್ಕಿಕ್ಕ

ಬ್ಯಾಡ। ಬಿಸಿಲ್ನಲ್ಲೋಯ್ತಿದ್ರೆ ನೆಳ್ಗೆ ಕರೀಬ್ಯಾಡ। ದಣ್ದು ದಾವತ್ತಿ ಬಂದವುರ್ಗೆ! ಕುಡಿಯಾಕೆ ನೀರ್ಕೊಡಬ್ಯಾಡ ನನ ಕಂದ। ನನ್ನೆಲ್ಮಂದಿ ಗಂಡು ಮಕ್ಕಳಿಗೆ। ನಿನ್ನ ಮಾವನಾದ ಕೇಂಡೇಗೌಡುಂಗೆ। ಸರೋಗ್ನಿ ಊಟಕ್ಕಿಕ್ಕಬೇಕು! ಊಟಕ್ಕಿಕ್ಕುಟ್ಟು ಮನೆಯ ಒಕ್ಲಾನವನ್ನು। ಬಾಳ ಬುದ್ಧಿಯಿಂದ ನೋಡ್ಕೋ ಕೆಲಸ ನಿನ್ನದು। ಅದೂ ಅಲ್ದೆ ನನ ಕಂದ। ಏಳ್ನ ಸೊಸೇರು ಒಂತಲಿದ್ದು ನೀಯುಸ್ಕೊಂಡೋಗ್ಬೇಕು। ಒಬ್ಬರೂ ಜಗಳ ಆಡಬ್ಯಾಡಿ ಕಲೆಯ ಆಡಬ್ಯಾಡಿ। ಯಾರೇ ಆದ್ರೂ ಜಗಳ ಕಲೆಯ ಆಡಿದ್ರೆ। ಕಿಡಿ ಕಿತ್ತು ಬೆಳ್ಗಲುಂಗ್ರ ಮಾಡ್ತೀನಿ ಅಂದವಳೆ ಕಾಳಮ್ಮ।

ನೋಡೆ ನಮ್ಮ ಸಿವನಾ।

ಬೇವುನ ಕಾಳಮ್ಮ। ಒಬ್ಬ ಸೊಸೆಗೆ ರಾಗಿ ಬೀಸ ಕೆಲ್ಸ ಕೊಟ್ಲು! ಒಬ್ಬಳಿಗೆ ಹಟ್ಟಿ ಕೊಟ್ಗೆ ಕಸ ಎತ್ತೋ ಕೆಲಸ। ಒಬ್ಬಳಿಗೆ ರಾಗಿ ಒಡೆಯೂದು! ಒಬ್ಬುಳ್ಗೆ ಕೆರ್ಕೊಳ್ಗೆ ಹಲ್ಲಾಕಿ ನೀರು ಕುಡಿಸೋ ಕೆಲಸ। ಒಬ್ಬ ಸೊಸೆಗೆ ದನೀನ ಮೈ ತೊಳೆದು ಹಲ್ಲಾಕ ಕೆಲಸ ಕೊಟ್ಟಿದ್ದಾಳೆ! ಒಬ್ಬೊಬ್ಬಳಿಗೆ ಒಂದೊಂದು ಕೆಲಸ ಕೊಟ್ಕಂಬಂದು।"

ನಾನು ಎಳ್ಳು ಕಣಕ್ಕೆ ಹೋಗ್ತೀನಿ ಹೊತ್ತಾಯ್ತು! ಅಕಸ್ಮಾತ್ ಏನಾದ್ರೂ ಅವರು। ಇನ್ನೂ ಹಿಟ್ ತರಲಿಲ್ವಲ್ಲಾ! ಅಂಬಲಿ ತರ್ಲಿಲ್ವಲ್ಲ ಅಂತ ಹೇಳ್ಬುಟ್ಟು। ಒಬ್ಬೊಬ್ರೂ ಹೊಟ್ಟೆ ಹಸಿದುಬುಟ್ಟು। ಒಂದೊಂದಿಡಿ ಮುಕ್ಬುಟ್ರೆ ಎಳ್ಳನ್ನು। ನನ್ನ ಎಳ್ಳಿನ ರಾಸಿ ಕಮ್ಮಿ ಆಯ್ತದೆ ಕಣಮ್ಮಿ! ಇನ್ನು ನಾನು ಓಗಿದ್ದು ಬರ್ತೀನಿ! ಉಸಾರಾಗಿರಮ್ಮ ಅನ್ಬುಟ್ಟು! ಅಂಬಲಿ ಕುಡಿಯಕ್ಕ ತಕ್ಕಂಡು! ಬಾಮ್ಮಿ ಈವತ್ತು! ಹಿಟ್ಟಿನ ಮುದ್ದೆ ಮಾಡಿ। ನಿನ್ನ ಕೈಗೆ ಕೊಡ್ತೀನಿ ಅಂತೇಳ್ಬುಟ್ಟು! ಮುದ್ರೆ ಮನೆ ಬೀಗ ಅವಳ ಕೈಗೆ ಕೊಟ್ಬುಟ್ಟು! ಕಾಳಮ್ಮ ಅಂಬಲಿ ಕುಡಿಯಕ್ಕೆ ಆ ಬಿಸಿ ಅಂಬಲಿ ತಂದು। ತಣಗೆಗುಯ್ದುಂತ ಕಾಲದಲ್ಲಿ। ಆಗ ಎಲ್ಲಿಲ್ಲೊ ಹಾರಾಡ್ಕಂಡು ಬಂದ ನೊಣ। ಆ ಅಂಬಲಿ ಮೇಲೆ ಕೂತ್ಕಂಬುಟ್ಟೋ। ಆ ಬಿಸಿ ಅಂಬಲಿ ಮೇಲೆ ಕೂತ್ಕೊಂಡು। ಮೇಲಕ್ಕೇಳಕ್ಕಾಗ್ದೆವೊಯ್ತು! ಆವಾಗ ಕಾಳಮ್ಮ ಅಂಬಲಿ ಕುಡ್ಯಕ್ಕೆ ಬಕ್ಕಂಡ್ಲಲ್ಲ! ಆ ನೊಣ ಅವಳ ಕಣ್ಣಿಗೆ ಕಂಡ್ಬುಡ್ತು! ಆ ನೊಣ ಕಂಡ ತಕ್ಷಣದಲ್ಲೆ! ಆ ಕಾಳಮ್ಮನಿಗೆ ಕೋಪ ಬಂದ್ಬುಡ್ತು! ಅಮ್ಮಿ ಅಮ್ಮಿ ದ್ಯಾವಾಜಿ ದ್ಯಾವಾಜಿ। ನಿಮ್ಮಪ್ಪನ್ನ ತಿನ್ನೋವ್ನ ಮಗಳೇ। ಓಡು ಬಾರೆ ಅಂತವಳೇ ಕಾಳಮ್ಮ।

ಆಹಾ.... ನೋಡಿ ನಮ್ಮ ಸಿವನಾ।

ಯಾವಾಗ ಕೂಗಿದಂತ ಕಾಲದಲ್ಲಿ! ದ್ಯಾವಾಜಮ್ಮ ಏನ್ ನಮ್ಮ ಅತ್ತೆಗೆ ಮುಚ್ಕೋ ಮೊಲ್ಲಾಗ್ತವೋ ಕಾಣ್ನಲ್ಲಾ! ಆಗೊಂದು ಸತಿ ಕೂಕ್ಕೊಂಡ್ಲು! ಈಗೊಂದು ಸರ್ತಿ ಕೂಗ್ತವ್ಳೆ! ಅನ್ಕಂಡು। ಕೋಣೆಯಿಂದ ಓಡ್ಬಂದು। ಏನತ್ತೆಮ್ಮಾ ಅಂತ ನಿಂತ್ಕಂಡ! ಅಲ್ಲಾ ಕಣಮ್ಮೆ ದ್ಯಾವಾಜಿ। ನನ್ನಟ್ಟಿವೊಳಗೆ। ಎರ ನುಗ್ಗಕ್ಕೆ ಸ್ಥಳವಿಲ್ಲ! ಅಪ್ಪರ ಮಟ್ಟಿಗೆ ವಜ್ರಾರ ಮೆತ್ತಿ ಸಿವ್ವಿ ಹೆಂಚಿನ ಸಂದಿಲಿಲ್ಲಾ! ಈ ಹಾಳ್ ನನ್ನ ಮಗನ್ ನೊಣಗಳು ಎಲ್ಲಿ ವಾಸ ಮಾಡ್ತಿದ್ದೊ

ಗೊತ್ತಿಲ್ಲಲ್ಲ! ಎಲ್ಲೋ ಮನೆಕಟ್ಟಕ್ ಮುಂಚೆ ಗೂಡ್ ಮಾಡ್ಕಂಡು ಬಂದುಬಿಟ್ಟಿದ್ದೋ ಸನ್ನಟ್ಟೆ ನನ್ನ ಅಂಬಲೀನೆಲ್ಲಾ! ಅಷ್ಟೊತ್ತಿಂದ ಗಟಕ ಗಟಕ ಗಟಕ ಅಂತ ಕುಡುದ್ಬುಟ್ಟು! ಹಿಂಜಕ್ಕೂ ಆಗ್ದೆ ಇರಲಿ ಅಂತ! ಮೈ ಕೈಗೆಲ್ಲಾ ಅಟ್ಕಂಬುಟ್ಟು ಬಂದವಲ್ಲಮ್ಮ! ಇವನ್ ಮಗನ್ ನೊಣಗಳ್ ಮಾಡ್ದಿನ್ನಿ ಅನ್ನುಟ್ಟು! ಕಾಳಮ್ಮ ನೊಣೆನ ಕಾಲು ತೆಗೆದು! ತರಿಗೆಂಡಕ್ಕೆ ಬೀಸಾಕ್ಬುಟ್ಟ! ಸ್ವಲ್ಪ ಅಂಬಲಿ ತರಿ ನೊಣೆನ ಕಾಲಿಗೆ ಅಂಟಕಂಬುಡ್ತು! ಆ ತರೀನ ಕಾಳಮ್ಮ ಚೀಪ್ತಾ ಕುಂತವ್ಳೆ! ಕಾಳಮ್ಮ

ಹ್ಹಾಂ ನೋಡಿ ನಮ್ಮ ಶಿವನಾ!

ನೊಣೆನ ಕಾಲ್ ಚೀಪ್‌ಬಿಟ್ಟು! ಅದ್ನೆಲ್ಲಾ ತಣೆಗ್ಗೆ ಬಿಟ್ಕಂಡು! ಅಂಬ್ಲಿನೆಲ್ಲಾ ಒಂದೇ ಸರ್ತಿಗೆ ಬುಟ್ಗಂಬುಟ್ಲು! ಮೇಲಕ್ಕೇಳಕ್ಕೋಯ್ತಾಳೆ ಆಗಲಿಲ್ಲ! ಆಸೆಗೆ ಅಂಬಲಿ ಕುಡಿದು ಬಿಟ್ಲು! ಮೆಲಕ್ಕೇಳಕ್ಕೋದ್ರೆ ಮೂಡೆ ಗಾತ್ರ ಡೊಳ್ಳು! ಮುಂಗ್ಸೆ ಮೇಲೆ ಮಡಿಕ್ಕಂಡು ಕೂತವ್ಳಲ್ಲ! ಆಗ್ಲೀಗ ಆ ಕಡೆ ಏನ್ ಹೇಳ್ತಾಳೆ! ಏನಮ್ಮಾ ಆಲಾಜಿ, ಬ್ಯಾಲಾಜಿ, ನಿಂಗಾಜಿ, ನೀಲಾಜಿ, ಸುವರ್ಣೆ, ಪದ್ಮಾವತಿ, ದ್ಯಾವಾಜಿ, ನಾನು ಆಸೆಗೆ ಅಂಬಲಿ ಕುಡಿದು ಬಿಟ್ಟೆ! ಆ ಮ್ಯಾಲಕ್ಕೆ ಏಳ್ನಾರಿ ಕಣಮ್ಮಿ! ಸಟೀಗ ಎತ್ತು ಬನ್ನಿ ಅಂತವಳೇ ಕಾಳಮ್ಮ!

ಆಹಾ.... ನೋಡಿ ನಮ್ಮ ಶಿವನಾ!

ಆಗಲೀಗ ವಾರ್ವಾರ್‌ಗಿತ್ತೀರು! ಏಳು ಜನ ಬಂದು ಬಿಟ್ಲು! ಆಚಿರಿ ರಟ್ಟೆ ಮೂರು ಜನ! ಈಚಿರಿ ರಟ್ಟೆ ಮೂರು ಜನ! ಮದ್ಯ ನಡ ತಬ್ಬಿ ಇಡ್ಕಂಬುಟ್ಲು! ಸತ್ಯವಂತೆ ಹಿರೇ ಸೊಸೆ ದ್ಯಾವಾಜಮ್ಮ! ಅಷ್ಟು ದೂರ ಎತ್ತಿದ್ಮೇಲೆ ಮೊಪ್ಪನ ಕೆಳಗೆ ಬಿದ್ಬುಟ್ಲು! ಇದೇ ತರವಾಗಿ ಎರಡು ಮೂರು ಸಲ ಮಾಡ್ಬುಟ್ರು! ಆಗ ಕಾಳಮ್ಮನಿಗೆ ಕ್ವಾಪ ಬಂದ್ಬುಡ್ತು! ಏನರೇ ನನ್ನ ಸವತಿ ಎತ್ ಮಕ್ಕಳೇ! ನನ್ನ ಅಟ್ಟೆ ಒಳಗೆ ಅಂಬಲಿ ಹಿಟ್ಟು ಹುಳಿ ತಿಂದು ತಿಂದು! ನಿಮಗೆಲ್ಲಾ ಕೊಬ್ಬು ಬೆಳ್ಕಂಬುಟ್ಟಿದ್ದದಾ! ನೀವೆಲ್ಲಾ ಸೇರಿ ನನ್ನೊಬ್ಬಿನ್ನ ಎತ್ತಲಾರಿರೆಲ್ಲಾ! ಅಂತ ಕೀನ ಕಟ್ಟವಾಗಿ ಬೋದ್‌ಬುಟ್ಲಂತೆ! ಆಗ ಕ್ವಾಪ ಬಸ್ಬುಟ್ಟು! ಎಲ್ಲರಿಗೂ ಕಕ್‌ಕಕ್ ಮೊಟ್ಕಂಡು! ಮುಕ್ಕರಿಕೊಂಡು ಎತ್ತಿ ನಿಲ್ಸಿ ಮೇಲಕ್ಕೆತ್ತಿದ್ರು! ಆಗ ಕಾಳಮ್ಮ ನಿಂತ್ಕಂಬುಟ್ಲು! ನಡಟ್ಟಗೆ ಬಂದು ಬುಟ್ಟು ಗುಟ್ರಾಕಿದ್ಲು! ಗುಟ್ರಾಕಿದ್ರೆ ಮುಂಗಾರು ಸಿಡ್ಲಾಡಂಗಾಗೊಯ್ತು! ಅಲ್ಲಿಗೆ ಬಾಯಿ ಹುಳಿ ಬಂದುಬಿಡ್ತು! ಆಗ ಏನಂತವಳೆ! ದ್ಯಾವಾಜಿ ದ್ಯಾವಾಜಿ ಆಸೆಗೆ ಅಂಬಲಿ ಕುಡುದ್ಬುಟ್ಟು! ಬಾಯೆಲ್ಲಾ ಹುಳಿ ಹುಳಿ! ಮುದ್ರೆಮನೆ ಬೀಗ ತೆಗೆದ್ಬುಟ್ಟು! ಒಂದು ಕೊನೆ ಅಡಿಕೆ ತಕ್ಕಂಬಾ ಅಂದ್ಲು! ಅಲ್ಲಿಗೆ ದ್ಯಾವಾಜಮ್ಮ ಮುದ್ರೆ ಮನೆ ಬೀಗ ತೆಗೆದು ಬಿಟ್ಲು! ಒಂದು ಕವಳಿಗೆ ಅಡಿಕೆ ಎಲೆ ತಂದು ಕೊಟ್ಲು! ಒಂದು ಬ್ಯಾಲದ ಕಾಯಿ ಗಾತ್ರ ಸುಣ್ಣ ತಂದುಕೊಟ್ಲು! ಆಗಲೀಗ ಈಸ್ಕಂಡು ತಿಂದುಬುಟ್ಲು! ಅಲ್ಲಕಮ್ಮಿ ದ್ಯಾವಾಜಿ! ಇನ್ನೊಂದಿಕ್ಕ ಸುಣ್ಣ ತಂದಿದ್ರ! ನಿಮ್ಮಪ್ಪನ ಮನೆ ಗಂಟೋಯ್ತಿತ್ತಾ ಅಂತ ಕೀನ ಕಟ್ಟಾವಾಗಿ! ನೋಡುಬುಟ್ಲು! ಅತ್ತೆಮ್ಮಾ ನಿಮ್ಮ ಕೈಗೆ ಕೊಟ್ರೆ! ನಿಮಗೆ

ಸಾಲಲ್ಲ! ಬಾಯಿ ಆ ಅಸ್ಥಳ ಅಂತಸ್ನುಬುಟ್ಟು! ದ್ಯಾವಾಜಮ್ಮ! ಎಳ್ಕೊಟ್ಟು! ಕೈಲಿ ತಕ್ಕಂಡು! ಕೆಸರ ಗದ್ದೇಲಿ ಯಾವ ಥರ ಆಳುಗಳು ಕಪ್ಪಡಿಪ್ತಾರೋ! ಆತರವಾಗಿ ದ್ಯಾವಾಜಮ್ಮ ಸುಣ್ಣವನ್ನು ಕಪ್ಪಡಿಸಿ ಕಪ್ಪಡಿಸಿ ಆಕ್ತಾಳಲ್ಲಾ! ದ್ಯಾವಾಜಮ್ಮ!

ಆಹಾ.... ನೋಡಿ ನಮ್ಮ ಶಿವನಾ!

ಅಲ್ಲಿಗೆ ಎಲೆ ಅಡಿಕೆ ಹಾಕ್ಕಂಬುಟ್ಟು! ಕಾಳಮ್ಮ ಹಲಸಿನ ಕಾಯಿ ಗಾತ್ರ ತಾಂಬೂಲ ಒತ್ತರಿಸ್ಕಂಬುಟ್ಟು! ಎಪ್ಪತ್ತೇಳು ಮೊಳ ಸೀರೆ ಉಟ್ಕಂಬುಟ್ಟು! ಅವರಿಗೆಲ್ಲಾ ಅಂಬಲಿ ಹಿಟ್ಟು ಹುಳ್ಳಿ ಕಾಳು ಎತ್ಕಂಬುಟ್ಟು! ತೇಗಿನ ಗಾಡಿ ಮೇಲೆ ಮಡಗಿದ್ರಂತೆ! ಆ ತೇಗಿನ ಗಾಡಿಗೆ ಏಳು ಜೊತೆ ಕೋಣನ್ನ ಕಟ್ಟಿದ್ರಂತೆ! ಆಗ ಕಾಳಮ್ಮ ಅಂತಕ್ಕಂತವಳು! ಹೋಗಿ ತೇಗಿನ ಗಾಡಿ ಮೇಲೆ! ಉರಸಂಗಿ ಕೊರಡನ್ನು ಬಲಗೈಲಿ ಹಿಡ್ಕಂಡುಬಿಟ್ಟು! ಹೋಗಿ ಒಂದು ಕಾಲೆತ್ತಿ! ಅದರ ಮೇಲಿ ಮಡಗಿದ್ಲು! ಈ ಚಕ್ರ ಅಂತಕ್ಕದ್ದು! ನೆಲಕ್ಕೆ ಊತೋಯ್ತಲ್ಲಪ್ಪ! ಮಾದೇವಾ!

ಹ್ಞಾ ನೋಡಿ ನಮ್ಮ ಶಿವನಾ!

ಈ ಚಕ್ರ ಊತೋದ್ದು! ಎರಡು ಕಡೆಯೂ ಅವಳ ಕಣ್ಣಿಗೆ ಕಾಣ್ ಬರಲಿಲ್ಲ! ಎಲ್ಲಿ ಮುಂಗೈಗಾತ್ರ ಡೊಳ್ಳು ಮುರುದೋಗಿ! ಮುಂಗೈ ಮೇಲೆ ಬುಟ್ಕಂಡವ್ಳೆ! ಕಣ್ಣೆಲ್ಲಾ ಪೊರೆ ಬಂದು ಬುಟ್ಟದೆ! ಆಗ ಕೊರಡ ತಕ್ಕಂಡು! ಅವಳು ಜೊತೆ ಕೋಣ ಕಟ್ಟಿದ್ದಲ್ಲಾ! ಏರಿಗೆ ಆ ಕೋಣಗಳಿಗೂ ಒಂದು! ಕೊಲಬಾರದ ಕೊಲೆಯಾ ಕೊಡ್ತಾಳೆ!

ಆಹಾ.... ನೋಡಿ ನಮ್ಮ ಶಿವನಾ!

ಕೊಲ್ಲಬಾರದ ಕೊಲೆ ಕೊಡ್ತಿದ್ಲಂತೆ! ಈ ಊತೋದ ಚಕ್ರ ಮಾತ್ರ ಕಣ್ಣಿಗೆ ಕಾಣಲಿಲ್ಲ! ಅಲ್ಲಿಗೆ ನಮ್ಮಪ್ಪಾಜಿ ಮಾಯಕ್ಕಾರ ಮಾದಪ್ಪನವರು! ತೇಗಿನ ಮರದ ಬಳಿ ಜಗಲಿ ಮೇಲೆ! ಇದೆಲ್ಲಾ ನೋಡ್ತಾ ಕೂತಿರುವಂತೆ! ಸಬಾಸ್ ನನ ಕಂದ! ಕಾರಯ್ಯ ಹೇಳಿದ ಮಾತು ಸತ್ಯ! ಅದಕ್ಕಾಗಿ ಅದು ಮೊದ್ಲೆ ಗೊತ್ತಿತ್ತೇನೋ! ಪರವಾಗಿಲ್ಲ ಇನ್ನೂ ಇವಳ ಆಡಳಿತ ನೋಡ್ಬೇಕಲ್ಲಾ ಅಂತ!

ಇಳಿದಾರು ಇಳಿದಾರು ಮಾದೇವ!
ಗಿರಿಯಿಂದಿಳಿದರು ಮಾದೇವಾ!
ಕೊಂಗರು ಕೊಟ್ಟ ತೇಜಿಯ ಮ್ಯಾಲೆ
ಗಿರಿಯಿಂದ ಇಳಿದಾರು ಮಾದೇವ!
ಇಳಿದಾರು ಇಳಿದಾರು ಮಾದೇವ!
ಗಿರಿಯಿಂದ ಇಳಿದಾರು ಮಾದೇವ
ಬಣ್ಣದ ಹೆಬ್ಬುಲಿ ಏರವರೆ!
ಗಿರಿಯಿಂದ ಇಳಿದಾರು ಮಾದೇವಾ
ಇಳಿದಾರು ಇಳಿದಾರು ಮಾದೇವಾ!

ಗಿರಿಯಿಂದ ಇಳಿದಾರು ಮಾದೇವಾ।
ಗಿರಿಯಿಂದ ಇಳಿದಾರು ಮಾದೇವಾ
ಮೈಯೆಲ್ಲಾ ಸಿರಿಗಂಧವೋ
ಗಿರಿಯಿಂದ ಇಳಿದಾರು ಮಾದೇವಾ।
ಇಳಿದಾರು ಇಳಿದಾರು ಮಾದೇವ
ಗಿರಿಯಿಂದ ಇಳಿದಾರು ಮಾದೇವಾ।

ಏಸ್ರುಲಾ ನನ್ ಮಗನ ಮಕ್ಕಳ ಜೀತಗಾರರ್ರೆ ಅಂತ ಕೂಗುದ್ಲು। ಜೀತಗಾರರು ಗುಡುಗುಡನೋಡ್ಬಂದು, ಕ್ವಾಣಗಳಸ್ನೆಲ್ಲಾ ಬಿಚ್ಚಿ ಕಟ್ಟಾಕುದ್ರು। ಬೇವಿನ ಕಾಳಮ್ಮನ ಕೈ ಹಿಡ್ಕಂಡು। ಬಂಡಿಯಿಂದ ಕೆಳಗಿಳಿಸ್ಕಂಡ್ರು। ಕಂಬಾಲದ ಮರವಂತೆ। ಕಂಬಾಲದ ಮರದ ಕೆಳಗೆ ಮುತ್ತಿನ ಗುಡಾರಂತೆ। ಮುತ್ತಿನ ಗುಡಾರದಲ್ಲಿ ಮುಕ್ಕಾಲು ಮಂಚವಂತೆ। ಮುಕ್ಕಾಲು ಮಂಚದ ಮ್ಯಾಲೆ ಕುಂಡ್ರಿಸಿದ್ದಾರೆ, ಬೇವಿನ ಕಾಳಮ್ಮ। ನಲವತ್ತೆಂಟು ಜನ ಜೀತಗಾರರ್ನುವೆ। ಬಸ್ರುಲಾ ನನ್ನ ಮಗನ್ ಮಕ್ಳಾ ಅಂದ್ಲು। ಏನು ನನ್ನ ತಾಯಿ ಅಂತ ಅವ್ರು ದಂಡ್ಯಕೆ ಬಂದ್ರು। ಬಂದು ಎಲ್ಲ ಸಾಲಿಗೆ ನಿಂತ್ಕಂಡ್ರು। ಎಲಾ ನನ್ನ ಮಗನ ಮಕ್ಕಳ್ಯಾ। ಈವೊತ್ತು ಎಡೊತ್ನಲ್ಲಿ ಊಟ ತಂದಿವ್ನಿ। ಬೇವುನ ಕಾಳಮ್ಮ ಊಟ ತರದು ನಿಧಾನವಾಯ್ತು ಅಂತ। ಮುಂಡೇ ಮಕ್ಕಳ ನಾನಿಲ್ಲದ ವ್ಯಾಳದಲ್ಲಿ। ಯಾರ್ಯಾರು ಎಷ್ಟೆಷ್ಟು ಎಳ್ ತಿಂದು ಎಂಜಲು ಮಾಡಿದ್ದೀರಿ ಹೇಳಿ ಅಂದ್ಲು। ಒಬ್ಬೊಬ್ರ ಮುಕವ ಒಬ್ಬೊಬ್ರು ನೋಡ್ತಿದ್ದಾರೆ। ಯಾರು ಜೀತಗಾರರ್ರು। ಯಾಕ್ರಲಾ ಸುಮ್ನೆ ನಿಂತಿದ್ದೀರಿ। ನಿಜವಾದ ಮಾತಾಡ್ತೀರೋ। ಇಲ್ಲ ನಿಮಗೆ ಶಿಕ್ಷೆ ಮಾಡ್ಲ್ಯಾ। ಅಂತಾಳೆ ಕಾಳಮ್ಮ। ಆಳುಗಳೆಲ್ಲ ಒಬ್ಬೊಬ್ರು ಮೊಕ ಒಬ್ಬೊಬ್ರು ನೋಡ್ತಾ। ಗುಸುಗುಸ್ನೆ ಮಾತಾಡ್ಕೊತಾ ಇದ್ರಂತೆ। ಯಾಕ್ರುಲಾ ಗುಸುಗುಸನೆ ಮಾತಾಡ್ತೀರಿ। ನಿಜವಾದ ಮಾತಾಡಿ। ಅವ್ವಾ ನಾನು ತಿಂದಿಲ್ಲ ಕನವ್ವಾ। ಅಂದ್ರಂತೆ ಎಲ್ಲಾ ಜೀತಗಾರರು। ಒಬ್ರೂ ತಿಂದಿಲ್ಲ ಅಂತಿದ್ದೀರಲ್ಲ ಮತ್ತಿನ್ಯಾರು ತಿಂದೋರು। ಎಲಾ ನನ್ನ ಮಕ್ಕಳೇ। ಎಲ್ಲರೂ ಬಾಯ್ತುಂಬ ನೀರು ತುಂಬ್ಕೊಂಡು। ನೀರ್ ಮುಕ್ಕುಳಸಿ ಮಕ್ಕಳಿಸಿ। ಕೇಳೀಕುಗೀರಿ ಅಂತಾಳೆ ಕಾಳಮ್ಮ।

ನೋಡಿ ನಮ್ಮ ಸಿವನಾ।

ಅದೇ ಪ್ರಕಾರವಾಗಿ ನಲವತ್ತೆಂಟ್ ಜನ ಜೀತ್ಗಾರ್ರೂ। ಬಾಯಿ ತುಂಬಾ ನೀರ್ತುಂಬ್ಕಂಡು ಮುಕ್ಕಳಿಸಿ ಉಗುದ್ರಂತೆ। ಒಬ್ಬರ ಬಾಯ್ನಲ್ಲೂ ಒಂದು ಸಿಪ್ಪೇನೂ ಬರ್ನಿಲ್ಲ। ಯಾವನೋ ದಾಹ ತಡೀನಾರದ ಮನಸ ಒಂದೆಳ್ ಕುರುಕ್ಬುಟ್ಟಿದ್ದ। ಅವ್ನು ನಿರ್ಮುಕ್ಕುಳ್ಸಿ ಕೆಳಕುಗುದ್ನಂತೆ। ಎಳ್ಳಿನ ಸಿದುರೆ। ಪಚ್ಚೆ ಕಲ್ಲ ಮ್ಯಾಲೆ ಬೀಳ್ತಪ್ಪ ಮಾದೇವ। ನೋಡಿ ನಮ್ಮ ಸಿವನಾ ಕಾಳಮ್ಮುಂಗೆ ಕ್ವಾಪ ಬಂದುಬುಡ್ತು। ಹತ್ ಮುಂಡೇ ಮಗನೇ। ನಾನು ಕಂಡಂಗೆ ಇಷ್ಟು ಎಳ್ತಿಂದಿದ್ದೀಯಲಾ। ಕಾಣದಂಗೆಷ್ಟು ತಿಂದಿದ್ದೀಯಾ। ಎಲೋ ಕಂಬಳಗಾರ ಮಲ್ಲಣ್ಣ ಬಾಯಿಲ್ಲಿ। ಒಂದು ಗಾಡಿ ಹುಣಸೇ ಸೆಬ್ಬೆ ತಕ್ಕಂಬಾ ಅಂದ್ಲು। ಕಂಬಳ್ಗಾರ್

ಮಲ್ಲಣ್ಣ ಆಗ್ಲಿ ತಾಯಿ ಅಂತ್ಹೇಳಿ। ಒಂದು ಗಾಡಿ ಹುಣಸೇ ಸೆಬ್ಬೆ ತರ್ಕಂಡೋಗ್ತುಟ್ಟಂತೆ। ಹುಣಸೆ ಸೆಬ್ಬೆ ತಕೊಂಡು ಬೇವಿನ ಕಾಳಿ। ಅವುನಿಗೆ ಬಂದಾದ್ದ ಕೊಲೆಯ ಕೊಡುತಾಳೆ

ನೋಡಿ ನಮ್ಮ ಶಿವನಾ।

ಅವ್ವ ಏಟು ತಡಿಲಾರ್ದೇನಿ। ನಾ ತಡಿಲಾರಿ ಕಣ್ ತಾಯಿ ಏಟ್ಟು। ಹೊಡೀ ಬ್ಯಾಡಿ ಕಣ್ ತಾಯಿ ಏಟು। ಅಂತ್ಹೇಳಿ ಅವಳ್ ಪಾದಕ್ಕೆ ಹಾಸ್ಕಾಸಿ ಬೀಳೋನಂತೆ। ಎಲಾ ನನ್ನ ಮಗುನ್ ಮಗ್ನೆ। ನಿನ್ನ ಜೀವಸೈತ ಉಳಿಸಲ್ಲ ಅಂತಿದ್ರೆ। ತಾಯಿ ಸತ್ತವಾಗ್ಲೂ ನಾನು ತಿಂದಿಲ್ಲ ಕನವ್ವಾ। ಗಾಳಿಗೊಂದು ಕಾಳು ತೂರ್ಕಂಡ್ಬಂದು। ನನ್ನಲ್ಲುಗೆ ಸಿಕ್ಕುಡ್ತು, ಕುರುಕ್ಬುಟ್ಟೆ ತಾಯಿ। ನಿಮ್ಮ ಎಳ್ಳು ತಿಂದುದಕ್ಕೆ ಸಾಯೋಗಂಟ ನಿಮ್ಮಟ್ಟಿ। ಜೀತಗಾರನಾಗಿ ಗೇಯ್ತೀನಿ ಅಂತಾನಲ್ಲೋ ಮಾದೇವ। ನೋಡಿ ನಮ್ಮ ಶಿವನಾ। ಹತ್ ಮುಂಡೇ ಮಗ್ಗೇ ಜೀತ ಗೇಯ್ತಿಯಾ। ಗೆಯ್ತೀನಿ ತಾಯಿ। ಹಂಗಾರೆ ಬರಿ ಅಗ್ರುಮೆಂಟ ಅಂದ್ಲು। ಅಗ್ರುರಮೆಂಟ್ -ಬರಿಸ್ಕಂಡು। ಬನ್ನಿ ಕೂತ್ಕಳಿ ಈ ಸಲ ಊಟಕ್ಕೆ। ಅಂದ್ಲು। ನಲವತ್ತೆಂಟು ಜೀತಗಾರರೂ ಬಂದು। ಸಾಲಾಗಿ ಊಟುಕ್ಕೂತ್ರಂತೆ। ಅವರವ್ರುರ ಎಲೇಗೆ ಆಕ್ಕದ ಹಿಟ್ಬಿ

ಆಹಾ...... ನೋಡಿ ನಮ್ಮ ಶಿವನಾ।

ಅದೇ ಬೇವಿನ ಮರದ ಮೇಲೆ। ಕೂತ್ಕಂಡು ನೋಡ್ತಿದ್ರಂತೆ। ಆಗ ಕಾಳಮ್ಮನಂತಕ್ಕವಳು। ಆ ಮೂಕ ಪ್ರಾಣಿಗೆ। ಕೊಲಬಾರದ ಕೊಲೆ ಕೊಡ್ತಿದ್ದಳಂತೆ। ಈ ನಮ್ಮಪ್ಪಾಜಿಯವರು। ಅರುವಾಗ್ಬುಟ್ಟು ನೋಡ್ತಾ, ನೋಡ್ತಾ, ಈ ಮೂಕಪ್ರಾಣಿಗೆ। ಇಷ್ಟು ಕೊಲೆ ಕೊಡ್ತಾಳಲ್ಲ ಈ ಮುಂಡೆ ಮಗಳು ಅಂತೇಳಿ। ನಮ್ಮಪ್ಪಾಜಿಯವರು ಏನ್ ಮಾಡ್ತಿದ್ದಪ್ಪ ಅಂತ ಹೇಳಿದ್ರೆ। ವಾಸುದೇವನಿಗೆ ವಾಲೆ ಬರದವರ ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।

ಯಾವಾಗ ವಾಸುದೇವನಿಗೆ ವಾಲೆ ಬರೆದ್ಬುಟ್ರೋ। ಅವರು ಬಂದು। ಏನಪ್ಪಾಜಿ ಅಂತ ಕೇಳಿದ್ರಂತೆ। ಅಯ್ಯ ವಾಸಯ್ಯಾ ನಿನಗೆ ಬಂದ ಕಷ್ಟ ನನಗೆ। ನನಗೆ ಬಂದ ಕಷ್ಟ ನಿನಗೆ। ಇದೋ ಮೂಕ ಪ್ರಾಣಿಗೆ ಆ ಮುಂಡೆ ಕೊಲಬಾರದ ಕೊಲೆ ಕೊಡ್ತಾಳೆ। ಅದಕ್ಕೆ ಏನ್ಮಾಡ ಬೇಕು ಸ್ವಾಮಿ ಎಂದ। ನೀ ಸ್ವಲ್ಪ ಒತ್ತರಿಸಿ ನಿಲ್ಲಿಸ್ಬುಡಪ್ಪಾ ಅನ್ಬುಟ್ರು। ಆಗ ವಾಸುದೇವನಾಗಿರತಕ್ಕಂತವನು। ಆ ಸುಂಟರ ಗಾಳಿ ಅವತಾರದಲ್ಲಿ। ಅವನ್ನು ಒತ್ತರಿಸಿ ಬೀಸವನೇ ವಾಸುದೇವಾ

ಆಹಾ...... ನೋಡಿ ನಮ್ಮ ಶಿವನಾ।

ಯಾವಾಗ ವಾಸುದೇವ ಬೀಸಿಬುಟ್ನೋ। ಈ ಚಕ್ರ ಅಂತಕ್ಕಂತವು। ಮೇಲಕ್ಕೆ ಬಂದುಬಿಟ್ಟೋ। ಗಲಿಗಲಿ ಅಂತ ಆಡ್ತಾ ಇದ್ದೋ। ಅಲ್ಲಿಗೆ ಕಾಳಮ್ಮನಾಗಿರತಕ್ಕಂತವಳು ಹಿಟ್ಟು ಅಂಬಲಿ ಉಳ್ಳಿಕಾಳು ತುಂಬ್ಕಂಬುಟ್ಟು। ಆ ತೇಗಿನ ಗಾಡಿ ಮೇಲೆ ಕೂತ್ಕಂಡು। ಎಳ್ ಕಣಕ್ಕೆ ವೊಯ್ತವಳೇ ಕಾಳಮ್ಮಾ

ಯಾವಾಗ ಅವಳು ಎಳ್ ಕಣಕ್ಕೆ ಪೊಂಟೋಗ್ಬುಲ್ಲೋ! ಈ ಬೇವಿನ ಮರದ ಮೇಲೆ ಕುಂತಿದ್ದಲ್ಲಾ! ಮಾಯಕಾರ ಮರಿದೇವರು। ಏಳು ಮಲೆ ಎತ್ತಯ್ಯ! ಬೂದಿ ಮೇಲೆ ಮರೆಸಿಕೊಂಡ ಭೂಲೋಕದ ಗಂಡ! ಅಲ್ಲಿಗೆ ಬೇವಿನ ಮರದಿಂದ ಕೆಳಗ ಬಂದ್ಬುಟ್ಟು! ಅವಳ ಆಡಳಿತ ನೋಡಿದ್ದಾಯ್ತಲ್ಲ! ಈಗ ನನ್ನ ಒಕ್ಕಲ ಮಗಳು। ಆಲಂಬಾಡಿ ಜುಂಜೇಗೌಡ ಅಂತಕ್ಕವನು। ಅವನ ಮಗಳು ದ್ಯಾವಾಜಮ್ಮ। ಅವರ ಮನೆಗೆ ಹಿರಿಸೊಸೆ। ಅವಳ ದೃಢ ಮನ ನೋಡ್ಬುಟ್ಟು ಅನಂತರ ನಾನು ಎಳ್ಳು ಕಣಕ್ಕೆ ಹೋಗೀ ಎಳ್ಳು ಕೇಳ್ಬೇಕು ಅಂತೇಳ್ಬುಟ್ಟು! ನಮ್ಮಪ್ಪಾಜಿ ಮಲೆ ಮಾದಪ್ಪನವರು। ಬೇವಿನ ಮರ ಇಳಿದು ಬಿಟ್ಟು! ಬೇವಿನ ಹಟ್ಟಿಗೆ ಬಿಕ್ಷೆಗೆ ಬತ್ತವರೇ ಮಾದೇವಾ।

ಸೋಡಿ ನಮ್ಮ ಸಿವನಾ।

ಬೇವಿನ ಹಟ್ಟಿಗೆ ಬಿಕ್ಷೆಗೆ ಬಂದು ನೋಡುವಂತ ಕಾಲದಲ್ಲಿ! ಈಚರಿ ರಸ್ತೇಲಿ ನಿಂತು। ನೋಡುವಂತ ಕಾಲದಲ್ಲಿ! ಅಲ್ಲಿ ಕಾರಯ್ಯ ಹೇಳಿದ ಪ್ರಕಾರವಾಗಿ। ಕಚ್ಚೋ ನಾಯಿ ಕಾಳಿಂಗ ಸರ್ಪ। ಬಿಚ್ಚುಗತ್ತಿ ಪಾರದವನೇ ಪಾರ ಮಡಗಿದ್ದ! ಇದರಲ್ಲಿ ನನ್ನ ಹಟ್ಟಿಗೆ! ಯಾರಾವರೂ ನುಗ್ಗಿ ಬುಡ್ತಾರೆ ಅಂತ ಹೇಳುಬುಟ್ಟು! ಆ ಬಸವನ ಬಾಯನ್ನೆ! ಪಾರಾ ಮಾಡ್ ಮಡಗಿದ್ದ! ಅದನ್ನೂ ನೋಡ್ಬುಟ್ಟು। ನಮ್ಮಪ್ಪಾಜಿಯವರು ಯಾವ ತರವಾಗಿ ನಾನು ಹಟ್ಟಿ ಒಳಗೆ ನುಗ್ಗಬೇಕು। ಏನಾದರೂ ಈ ಪಾರಿನೋಳಿಗೆ ನುಗ್ಗಿ ಬಿಟ್ಟೋದ್ರೆ! ನಾನು ಎಂಜಲಾಗ್ಬಿಡ್ತೀನಿ ಅಂತ ಹೇಳ್ಬುಟ್ಟು। ನಮ್ಮಪ್ಪಾಜಿಯವರು ಈ ಬಾಯ್ನಲ್ಲಿ ನುಗ್ಗತಕ್ಕಂತ ಕಸ್ಟ! ನನಗೇನು ಬಂದಿದೆ ಅನ್ಬುಟ್ಟು। ಅಲ್ಲಿಗೆ ತಮ್ಮ ಅಕ್ಲಾಸದಲ್ಲಿ! ಮಾದೇವ ಈಚೆ ನಿಂತ್ಕೊಂಡು ಬಂದು। ಕುಪ್ಪಕುಪ್ಪರಸವರಲ್ಲಪ್ಪಾ ಮಾದೇವಾ.

ಸೋಡಿ ನಮ್ಮ ಸಿವನಾ।

ಅಷ್ಟೊತ್ತಿಗೆ ಸತ್ಯವಂತೆ ದೇವಾಜಮ್ಮ। ಏನ್ ಮಾಡ್ತಾಳೆ ಅಂತೇಳಿದ್ರೆ। ಅವರತ್ತೆ ಅವಳಿಗೆ ಒಪ್ಪಿಸಿಬಿಟ್ಟು ಹೋಗಿದ್ದಲ್ಲಾ! ಏಳು ಮಾನ ರಾಗಿ। ಆ ರಾಗಿನ ಒಣಗಾಕ್ಬುಟ್ಟು! ಅಲ್ಲಿಗೆ ಕೈಯಾಡ್ತಾ ಕುಂತಿದ್ಲು ಬಿಸಲೊಳಗೆ। ರಾಗಿ ಒಣಗಿಸ್ತಾ ಕುಂತಿದ್ಲಂತೆ। ಈ ನಮ್ಮಪ್ಪಾಜಿ ಮಾದಪ್ಪನವರು ನಿಂತುಕೊಂಡು। ಬಿಕ್ಷ ಸಾರಿದಂತಾ ಕಾಲದಲ್ಲಿ! ಈ ದ್ಯಾವಜಮ್ಮನಿಗೆ ಕೇಳಿಲ್ಲವಂತೆ। ಆವಾಗ ಮಾದೇವ ನಮ್ಮಪ್ಪಾಜಿಯವರು। ನೋಡ್ತಾ ನಾನು ಬಿಕ್ಷೆ ಸಾರ್ತಿದ್ರೆ ಕೇಳಲಿಲ್ಲವಲ್ಲಾ! ಇರಲಿ ಅಂತ ಹೇಳ್ಬುಟ್ಟು! ನಮ್ಮಪ್ಪಾಜಿಯವರು। ಅವರ ಜಂಗಿನ ಪಾದವನ್ನು ಎತ್ತಿ ಮುಂದಕ್ಕೆ ಮಡಗಿ। ಮುಂದಿನ ಪಾದವನ್ನು ಹಿಂದಕ್ಕೆ ಮಡಗಿವರಂತೆ। ಆಗ ಜಂಗು ಜಲೀರ್ ಅಂತ ಸಬ್ದವಾಗ್ಬುಡ್ತಂತೆ। ಆ ಜಂಗಿನ ಸಬ್ದ ಕೇಳ್ಬುಟ್ಟು! ದ್ಯಾವಾಜಮ್ಮ ಇದೇನು ನಮ್ಮಟ್ಟಿ ಒಳಗೆ। ಜಂಗಿನ ಸದ್ದಾಯ್ತಲ್ಲಾ ಅನ್ಬುಟ್ಟು! ಅಂತ್ ನೋಡ್ತಂತ ಕಾಲದಲ್ಲಿ! ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು ಮೂರು

ಚೋಟುದ್ದ ದಗ್ಗನೆ ಕತ್ತಿ ದಿಗ್ಗನೆ ಉರಿತಾಇದ್ರು। ಅವರನ್ನು ನೋಡ್ಬುಟ್ಟು ದ್ಯಾವಾಜಮ್ಮ ಬಾಳ ಭಕ್ತಿಯಿಂದ। ತಲೆ ತುಂಬಾ ಸೆರಗಾಕ್ಕಂಡು। ಓಗ್ಬುಟ್ಟು ಏನಂತ ಕೇಳ್ತಾಳಂತೆ। ಹೇಳಿದ್ರೆ ಏನು ಸ್ವಾಮಿ ಜಂಗಮರೇ ಇದೇ ನಮ್ಮತ್ರೆ ಕಾಳಮ್ಮನಂತಕ್ಕವಳು। ಇಷ್ಟುಮಟ್ಟಿಗೆ ಅಟ್ಟಿ ಕಟ್ಟವಳಲ್ಲ। ಇದೋ ಅಟ್ಟಿ ಒಳಗೆ ಯಾರಾದ್ರೂ ಬಲ್ಲಾರ್ ಅಂತ ಯೇಳ್ಬುಟ್ಟು। ಬಸವನ ಬಾಯಿಗೆ ಪಾರ ಮಡಗ್ವೆ। ಕಚ್ಚೋ ನಾಯಿ। ಕಾಳಿಂಗ ಸರ್ಪನೀ ಪಾರ ಮಾಡವಳೆ। ಬಿಚ್ಚುಗತ್ತಿ ಪಾರಾ ಮಡ್ಗವ್ಳೆ। ಗುರುವೇ ಇವ್ನೆಲ್ಲಾ ತಪ್ಪಿಸಿಬಿಡು ದಮ್ಮಯ್ಯ। ನಮ್ಮಟ್ಟಿಗೆ ಬಿಕ್ಷೆಗ ಬಂದಿದ್ರೆಲ್ಲಾ। ನೀವು ಯಾವ ನಾಡ್ನವರಾ ಗುರುರಾಯ।

ಆಹಾ ನೋಡಿ ನಮ್ಮ ಶಿವನಾ।

ಏನವ್ವಾ ನಾನು ಯಾವ ನಾಡ್ನವ ಅಂತ ಕೇಳ್ಬುಟ್ಟಲ್ಲಾ! ತಾಯಮ್ಮ ಹೇಳ್ತೀನಿ ಕೇಳು ಮಗಳೇ। ಕೊಕ್ಕರೆಗೊಂದು ಕೆರೆಯ। ನಮ್ಮಂತ ದಾಸ ಜೋಗಿ। ಗುಡ್ಡ ಜಂಗಮರು। ಸನ್ಯಾಸಿಗಳಿಗೆ ಯಾವ ಊರು, ಯಾವ ಕೇರಿ ಯಾವ ಮನೆ। ಹೇಳು ತಾಯಿ। ಮನೆ ಮನೆ ಬಿಕ್ಷ ಮಾಡಿಕೊಂಡು ಮಾರಿಗುಡೀಲಿ ನಿದ್ದೆ ಮಾಡ್ತಕ್ಕಂತ ಜಂಗಮರಿಗೆ। ಊರು ಯಾವುದು ಕೇರಿ ಯಾವುದು ಹೇಳಬೇಕು ಅನ್ಬುಟ್ಟು। ನಾನು ನಿಮ್ಮಟ್ಟಿಗೆ ಬಿಕ್ಷೆಗೆ ಬಂದಿದ್ದೀನಿ ತಾಯವ್ವ। ನನಗೆ ಗುರುರಾಯ ಕ್ವಾರಣ್ಯ ನೀಡುವಂತವಳೇ ಮಾದೇವಾ।

ಆಹಾ ನೋಡಿ ನಮ್ಮ ಶಿವನಾ।

ಯಾವಾಗ ಕ್ವಾರಣ್ಯ ನೀಡು ಅಂತ ಹೇಳ್ಬುಟ್ರೋ। ದ್ಯಾವಾಜಮ್ಮನಿಗೆ। ಇಲ್ಲ ಸ್ವಾಮಿ ನಿಮ್ಮ ಊರು ನಿಮ್ಮ ಸ್ಥಳ। ಹಕ್ಕಿಗೆ ಗೂಡುಂಟು ಪಕ್ಷಿಗೆ ಗೂಡುಂಟು। ನೆಲದ ಮ್ಯಾಲೆ ಇರತಕ್ಕಂತ ಎರಗೂ ಗೂಡುಂಟು। ನೀವು ಈ ಮಾತು ಹೇಳಿದ್ರೆ ನಾ ಒಪ್ಪಲಾರೆ ದಮ್ಮಯ್ಯ ಅನ್ಬುಟ್ಟಂತೆ। ಆಗ ಹುಸಿ ನಗೆ ನಗುತ್ತಾ ನಮ್ಮಪ್ಪಾಜಿಯವರು। ಸಬಾಸ್ ನನ್ನ ಕಂದ ನನ್ನ ಮಗಳೇ। ಆಗಿದ್ದ ಮ್ಯಾಲೆ ನನ್ನ ಮನೆ ಮಟ ಊರು ಹೇಳ್ಕೊಡ್ಬೇಕಾ। ಹೇಳ್ತೀನಿ ಕೇಳು ಕಂದ ಮಗಳೇ ಅನ್ಬುಟ್ಟು। ನಾನು ನಿನ್ನ ಅಪ್ಪನ ಮನೆ ಆಲಂಬಾಡಿ ಜುಂಜೇಗೌಡನ ಮನೆಗೆ ಹಗಲು ಬಿನ್ನಕ್ಕೆ ಬರುತ್ತಿದ್ದಾಗ। ನಾಲಗೆ ಇಲ್ಲದ್ ಗಂಟೆ ಬೆಳ್ಳಿ ಗಂಟೆ ದಣೀರ್ ಅಂತಿತ್ತು। ನಾನು ಒಳಕ್ಕೆ ಒಗ್ಬುಟ್ಟ ಬಿನ್ನ ತೀರಿಸ್ಕೊಂಡು। ನಾನು ಊಟ ಮಾಡಿ ಈಚೆಗೆ ಬರುವಾಗ। ನಾಲಿಗೆ ಇಲ್ಲದ್ದು ಚಿನ್ನದ ಗಂಟೆ ದಣೀರ್ ಅಂತಿತ್ತು। ಆಗ ನೀನು ಇಷ್ಟುದ್ದಕ್ಕೆ ಕಿರು ಮುಚ್ಚಳ ತಕ್ಕಂಡು। ಈಚೆ ಏಕಳೊಂದಿಗೆ ಆಡ್ತಿರಲಿಲ್ಲವಾ?। ಆಗ ನಾನು ನಿಮ್ಮಪ್ಪನ ಮನೆ ಮಹದೇವ। ಬಂದ ಅಂತ ಹೇಳ್ಬುಟ್ಟ। ನಿನಗೇನಾದರೂ ಒಂದು ಹಿಡಿ ರಾಗಿ ಕೊಟ್ಬುಟ್ಟು। ಇನ್ನೂ ಮಿಕ್ಕಾದ್ದು ಮಾಡ್ದೆ ಉಂಟಾದ್ರೆ। ನಮ್ಮತ್ರೆಮ್ಮಾ ಬಂದು ತೂಕ ಹಾಕಿ ನೋಡೋದ್ರೊಳಗಾಗಿ। ಏನಾದರೂ ಒಂದು ಗಜ್ಜುಗದ ಗಾತ್ರ। ಕಮ್ಮಿ ಬಂದುಬುಟ್ರೆ। ನಮ್ಮ ಏಳು ಜನ ಸೊಸೆಯರನ್ನು ಕರೀತಾಳೆ। ಏನಮ್ಮೆ ನನ್ನ ಸವತಿ ಎತ್ ಮಕ್ಕಳೇ। ನನ್ನ ಗಂಡು ಮಕ್ಕಳು ಗೇಯ್ಕಂಡ್ ಬಂದ ಗಂಡು ಮಕ್ಕಳಿಗೆ ಇಲ್ದಿದ್ದಂಗೆ। ನೀವೇ ಬಿಠ್ರ

ಬಿಲ್ಲನೆ ಮಾಡ್ಕಂಡು। ಬಿಸಿ ಬಿಸಿ ಮುದ್ದೆ ಉಂಡ್ಕಂಡ್ರು। ಅನ್ಬುಟ್ಟು ಅಲ್ಲಿಗೆ ಒಂದು ಮಲ್ಲು ಬಟ್ಟೆ ತಗೊಂಡು ಬಂದು। ಕೆಳಗೆ ಹಾಸುಬುಟ್ಟು। ಒಂದು ತಪ್ಪಲೆ ನೀರು ಕುಡಿಸ್ತಾಳೆ। ಎಲ್ರೂಗೂನೂ ನಮ್ಮತ್ತೆಮ್ಮಾ ಅಂತಕ್ಕಂತವಳು। ನಮ್ಮೆಲ್ರ ಹೊಟ್ಟೇನೂ ಕಯಳನ್ನೆಲ್ಲಾ ಹಿಸುಕಿ ಹಿಸುಕಿ ದಮ್ಮಯ್ಯ ಆ ಬಂಡೆ ಮ್ಯಾಲೆ ಉಗಿಸ್ತಾಳೆ। ಏನಾದರೂ ನಮ್ಮೆಲ್ಲರ ಬಾಯಲ್ಲಿ। ಒಂದು ರಾಗಿ ತರಿ ಅಂತಕ್ಕಂತಾದ್ದು ಆ ಬಟ್ಟೆ ಮೇಲೆ ಬಿದ್ದದ್ದೆ ಉಂಟಾದ್ರೆ। ನಮಗೆ ಕೊಲಬಾರದ ಕೊಲೆಯ ಕೊಡುತಾಳೆ।

ಆಹಾ ನೋಡಿ ನಮ್ಮ ಶಿವನಾ।

ಕೊಲಬಾರದ ಕೊಲೆ ಕೊಡ್ತಾಳೆ ಅನ್ಬುಟ್ರಂತೆ। ಆಗ ನಮ್ಮಪ್ಪಾಜಿಯವರಿಗೆ। ಬಾಳ ಹುಸಿನಗೆ ಬನ್ಬುಟ್ಟು। ಸಬಾಸ್ ಕಂದ ನನ್ನ ಹೆಣ್ಣು ಮಗಳೇ। ಅತ್ತೆ ಕೆಳಗೆ ಸೊಸೆ ಸರಿ। ತಾಯಿ ಕೆಳಗೆ ಮಗಳೇ ಸರಿ। ನೀನು ಆಗಲಿ ಹೇಳ್ತೀನಿ ಕೇಳವ್ವಾ ಬಿಕ್ಷೆ ಕೊಡಕ್ಕೆ ನನಗೆ ಅಷ್ಟೂ ಆಗದಿದ್ರೆ। ನಾನು ಬಂದು ಬಾಳ ಹೊತ್ತಾಯ್ತು ತಾಯವ್ವ। ಬಾಳ ಬಾಯಾರ್‍ದದೆ ತಾಯಮ್ಮ। ನನ್ನಟ್ಟೆ ಒಳಗೆ ಏಳು ಹಟ್ಟಿ ಹಸುಗಳು ಉಂಟಲ್ಲಾ ಅದರಲ್ಲಿ ಒಂದು ಹಸುವಿನ ಹಾಲು। ಒಂದು ಅರೆ ಪಾವು। ಕೊಟ್ಟದ್ದೇ ಉಂಟಾದ್ರೆ। ನನಗೆ ಬಾಳ ದಾವು ಇಂಗ್ತೆತೆ ಅಂದ್ರಂತೆ। ಆಗ ಅದಕ್ಕೊಂದು ಮಾತು ಹೇಳ್ತಾಳೆ ದ್ಯಾವಾಜಮ್ಮ। ಅಯ್ಯೋ ನಮ್ಮಪ್ಪನ ಮನೆ ಮಾಯಕಾರ ಮಾದಪ್ಪನವರೇ। ನಿಮ್ಗ್ಯಾಕೆ ಇಂತ ಕಸ್ಟ। ನಮ್ಮಪ್ಪನ ಮನೆಗೆ ದಯ ಮಾಡಿ ಸ್ವಾಮಿ ಅನ್ಬುಟ್ಟು। ನಿಮ್ಮಪ್ಪನ ಮನೆಗೆ ಹೋಗೋಕೆ ನೀನಲ್ಲ ಕಣವ್ವ। ನನಗೂ ಹೋಗೋದು ಗೊತ್ತು। ಹೋಯ್ತೀವಿ ಕಣಮ್ಮಾ। ಇಗೋ ನಿಮ್ಮಟ್ಟಿಗೆ ಬಂದಿದ್ದಕ್ಕೆ। ನಿನ್ನ ಭಕ್ತಿ ಯೇಳವ್ವಾ ಅಂದ್ರು। ಆಗ ಹೇಳ್ತೀನಿ ಕೇಳು ದಮ್ಮಯ್ಯ। ನಮ್ಮ ಅತ್ತೆಮ್ಮ ಎಳ್ಳು ಕಣಕ್ಕೆ ಓಗ್ಬುಟ್ಟವಳೆ। ಅಲ್ಲಿಂದ ಬಂದು ಹಾಲ್ಕರೆಯಕ್ಕೆ ಕುಂತ್ಕತಳೆ ಏನಾದರೂ ನಮ್ಮಪ್ಪನ ಮನೆ ದೇವರು ಬಂದಿದ್ದ ಅಂತ ಹೇಳ್ಬುಟ್ರೆ। ಒಂದು ಅರ್ದ ಚಟಾಕು ನಾ ಕೊಟ್ಬುಟ್ಟು। ಅರ್ದ ಚಟಾಕು ನೀರು ಬೆರಸಿದ್ದೇ ಉಂಟಾದ್ರೆ। ಗೊತ್ತಾಗ್ಬುಡುತ್ತೆ ದಮ್ಮಯ್ಯ। ಏನಮ್ಮೆ ನನ್ನ ಹಾಲ್ನೆಲ್ಲ ಕುಡ್ಕಂಡ್ಯಾ ಅನ್ಬುಟ್ಟು। ನಮಗೆ ಕೊಲಬಾರದ ಕೊಲೆ ಕೊಡ್ತಾಳೆ।

ಆಹಾ ನೋಡಿ ನಮ್ಮ ಶಿವನಾ।

ಅಯ್ಯೋ ನನ್ನ ಕಂದಮ್ಮ। ನಿಮ್ಮತ್ತೆಮ್ಮ. ಅಷ್ಟೊಂದು ಕೊಲೆ ಕೊಟ್ರೆ ಮ್ಯಾಲೆ। ನಿನಗ್ಯಾಕೆ ಇಂತ ಕಷ್ಟ ತಾಯವ್ವ ಅದೂ ಬ್ಯಾಡ ತಾಯವ್ವಾ। ನಾನು ಬಂದು ಬಾಳ ಹೊತ್ತಾಯ್ತು। ಈ ಕಂಚಿನ ಬಟ್ಟಲ ಕೈಲಿಡ್ಕಂಡು ಬಂದು ಬುಟ್ಟಿದ್ವಿ। ಈ ಕಂಚಿನ ಬಟ್ಟಲಿಗೆ। ನಿನ್ನ ಮನೆಯೊಳಗೆ ನೆನೆವಾರ್ತೆ ಮಾಡ್ತೀನಾದ್ರೂ। ಕಂಚಿನ ಬಟ್ಟಲಿಗೆ ಹಾಕಿದ್ದೆ ಉಂಟಾದ್ರೆ। ನಿನ್ನ ಹಟ್ಟಿ ಒಳಗೆ। ಬೆಲ್ಲದಾರ್‍ತಿ ಮಾಡಿದ್ದೆ ಉಂಟಾದ್ರೆ। ನನ್ನ ಹಟ್ಟಿಗೆ ಹರಸಿ ಅಶೀರ್ವಾದ ಮಾಡ್ಬುಟ್ಟು। ನಿನ್ನ ಮನೆ ಮುಟ್ಟಿ ಕುಡಿತೀನಿ ಅನ್ಬುಟ್ರಂತೆ। ಅಲ್ಲಿಗೆ ದ್ಯಾವಾಜಮ್ಮ ಏನಂತಾಳಂದ್ರೆ। ಅಯ್ಯೋ ಸ್ವಾಮಿ ಗುರುವೆ ಹೇಳ್ತೀನಿ ಕೇಳಿ ದಮ್ಮಯ್ಯ। ನಮ್ಮತ್ತೆಮ್ಮ

ಸಂಗೊಂದು ಕಾಸ್ನೂ ಕೊಟ್ಟಿಲ್ಲ ಇವರೂಳಗ ನೀವ್ರ ಬಂದು। ಫುಡಿಗಾಸು ಹಾಕು ಅಂತಿದ್ದೀರಿ। ನಾನು ಈ ಫುಡಿಗಾಸು ಕಂಡಂತ ದಾರಿ। ಯಾವಾಗ ಅಂತ ಹೇಳಿದ್ರೆ। ನಾನು ಏಳು ವರ್ಸದ। ಹೊಸಲು ಮೆಟ್ಟುವಾಗ ದಾರ ಉಯ್ತಿರುವಾಗ। ಚಪ್ಪರದಟ್ಟಿ ಒಳಗ ಎಲ್ಲಾ ಕುಲಸ್ತರು ಪಲಸ್ತರು ಸೇರ್‍ಕಂಡು ಬಂದಿದ್ರಲ್ಲಾ। ನನ್ನ ಮದುವೆಗೆ ಬಂದಿದ್ರಲ್ಲಾ ದಮ್ಮಯ್ಯ। ಅವರೆಲ್ಲಾ ಒಂದೊಂದು ಕಾಸು ಎರಡೆರಡು ಕಾಸಾಕ್ತಿದ್ರಲ್ಲಾ ದಮ್ಮಯ್ಯ। ಆಗ ನಾನು ತಾಮ್ರದ ಕಾಸಿನ ಮುಖ ನೋಡಿದ್ದು। ಆಗ ನಾ ಒಂದು ಹಣ ಬೆಳ್ಳಿ ಪಾವಲಿ ಮೊಕ ನೋಡಿದ್ದು। ಮುಯ್ಯಿಗೆ ಕುಂಡಿಸ್ದಾಗ ಅವರು ಇವರು। ನಂಟರು ಕುಲಸ್ತರು ಸೇರ್‍ಕಂಡು। ಮರ್ಯಾದೆ ಮಾಡಿದ್ರು ದಮ್ಮಯ್ಯ ಬೆಳ್ಳಿ ರೂಪಾಯಿನ ಮುಖ ನೋಡಿದ್ದು ನೀವು ನಮ್ಮಪ್ಪನ ಮನೆಗೆ ದಯಮಾಡಿಸಿ ಅಂತವಳೇ ದ್ಯಾವಾಜಮ್ಮ।

ಆಹಾ ನೋಡಿ ನಮ್ಮ ಸಿವನಾ।

ಯಾವಾಗ ನಮ್ಮಪ್ಪನ ಮನೆಗೆ ದಯಮಾಡ್ಸಿ ಅಂತ ಹೇಳ್ಬಿಟ್ಲೋ। ಸಬಾಸ್ ನನ್ನ ಕಂದಮ್ಮ ತಾಯಮ್ಮ। ನಿಮ್ಮಪ್ಪನ ಮನೆಗೆ ಹೋಗು ಅನ್ಸೋಕ್ಕೆ। ನೀನಲ್ಲ ಕಣ್ ತಾಯವ್ವ। ಪೋಗ್ಲಿ ಒಂದು ಎಲೆ ಅಡಿಕೆನಾದ್ರೂ ಕೊಡವ್ವಾ। ಹಾಕ್ಕಂಡು ಬಾಯ್‌ದಾವ್ ಇಂಗಿಸ್ಕತೀನಿ ಅಂತ ಹೇಳಿದ್ರಂತೆ। ಅಯ್ಯೋ ದಮ್ಮಯ್ಯ। ನಿಮಗ್ಯಾಕೆ ಇಂತ ಬಡಸ್ತಾನ। ಒಂದು ಎಲೆ ಒಂದು ಅಡಿಕೆ ಕೇಳ್ತಿದ್ದೀರಲ್ಲಾ। ನೀವೊಂದೇಳಿದ್ರೆ ನಾವೊಂದೇಳ್ತೀನಿ। ಕ್ವಾಪ ಮಾಡಬ್ಯಾಡಿ ದಮ್ಮಯ್ಯ। ಸಂಜೆ ಹೊತ್ತಿಗೆ ನಮ್ಮತ್ತೆಮ್ಮ। ಎಳ್ಳು ಕಣದಿಂದ ಬಂದುಬುಟ್ಟು। ಅವರೆಲ್ಲಾ ಉಂಡು ಮಲಗುವಾಗ। ಎಲ್ಲರಿಗೂ ಅವರವರ ಗಂಡ ಹೆಂಡ್ತೀರ್‍ಗೆಲ್ಲಾ। ಒಂದೆ ಎಲೆ ಅಡಿಕೆ ಕೊಟ್ಟು ಕಳಿಸ್ತಾಳೆ। ಅವರೆಲ್ಲಾ ತಕ್ಕಂಡೊಯ್ತಾರೆ। ನಾನೂ ಒಂದೆ ಎಲೆ ಅಡಿಕೆ ತಕ್ಕಂಡು ಬತ್ತೀನಕದಮ್ಮಯ್ಯ। ಅಷ್ಟರಲ್ಲಿ ನನ್ನ ಯಜಮಾನ ಉಂಡ್ಬುಟ್ಟು ಮಲಗಿರ್‍ತಾನೆ। ನಾನು ಬಂದುಬುಟ್ಟು ಆ ಎಲೆ ಅಡಿಕೆ ಹಾಕ್ಕಳ್ಳಕಿಲ್ಲ। ನನ್ನ ಗಂಡನ ತಲೆದೆಸೆಲಿ ಕೂತ್ಕಂಡು। ಕಸ್ಟ ಸುಕದ ಮಾತಾಡ್ಬೇಕು ಅಂತ ಕುಂತ್ಕಳದ್ರೊಳಗಾಗಿ। ನಮ್ಮ ಅತ್ತೆ ಕಾಳಮ್ಮ। ನನ್ನ ಇಂಮುಗುಂಟನೇ ಬಂದ್ಬಿಟ್ಟು। ಬಾಗಿಲ ಕಿಂಡೀಲೆ ಬಗ್ಗಿ ನೋಡ್ಬುಟ್ಟು। ಏನಲೇ ನನ್ನ ಸವತಿ ಮಗಳೇ। ಗೇಯ್ಕಂಡು ಬಂದಿರತಕ್ಕಂತ ನನ್ನ ಮಗನಿಗೆ। ನಿದ್ದೆ ಕೆಡ್ಸಕ್ಕೆ ಕುಂತಿದ್ದೀಯಾ। ಮುಂದಕ್ಕೆ ಮನೆ ಕಟ್ತೀ ಇಂದಕ್ಕೆ ಮುರಿತೀನಿ ಅನ್ಬುಟ್ಟು। ಬಾಳ್ತೀವಿ ಬದಕ್ತೀನಿ ಅಂತ ಹೇಳ್ಬುಟ್ಟು। ನಿದ್ದೆ ಕೆಡ್ಸಕ್ಕೆ ಕುಂತಿದ್ದೀಯಾ ಅನ್ಬುಟ್ಟು ಕೀನಾ ಕಟ್ಟಾಗಿ ಬೈಯ್ತಾಳೆ ದಮ್ಮಯ್ಯ। ಆಗ ನನಗೆ ಎಲೆ ಅಡ್ಕೆ ಹಾಕ್ಕಳದಕ್ಕೆ ಮನ್ಸು ಬರದಿಲ್ಲ। ಕ್ವಾಪ ಬನ್ಬುಟ್ಟು ಮಲಿಕಂಬುಡ್ತೀನಿ। ಪೊತ್ತುಂಟೆ ಎದ್ದು ನೋಡೋದ್ರೊಳಗೆ ಆ ಎಲೆ ಒಣಗೋಗಿರುತ್ತೆ ದಮ್ಮಯ್ಯ। ಅದ್ ತಕ್ಕಂಡೋಗಿ ಹುಲ್ಲು ಹಿತ್ತಿಲಗೆ ಬೀಸಾಕ್ಬುಡ್ತೀನಿ। ನೀವು ಈ ಮಾತು ಕೇಳಿದ್ರೆ ದಮ್ಮಯ್ಯ। ಇದು ನನ್ನ ಸೊತ್ತು ದಮ್ಮಯ್ಯ। ನನಗೆ ಈವೊತ್ತು ಸಂಜೆ ಕೊಟ್ಟಿಂತ ಎಲೆ ಅಡಿಕೇನ। ನಮ್ಮಪ್ಪನ ಮನೆ ದೇವ್ರು ಬಂದಿದ್ರು ಕೇಳಿದ್ರು ಅಂತ ಹೇಳ್ಬುಟ್ಟು। ಎಂಜಲು ಮೊಸಲು ಮಾಡದೆ ಕಟ್ಟಿ ಮಡಗ್ತೀನಿ। ನೀವು ನಾಳೆ ಇಷ್ಟೊತ್ತಿಗೆ ಬನ್ನಿ ಹೋಗ್ಬಪ್ಪಾ। ಮಾದೇವ।

ನೋಡಿ ನಮ್ಮ ಸಿವನಾ।

ಸಭಾಸ್ ನನ್ನ ಕಂದವ್ವಾ। ನಿನ್ನ ಸಕ್ತಿಗೆ ನಾನು ಮೆಚ್ಚಿದೆ। ಕಂದಮ್ಮ ನನ್ನ ಒಕ್ಕಲ ಮಗಳೇ ಸರಿ। ಆಲಂಬಾಡಿ ಜುಂಜೇಗೌಡನ ಮಗಳೇ ಸರಿ ನೀನು ಅಂತೇಳ್ಬುಟ್ಟು। ಅತ್ತೆ ಕೆಳಗಿನ ಸೊಸೇನೇ ಸರಿ ನೀನು। ಬಾಳ ಬಾಯಾರತ್ತೆ ತಾಯವ್ವ। ಹೋಗ್ಲಿ ಒಂದು ಲೋಟ ನೀರನ್ನಾದ್ರೂ ಕೊಡು ತಾಯವ್ವ। ಅಂತ ಕೇಳಿದ್ರಂತೆ। ಆಗ ನೀರು ಕೊಡೋ ಕಾಲದಲ್ಲಿ ಸ್ವಾಮಿ ನೀರು ಕೊಡಕ್ಕೇನು ಅಂದುಬುಟ್ರೆ। ನನ್ನ ವಾರಗಿತ್ತೀರು ನೋಡ್ಬುಟ್ಟು। ಅದ್ಯಾರೋ ಕಾವಿ ಬಟ್ಟೆ ಜಂಗಮ ಬಂದಿದ್ದ। ತಕ್ಕಂಡೋಗಿ ನೀರು ಕೊಟ್ಲು ಅಂತ ಚಾಡಿ ಹೇಳ್ಬುಡ್ತಾರೆ। ನಮ್ಮತ್ತೆಮ್ಮನಿಗೆ ಇದೇ ಪ್ರಕಾರವಾಗಿ ನೀರು ಕುಡೀಬೇಕಾದ್ರೆ। ಜಾಲದಟ್ಟಿ ಕೊಳ ಅಂತೈತೆ। ಅಲ್ಲಿ ನೀರು ತೋರಿಸ್ತೀನಿ ಹೋಗಿ ದಮ್ಮಯ್ಯ ಅಂದ್ಲಂತೆ। ಆದೋಗದಿರ್ಲಿ ತಾಯಮ್ಮ। ಆಗಿದ್ದ ಮೇಲೆ ನಿಮ್ಮತ್ತೆ। ಎಳ್ಳು ಕಣಕ್ಕೆ ಓದ್ಲಲ್ಲವ್ವಾ। ಆ ಏಳ್ ಕಣಕ್ಕೆ ಸ್ವಲ್ಪ ದಾರಿ ತೋರು ಅಂತವರೇ।

ಆಹಾ.... ನೋಡಿ ನಮ್ಮ ಸಿವನಾ।

ಹಾಗಿದ್ದ ಮೇಲೆ ಒಂದು ಕೆಲಸ ಮಾಡಿ ದಮ್ಮಯ್ಯ। ನಾನು ಎಳ್ಳು ಕಣಕ್ಕೆ ದಾರಿ ತೋರಿಸಿಕೊಡಬೇಕಾದ್ರೆ ನಾನು ನಿಮ್ಮ ಹಿಂದುಗುಂಟ ಬಂತು ಅಂದ್ರೆ। ನಮ್ಮತ್ತೆಮ್ಮ ಚಾಡಿ ಹೇಳ್ಬುಡ್ತಾರೆ। ನೀವು ನೀರ್ ಕೇಳಿದ್ರೆ ದಮ್ಮಯ್ಯ ಇದೇ ಮಾರ್ಗವಾಗಿ ಹೋಗ್ಬುಟ್ಟು। ಅಲ್ಲಿ ಜಾಲದಟ್ಟಿ ಕೊಳ ಅಂತ ಇದೆ। ಆ ಜಾಲದಕಟ್ಟೆ ಕೊಳದತ್ರವೇ ನೀರನ್ನು ಕುಡ್ಕಂಬುಟ್ಟು। ನೀವು ಕುಂತದ್ದೆ ಉಂಟಾದ್ರೆ। ನಾನು ನನ್ನ ವಾರಗಿತ್ತೀರಿಗೆ ನೀರ್ ತಕ್ಕಂಬತ್ತೀನಿ ಅಂತ ಹೇಳ್ಬುಟ್ಟು। ಬಿಂದಿಗಿ ತಕ್ಕಂಡು ಕಂಕಳಗೆ ಇರಿಕ್ಕಂಡು। ನಾನು ನೀರಿಗೆ ಬರೋಳ್ ಹಾಗೆ ಬನ್ಬುಟ್ಟು। ನಮ್ಮತ್ತೆಮ್ಮನ ಎಳ್ಳು ಕಣಕ್ಕೆ ದಾರಿ ತೋರ್‍ಕೊಡ್ತೀನಿ ದಮ್ಮಯ್ಯ। ನೀವು ಜಾಲವಟ್ಟಿ ಕೊಳಕ್ಕೆ ದಯ ಮಾಡಿ ಅಂತವಳೇ। ದ್ಯಾವಾಜಮ್ಮಾ।

ಆಹಾ.... ನೋಡಿ ನಮ್ಮ ಸಿವನಾ।

ಅಂಗೇ ಆಗ್ಲಿ ಕಣವ್ವಾ ಅಂತ। ಅಪ್ಪಾಜಿಯವರು ಜಾಲದಟ್ಟಿ ಹತ್ತಿರ ವೊಂಟೋದ್ರು। ದ್ಯಾವಾಜಮ್ಮನಾಗಿರತಕ್ಕಂತವಳು। ಅಲ್ಲಿ ವಾರ್‍ಗಿತ್ತೀರ್‍ನೆಲ್ಲಾ ಕರೆದ್ಬುಟ್ಟು। ನೀವೆಲ್ಲಾ ರಾಗಿ ಮಾಡ್ಕಂಡು। ಬೀಸ್ಕಂಡಿರಿ ನಾನು ಹೋಗಿ ನೀರು ತಕ್ಕಂಬರ್‍ತೀನಿ ಅನ್ಬುಟ್ಟು। ಅಲ್ಲಿಗೆ ಬಿಂದಿಗೆಗಳನ್ನು ಕೈನಲ್ಲೊಂದು ಕಂಕಳಲ್ಲೊಂದು ಇರಿಕ್ಕಂಡು। ಸತ್ಯವಂತೆ ದ್ಯಾವಾಜಮ್ಮ-ನಾಗಿರತಕ್ಕಂತವಳು। ಜಾಲದಟ್ಟಿ ಕೊಳಕ್ಕೆ ನೀರಿಗೆ ಬರ್‍ತವಳೇ ದ್ಯಾವಾಜಮ್ಮ।

ಆಹಾ.... ನೋಡಿ ನಮ್ಮ ಸಿವನಾ।

ಆವಾಗ ನೀರಿಗೆ ಬರ್‍ತಾ ಇರತಕ್ಕಂತ ಕಾಲದಲ್ಲಿ। ನಮ್ಮಪ್ಪಾಜಿಯವರು ಏರಿ ಮೇಲೆ ಕೂತ್ಕಂಡು ನೋಡ್ಬುಟ್ಟು। ಈಗ ಇನ್ನೊಂದು ಸಾರಿ ಅವಳ ಸತ್ಯ ನೋಡ್ಬೇಕಲ್ಲಾ ಅನ್ಬುಟ್ಟು।

ನಮ್ಮಪ್ಪಾಜಿ ಮಾದಪ್ಪನವರು ಅವಳು ಬತ್ತ್‌ಬತ್ತಾ ಇದ್ದಾಗ। ಒಂದು ಮರ ಮರೆಯಾಗಿ ನಿಂತ್ಗಂಬುಟ್ರಂತೆ। ದ್ಯಾವಾಜಮ್ಮ ಬಂದುಬುಟ್ಲು। ಏರಿ ಮ್ಯಾಲೆ ನೋಡಿದ್ಲು। ಎಲ್ಲೂ ಇಲ್ಲ। ಅಲ್ಲಿ ಇಲ್ಲಿ ನೋಡುದ್ಲು। ಎಲ್ಲೂ ಕಂಡಂಗಾಗ್ಲಿಲ್ಲ। ಅಲ್ಲಿಗೆ ಬಿಂದಿಗೆ ಹಂತದ ಮೇಲೆ ಮಡಗ್ಬುಟ್ಟು। ದ್ಯಾವಾಜಮ್ಮನವರು ಅಯ್ಯೋ ನಮ್ಮಪ್ಪಾಜಿಯವರು ಬಂದು। ನನ್ನಟ್ಟಿದೆಲ್ಲಾ ಕೇಳಿದ್ರು। ನಾನೇನೂ ಕೊಡಲಿಲ್ಲವಲ್ಲ। ಇಲ್ಲಿ ನೀರು ಕಂಡ್ಬುಟ್ಟು। ಬಾಳ ಬಾಯಾರಿಕೆ ಆಗಿರಬೇಕು। ನೀರು ಕುಡ್ಯಕ್ಕೆಲ್ಲೋ ಅಂತ ಇಳಿದಿರಬೇಕು। ಕಾಲು ಜಾರಿ ಸೀರಿನ ಕೊಳಕ್ಕೆ ಬಿದ್ದೋಗಿರಬೇಕು ಅನ್ಬುಟ್ಟು। ಸತ್ವವಂತೆ ದ್ಯಾವಾಜಮ್ಮನಾಗಿರತಕ್ಕಂತವಳು। ಆ ಹಂತದ ಮ್ಯಾಲೆ ಕೂತ್ಕಂಡು। ಅವಳು ದುಕ್ಕ ಮಾಡ್ತಾ ಕುಂತವಳೇ। ದ್ಯಾವಾಜಮ್ಮ।

ಆಹಾ.... ನೋಡಿ ನಮ್ಮ ಸಿವನಾ।

ಅಷ್ಟರಲ್ಲಿ ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಸಬಾಸ್ ನನ್ನ ಕಂದ ಹೆಣ್ಣು ಮಗಳೇ। ನನ್ನೊಕ್ಕಲ ಮಗಳೇ ಸರಿ। ಸತ್ವಂತೆ ಅಂತ ಹೇಳ್ಬುಟ್ಟು। ದುಕ್ಕ ಮಾಡಬೇಡ ಕಣವ್ವಾ ಅನ್ಬುಟ್ರಂತೆ। ಆಗ ಬಲು ಸಂತೋಸದಲ್ಲಿ ಕುಂತಕಂಡು ಬುಟ್ಲು। ಅಲ್ಲಿಗೆ ಏನಮ್ಮಾ ದ್ಯಾವಾಜಮ್ಮ। ನಿಮ್ಮತ್ತೆ ಏಳ್ಳು ಕಣಕ್ಕೆ ದಾರಿ ಯಾವುದು ಅಂತ ಕೇಳಿದ್ರು। ಅಲ್ಲಿಗೆ ಬನ್ನಿ ಸ್ವಾಮಿ ಅಂತೇಳ್ಬುಟ್ಟು। ಏರಿ ಮೇಲೆ ನಿಲಿಸ್ಕಂಬುಟ್ಟು। ಇದೋ ದಮ್ಮಯ್ಯ ಈ ದಾರಿ ಅಂತಕ್ಕಂತಾದ್ದು। ನಮ್ಮ ಮಾವ ಕೆಂಡೇಗೌಡ ತಂಗಳು ಉಪ್ಪೇಸ್ರು ಕಾಳ್ನಲ್ಲಿ। ಮೂರು ಮುದ್ದೆ ಉಂಡ್ಬುಟ್ಟು। ಏಳುಂಡಿ ಕುರಿ ಹೊಡಕೊಂಡು। ಕರಿ ಕಂಬಳಿ ತೆಗೆದು ಹೆಗಲ ಮೇಲಾಕ್ಕಂಡು। ಜೋಳಗೆ ಬಲಗೈಲಿ ಹಿಡ್ಕಂಡು। ನಿನ್ನ ಏಳು ಮಲೆ ಕೈಲಾಸಕ್ಕೆ ಮೇಯಿಸಕ್ಕೆ ಹೋಗಿರತಕ್ಕಂತ ದಾರಿ। ಆ ದಾರಿ ಅಂತಕ್ಕದ್ದು। ನನ್ನ ಗಂಡಂದಿರು ಮೈದಂದಿರೆಲ್ಲಾ ಸೇರ್ಕಂಡು। ಹೊಲಕ್ಕೆ ಉಳಕ್ಕೆ ಹೋಗಿರತಕ್ಕಂತ ದಾರಿ ಇದು। ಈ ಮಧ್ಯೆ ವೊಯ್ತದಲ್ಲಾ ಅದು ಸಣ್ಣ ದಾರಿ। ಇದು ನಮ್ಮತ್ತೆ ಕಣಕ್ಕೆ ಹೋಗುವಂತಾದ್ದು। ಈ ಸಣ್ಣ ದಾರಿ ಒಳಗೆ ದಯಮಾಡಿ ಅಂತವಳೇ। ದ್ಯಾವಾಜಮ್ಮ।

ಹ್ಞಾಂ.... ನೋಡಿ ನಮ್ಮ ಸಿವನಾ।

ಹೋಗಿದ್ದು ಬತ್ತೀನಿ ಓಗವ್ವಾ ಅನ್ಬುಟ್ಟು ಅಪ್ಪಾಜಿಯವರು। ಆ ಸಣ್ಣ ದಾರಿ ಒಳಗೆ ಒಯ್ತಾ ಒಯ್ತಾ। ಒಂದು ಆಲೋಚನೆ ಮಾಡ್ತಾರೆ। ನಾನು ಇದೇ ರೂಪದಲ್ಲಿ ಕಾವಿ ಧರಿಸಿಕೊಂಡು। ಜಂಗು ಧರಿಸಿಕೊಂಡು। ನಾನು ಹೋದ್ದೆ ಉಂಟಾದ್ರೆ। ಕಾಳಮ್ಮ ಇವರೇ ಮಾದಪ್ಪ। ಬಾಗ್ಯ ಕೊಟ್ಟಿವ ಅಂತ ಹೇಳ್ಬುಟ್ಟು। ಆಗ ಮುಕ್ಕರ್ಕಂಡು ಏಳ್ತಾಳೆ। ಮೂರು ಹಿಡಿ ಕ್ವಾರಣ್ಯ ಕೊಡ್ತಾಳೆ। ಅವಳ ಮುಕ್ಕರಕೊಂಡ। ಕ್ವಾರಣ್ಯ ತಗಂಡೋಗಕ್ಕೆ ನಾನು ಬಂದಿಲ್ಲವಲ್ಲ। ನಾನು ದಮ್ಮಯ್ಯ ಬಿಕ್ಸದವನಲ್ಲ। ನಮ್ಮಪ್ಪಾಜಿಯವರು। ಅವಳ ನಿಜ ಮನ ಸೋಸಬೇಕಲ್ಲಾ ಅನ್ಬುಟ್ಟು। ಏನು ಮಾಡ್ತಾರಪ್ಪಾ ಅಂತ ಹೇಳಿದ್ರೆ। ಹಳ್ಳ ಕಂಡ್ರೆ ಬೀಳ್ತಾ। ತಿಟ್ ಕಂಡ್ರೆ ಏಳ್ತಾ। ಮುದುಕಯ್ಯನ ಯಾಸ ತಾಳ್ಕಂಡು। ಅಜ್ಜಿ ಗುಜ್ಜಿ ಜಂಗಮನಾಗಿ ಕೊಳಕು ಜಂಗಮನಾಗಿ। ಅವನು ವೊಯ್ತಾ ಅವನೇ ಬೇವಿನಟ್ಟಿ ಬಿಕ್ಸಕ್ಕೋಯ್ತಾವ್ನೆ। ಮಾದೇವ।

ಆಹಾ.... ನೋಡಿ ನಮ್ಮ ಶಿವನಾ।

ಬೇವಿನ ಹಟ್ಟಿ ಕಾಳಮ್ಮನ ಆ ಕಣಕ್ಕೆ। ಬಿಕ್ಷಕ್ಕೆ ಹೋಗ್ಬುಟ್ಟು। ಕಣದ ಮುಂದೆ ನಿಂತ್ಕಂಡು। ಕಾಳಮ್ಮನಿಗೆ ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಏನಂತ ಕೂಗ್ತಾರೆ ಅಂತ ಹೇಳಿದ್ರೆ। ಹರಹರಾ ಹರನ ಬಿಕ್ಷ। ಗುರುವಿನ ಬಿಕ್ಷ। ಗುರುವಿನ ಕ್ವಾರಣ್ಯ ಬಿಕ್ಷ। ನಾಲ್ಕು ಪಾದ ಜೋಳಿಗೆ ಬಿಕ್ಷ ಅಂತೇಳ್ಬುಟ್ಟು। ಬಿಕ್ಷವೋ ಬಿಕ್ಷವೋ ಅಂತ ಹೇಳ್ಬುಟ್ಟು। ಅಲ್ಲಿಗೆ ಪಂಚೈದು ಕ್ವಾರಣ್ಯ ಸಾರವರೇ। ಮಾದೇವಾ।

ಆಹಾ.... ನೋಡಿ ನಮ್ಮ ಶಿವನಾ।

ಇವರು ಕ್ವಾರಣ್ಯ ಸಾರ್‍ತ ಇದ್ರೆ। ಅವಳು ಬಗ್ಗಿದ ತಲೆ ಮೇಲಕ್ಕೆ ಅನಲಿಲ್ಲ। ನೀಡಿದ ಕಾಲು ತೆಗೀಲಿಲ್ಲ। ಅಲ್ಲಿಗೆ ಆಗ। ನಮ್ಮಪ್ಪಾಜಿಯವರು ತಿಳ್ಕಂಬುಟ್ರು। ಸಬಾಸ್ ನನ್ನ ಕಂದ ಕಂದಯ್ಯಾ ಹೇಳಿದ ಮಾತು ಸತ್ಯವಾಯಿತು ಇದು ಅಂತ ಹೇಳ್ಬುಟ್ಟು। ಏನ್ಮಾಡ್ತಾರೆ ಅಂತೇಳ್ಬುಟ್ರೆ। ಈಗ ನಾನು ಇನ್ನೊಂದು ಅವತಾರ ತಾಳ್ಬೇಕು ಅಂತ ಹೇಳ್ಬುಟ್ಟು ಅಲ್ಲೇ ನಿಂತಿದ್ದ ಜಾಗದಲ್ಲೇ। ನಮ್ಮಪ್ಪಾಜಿಯವರು। ಎಗ್ಗಜ್ಜಿ ತುರುಗಜ್ಜಿ। ಮೇಲೆ ಕೀವುರಕ್ತ ಗಬ್ ನಾತ ಬರಸ್ಕಂಡು। ನಮ್ಮಪ್ಪಾಜಿ ಮಾದಪ್ಪನವರು। ಅಲ್ಲಿ ಕೀಳು ಅವತಾರ ತಾಳವರೇ।

ಆಹಾ.... ನೋಡಿ ನಮ್ಮ ಶಿವನಾ।

ವಾಸುದೇವನಿಗೆ ವಾಲೆ ಬರ್‍ದವ್ರೆ। ವಾಸುದೇವನಿಗೆ ವಾಲೆ ಬರ್‍ದಂತ ಕಾಲದಲ್ಲಿ। ಬಂದು ಕೇಳಿದ್ನಂತೆ। ವಾಸುದೇವ ಏನಪ್ಪಾ। ನೋಡು ನಾನು ಈ ತರವಾಗಿ ಬಿಕ್ಷೆಗೆ ಬರುವಂತಾ ಕಾಲ್ದಲ್ಲಿ। ಈ ಕಾಳಮ್ಮ ಬಗ್ಗಿದ ತಲೆ ಎತ್ತಲಿಲ್ಲ। ನೀಡಿದ ಕಾಲು ತೆಗೀಲಿಲ್ಲ। ಲಕ್ಷ್ಯವಿಲ್ಲದೆ। ಕುಂತವ್ಳೆ ಕಣಯ್ಯ। ಈಗ ನನ್ನ ಮೈ ಮೇಲಿರತಕ್ಕಂತ ಗಬ್ಬುನಾತ ತಕ್ಕಂಡೋಗ್ಬುಟ್ಟು। ಅವಳ ಮೂಗಿನ ಗುಡಾರಕ್ಕೆ ಬುಡಯ್ಯ ಅಂತ ಹೇಳ್ಬುಟ್ರಂತೆ। ಆಗ ವಾಸುದೇವನಾಗಿರತಕ್ಕವನು। ಅಲ್ಲಿಗೆ ಒತ್ತರಿಸಿ ಬೀಸವರೇ ವಾಸುದೇವಾ-

ಆಹಾ.... ನೋಡಿ ನಮ್ಮ ಶಿವನಾ।

ಯಾವಾಗ ಅಲ್ಲಿ ಒತ್ತರಿಸಿ ಬೀಸಿದಂತ ಕಾಲದಲ್ಲಿ। ಇವರ ಮೈ ಮೇಲಿರತಕ್ಕಂತ ಗಬ್ಬುನಾತ ಅಂತದ್ದು। ಹೋಗಿ ಅವಳ ಮೂಗಿನ ಗುಡಾರಕ್ಕೆ ಬಿದ್ದು ಬುಡ್ತಂತೆ। ಅಲ್ಲಿಗೆ ಕಾಳಮ್ಮನಾಗಿರತಕ್ಕಂತವಳು। ಅಂತ್ಕಂಬುಟ್ಟು ದುರುದುರನೆ ನಮ್ಮಪ್ಪಾಜಿಯವರ। ದುರುಗುಟ್‌ಗಂಡು ನೋಡ್ತವಳೇ। ಕಾಳಮ್ಮ।

ಆಹಾ.... ನೋಡಿ ನಮ್ಮ ಶಿವನಾ।

ಏನು ಹೇಳ್ತಾಳೆ ಅಂತ ಹೇಳಿದ್ರೆ। ಇವನು ಯಾವನಲಾ। ಇದೆಲ್ಲಿಯೋ ಇಲಿಯೋ ಹೆಗ್ಗಣವೋ ಸತ್ತೋಗೈತೆ ಅಂತ ಹೇಳ್ಬುಟ್ಟು। ನೋಡ್ದಂತ ಕಾಲದಲ್ಲಿ ಇವರಿದ್ರಂತೆ। ಇವರ

ಮೈ ಮೇಲಿರತಕ್ಕಂತ ನಾತ ನೋಡ್ಬುಟ್ಟು! ಇವನಾರವಾ ಕೊಳಕು ಜಂಗಮ! ಪದ್ದ ಜಂಗಮ ಪ್ಪಾದ ಜಂಗಮ, ಕೊಳಕ ಜಂಗಮ! ನನ್ನ ಕಣದಲ್ಲಿ ಬಂದು ನಿಂತುಕೊಂಡು ಕೇಳ್ತಿದ್ದಿಯಲ್ಲಾ! ನೀನು ಕಾಡುಬ್ಯಾಡ ಹೋಗ್ಲಾ! ಕಾದು ಪರದೇಸಿ!

ಆಹಾ.... ನೋಡಿ ನಮ್ಮ ಶಿವನಾ!

ನೀನು ನಾಮಕರಣ ಮಾಡಿದ್ದು ಆಯ್ತು! ಇನ್ನು ಮೇಲೆ ನಾನು ಪರದೇಸಿ ಆದ್ರೂ ಅದೆ! ನಾನು ಬೆಟ್ಟ ಹತ್ತಿ ಬೆಟ್ಟ ಇಳಿದು! ತಾಯಮ್ಮ ಎತ್ತಿ ಜೋಳಿಗೆಯನ್ನು ಹಿಡಿದು! ನೀನು ಬೆಳದಿರತಕ್ಕಂತ! ಏಳು ನೂರ ಎಪ್ಪತ್ತು ಕಂದುಗ ಈ ರಾಸಿನ ಕೊಡು ಅಂತ ನಾ ಕೇಳ್ಲಿಲ್ಲ! ಹೇಳ್ತೀನಿ ಕೇಳು ಕಂದಮ್ಮ! ಅಚ್ಚ ಹನ್ನೆರಡು ಬಳ್ಳ ಎತ್ತಿ! ನನ್ನ ಮುತ್ತಿನ ಜೋಳಿಗೆಗೆ ಹಾಕಿ! ಪಟ್ಟಾಭಿಸೇಕ ಮಾಡಿ! ನನ್ನ ಏಳು ಮಲೆ ಕೈಲಾಸಕ್ಕೆ! ನನ್ನ ಎಣ್ಣೆ ಮಜ್ಜನಕ್ಕೆ ಕಳಸವ್ವಾ!

ಆಹಾ.... ನೋಡಿ ನಮ್ಮ ಶಿವನಾ!

ಯಾವಾಗ ಎಣ್ಣೆ ಮಜ್ಜನಕ್ಕೆ! ಹನ್ನೆರಡು ಬಳ್ಳ ಎಳ್ಳು ಕೊಡು ಅಂತ ಕೇಳ್ಬುಟ್ನೋ! ಈ ಕಾಳಮ್ಮನಿಗೆ ಬಾಳ ಕ್ವಾಪ ಬಂದ್ಬುಡ್ತು! ಹೋಗೋ ಮೂದೇವಿ! ಯಾವ ಮುಂಡೇ ಮಗನೋ! ಇವ ಅಷ್ಟಲ್ಲ ಇಷ್ಟಲ್ಲ ಅಚ್ಚ ಹನ್ನೆರಡು ಬಳ್ಳ ಕೇಳ್ತಾ ನಿಂತವನೆ! ಏನಲಾ ಮುಂಡೆ ಮಗನೇ! ಅಷ್ಟಲ್ಲ ಇಷ್ಟಲ್ಲ! ಆ ನಿನ್ನ ಬೆಳ್ಳಿ ಮೂಡಿ ಬೆಳಕನಿಲ್ಲವಲ್ಲಾ! ಇನ್ನೂ ನನ್ನ ಎಳ್ಳು ಕಣಕ್ಕೆ ಪೂಜೆ ಮಾಡಲಿಲ್ಲವಲ್ಲಾ! ನಮ್ಮಪ್ಪನ ಮನೆ ದೇವರಿಗೆ ಎತ್ತಿ ಮಡಗಲಿಲ್ಲವಲ್ಲಾ! ನನ್ನ ಗಂಡನ ಮನೆ ದೇವರಿಗೆ ಎತ್ತಿ ಮಡಗಲಿಲ್ಲವಲ್ಲಾ! ಅಷ್ಟರಲ್ಲೇ ಬಂದು ನೀನು ಹನ್ನೆರಡು ಬಳ್ಳ ಕೇಳ್ತಿದ್ಯಲ್ಲಾ! ಮುಂಡೆ ಮಗನೇ! ಹನ್ನೆರಡು ಬಳ್ಳ ಎಳ್ಳು ಕೊಡಬೇಕಾದ್ರೆ! ನೀವು ನನ್ನ ಹೊಲದಲ್ಲಿ ನೇಗ್ಲಿಡ್ಕಂಡು ಬಾ! ನನ್ನ ಮೂರ್ಡ್ಲ ಕಟ್ಟ ಹೊಲವನ್ನು ಉತ್ತು! ನಿನ್ನ ಇಂಬಿಡಿ ಸವ್ಪೋಗಿತ್ತಾ! ನಿನ್ನ ಹೆಂಡತಿ ನನ್ನ ಸವತಿ ಇಲ್ಲ! ನನ್ನ ಕಂಬಳದ ಆಳುಗಳು! ಜೀತದಾಳಿಗೆ ಇಟ್ಟು ವೊತ್ತ ಬಂದು! ಉಳ್ಳಿ ಕಾಳು ವೊತ್ತ ಬಂದು ನೆತ್ತಿ ಕೂದಲು ಉದುರೋಗಿತ್ತ ಮುಂಡೆ ಮಗನೇ! ಅಷ್ಟಲ್ಲ ಇಷ್ಟಲ್ಲ! ಅಚ್ಚ ಹನ್ನೆರಡು ಬಳ್ಳ ಕೇಳ್ತೀಯಲ್ಲಾ! ನಿನ್ನ ಎದೆ ಕೆಚ್ಚು ಎಷ್ಟಿರಬೇಕು ಮುಂಡೇ ಮಗನೇ! ಹೇಳ್ತೀನಿ ಕೇಳ್ಲಾ! ಹನ್ನೆರಡು ಬಳ್ಳವಲ್ಲ! ಹನ್ನೆರಡು ಕಾಳನ್ನೂ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದ್ರೆ! ಹೇಳ್ತೀನಿ ಕೇಳು ಮೂದೇವಿ! ಮಳೆ ಅನ್ನೋದು ಉಯ್ದುಬುಟ್ಟು! ಈ ಕಣದಲ್ಲಿರತಕ್ಕಂಥ! ನಾ ಬೆಳೆದಿರತಕ್ಕಂಥ! ಎಳ್ಳೆಲ್ಲಾ ಕೊಚ್ಚಿಕೊಂಡು ಹೋಗಿ! ನನ್ನ ಊರು ಮುಂದೆ ಇರೋ ಕೆರೆಗೆ ತಳ್ಳುಟ್ರೂ ಸರಿಯೇ! ನಾನು ಬರೀ ಕಣದಲ್ಲಿ ಕೂತ್ಕಂಡ್ರು ಸರಿ! ಜಂಗಮಯ್ಯ ನಿನಗೆ ಒಂದು ಎಳ್ಳಿನ ಕಾಳು ಕೊಡುವಂತಾ ಮಗಳಲ್ಲಾ!

ಆಹಾ.... ನೋಡಿ ನಮ್ಮ ಶಿವನಾ!

ಆಹಾ ಸಬಾಸ್ ನನ್ನ ಕಂದಮ್ಮ! ಹೇಳ್ತಾ ಹೇಳ್ತಾ ಒಳ್ಳೇ ಮಾತು ಹೇಳ್ಬುಟ್ಟಲ್ಲಾ! ನನಗೆ ಒಂದು ಹನ್ನೆರಡು ಬಳ್ಳ ಎಣ್ಣೆ ಮಜ್ಜನಕ್ಕೆ ಕೊಂಡೋಗದಕ್ಕೆ! ನೀನು ಬೆಳೆದಿರತಕ್ಕಂತ ಎಳ್ಳೆಲ್ಲಾ ಕೊಟ್ಕಂಡೊಟೋಗ್ಬೇಕಾ! ನೀ ಬರೀ ಕಣದಲ್ಲಿ ಕುಂತ್ಕಬೇಕಾ? ಸಭಾಸ್ ನನ್ನ ಕಂದ ಕಾಳಮ್ಮ! ನೀನು ಹೇಳಿದಂತ ಮಾತು ಸತ್ಯವೇ ಸರಿ। ನಿನ್ನ ಬಾಯಲ್ಲಿ ಕಡೆದಾಗೇ ಮಾಡ್ತೀನಿ। ಕಂದಮ್ಮಾ ನೀನು ಹೆದರಬೇಡ ಕಂದಮ್ಮಾ! ಅದರಲ್ಲೂ ಒಂದು ಬಳ್ಳ ತೆಗೆದು ಹಾಕ್ಬಿಡು! ಇನ್ನು ಹನ್ನೊಂದು ಬಳ್ಳ ಎಳ್ಳು ಎತ್ತಿ! ನನ್ನ ಮುತ್ತಿನ ಜೋಳಿಗೆಗೆ ಹಾಕಿ। ಪಾದ ಮುಟ್ಟಿ ಪಟ್ಟಾಬಿಸೇಕವ ಮಾಡು। ನನ್ನ ಏಳು ಮಲೆಗೆ ಕೊಡೋಕೆ! ನನ್ನ ಎಣ್ಣೆ ಮಜ್ಜನಕ್ಕೆ ಕಳಿಸವ್ವಾ!

ಆಹಾ.... ನೋಡಿ ನಮ್ಮ ಸಿವನಾ।

ಅಲ್ಲಿಗೆ ಕೇಳಿದಂತ ಕಾಲದಲ್ಲಿ! ಕಾಳಮ್ಮನಾಗಿರತಕ್ಕಂತವಳು! ಏನಲೇ ಮುಂಡೇ ಮಗನೇ! ಹನ್ನೆರಡು ಬಳ್ಳದಿಂದ ಹನ್ನೊಂದು ಬಳ್ಳವಲ್ಲ ಕಣೋ! ಹನ್ನೊಂದು ಬಳ್ಳಕ್ಕೆ ಬಂದು ನಿಂತ್ಕಂಡ್ಯಾ! ಬಾ ಹನ್ನೊಂದು ಬಳ್ಳವಲ್ಲ ಕಣೋ! ಹನ್ನೊಂದು ಎಳ್ಳೆತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದ್ರೆ! ನನಗೆ ಏಳು ಜನ ಸೊಸೆಯರು! ಆ ಏಳು ಜನ ಸೊಸೆಯರೆಲ್ಲಾ! ಒಬ್ಬರಿಗೊಬ್ಬರಿಗೆ ವಾರ್‌ಗಿತ್ತೀರ್ಗೆ ಜಗಳ ಉಟ್ಬುಟ್ಟು! ಆ ಮನೇಲಿ ಇರತಕ್ಕಂತವು! ಹಿಟ್ಟಿನ ದೊಣ್ಣೆ ಕಡಗೋಲು ತಕ್ಕಂಡು! ಒಬ್ಬರಿಗೊಬ್ಬರು ಹೊಡೆದಾಡಿ ಬಡಿದಾಡಿ! ಕಣ್ ಕಣ್ ತಿವಿದಾಡ್ಬುಟ್ಬುಟ್ಟು! ಎಲ್ಲಾ ಮೂಲೇಲಿ ತಡಕಾಡ್ತ ಕೂತ್ಕಂಡ್ರೂ! ಜಂಗಮಯ್ಯ! ನಾನು ಒಂದು ಎಳ್ಳಿನ ಸ್ವಾಲೆ ಕೊಡುವಂತಾ ಮಗಳಲ್ಲ!

ಆಹಾ.... ನೋಡಿ ನಮ್ಮ ಸಿವನಾ।

ಅಯ್ಯೋ ನನ್ನ ಕಂದ ಹೆಣ್ಣು ಮಗಳೇ! ನನಗೆ ಹನ್ನೊಂದು ಬಳ್ಳ ಎಳ್ಳು ಕೊಡೋಕೆ! ಎಣ್ಣೆ ಮಜ್ಜನಕ್ಕೆ! ನಿನ್ನ ಏಳು ಜನ ಸೊಸೆಯರು! ಕಣ್ ಕಾಣದೆ ತಡಕಾಡ್ತಾ ಕುಂತಿರಬೇಕಾ! ಸಬಾಸ್ ನನ್ನ ಕಂದಮ್ಮ! ನಿನ್ನ ಬಾಯಲ್ಲಿ ಕಡೆದ ಹಾಗೇ ಮಾಡ್ಕೊತೀನಿ! ಹೆದರಬೇಡ ಕಂದಮ್ಮ! ಅದರಲ್ಲೂ ಒಂದು ಬಳ್ಳ ಬೇಡ ಕಣಮ್ಮಾ! ಹತ್ತು ಬಳ್ಳ ಎತ್ತಿ! ನನ್ನ ಮುತ್ತಿನ ಜೋಳಿಗೆಗೆ ಹಾಕಿ। ಪಾದ ಹಿಡಿದು ಪಟ್ಟಾಭಿಷೇಕ ಮಾಡಿ। ನನ್ನ ಏಳು ಮಲೆ ಕೈಲಾಸಕ್ಕೆ ಮಜ್ಜನಕ್ಕೆ ಕೊಟ್ಬಿಟ್ಟೆ ಅದ್ರೆ! ನಿನ್ನ ಏಳು ಜನ ಗಂಡು ಮಕ್ಕಳನೇ!

ಆಹಾ.... ನೋಡಿ ನಮ್ಮ ಸಿವನಾ।

ಏನು ಮುಂಡೆ ಮಗನೇ! ಹತ್ತು ಬಳ್ಳಕ್ಕೆ ಬಂದು ನಿಂತ್ಕಡ್ಕಲ್ಲಾ! ಹತ್ತು ಬಳ್ಳ ಎಳ್ಳ ಎತ್ಕಂಡೋಗ್ಬೇಕಾದ್ರೆ! ನನಗೆ ಏಳು ಜನ ಗಂಡು ಮಕ್ಕಳು ಉಂಟು! ಅವ್ರೆಲ್ಲಾ ಹೊಲದಲ್ಲಿ ಉಳ್ತಾವ್ರೆ! ಒಬ್ಬೊಬ್ಬರಿಗೆ ಜಗಳ ಉಟ್ಬುಟ್ಟು! ದಾಯಾದಿ ಮತ್ಸರ ಉಟ್ಬುಟ್ಟು! ಒಬ್ಬೊಬ್ಬರೂ ಹೊಡೆದಾಡಿ। ಅವರೆಲ್ಲಾ ಉಣಸೇ ಮರದ, ಗೊಬ್ಬಳಿ ಮರದ

ಗೋಟಾಗ್ಬುಟ್ರೂ! ಸರಿ ಕಣ್ ಜಂಗಮಯ್ಯಾ! ನಾನು ಎಳ್ಳಿನ ಮೊನೆ ಅಂತಕ್ಕಂತದೊಂದನ್ನು ಕೊಡುವಂತಾ ಮಗಳಲ್ಲಾ!

ಆಹಾ.... ನೋಡಿ ನಮ್ಮ ಶಿವನಾ!

ಅಯ್ಯೋ ನನ್ನ ಕಂದ ಕಾಳಮ್ಮ! ನಾ ಹೇಳ್ತೀನಿ ಕೇಳಮ್ಮ! ಶ್ಯಾಪ ಮಾಡಬೇಡ! ನೀನು ಕಷ್ಟ ಮಾಡಿ ಬೆಳೆದಿರೋಳು! ನಾನು ಅಂಗೇ ಬಿಟ್ಟಿ ಕೇಳಕ್ಕೆ ಬಂದಿರೋನು! ಕೊನೆ ಪಕ್ಷ ಎಂಟು ಬಳ್ಳ ಎತ್ತಿ! ನನ್ನ ಮುತ್ತಿನ ಜೋಳಿಗೆಗೆ ನೀಡಿ! ನನ್ನ ಪಾದ ಹಿಡಿದು ಪಟ್ಟಾಭಿಷೇಕ ಮಾಡ್ಬುಟ್ಟು! ನನ್ನ ಏಳು ಮಲೆಗೆ ಕಳಿಸಬೇಕು ಅಂತವರೇ, ನಿನಗೆ ಇನ್ನಷ್ಟು ಭಾಗ್ಯ ಕೊಡ್ತೀನಿ ಕನವ್ವಾ

ಆಹಾ.... ನೋಡಿ ನಮ್ಮ ಶಿವನಾ!

ಅಲ್ಲಾ ಕಣೋ ಮುಂಡೆ ಮಗನೇ! ಆರು ಬಳ್ಳವಲ್ಲ ಆರು ಎಳ್ಳು ಎತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದ್ರೆ! ಹೇಳ್ತೀನಿ ಕೇಳು ಮೂದೇವಿ! ಇದೇ ಕೌದಳ್ಳಿ ಬೀದಿ ಒಳಗೆ! ಅಟ್ಟರ್ ದಾರಿ ನಿಟ್ಟರ್ ದಾರಿ! ಏಳು ಏಳು ಹದಿನಾಲ್ಕು ಲೋಕದ ತೊಟ್ಟಿ ಅಟ್ಟೀನೇ ಕಟ್ಟಿವ್ನಿ! ಆ ತೊಟ್ಟಿ ಅಟ್ಟಿಮ್ಯಾಲೆ! ಮಟಮಟ ಮಂಗಳವಾರದ ದಿನ! ಗೂಗೆ ಕೂತ್ಕಂಬುಟ್ಟು! ಹಟ್ಟಿ ಮೇಲೆ ಕೂಗ್ಬುಟ್ಟು! ನನ್ನಟ್ಟಿ ದಗ್ಗನೆ ಕತ್ತಿ ದಿಗ್ಗನೆ ಉರಿದೋಗ್ಬುಟ್ಟು! ನನ್ನಟ್ಟಿ ಹಾಳ್‌ಪಟ ದೂಳ್‌ಪಟವಾದ್ರೂ ಸರಿ! ಜಂಗಮಯ್ಯ ನಿನಗೆ ಒಂದು ಎಳ್ಳಿನ ಸ್ವಾಲೆ ಕೊಡುವಂತಾ ಮಗಳಲ್ಲಾ!

ಅಯ್ಯೋ ನನ್ನ ಕಂದಮ್ಮ! ನನಗೆ ಆರು ಬಳ್ಳ ಎಳ್ಳು ಕೊಡೋತ್ಕೆ ಮಜ್ಜನಕ್ಕೆ! ನಿನ್ನಟ್ಟಿ ದಗ್ಗನೆ ಕತ್ತಿ ದಿಗ್ಗನೆ ಉರಿದೋಗ್ಬೇಕಾ! ಪರವಾಗಿಲ್ಲ ಕಂದಮ್ಮ ನೀನು! ನಿನ್ನ ಬಾಯ್ಲಿ ಕಡೆದ ಹಾಗೆ ಮಾಡ್ತೀನಿ ! ಹೆದರಬೇಡ ಕಂದವ್ವಾ! ಹೋಗಲಿ ಅಷ್ಟು ಬೇಡ! ಕೋನೇಪಕ್ಷ! ಮೂರು ಬಳ್ಳ ಎಳ್ಳೆತ್ತಿ! ನನ್ನ ಮುತ್ತಿನ ಜೋಳಿಗೆಗೆ ನೀಡಿ! ನನ್ನ ಪಾದವ ಪಟ್ಟಾಭಿಷೇಕವ ಮಾಡಿ! ನನ್ನ ಏಳು ಮಲೆ ಕೈಲಾಸಕ್ಕೆ ಕೊಟ್ಟದ್ದೇ ಉಂಟಾದ್ರೆ! ನಿನಗೆ ಇನ್ನಷ್ಟು ಭಾಗ್ಯ ಕೊಡುವೆ!

ಆಹಾ.... ನೋಡಿ ನಮ್ಮ ಶಿವನಾ!

ನೋಡ್ದ್ಯಾ ಈ ಮೂದೇವಿಗೆ ಎಷ್ಟು ಹೇಳಿದ್ರೂ ಕೇಳದಿಲ್ಲಲ್ಲ ಎಲ್ಲಾ! ನನ್ನ ಬಾಯಲ್ಲಿ ಕೊಡೋದಿಲ್ಲ ಅನ್ನೋದು ತಪ್ಪೋದಿಲ್ಲ! ನಾನು ಎಷ್ಟು ಹೇಳಿದರೂ ಕೇಳಲಿಲ್ಲವಲ್ಲಾ! ಅಚ್ಚ ಹನ್ನೆರಡು ಬಳ್ಳದಿಂದ ಬಂದು! ಈಗ ಮೂರು ಬಳ್ಳಕ್ಕೆ ಬಂದು ನಿಂತವ್ನೇ ಲೇ ಜಂಗಮ ಮೂರು ಬಳ್ಳವಲ್ಲ ಕಣಲಾ! ಮೂರು ಬಳ್ಳ ಎತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಿ! ನಿನಗೆ ನಾನು ಎಣ್ಣೆ ಮಜ್ಜನಕ್ಕೆ ಕೊಟ್ಟಿದ್ದೆ! ಉಂಟಾದ್ರೆ! ನನಗೆ ಏಳಟ್ಟಿ ದನ ಏಳಟ್ಟಿ ಕುರಿ ಏಳಟ್ಟಿ ಹಸ! ಇವೆಲ್ಲಾ ದೊಡ್ಡ ಚಪ್ಪೆರೋಗ ದೊಡ್ಡ ರೋಗ ಒಂದು ಸತ್ರೂ

ಸರಿಯೇ। ಹೇಳ್ತೀನಿ ಕೇಳು ಮೂರು ಮಲೆಯ। ನಿನಗೆ ಒಂದೆಳ್ಳು ಕಾಳನ್ನೂ ಕೊಡುವಂತ ಮಗಳಲ್ಲ

ಆಹಾ.... ನೋಡಿ ನಮ್ಮ ಶಿವನಾ।

ಅಲ್ಲಾ ಕಣ್ ಕಾಳಮ್ಮ। ನಾನು ಎಷ್ಟು ಕೇಳಿದ್ರೂ ನೀನು ಆಣೆ ಇಕ್ಕಂತಿದ್ದೆಯಲ್ಲಾ। ನಿನ್ನ ಆಣೇಲಿ ಬಿಟ್ಟಿದ್ದೇ ಆಗಿದ್ದರೆ। ಹೇಳ್ತೀನಿ ಕೇಳು ನೀ ಕಂದ ಕಾಳಮ್ಮ। ಪರ್ವಾಯಿಲ್ಲ ನಿನ್ನ ಬಾಯಲ್ಲಿ ಕಡದದ್ದು ಯಾವುದೂ ತಪ್ಪಲ್ಲ। ಕಂದವ್ವಾ। ಮಾಡಿದ್ದುಣ್ಣೋ ಮಾರಾಯ ಅಂದಾಗೆ। ನಿನ್ನ ಬಾಯಲ್ಲಿ ಕಡದಾಗೆ ಮಾಡ್ಬುಡ್ತೀನಿ ಕಂದವ್ವಾ। ಅದ್ರಲ್ಲೂ ಒಂದು ಬಳ್ಳ ಬುಡು ತಾಯವ್ವ। ಕೊನೆಗೆ ಎರಡು ಬಳ್ಳ ಎಳ್ಳೆತ್ತಿ। ನನ್ನ ಮುತ್ತಿನ ಜೋಳಿಗೆಗೆ ನೀಡಿ। ನನ್ನ ಪಾದ ಹಿಡಿದು ಪಟ್ಟಾಬಿಸೇಕ ಮಾಡಿ। ನನ್ನ ಎಣ್ಣೆ ಮಜ್ಜನಕ್ಕೆ ಕಳಿಸವ್ವಾ।

ಆಹಾ.... ನೋಡಿ ನಮ್ಮ ಶಿವನಾ।

ನೋಡ್ದ್ರಾ, ನೋಡ್ದ್ರಾ, ಈ ಮೂದೇವಿಗೆ ಎಷ್ಟು ಹೇಳಿದರೂ ಕೇಳಲಿಲ್ಲವಲ್ಲ। ಎಲ್ಲೋ ಬಂಡ ಮೂದೇವಿ। ನೋಡ್ದ್ರಾ। ಏನ್‌ಲಾ ಜಂಗಮ। ನೀನು ಬೆಳ್ಳಿ ಮೂಡಲಿಲ್ಲ ಬೆಳಕು ಹರೀಲಿಲ್ಲ। ಅಷ್ಟೊತ್ತಿನಲಿ ಬಂದವನು। ನೀನು ಈ ಹೊತ್ತು ಮೂಡಿ ಬಂದು। ಅಚ್ಚ ಹನ್ನೆರಡು ಬಳ್ಳದಿಂದ ಬಂದು ಏಡು ಬಳ್ಳಕ್ಕೆ ಬಂದಿದ್ದೀಯ। ಎಳ್ಳು ಬಳ್ಳವಲ್ಲ ದಮ್ಮಯ್ಯ। ಏಡು ಎಳ್ಳೆತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದ್ರೆ। ನಾನು ಇಕ್ಕಬಾರದ ಆಣೆ ಇಕ್ತೀನಿ। ನೋಡ್ದ್ಲಾ ನಾನು ಇಕ್ಕಿರತಕ್ಕಂತ ಸೀರೆ। ದಗ್ನತ್ತಿ ದಿಗ್ಗನುರುದೋಗ್ಬುಟ್ರೂ। ನಾನು ಹಿಂದಿನ ಕಾಲದಲ್ಲಿ ಯಾವ ಥರವಾಗಿ ಇದ್ನೋ ಹಾಗೆ ತೇಪೆ ಹಾಕ್ಕಂಡು। ಬಟ್ಟೆ ಉಟ್ಕಂಡ್ರೂ ಸರಿಯೇ। ಈ ಎಳ್ಳಿನ ಮೇಲಿರತಕ್ಕಂತ। ದುಂಬು ಕೊಡುವಂತ ಮಗಳಲ್ಲಾ।

ಆಹಾ.... ನೋಡಿ ನಮ್ಮ ಶಿವನಾ।

ಸಬಾಸ್ ನನ್ನ ಕಂದ ಕಾಳವ್ವ। ಹಿಂದೆ ಬಹಳ ಬಡಸ್ತನ ಬಂದ್ಬುಟ್ಟು। ಅಂಗಿತ್ತಲ್ಲಾ। ಅದೇ ಬಡಸ್ತನ ಬರಬೇಕಾ ಕಾಳವ್ವ। ಸಬಾಸ್ ನಿನ್ನ ಬಾಯಲ್ಲೇ ಕಡ್ದಾಗ ಮಾಡ್ತೀನಿ। ಹೆವರಬ್ಯಾಡ ಕಂದ ಕಾಳವ್ವ। ಅದರಲ್ಲೂ ಒಂದು ಬಳ್ಳ ಬುಡು। ಕೊನೆ ಪಕ್ಷ ಒಂದು ಬಳ್ಳ ನೀಡಿ। ಮುತ್ತಿನ ಜೋಳಿಗೆಗೆ ನೀಡಿ। ಪಾದವ ಹಿಡಿದು ಪಟ್ಟಾಬಿಸೇಕವ ಮಾಡಿ। ನನ್ನ ಏಳು ಮಲೆ ಕೈಲಾಸಕ್ಕೆ ಕಳಿಸದ್ದೇ ಉಂಟಾದ್ರೆ ನಿನಗೆ ಮತ್ತಷ್ಟು ಭಾಗ್ಯವನ್ನು ಕೊಡುವೇನು।

ಆಹಾ.... ನೋಡಿ ನಮ್ಮ ಶಿವನಾ।

ನೋಡ್ದ್ರಾ, ನೋಡ್ದ್ರಾ, ಎಷ್ಟು ಹೇಳಿದ್ರೂ ಕೇಳಲ್ಲ। ಈ ಚಂಡಿಮುಂಡೆ ಮಗ। ಏನ್ ಮಾಡ್ಲಿ ಅಂತ ಹೇಳ್ಬುಟ್ಟು। ಏನಲಾ ಮೂದೇವಿ। ನಾನು ಎಷ್ಟು ಹೇಳಿದ್ರೂ। ನೀನು ಕೊಡೋದಿಲ್ಲ। ಈಗ ಅಚ್ಚ ಹನ್ನೆರಡು ಬಳ್ಳದಿಂದ ಬಂದು। ಈಗ ಒಂದು ಬಳ್ಳಕ್ಕೆ

ಬಂದಿದ್ದೀಯಾ। ಒಂದು ಬಳ್ಳವಲ್ಲ ಕಣೋ। ಒಂದು ಎಳ್ಳೆತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದ್ರೆ। ಇನ್ನೊಂದಾಣೆ ಇಕ್ಕೊಂತೀನಿ ಕೇಳಲಾ। ಹೇಳು ಕಾಳವ್ವ। ಹೇಳ್ತೀನಿ ಕೇಳು ಮೂದೇವಿ। ಇದೋ ನನ್ನಟ್ಟೆ ಒಳಗೆ ಮಲ್ಲಣ್ಣ ಮಲ್ಲಣ್ಣ ಅಂತ। ನಾನು ಐಸ್ವರ್ಯದಲ್ಲಿ ಬಾಳುವಾಗ। ಜೀತಕ್ಕಿಂಟ್ಕಂಡಿದ್ದೆ ಮಲ್ಲಣ್ಣನ। ಈಗ ಆ ಮಲ್ಲಣ್ಣನಿಗೆ ಬಾಳ ಐಸ್ವರ್ಯ ಬಂದುಬುಟ್ಟು। ತಾನೇ ಹೋಗಿ ಈಗ ಚೆನ್ನಾಗಿ ಬಾಳ್ತಾ ಅವ್ನೆ। ಅವನಟ್ಟೆಗೆ ನಾನು ಎಲ್ಲಾ ಹಾಳಾಗ್ಬುಟ್ಟು। ದೂಳೀಪಟ್ಟವಾಗ್ಬುಟ್ಟು। ಉಣ್ಣಕ್ಕೆ ಹಿಟ್ಟಿಲ್ದೆ ಬಟ್ಟೆ ಇಲ್ದೆ ವೋಗ್ಬುಟ್ಟು। ನಾನು ಮೂರು ಮುದ್ದೆ ಹಿಟ್ಟಿಗೋದ್ರೂ ಸರಿ। ಜಂಗಮಯ್ಯ ನಿನಗೆ ಎಳ್ಳಿನ ಮೇಲಿರತಕ್ಕಂತ। ಒಂದು ದುಂಬು ಕೊಡುವಂತ ಮಗಳಲ್ಲ।

ಆಹಾ.... ನೋಡಿ ನಮ್ಮ ಸಿವನಾ।

ಸಬಾಸ್ ನನ್ನ ಕಂದ ಕಾಳಮ್ಮ। ಏಳೇಳು ಕೈಲೂ ಹಡ್ಕಂಡೆಲ್ಲಾ। ನಿನಗೆ ಹಿಂದಿನ ಕಾಲದಲ್ಲಿ ಕೊಟ್ಟೋಗಿದ್ನಲ್ಲಾ। ಆಗ ನಿನ್ನ ಅಟ್ಟೆ ಒಳಗಿದ್ದ ಮಲ್ಲಣ್ಣ ಅಂತಕ್ಕವನು। ಈಗ ಐಸ್ವರ್ಯದಲ್ಲಿ ಬಾಳ್ತಾ ಅವ್ನೆ। ಅವನ ಹಟ್ಟೆಗೆ ನೀನು ಹುಟ್ಟೆಗೋಗಬೇಕಾ। ಸಬಾಸ್ ನನ್ನ ಕಂದ ಕಾಳಮ್ಮ। ಬಾಯಲ್ಲಿ ಕಡ್ಡಾಗೆ ಮಾಡ್ಕೊಡ್ತೀನಿ। ಹೆದರ ಬ್ಯಾಡ ಕಾಳಮ್ಮ ಅಂತ ಹೇಳ್ಬುಟ್ಟು। ಅದರಲ್ಲೂ ಒಂದು ಬ್ಯಾಡ ತಾಯವ್ವ। ಚೆನ್ನಾಗಿ ಗ್ಯಾನವಾಗಿ ಕೇಳು। ನನ್ನ ಕಂದ ಕಾಳಮ್ಮ। ಅದೇನು ಬೊಗಳ್ತೀಯೋ ಬೊಗಳು। ಮೂದೇವಿ ಎಷ್ಟಾರ ಬೊಗಳಿಕೋ। ನನ್ನಷ್ಟಕ್ಕೆ ನಾನು ಕುಂತಿವ್ನಿ। ಅನ್ಬುಟ್ಟು ಆಗ ನಮ್ಮಪ್ಪಾಜಿ ಮಾಯಕ್ಕಾರ। ಮಾದಪ್ಪನವರು। ಇರೋ ಕೊನೆ ಪಕ್ಸದಲ್ಲಿ ನೀನು ಬೆಳದಿರತಕ್ಕಂತ ಏಳು ನೂರು ಎಪ್ಪತ್ತು ಕಂಡುಗ ಎಳ್ಳು ರಾಸಿಮ್ಯಾಲೆ ಕುಂತಿದ್ದೀಯಲ್ಲಾ। ನೀನು ನಿನ್ನ ಅಂಗೈನಲ್ಲಿ ತ್ಯಾವ ಮಾಡ್ಕಂಡು। ಆ ಅಂಗೈ ರಾಸಿನ ಮೇಲೆ ಒತ್ತು ಬುಟ್ರೆ। ಆಗ ಎಷ್ಟು ಎಳ್ಳು ಒತ್ಕಂತವ್ರೋ। ಅಷ್ಟು ಎಳ್ಳು ತಕ್ಕಂಬಂದು। ನನ್ನ ಮುತ್ತಿನ ಜೋಳಿಗೆಗೆ ಉದುರುಸ್ಬುಟ್ಟು ನನ್ನ ಏಳು ಮಲೆ ಕೈಲಾಸಕ್ಕೆ। ನನ್ನ ಎಣ್ಣೆ ಮಜ್ಜನಕ್ಕೆ ಕಳಿಸವ್ವಾ।

ಆಹಾ.... ನೋಡಿ ನಮ್ಮ ಸಿವನಾ।

ಯಾವಾಗ ಈ ಮಾತು ಹೇಳ್ಬುಟ್ನೋ। ಆವಾಗ ಹುಚ್ಚು ಕ್ವಾಪ ಬಂದುಬುಡ್ತು ಕಾಳಮ್ಮನಿಗೆ। ನೋಡ್ರಪ್ಪಾ ಈ ಮುಂಡೆ ಮಗ ಎಷ್ಟೊತ್ತಿನಲ್ಲಿ ಬಂದವ್ನು। ಅಚ್ಚ ಹನ್ನೇಡು ಬಳ್ಳದಿಂದ ಬಂದು। ಈಗ ಅಂಗೈ ತೇವ ಮಾಡಿಕೊಡಬೇಕು ಅಂತ ಕೇಳ್ತವ್ನಲ್ಲಾ, ಈ ಮೂದೇವಿ ಬಾಯಿ ಮಾತಿನಲ್ಲಿ ಹೇಳಿದ್ರೆ। ಹೋಗೋವಂತ ಜಂಗಮನೇ ಅಲ್ಲ। ಇವನಿಗೆ ಈ ಮೆದೆಕೋಲು ತಕ್ಕಂಡೋಗಿ। ನಾಲ್ಕು ಬುಟ್ಟು ಓಡಿಸಬೇಕು। ಮುಕ್ಕರ್ಕಂಡು ಮೇಲಕ್ಕೆ ಎದ್ದು ಬುಟ್ಟು ಯಾವಾಗ ಬಂದುಬುಟ್ಲೋ। ಈ ನಮ್ಮಪ್ಪಾಜಿ ಮಾದಪ್ಪನವರಿಗೆ। ಓ ಬಂದ್ಬುಟ್ಲು ಏನಾರ ಕಾಣದಾಗ ಮರೆ ಕೋಲು ತಕ್ಕಂಡು। ಏನಾದ್ರೂ ಬಂದು ಮುಟ್ಟಿದ್ದೇ ಉಂಟಾದ್ರೆ। ಈ ಪ್ರಪಂಚದಲ್ಲಿ ನರಲೋಕದಲ್ಲಿ ಗುಡ್ಡಗಳು। ದಾಸಗಳು ಜೋಗಿಗಳು

ಜಂಗಮರು ಇವರೆಲ್ಲಾ ಇರ್ತಾರಲ್ಲಾ ಅವರಿಗೂ। ಇದೇ ರೀತಿ ಆಗೋಗಿ ಬಿಡಬಹುದು। ಏನಾದ್ರೂ ಬಿಕ್ಷೆಗೆ ವೋದಂತ ಕಾಲದಲ್ಲಿ। ಎಂಗಸ್ಗೆ ಕ್ವಾಪ ಬಂದ್ಬುಟ್ಟು। ತಿವಿದು ಬಿಡಬಹುದು। ನಮ್ಮಾಪ್ವಾಜಿಯವರು ಇವಳಿಗೆ ಸರಿಯಾದ ಬುದ್ಧಿ ಕಲಿಸಬೇಕು ಅನ್ಬುಟ್ಟು। ಅವಳು ಇಳಿದು ಮೆರೆ ಕೋಲ ತಕ್ಕಂಡು। ಬರೋದ್ರೋಳ್ಗಾಗಿ। ಈ ನಮ್ಮಪ್ವಾಜಿ ಎಳ್ಳು ಮಲೆ ಹೆತ್ತಯ್ಯ। ಏನು ಮಾಡ್ತಾರೆ ಅಂತ ಹೇಳಿದ್ರೆ। ಹಿಂದಿನ ಸೂಲ ಹಿಂದಕ್ಕೆ। ಮುಂದಿನ ಸೂಲ ಮುಂದಕ್ಕೆ ಹಿಡ್ಕಂಡು ಆ ಎಳ್ಳು ಕಣಕ್ಕೆ ಮೊಕ ಹಾಕ್ಕಂಡು। ಅವರು ಸತ್ತೋದಂಗೆ ಮಲಗವರೇ। ಮಾದೇವಾ।

ಆಹಾ.... ನೋಡಿ ನಮ್ಮ ಸಿವನಾ।

ಯಾವಾಗ ಸತ್ತೋದಾಗೆ ಎಳ್ಳು ಕಣಕ್ಕೆ ಮೊಕ ಹಾಕ್ಕಂಡು ಮಲಗ್ಬುಟ್ರೋ। ಕಾಳಮ್ಮ ಮೆದೆ ಕೋಲನ್ನು ಬಿಟ್ಟು। ಓಡಿ ಬನ್ಬುಟ್ಟು। ಮೂದೇವಿ ಕೇಳಿ ಕೇಳಿ ಸಾಕಾಯ್ತು। ಹೊಟ್ಟೆ ಹಸಿದುಬಿಡ್ತೇನೋ। ನಾನು ಹೇಳಿದ್ನೆಲ್ಲಾ ಬೇಡ ಅನ್ಬುಟ್ಟು। ಇದಕ್ಕೆ ಕಾಲಿಡ್ದು ಆಚೆಗೆ ಬೀಸಾಕ್ಬೇಕು ಅನ್ಬುಟ್ಟು। ಆಗ ಕಾಳಮ್ಮ ಓಡಿ ಬಂದು। ನಮ್ಮಪ್ವಾಜಿಯವರ ಕಾಲನ್ನು ಹಿಡಿದು। ಈಚೆಗೆ ಎಳೆಯೋಕೆ ಬಂದ್ಲಂತೆ। ಆ ಕಾಲು ಕಾಲಾಗೆ। ಕೈ ಕೈಯಾಗೆ ಬಂತು। ಇದೇನ ಈಗ ಬಂದಲ್ಲ ಅನ್ಬುಟ್ಟು। ಕೈ ಹಿಡಿದು ಎಳೆದ್ಲಂತೆ। ಕೈ ಕೈಯಾಗೆ ಅವಳ ಕೈಗೆ ಬಂದು ಬಿಡ್ತು। ಒಂದು ಕೈ ಒಂದು ಕಾಲು ಕೈನಲ್ಲಿ ಹಿಡ್ಕಂಡು। ಬಾಳ ದುಃಖ ಬನ್ಬುಡ್ತು। ಬಾಳ ಯೋಚನೆ ಬನ್ಬುಡ್ತು ಕಾಳಮ್ಮನಿಗೆ। ಇದೇನು ಹೀಗಾಯ್ತಲ್ಲಾ ಅಂತ ಹೇಳ್ಬುಟ್ಟು। ಅಕಸ್ಮಾತ್ ಇದೇನಾದ್ರೂ ಕೊಳ್ಳೇಗಾಲದ ಕಚೇರಿಗೆ ತಿಳಿದ್ರೆ। ನನ್ನ ಬುಟ್ಟಾರ ಅಂತೇಳ್ಬುಟ್ಟು। ಏಳು ಜನ ಸೊಸೆರ್ನೆಲ್ಲಾ। ಅಟ್ಟೀಲಿ ಇರತಕ್ಕಂತವರೇ ಏನಂತ ಕೂಗಕೊಂತಾರೆ ಅಂತ ಹೇಳಿದ್ರೆ। ಅಯ್ಯೋ ಅಮ್ಮಿ ನನ್ನ ನವ ತೆತ್ತ ಮಕ್ಕಳೇ। ಆಲಾಜಿ ಬ್ಯಾಲಾಜಿ ನಿಂಗಾಜಿ ನೀಲಾಜಿ, ಸುವರ್ಣೆ ಪದ್ಮಾವತಿ। ಎಲ್ಲಿಕೆ ಹಿರಿಯೋಳು ದ್ಯಾವಾಜಿ। ನಿಮ್ಮ ಅಪ್ಪನ ತಿನ್ನೋನ ಮಗಳೇ। ಓಡಿ ಬನ್ನಿ ಅಂತವಳೇ। ಕಾಳವ್ವಾ।

ಆಹಾ.... ನೋಡಿ ನಮ್ಮ ಸಿವನಾ।

ಯಾವಾಗ ಎಳ್ಳು ಕಣದಲ್ಲಿ ಕುಂತ್ಕಂಡು ಕೂಕ್ಕಂಡ್ಲೋ ಕಾಳಮ್ಮ। ಸೊಸೆ ದ್ಯಾವಾಜಮ್ಮ 'ಹಿರೇಸೊಸೆ ಆಗಿರತಕ್ಕಂತವಳು। ನಮ್ಮ ಅತ್ತೆಮ್ಮನಿಗೆ ಏನ್ ಕಷ್ಟ ಬಂದಿದ್ಯೋ। ಬರ್ರೀ ಅಂತ ಕರ್ಕಂಬುಟ್ಟು। ಆಗಲೇ ಎಳ್ ಕಣಕ್ಕೆ ಬನ್ಬುಟ್ಟಂತೆ। ಅತ್ತೆಮ್ಮ ಅತ್ತೆಮ್ಮ ಅಂತ ಕೇಳ್ಬುಟ್ರು। ಆಗ ದ್ಯಾವಾಜಮ್ಮನ ಕರದ್ಬುಟ್ಟು। ಏನಮ್ಮೆ ನನ್ನ ಹಿರಿಯಣ್ಣನ ಮಗಳೇ। ಹಿರೀಸೊಸೆ ದ್ಯಾವಾಜಿ ಹೇಳ್ತೀನಿ ಕೇಳಮ್ಮ। ಈ ಜಂಗಮಯ್ಯ ಆ ಹೊತ್ತು ಬೆಳ್ಳಿ ಮಾಡಲಿಲ್ಲ। ಬೆಳಕರೀಲಿಲ್ಲ। ಅಷ್ಟೊತ್ತಿನಲ್ಲಿ ಬಂದವನು। ನನ್ನ ಎಳ್ಳು ಕಣದಲ್ಲಿ ಕೂತ್ಕಂಡು। ಅಚ್ಚ ಹನ್ನೆರಡು ಬಳ್ಳದಿಂದ। ಕೊನೆಗೆ ಅಂಗೈ ತೇಂವ ಮಾಡ್ಬುಟ್ಟ। ಎಳ್ಳು ಕೇಳ್ದ। ನನ್ನ ಬಾಯಲ್ಲಿ ಕೊಡೋಲ್ಲ ಅನ್ನೋದು ತಪ್ಪಲಿಲ್ಲ। ಅವನು ಬಾಯಲ್ಲಿ ಕೊಡು

ಅನ್ನೋದು ತಪ್ಪಲಿಲ್ಲ! ಇಷ್ಟಂದೇನೇ ಹೊರತಾಗಿ! ನಾನು ಕೈಯತ್ತಿ ಒಡೀಲಿಲ್ಲ ಬಾಯೆತ್ತಿ ಬಯ್ಯಲಿಲ್ಲ! ಇಂಗಾಗೊಯ್ತಲ್ಲಮ್ಮ ಇರು! ಈಗ ಏನ್ಮಾಡದು ಅತ್ತೆಮ್ಮ ಅಂದಳು! ಇದೇನಾದ್ರೂ ಕೊಳ್ಳೇಗಾಲದ ಕಚೇರಿಗೆ ತಿಳಿದುಬಿಟ್ರೆ! ನಮ್ಮ ಮನೆ ಬದುಕನ್ನು ಮಟ್ಟಗೋಲು ಹಾಕ್ಬುಟ್ಟು! ನಮ್ಮ ಕೋಳ ಹಾಕ್ಕಂಡು ತಕ್ಕಂಡೋಟೊಯ್ತದೆ! ಒಬ್ಬರಿಗೂ ಕಾಣಬಾರದ ಹಾಗೆ ಈ ಎಳ್ಳು ಕಣದಲ್ಲಿ ಇವನನ್ನು ಮುದುರ್ಕಂಬುಟ್ಟು ಕಟ್ಕಂಬುಟ್ಟಿ! ನೀವೇಳು ಜನ ವೊತ್ಕಂಡು ವೋಗ್ಬುಟ್ಟಿ! ನಿಮ್ಮ ಮಾವ ಕೆಂಡೇಗೌಡ ಕುರಿ ಮೇಯ್ಸಕ್ಕೋಗ್ತವ್ನಲ್ಲ! ಅಲ್ಲಿಗೆ ತಕ್ಕವೋಗ್ಬುಟ್ಟಿ! ಹಳ್ಳ ತೆಗೆದ್ಬುಟ್ಟಿ! ಹಳ್ಳದೊಳಕ್ಕೆ ಹಾಕ್ಬುಟ್ಟಿ! ಮೇಲೆ ಕಲ್ಲುಂಡು ಏರ್ಬುಟ್ಟಿ! ಅದರ ಮ್ಯಾಲೆ ಸಣ್ಣ ಮರುಳು ಚೆಲ್ಬುಟ್ಟು ಹಾಕ್ಬುಟ್ಟು ಬನ್ನುಡ್ರಮ್ಮಿ! ಅಲ್ಲಿಗೆ ದ್ಯಾವಾಜಮ್ಮನಿಗೆ ದುಃಖ ಉಕ್ಕಿ ಉಕ್ಕಿ ಬರ್ರದೆ! ಈ ನಮ್ಮಪ್ಪನ ಮನೆ ದೇವರಿಗೆ ನಾನು ಎಷ್ಟು ಹೇಳಿದ್ರೂ ಕೇಳಲಿಲ್ವಲ್ಲಾ! ನಮ್ಮಪ್ಪನ ಮನೆಗೆ ಹೋಗಿದ್ರೆ ನಿನ್ನ ಪಾದ ಹಿಡಿದು ಪಟ್ಟಾಬಿಸೇಕ ಮಾಡ್ತಿದ್ರು! ಹಾಲಿನಲ್ಲಿ ಅಬಿಷೇಕ ಮಾಡ್ತಿದ್ರು ದಮ್ಮಯ್ಯ! ಈ ಹಾಳು ಮುಂಡೆ ಕೈಯಲ್ಲಿ! ಹೀಗೆ ಮಾಡಿಸ್ಕಂಡೆಯಾ ಅನ್ಬುಟ್ಟು! ಬಾಳ ದುಃಖ ಹೊರ ಚಾಚಿಕೊಂಡು! ಆಗಲಿ ಅತ್ತೆಮ್ಮಾ ಅಂತ ಒಪ್ಕಂಬುಟ್ಟು! ಮುಂದೆ ಮೂರು ಜನ ವಾರಗಿತ್ತೀರು ಹಿಂದೆ ಮೂರು ಜನ ವಾರಗಿತ್ತೀರು! ಮಧ್ಯೆ ನಡು ಹಿಡ್ಕಂಬುಟ್ಟು ದ್ಯಾವಾಜಮ್ಮ! ಎತ್ತಳಿ ಅಂದ ಕಾಲದಲ್ಲಿ ನಮ್ಮಪ್ಪಾಜಿಯವರು ಏಳು ಮಲ್ಲಿಗೆ ಹೂವಿನ ತೂಕ ಬಂದ್ರು! ಮುಂದೆ ಒತ್ತಿದ್ದವರಿಗೆ! ಹಿಂದೆ ಒತ್ತಿದ್ದ ಮೂರು ಜನ್ಕೆ ಒಬ್ಬೊಬ್ಬರಿಗೆ ಒಂದೊಂದು ಪಲ್ಲದ ಭಾರವಾಗ್ಬುಡ್ತಾರೆ! ಮಾದೇವಾ!

ಆಹಾ.... ನೋಡಿ ನಮ್ಮ ಸಿವನಾ!

ದ್ಯಾವಾಜಮ್ಮನಿಗೆ ಒಂದು ಮಲ್ಲಿಗೆ ಹೂವಿನ ತೂಕ ಕಾಣುವುದು! ಹಿಂದೊತ್ತಿದೌರು ಮುಂದೊತ್ತಿದೌರು! ಅಕ್ಕಯ್ಯ ಅಕ್ಕಯ್ಯ ಎತ್ಕಳುವಾಗ ನಮಗೆ ತೂಕವೇ ಇರ್ಲಿಲ್ಲ! ಈಗ ನೋಡಿದ್ರೆ ಒಂದು ಪಲ್ಲದ ಬಾರ ಕಾಣ್ತೈತಲ್ಲಾ ಅಕ್ಕಯ್ಯಾ ಅಂದ್ರು! ಆಗ ಸತ್ಯವಂತೆ ದ್ಯಾವಾಜಮ್ಮ ಹೇಳ್ತಾಳೆ! ಹೆಣ ಸತ್ತರೂ ಬಾರ ಇದ್ದೂಬಾರ! ಪರ್ವಾಗಿಲ್ಲ ಒತ್ಕಂಡು ಬನ್ರಮ್ಮಿ ಅನ್ಬುಟ್ಟು! ಬೇವಿನ ಮರದ ಬೇಲಿ ಹತ್ರ ತನ್ಬುಟ್ಟು! ನಾನು ಹಳ್ಳ ತೆಗೆದು ಬುಟ್ಟು! ಮಾವ ಕೆಂಡೇಗೌಡನ ಕರೆದ್ಬುಟ್ಟು! ಎಲ್ಲಾ ನಾ ಒಪ್ಪ ಮಾಡಿ ಬರ್‍ತೀನಿ! ಓಗಿ ರಾಗಿ ಗೀಗಿ ಮಾಡ್ಬುಟ್ಟು! ಬೀಸ್ರಮ್ಮೆ ಅನ್ಬುಟ್ಟು! ವಾರ್‍ಗಿತ್ತಿರ್‍ಲ್ಲಾ ಕಳಿಸ್ಬುಟ್ಟು! ಈ ನಮ್ಮಪ್ಪಾಜಿಯವರನ್ನು! ಸತ್ಯವಂತೆ ದ್ಯಾವಾಜಮ್ಮನಾಗಿರತಕ್ಕಂತಳು! ತನ್ನ ತೊಡೆಮ್ಯಾಲೆ ತಲೆ ಹಾಕ್ಕಂಡು! ನಮ್ಮಪ್ಪನ ಮನೆಗೆ ದಯಮಾಡಿ ಅಂತ ಹೇಳ್ದೆ! ನನ್ನ ಮಾತು ಕೇಳ್ಳಿಲ್ವಲ್ಲಪ್ಪಾ! ಇಲ್ಲಿ ಬಂದು ನೀವು ಸತ್ತೋದ್ರ್ಯಲ್ಲಾ ಅಂದ್ಬುಟ್ಟು! ಬೇವಿನ ಸೊಪ್ಪಿನ ಸೆಕೆ ಬೀಸ್ತಾ ಕುಂತವಳೋ ದ್ಯಾವಾಜಮ್ಮ!

ಆಹಾ.... ನೋಡಿ ನಮ್ಮ ಸಿವನಾ!

ಯಾವಾಗ ಸೆಕೆ ಬೀಸಕೆ ಸುರುಮಾಡುಬುಟ್ಳೋ! ನಮ್ಮಪ್ಪಾಜಿ ಉಸ್ ಅಂತ ಎದ್ದು ಕೂತ್ಕಂಬುಟ್ಟು! ಹುಸಿನಗೆ ನಗ್ತಾ! ಸಬಾಸ್ ನನ್ನ ಕಂದ ಹೆಣ್ಣು ಮಗಳೇ ನೀನು

ಹೇಳ್ಡಂಗೆ ಆಯ್ತು ನನ್ನ ಒಕ್ಕಲು ಮಗಳೇ। ಸತ್ಯವಂತೆ ಹೆಣ್ಣು ಮಗಳೇ ನೀನು ಓಗವ್ವಾ। ಎಂದು ಹರಸಿ ಆಶೀರ್ವಾದ ಮಾಡ್ಬುಟ್ಟು। ಆ ನಮ್ಮಪ್ಪಾಜಿ ಮಾದಪ್ಪನವರು। ಅದೇ ಬೇವಿನ ಮರದ ಮೇಲೆ ಕೂತ್ಕಂಡು। ಕಾಳಿ ಕಂಕಾಳಿ, ಉರಸಿಂಗಿ ಯಮದೂತಿ ಅಂತ ಬನ್ಬುಟ್ರು। ನನ್ನ ಈ ಕಣಕ್ಕೆ ಉಯ್ದುಬುಟ್ಟು ಈ ಎಳ್ಳಿನ ರಾಸಿನೆಲ್ಲಾ ಕೊಚ್ಕಂಡು ತಕ್ಕಂಡೋಗ್ಬುಟ್ಟು। ನನ್ನ ಊರು ಮುಂದಿನ ಕೆರೆಗೆ ತಳ್ಬುಟ್ರೂ ಸರಿಯೇ। ನಮ್ಮಪ್ಪಾಜಿಯವ್ರು ದೇವೇಂದ್ರನಿಗೆ ಓಲೆ ಬರೆದವ್ರೇ ಮಾದೇವಾ।

ಆಹಾ.... ನೋಡಿ ನಮ್ಮ ಶಿವನಾ।

ಭೂಲೋಕದಲ್ಲಿ ಇಲ್ದೇ ಇರತಕ್ಕಂತ ಮಳೆಯಾಗಿ। ಕೊಚ್ಗಿಕೊಂಡು ಹೋಗಿ ಕೆರೆಗೆ ತಳ್ಬಿಡ್ತು। ಆಗ ಕಾಳಮ್ಮ ಕಣದಲ್ಲಿ ಕೂತುಕೊಂಡು। ಕಣ್ಣುಬಿಟ್ಟು ನೋಡ್ಬುಟ್ಟು। ಏನು ಮಾಡ್ತಾಳೆ ಅಂತ ಹೇಳಿದ್ರೆ। ಪೊಟ್ಕೊಟ್ಟೆ ಬಡ್ಕಂಡು। ಲಬಲಬನೆ ಬಾಯಿ ಬಡಿತಾವಳೆ।

ಆಹಾ.... ನೋಡಿ ನಮ್ಮ ಶಿವನಾ।

ಏನಮ್ಮಾ ಆಲಾಜಿ ಬ್ಯಾಲಾಜಿ। ನಿಂಗಾಜಿ ನೀಲಾಜಿ। ಸುವರ್ಣೆ ಪದ್ಮಾವತಿ। ಎಲ್ಲಕ್ಕೂ ಹಿರಿಯವಳು ದ್ಯಾವಾಜಿ। ನಮ್ಮಪ್ಪನ ತಿನ್ನೋನ ಮಗಳೇ। ಓಡಿಬನ್ನಿ ಅಂತವಳೇ ಕಾಳಮ್ಮ।

ಆಹಾ.... ನೋಡಿ ನಮ್ಮ ಶಿವನಾ।

ಅಷ್ಟರಲ್ಲಿ ವಾರ್ಗಿತ್ತೀರ್ಗೆ ಜಗಳ ಬಂದ್ಬುಟ್ಟು। ಒಬ್ಬರ ಕಣ್ಣ ಒಬ್ಬರು ಕಿತ್ಬುಟ್ಟು। ಒಬ್ಬರ ಮುಂದೆಲೆ ಚಚ್ಚಂಡು ಮೂಲೇಲಿ ಕೂತ್ಕಂಡಿದ್ರಂತೆ। ಆ ಸೊಸೇರು ಕೂಗಿದಂತ ಸಮಯಕ್ಕೆ ಬರ್ಲಿಲ್ಲವಲ್ಲಾ ಅಂತ। ಕಾಳಮ್ಮನೇ ಬಂದು ನೋಡುವಂತ ಕಾಲದಲ್ಲಿ। ಒಬ್ಬರಿಗೊಬ್ಬರು ಕಣ್ಣ ಕಾಣ್ದೆ ತಡ್ಕಾಡ್ತಿದ್ದರಂತೆ। ದ್ಯಾವಾಜಿ ಮಾತ್ರ। ಒಬ್ಬಳು ಇದ್ದಳಂತೆ। ಏನಮ್ಮಾ ದ್ಯಾವಾಜಿ ಅಂತ ಕೇಳಿದ್ರು। ನನಗೆ ಗೊತ್ತಿಲ್ಲ ಅತ್ತೆಮ್ಮ। ನಾನು ನೀರು ತರಕ್ಕೋಗಿದ್ದೆ ಅಷ್ಟರೊಳಗೆ ಅವರು ಹೀಗ್ ಮಾಡ್ಕಂಡು ಕೂತ್ಕಂಡ್ರು ಅನ್ಬುಟ್ಳಂತೆ। ಆಗ ದುಃಖ ಮಾಡ್ಕಂಡು ಕಾಳಮ್ಮ। ಇದೋ ನನ್ನ ಗಂಡು ಮಕ್ಕಳಿಗೆ ಹೇಳಣ ಅನ್ಬುಟ್ಟು। ಹೊಲಕ್ಕೆ ಬಂದು ನೋಡುವಂಥ ಕಾಲದಲ್ಲಿ ಹೊಲಗಳು ಏಳು ಜನ ಗಂಡು ಮಕ್ಕಳು। ದಾಯಾದಿ ಮತ್ಸರ ಉಟ್ಬುಟ್ಟಿ। ಒಬ್ಬರಿಗೊಬ್ಬರು ಕೊಳ್ಳಿ ಮಚ್ಚು ತೆಗೆದುಕೊಂಡು ಹೊಡದಾಡ್ಬುಟ್ಟು। ಹುಣಸೇ ಗೋಟು ಗೊಬ್ಬಳಿ ಮೋಟಾಗಿ ಮಲಗಿದ್ರಂತೆ। ಅವನ್ನು ನೋಡ್ಬುಟ್ಟು ಕಾಳಮ್ಮ ಅಲ್ಲಿ ದುಕ್ಕ ಮಾಡ್ತಾ ಬರ್ತವಳೇ ಕಾಳಮ್ಮಾ।

ಆಹಾ.... ನೋಡಿ ನಮ್ಮ ಶಿವನಾ।

ದುಕ್ಕ ಮಾಡಿಕೊಂಡು ಅಟ್ಟಿಗೆ ಬರೋದ್ರೊಳಗಾಗಿ। ಕೊಳ್ಳೇಗಾಲದ ಪಳ್ಳಿ ಮನೆಗೆ ಹೋಗಿದ್ವಲ್ಲಾ। ಏಳು ಜನ ಮೊಮ್ಮಕ್ಕಳು। ಸತ್ತು ಮಲಿಕಂಬುಟ್ಟಿದ್ವಂತೆ। ಅವರ ಜೊತೇಲಿದ್ದ

ಮಕ್ಕಳು ಬಂದು ಹೇಳಿಬಿಟ್ರಂತೆ। ಅಲ್ಲಿಗೆ ಆ ಮಾತು ಕೇಳಬಿಟ್ಟು। ಕಾಳಮ್ಮ ಅಯ್ಯೋ ನನ್ನ ಮೊಮ್ಮಕ್ಕಳು ಸತ್ತೋದ್ವಂತಲ್ಲಾ ಅನ್ಬುಟ್ಟು ಅವಳು ಹೊಟ್ಟೊಟ್ಟೆ ಬಡಕಂಡು ಓಡ್ತಾಳೆ ಕಾಳಮ್ಮ।

ಆಹಾ.... ನೋಡಿ ನಮ್ಮ ಸಿವನಾ।

ತಾನು ಉಟ್ಟಿದ್ದ ಸೀರೆ ಹರದ್ಬುಟ್ಟು। ಏಳು ಜನ ಮೊಮ್ಮಕ್ಕಳನ್ನು ಕುರುಬಗೌಡ ಹುರುಳಿ ಮೂಟೆ ಕಟ್ಟಂಗೆ ಕಟ್ಕಂಡು ತಗಂಡು ಬಂದುಬುಟ್ಟು। ಮುಂಡ್ಗಳ್ಳಿ ತಾರುಕಿದಾಗ ತುರುಕ್ಬುಟ್ಟು ಅವಳು ದುಕ್ಕ ಮಾಡ್ತ ಬರುತವಳೇ। ಕಾಳಮ್ಮಾ।

ಆಹಾ.... ನೋಡಿ ನಮ್ಮ ಸಿವನಾ।

ದುಕ್ಕ ಮಾಡ್ತಾ ಬರುವಂತ ಕಾಲದಲ್ಲಿ । ದನ ಕುರಿ ಕಾಯುವಂತ ಮಕ್ಕಳು ಓಡ್ಬಂದು। ಕಾಳಮ್ಮನ ಗಂಡನ್ನ ಹುಲಿ ಕುಕ್ಕಾಬುಡ್ತು ಅಂತ ಹೇಳ್ಬುಟ್ರಂತೆ। ಅಯ್ಯೋ ಇದೊಂದು ಸುದ್ದಿ ಕೇಳ್ದೆ ಅನ್ಬುಟ್ಟು। ಅಲ್ಲಿ ಗಂಡನ್ನ ನೋಡೋದುಕ್ಕೆ ಅಲ್ಲಿ ಲಬಲಬನೆ ಬಾಯಿ ಬಡ್ಕಂಡು ಓಡ್ತಾಳಪ್ಪಾ। ಕಾಳವ್ವಾ।

ಆಹಾ.... ನೋಡಿ ನಮ್ಮ ಸಿವನಾ।

ಹುಲಿ ತಿಂದ್ಬುಟ್ಟು ಮೂಳೆ ಮುಸುರೆ ತಿಂದ್ಬುಟ್ಟು ಹೋಗಿತ್ತಲ್ಲಾ। ಅದ್ನೆಲ್ಲಾ ಅದು ಒಂದು ತಾವು ಗುಡಿಸಿ ಗುಡ್ಡೆ ಹಾಕ್ಬುಟ್ಟು। ಅಲ್ಲಿಗೆ ಕಾಳಮ್ಮ ಅಂತಕ್ಕಂತವಳು। ಸಮಾಧಿ ಮಾಡ್ಬುಟ್ಟು। ಬಳೇನೆಲ್ಲಾ ಎದೆಮೇಲೆ ಚೆಚ್ಚಂಡು। ಈವೊತ್ತಿಗೆ ಈವತ್ತು ನಾನು ಅಚ್ಚ ಮುಂಡೆ ನಿಚ್ಚ ಮುಂಡೆ ಆದ್ನೆಲ್ಲಾ ಅನ್ಬುಟ್ಟು। ಅವಳು ತಾಳಿಕಿತ್ತು ಬೇಲಿ ಮ್ಯಾಲೆ ಬೀಸಾಕ್ಬುಟ್ಟು। ಆಗ ಕಾಳಮ್ಮ ದುಕ್ಕ ಮಾಡ್ತಾ ಊರಿಗೆ ಬತ್ತವಳೇ ಕಾಳಮ್ಮ।

ಆಹಾ.... ನೋಡಿ ನಮ್ಮ ಸಿವನಾ।

ಅಷ್ಟೊತ್ತಿಗೆ ಕಾಳಮ್ಮ ಅನ್ನ ಉಂಡು ಆರ್ದಿನವಾಗಿತ್ತಂತೆ। ಅನ್ನಕ್ಕುಟ್ಟಿದ ಪರಮಾತ್ಮ ಹಸಿದು ಸುಸ್ತಾಗ್ಬಿಟ್ಟಿತ್ತು। ಆ ಊರಿಗೆ ಬರುವಂತ ಕಾಲದಲ್ಲಿ। ಯಾರೋ ಒಬ್ಬರು ಮದುವೆ ಮಾಡ್ತಿದ್ರು। ಓಗಿ ಒಂದು ತುತ್ತ ಅನ್ನ ಈಸ್ಕಂಡೋಗ್ಬೇಕು ಅನ್ಬುಟ್ಟು। ಆ ಮದ್ವೆ ಅಟ್ಟಿಗೆ ನುಗ್ಗಿದಂತ ಕಾಲದಲ್ಲಿ। ಆ ಮುತ್ತೈದೇರಲ್ಲಾ ಸೇರ್ಕಂಡು। ನಾವು ಮೊದಮೊದಲು ನಾವು ಶಾಸ್ತ್ರ ಮಾಡಡ್ಕೆ ಮುಂದಾಗಿ। ಮುಂಡೆ ಅಟ್ಟಿಗೆ ನುಗ್ಗಿ ಬಿಟ್ಟಲ್ಲಾ ಅನ್ಬುಟ್ಟು। ಆ ಮುತ್ತೈದೇರೆಲ್ಲಾ ಸೇರ್ಕಂಡು। ಕಾಳಮ್ಮನ ಕತ್ತಿನ ಮೇಲೆ ಕೈಹಾಕಿ ತಳ್ಳುಟ್ರಂತೆ। ಅಯ್ಯೋ ಪರಮಾತ್ಮ ಏನು ಗತಿ ಅನ್ಬುಟ್ಟು। ಅವಳು ದುಕ್ಕ ಮಾಡ್ತಾ ಬತ್ತವಳೇ ಕಾಳವ್ವಾ।

ಆಹಾ.... ನೋಡಿ ನಮ್ಮ ಸಿವನಾ।

ದುಕ್ಕ ಮಾಡ್ತಾ ಮಾಡ್ತಾ ಹಟ್ಟಿಗೆ ಬರುವಂತ ಕಾಲದಲ್ಲಿ। ಅವಳ ಹಟ್ಟಿ ಏನಾಗದಪ್ಪಾ ಅಂದ್ರೆ। ಅವಳ ಬಾಯಲ್ಲಿ ಕಡದಂಗೆ ಮಾಡವ್ರೆ। ಮಟಮಟ ಮಂಗಳವಾರ ಮಧ್ಯಾಹ್ನದ

ಹೊತ್ತಿನಲ್ಲಿ! ಅಟ್ಟಿ ದಗ್ಗನೆ ಹತ್ತಿ ದಿಗ್ಗನೆ ಉರುದೋಗಿದ್ವಂತೆ! ಆ ಉರಿ ಹಟ್ಟಿ ನೋಡ್ಬುಟ್ಟು ಕಾಳಮ್ಮ! ಅಲ್ಲೇ ನಿಂತ್ಕಂಡು ಲಬಲಬನೆ ಬಾಯಿ ಬಡ್ಡವಳೇ!

ಆಹಾ.... ನೋಡಿ ನಮ್ಮ ಸಿವನಾ!

ದ್ಯಾವಾಜಮ್ಮ ಮಾತ್ರ ಒಬ್ಬು ಉಳಿದವಳಂತೆ! ಆ ದ್ಯಾವಾಜಮ್ಮನ ಗಂಡ! ಕಾಳಮ್ಮನ ಹಿರಿ ಮಗನಾಗಿರತಕ್ಕಂತವನ! ಹೊಲದಲ್ಲೇ ಕುಂತಿದ್ದಂತೆ ಸಿವ ಸಿವಾ ಕಾಳಮ್ಮ! ಉಗನಿ ಸೊಪ್ಪನ್ನು ಉಡುಗೆ ಉಟ್ಟುಕೊಂಡವಳಲ್ಲಾ ಕಾಳಮ್ಮ! ಏನೋ ಸಂಕಟದಲ್ಲಿ ಒಯ್ಯಾವಳೆ ಕಾಳಮ್ಮ! ಜುಂಜೇಗೌಡನ ಹಟ್ಟಿಗೆ ಓಗಿ ಕಸಬರಲು ತಕ್ಕಂಡು ಅವಳು! ನಡಟ್ಟಿ ಗುಡಿಸಿ ಬಿಟ್ಟು! ಆ ಮನೇಲಿ ಏನಾರೂ ಈಸಕಂಡು! ಹೊತ್ತು ಕಳೀಬೇಕು ಅಂತೇಳಿ! ಆ ಜುಂಜೇಗೌಡನ ಹಟ್ಟಿಗೆ ಒಯ್ತವಳೇ ಕಾಳಮ್ಮ!

ಆಹಾ.... ನೋಡಿ ನಮ್ಮ ಸಿವನಾ!

ಜುಂಜೇಗೌಡನ ಸೊಸೆರು ಕಂಡು ಕೊಂಡ್ರು! ಆವಾಗಲೀಗ ಇಪ್ಪಗಲ ಬಟ್ಟೆ ಕೊಡುವಂತವರಾದರು! ಅದು ತಕ್ಕಂಡು ಹಿಂದಕಷ್ಟು ಮುಂದಕ್ಕಷ್ಟು ಅಂಟಿಸ್ಕಂಡು! ಎದೆ ಮಟ್ಟದ ಪುರ್ರ ತಕ್ಕಂಡು! ನಡಟ್ಟಿ ಗುಡುಸ್ಬುಟ್ಟು! ಆ ಜುಂಜೇಗೌಡನ ಸೊಸೆ! ಒಂದು ಮುದ್ದೆ ಹಿಟ್ಟು ಕೊಟ್ಲಪ್ಪ ಗುರುವೇ! ಅದ ಮಾತ್ರ ಪಾವಡದಲ್ಲಿ ಮಡಿಕೊಂಡು ನೆತ್ತಿಮೇಲೆ ಮಡಿಕಂಡು! ಅವಳು ಮಕ್ಕ ಮಾಡ್ತಾ ಒಯ್ತಾ ಅವಳೇ ಕಾಳಮ್ಮ!

ಆಹಾ.... ನೋಡಿ ನಮ್ಮ ಸಿವನಾ!

ಕಾಳಮ್ಮ ಎಲ್ಲಾದ್ರೂ ರವಷ್ಟು ನೀರಿಲ್ವಲ್ಲಾ! ಕುಡಿದು ಸಂಕಟ ಪರಿಹಾರ ಮಾಡ್ಕಳವ ಅಂತೇಳಿ! ಅವಳು ಮಕ್ಕ ಮಾಡಿಕೊಂಡು ವೋಗುವಂತ ಕಾಲದಲ್ಲಿ! ಮಾಯಕ್ಕಾರ ಒಂದು ಕಟ್ಟೇಲಿ ನೀರ್ನ ಜಲ್ಲಾಡಿಸ್ತವ್ರಲ್ಲಾ! ನೀರು ಕುಡಿಬೇಕು ಅಂತೇಳಿ! ಕಾಳಮ್ಮ ಕಟ್ಟೆ ತಾನೆತ್ತಿ ಕಾಲು ಮಡಗುವಂತ ಕಾಲದಲ್ಲಿ! ಆ ಕಟ್ಟೆ ಜಲವೆಲ್ಲಾ ಬಯಲಾಯಿತು!

ಆಹಾ.... ನೋಡಿ ನಮ್ಮ ಸಿವನಾ!

ಸಿವ ಸಿವಾ ನಮ್ಮಪ್ಪಾಜಿ ಮಾಯಕ್ಕಾರ! ಯಾವಾಗ ಕರಿಗೂಳಿಯಾಗಿ ಓಡಿಕೊಂಡು ಓಗುವಂತ ಕಾಲದಲ್ಲಿ! ಹಿಂದಕ್ಕೆ ತಿರುಗಿ ನೋಡಿದ ಕಾಳಮ್ಮ! ಆಯ್ಯೋ ಸಿವನೆ ನನಗೆ ಹೊಟ್ಟೇಲಿ ನೋಡಿದ್ರೆ ನೀರಿಲ್ಲ! ಕಾಲು ಬರದಲ್ಲ ಸ್ವಾಮಿ! ಈ ಗೂಳಿ ಎಲ್ಲಿ ಕೂತಿತ್ತೋ! ಓಡಿಕೊಂಡು ಬತ್ತದಲ್ಲಾ ಸ್ವಾಮಿ! ಅಂತ ಬಿದ್ದು ವಾಟ ಓಡುತವಳೆ ಕಾಳಮ್ಮ!

ಆಹಾ.... ನೋಡಿ ನಮ್ಮ ಸಿವನಾ!

ದ್ಯಾವಾಜಿ ದ್ಯಾವಾಜಿ ಅನ್ನ ಉಂಡು ಒಂಬತ್ತು ದಿನವಾಯ್ತು! ಅದಕ್ಕೇನು ಮಾಡಬೇಕು ಅತ್ತೆಮ್ಮ! ನನ್ನಟ್ಟಿ ಒಳಕೆ ಜೀತಕ್ಕಿದ್ದನಲ್ಲಾ ಮಲ್ಲಣ್ಣ ಅವನಟ್ಟಿಗಾದ್ರೂ ವೋಗ್ಬುಟ್ಟು! ಒಂದು ಮೂರು ಮುದ್ದೆ ಹಿಟ್ಟಾದ್ರೂ ಇಸ್ಕಂ ಬಾ ನಡೆಯಮ್ಮಿ ಅಂದಳು!

ಅಗ್ಲಿ ಅತ್ತೆಮ್ಮ ಅನ್ನುಟ್ಟು। ಒಂದು ಕುಕ್ಕೆ ತಕ್ಕಂಡ್ಲು। ದ್ಯಾವಾಜಮ್ಮ ಕಂಕಳಲ್ಲಿ ಸಿಕ್ಕಿಸಿಕೊಂಡು। ಒಂದು ಬಿದ್ರಹಂಡೆ ಕೆಳಗೆ ಇಟ್ಕಂಡು। ಸತ್ಯವಂತೆ ದ್ಯಾವಾಜಮ್ಮನ ಕರ್ಕಂಡು। ಮಲ್ಲಣ್ಣನ ಹಟ್ಟಿಗೆ ಅವಳು ತಿರುಪೆಗೆ ಹೋಯ್ತುವಳೇ। ಕಾಳಮ್ಮ।

ಆಹಾ.... ನೋಡಿ ನಮ್ಮ ಶಿವನಾ।

ಯಾವಾಗ ಮಲ್ಲಣ್ಣನ ಹಟ್ಟಿಗೆ ಹೋಗಿ ನಿಂತ್ಕಂಡು ಬಿಟ್ಲೋ ಅಮ್ಮಾ ಅಮ್ಮಾ ದ್ಯಾವಾಜಿ। ನೀ ಕಾಣಿಸ್ಕಬ್ಯಾಡ। ನೀನು ಮರೆಲಿ ನಿಂತ್ಕಮ್ಮ। ನಾನು ಹೋಗಿ ಈಸ್ಕಂಬತ್ತೀನಿ ಅಂತ ಹೇಳ್ಬುಟ್ಟು। ಮಲ್ಲಣ್ಣಾ ಮಲ್ಲಣ್ಣಾ ಅಂತ ಕೂಗಿದ್ಲಂತೆ। ಇವಳ ಸದ್ದ ಯಾವಾಗ ಕೇಳ್ಬುಟ್ಟೋ। ಮಲ್ಲಣ್ಣ ಅಟ್ಟೆಯಿಂದ ಈಚೆಗೆ ಓಡಿ ಬಂದು। ಯಾರವ್ವಾ ಅಂದ। ಇದೇನು ಮಲ್ಲಯ್ಯ ಇಂತ ಮಾತೇಳ್ತಿದ್ದೆಯಲ್ಲಾ। ನಾನಲ್ವಾ ಕಾಳಮ್ಮ ಅನ್ನುಟ್ಟು। ಆಗ ಮಲ್ಲಣ್ಣನಿಗೆ ಬಾಳ ದುಕ್ಕ ಬನ್ನುಟ್ಟು। ಇದೇನು ಕಾಳವ್ವಾ ಅಂತ ಅಟ್ಟೆ ಒಳಗೆ ಕರ್ಕಂಡೋಗಿ। ಏನ್ ಕಾಳಮ್ಮ ಅಂದ। ನನ್ನಪ್ಪನ ಮನೆ ದೇವರು। ನಾನು ಕೆಟ್ಟದಾಗಿ ಅಡ್ಡುಟ್ಟು। ಇದೋ ನಂಗೆ ಇಂತ ಸ್ಥಿತಿ ಬಂದುಬುಡ್ತು। ಅನ್ನ ಉಂಡು ಎಷ್ಟು ದಿನವಾಯ್ತು। ಒಂದು ಮೂರು ಮುದ್ದೆ ಹಿಟ್ಟು ಕೊಡ್ರೋ ಅಂತವಳೇ ಕಾಳಮ್ಮ।

ಆಹಾ ನೋಡಿ ನಮ್ಮ ಶಿವನಾ।

ಯಾವಾಗ ಮೂರು ಮುದ್ದೆ ಹಿಟ್ಟು ಕೊಡಿಸು ಅಂತ ಕೇಳ್ಕಲ್ಲೋ। ಮಲ್ಲಣ್ಣನಿಗೆ ಎಲ್ಲೂ ಇಲ್ಲದ ದುಕ್ಕ ಬನ್ನುಬುಡ್ತು। ಅಲ್ಲೇ ಇರವ್ವಾ ಎಂದು ಒಳಗೋಗ್ಬುಟ್ಟು। ಅವನ ಹೆಂಡ್ತೀನಾ ಕರೆದ್ಬುಟ್ಟು। ಏನೆಣ್ಣೆ ನನ್ನೊಡತಿ ಕಾಳಮ್ಮ। ಇವಳಟ್ಟೆ ಒಳಗೆ। ನಾನು ಜೀತ ಇದ್ದಾಗ। ನಾನು ಕಂಡಾಗ ಸಿರಿವಂತ್ಲು। ಈಗ ಮೂರು ಮುದ್ದೆ ಹಿಟ್ಟು ಕೇಳ್ತಾಳೆ। ನಾವು ಹಿಟ್ಟು ಕೊಡತಕ್ಕಂತ ಕುಕ್ಕೆಗೆ ಹಾಕಿ ಕಳಿಸತಕ್ಕಂತದ್ದು ನಮಗೆ ನ್ಯಾಯವಲ್ಲ। ಅವಳ ಕರೆದು ನಡು ಮನೆಯಲ್ಲಿ ಕೂರಿಸಿಬಿಟ್ಟು। ಹೊಟ್ಟೆ ತುಂಬಾ ಹಿಟ್ಟಿಕ್ಕಿ ಕಳುಸ್ಬುಡು ಅಂತ ಹೇಳ್ಬುಟ್ಟಂತೆ। ಅಲ್ಲಿಗೆ ಮಲ್ಲಣ್ಣನ ಹೆಂಡ್ತಿ ಅಗಿರತಕ್ಕವಳು। ನನ್ನ ಗಂಡನಿಗೆ ಒಡತಿ ಆದ ಮ್ಯಾಲೆ, ನನಗೂ ಒಡತಿ ಅಲ್ವಾ ಅನ್ನುಟ್ಟು। ಅಲ್ಲಿಗೆ ಬರಬರನೆ ಜೋಳದ ಕಡ್ಡಿ ಒಟ್ಟಿ। ಮೂರು ಮುದ್ದೆ ಹಿಟ್ಟು ಮಾಡ್ಬುಟ್ಟು। ಎಸರು ಮಾಡಿಬಿಟ್ಟು। ಬಾ ಕಾಳವ್ವ ಅಂತ ಕೈ ಕಾಲಿಗೆ ನೀರು ಕೊಟ್ಲು। ಕಾಳಮ್ಮ ನಡುಮನೆಗೆ ಬಂದು ಕುಂತ್ಕಬುಟ್ಲು। ತೆವಟಿಗೆ ಮಡಗ್ಬುಟ್ಟು। ತೇವಟಿಗೆ ಮೇಲೆ ತಣಿಗೆ ಮಡಗ್ಬುಟ್ಟು। ಆ ಮಲ್ಲಣ್ಣನ ಹೆಂಡ್ತಿ ಹಿಟ್ ತರಕ್ಕೆ ಕೋಣೆಗೋದ್ಲು। ಆ ಕೋಣೆಗೆ ಹೋದಂತ ಕಾಲದಲ್ಲಿ। ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಈ ಹಿಟ್ಟು ಹೊಟ್ಟೆಗೆ ಹೋದದ್ದೇ ಉಂಟಾದ್ರೆ। ಅವಳನ್ನು ಬಗ್ಗಿಸಕ್ಕೆ ಆಗೋಲ್ಲ ಅನ್ನುಟ್ಟು। ಆ ಮಲ್ಲಣ್ಣನ ಹೆಂಡ್ತಿ ನಡುಮನೆಯಿಂದ ಕೋಣೆಗೆ ಹೋಗೋದ್ರೊಳಗಾಗಿ। ಆ ಮಾಡಿದ್ದಲ್ಲ ಬಿಸಿ ಹಿಟ್ಟು। ಅವಳು ಕೈಹಾಕಿ ನೋಡುವಂತ ಕಾಲದಲ್ಲಿ ಬರಿ ಮಡ್ಕೆ ಅದಲ್ಲಪ್ಪಾ। ಮಹದೇವಾ।

ಆಹಾ...... ನೋಡಿ ನಮ್ಮ ಶಿವನಾ।

ಯಾವಾಗ ಮಲ್ಲಣ್ಣನ ಹೆಂಡ್ತಿ ನೋಡ್ಬುಟ್ಲೋ। ಓ ಇವಳ್ಯಾವಳೋ ದಟ್ಟ ದರಿದ್ರದ ಮುಂಡೆ ಇರಬೇಕು। ಅದಕ್ಕಾಗಿ ಇವಳ ಹಟ್ಟಿ ಹಾಳಾಯ್ತು ಅನ್ಬುಟ್ಟು। ಆಗಲೇ ಮೂರು ಮುದ್ದೆ ಹಿಟ್ಟು ಬರಬರನೆ ಮಾಡ್ಬುಟ್ಲು। ಕಾಳಮ್ಮಾ ಕಾಳಮ್ಮಾ ಹೇಳ್ತೀನಿ ಕೇಳವ್ವಾ। ಇಗೋ ಇಲ್ಲಿ ನಿನಗೆ ಇಕ್ತ ನಾ ಕೂತ್ಕಂತ್ತೆ। ನಾವು ಹುಳ್ಳಿ ಹೊಲದಲ್ಲಿ ಹೋಗಿ ಹುಳ್ಳಿ ಕೀಲ್ಬೇಕು। ಅದಕ್ಕೇನು ಮಾಡ್ಬೇಕವ್ವಾ ಅಂದ್ಲು। ಏನಾದ್ರೂ ಕುಕ್ಕೆ ಗಿಕ್ಕೆ ತಂದಿದ್ದರವ್ವಾ ಹಾಕ್ಬುಡ್ತೀನಿ ಅಂದ್ಲಂತೆ। ಇದೋ ತಂದೆ ಕಣವ್ವಾ ಅಂದ್ಲಂತೆ। ಆ ಕುಕ್ಕೇಗೆ ಮೂರು ಮುದ್ದೆ ಹಿಟ್ ಹಾಕ್ಬುಟ್ಲು। ಅವನ್ನು ಈಸ್ಕಂಡು ನಾ ಒಯ್ತೀನಿ ಕಣವ್ವಾ ಅಂತ ಮಲ್ಲಣ್ಣನಿಗೆ ಹೇಳ್ಬುಟ್ಟು। ಅಲ್ಲಿಗೆ ಬಂದು ದ್ಯಾವಾಜಮ್ಮನ ಕರೆದ್ಲಂತೆ। ನಡೆಯವ್ವಾ ದ್ಯಾವಾಜಿ। ಒಯ್ಯಾ ಒಯ್ಯಾ ಕಾಳಮ್ಮ ಏನು ಯೋಚನೆ ಮಾಡವಳೆ। ದ್ಯಾವಾಜಿ ಈ ಮೂರು ಮುದ್ದೆ ಹಿಟ್ಟು। ನನ್ನ ಹೊಟ್ಟೆ ಕರಳಿಗೆ ಬಿದ್ದದ್ದೇ ಆದರೆ। ಆ ಮೂಡಲ ಮಲೆ ಬಡ ಮಾದಯ್ಯ ಇದ್ದಾನಲ್ಲಾ। ಆ ಮಾದಯ್ಯನಿಗೆ ಇನ್ನು ಮೂರು ವರ್ಷ ಬಗ್ಗೀನಾ ಅಂತವಳೇ।

ಅಹಾ...... ನೋಡಿ ನಮ್ಮ ಶಿವನಾ।

ನಮ್ಮಪ್ಪಾಜಿ ಮಾಯಕ್ಕಾರ ಮಾದಪ್ಪನವರು। ಬೆನ್ನ ಹಿಂದೆ ನಿಂತಿದ್ದಲ್ಲಾ। ಸಬಾಸ್ ನನ್ನ ಕಂದ। ಇಲ್ಲೂ ನಿನ್ನ ಅಹಂಕಾರ ಬುಡ್ಲಿಲ್ವಲ್ಲಾ। ಈ ಮೂರು ಮುದ್ದೆ ನಿನ್ನ ಹೊಟ್ಟೆ ಒಳಗೆ ಹ್ಯಾಗ್ ಬಿದ್ದದು। ನನಗೆ ಎಂಗೆ ಬಗ್ಗಲ್ವೋ ನೋಡ್ತೀನಿ ಅನ್ಬುಟ್ಟು। ನಮ್ಮಪ್ಪಾಜಿ ಮಾದಪ್ಪನವರು। ಕಾರಯ್ಯ ಬಿಲ್ಲಯ್ಯ ಅನ್ನವರ ಕರ್ದುಬುಟ್ಟು। ಏನಪ್ಪಾ ಮಕ್ಕಳಿರಾ। ಇದೋ ಇಲ್ಲೊಂದು ಪವಾಡ ಮಾಡಬೇಕು। ನೀವು ಏನಂತ ಹೇಳಿದ್ರೆ। ನೀವು ಕಾರಯ್ಯ ಕರಿನಾಯಿ ಆಗಬೇಕು। ಬಿಲ್ಲಯ್ಯ ಬಿಳಿನಾಯಿ ಆಗಬೇಕು। ಇಬ್ಬರೂ ಕಾಯ್ಕಂಡು ಕುಂತಿರಬೇಕು। ಬೇಡರ ಕನ್ನಯ್ಯನ್ನ ಕರೆದ್ಬುಟ್ಟು ಇಲಿಸುಂಡ ಮಾಡಿ ಕುಕ್ಕರಿಸಿಬಿಟ್ಟು ಮಾಡಿಬಿಟ್ಟು। ಬೇಡರ ಕನ್ನಯ್ಯ ನೀನು ಕುಕ್ಕೆ ತೂತ ಮಾಡಬೇಕು। ಹಿಟ್ಟು ಬಿದ್ದೋದ ತಕ್ಷಣದಲ್ಲಿ ನೀವು ನಾಯಿ ಅವತಾರದಲ್ಲಿ ಬಂದು ಆ ಹಿಟ್ಟ ಹೊತ್ಕೊಂಡು ಓಗ್ಬೇಕು। ಕುಕ್ಕೆ ಒಳಗೆ ಇಲಿಸುಂಡ ತೂತು ಕೊರೆದ್ಬುಡ್ತು ಆ ತೂತಿನೊಳಗೆ ಹಿಟ್ಟು ತುಪ ತುಪನೆ ಕೆಳಗೆ ಬಿದ್ದೋ। ಆ ಬಿದ್ದೋದಂತ ಹಿಟ್ಟನ್ನು। ನಾಯಿಗಳು ಎತ್ತಿಕೊಂಡು ಓಡೋಯ್ತವೇ। ಅದನ್ನು ನೋಡ್ಬುಟ್ಟು ಕಾಳಮ್ಮ। ಅಮ್ಮೆ ಅಮ್ಮೆ ದ್ಯಾವಾಜಿ। ನಿಮ್ಮಪ್ಪನ ತಿನ್ನೋನ ಮಗಳೇ। ಈ ತೂತು ಕುಕ್ಕೆ ತಂದ್ಬುಟ್ಟಿದ್ದೀಯಲ್ಲಾ। ಹಿಟ್ಟು ಬಿದ್ದೋಗ್ಬುಟ್ಟೋ। ಈ ಹಾಳ್ ನಾಯಿಗಳು ಎಷ್ಟು ದಿನಗಳಿಂದ ಕಾಯ್ಕಂಡು ಕೂತಿದ್ವೋ। ಎತ್ತಂಡೋದೋಗ್ಬುಡ್ತಲ್ಲಮ್ಮಿ। ಅಂತ ಬೈಕಂಡು ಹೋಗಿ। ಓಗ್ಲಿ ನನಗೆ ಅದೃಷ್ಟ ಇಲ್ಲ। ಇದೊಂದು ಹಂಡೆ ಉದಕನಾದ್ರೂ ಕುಡುದ್ಬುಟ್ರೆ। ಆ ಮೂಡಲ ಮಲೆ ಬೂದಿ ಬಡಕನಿಗೆ। ಇನ್ನೊಂದು ವರ್ಷ ಬಗ್ಗೀನಾ ಅಂತವಳೇ ಕಾಳವ್ವಾ।

ಅಹಾ...... ನೋಡಿ ನಮ್ಮ ಶಿವನಾ।

ಎಲಾ ಮುಂಡೆತ್ತರದೇ ಅದೊಂದು ಹಂಡೆ ಉದಕ ಹೆಂಗೆ ಕುಡ್ದೀಯೆ ಅನ್ಬುಟ್ಟು। ನಮ್ಮಪ್ಪಾಜಿ ಮಾದಪ್ಪನವರು। ಅವಳು ಬರಾ ದಾರಿ ಒಳಗೆ ಎದುರು ಬದ್ರಾಗಿ ಒಂದು

ಕಲ್ಲು ಮಾಡ್ಬುಟ್ಟು! ಆ ಕಲ್ಲು ಎಡವಿಬಿಟ್ಟು! ಆ ಕಾಳಮ್ಮನಾಗಿರತಕ್ಕಂತವಳು ಅವಳು ಮುಪ್ಪನೆ ಕೆಳಗೆ ಬಿದ್ದವಳೇ! ಕಾಳಮ್ಮಾ!

ಆಹಾ...... ನೋಡಿ ನಮ್ಮ ಶಿವನಾ!

ಯಾವಾಗ ಕೆಳಗೆ ಬಿದ್ಲೋ ಉದಕವೆಲ್ಲಾ ಕೆಳಗೆ ಚೆಲ್ಲೋಯ್ತು! ಅದನ್ನು ನೋಡ್ಬುಟ್ಟು ಕಾಳಮ್ಮ! ಅಯ್ಯಾ ನನ್ನ ಅದೃಷ್ಟ ಹಿಂಗಾಯ್ತಲ್ಲಾ ಅನ್ಬುಟ್ಟು! ಅನ್ನಕ್ಕುಟ್ಟಿದ ಪರಮಾತ್ಮ ಅನ್ನ ಉಂಡ್ಬುಟ್ಟು! ಒಂಬತ್ತು ಹತ್ತು ದಿನವಾಯ್ತಲ್ಲಾ! ಇನ್ನೆಂಗಿರಬೇಕು ಅನ್ಬುಟ್ಟು! ಅವಳು ದುಕ್ಕ ಮಾಡ್ತಾ ಬತ್ತವಳೇ ಕಾಳಮ್ಮಾ

ಆಹಾ....... ನೋಡಿ ನಮ್ಮ ಶಿವನಾ!

ದುಕ್ಕ ಮಾಡಿ ಬರುವಂತಾ ಆ ಕಾಲದಲ್ಲಿ! ನಮ್ಮಪ್ಪಾಜಿ ಮಾಯಕ್ಕಾರ ಮರಿದೇವರು! ಏಳು ಮಲೆ ಹೆತ್ತಯ್ಯನವರು! ಇಂಥ ಮುಂಡೆ ಮಕ್ಕಳನ್ನು ಪ್ರಪಂಚದಲ್ಲಿ ಮಡಗಬಾರ್ದು! ಇಂಥ ಮುಂಡೆ ಮಕ್ಕಳು ಬದುಕಿದ್ರೇ ಉಂಟಾದ್ರೆ! ಗುಡ್ಡಗಳು ದಾಸಗಳು ಜೋಗಿಗಳು! ಅಯ್ಯಗಳು ಗುರುಗಳು ಅಂತ! ಕೋಟಾನುಕೋಟಿ ಉಂಟು! ಪ್ರಪಂಚದಲ್ಲಿ ಅವರಿಗೆ ಇಂಗೆ ಆಯ್ತದಲ್ಲಾ ಅನ್ಬುಟ್ಟು! ಇವಳಿಗೆ ಸರಿಯಾಗಿ ಬುದ್ದಿ ಕಲಿಸಬೇಕು ಅನ್ಬುಟ್ಟು! ನಮ್ಮಪ್ಪಾಜಿ ಮಾಯಕ್ಕಾರ ಮಾದಪ್ಪನವರು! ಬೇವಿನ ಸೊಪ್ಪು ಉಟ್ಕಂಬುಟ್ಟು! ಕಣಿ ಕುಕ್ಕೆ ಹಿಡ್ಕಂಬುಟ್ಟು! ಸಿಲ್ಪಿ ಪಂಚಾಂಗ ಬಲಗೈಲಿ ಹಿಡ್ಕಂಬುಟ್ಟು! ಕುಕ್ಕೇ ಕೊರಮಗಿತ್ತಿ ಅವತಾರ ತಾಳ್ಕಂಡು! ನಮ್ಮಪ್ಪಾಜಿ ಮಾದಪ್ಪನವರು! ಅವರು ಎದುರುಗಡೆ ಬತ್ತವ್ರೇ ಮಾದೇವಾ!

ಆಹಾ...... ನೋಡಿ ನಮ್ಮ ಶಿವನಾ!

ಯಾವಾಗ ಅವರು ಎದುರುಗಡೆ ಬತ್ತಿದ್ರೋ! ಅದನ್ನು ನೋಡ್ಬುಟ್ಟು ಕಾಳಮ್ಮ! ಯಾರಮ್ಮೆ ದ್ಯಾವಾಜಿ ಈ ಕಡೆ ಬರ್ತಾವ್ರೆ ಹೆಂಗಸು ಅಂದ್ಲು! ಅದ್ಯಾರೋ ಕೊರಮಗಿತ್ತಿ ಬಂದಾಗೆ ಬರ್ತಾರೆ ಅತ್ತೆ ಅಂದ್ಲು! ಅಂಗಿದ್ದ ಮ್ಯಾಲೆ ನೀ ಸ್ವಲ್ಪ ಅರಗಾಗಮ್ಮಿ! ನಾನು ಸ್ವಲ್ಪ ಶಾಸ್ತ್ರ ಕೇಳ್ತೀನಿ ಅಂದ್ಲಂತೆ! ಅಲ್ಲಿಗೆ ಪಕ್ಕಕ್ಕೆ ಅರ್‍ಗಾಗ್ಲಂತೆ ದ್ಯಾವಾಜಮ್ಮ! ಏನಮ್ಮಾ ಅಂತ ಹತ್ತಿರಕ್ಕೆ ಹೋದ್ರು! ಅವ್ವಾ ನೀನ್ಯಾರು ಅಂದ! ಅದಕ್ಕೆ ಅವಳು ಕಣಿ ಹೇಳುವಳು! ಅಂದ! ಆಗ ಶಾಸ್ತ್ರ ನೋಡು ಅಂದ್ಲು ಕಾಳಮ್ಮ! ಒಂದು ಆನೆನ ಬೆಳ್ಳಿ ಪಾವಲಿ ಮಡಗವ್ವಾ! ನಾನು ನೋಡ್ತೀನಿ ಅಂದ್ಲು! ಆಗ ಅವಳು ಎಲ್ಲಿತ್ತು ಮಡಗವಳಿಗೆ! ತಿನ್ನಕ್ಕೆ ಅನ್ನವಿಲ್ಲ! ಅನ್ನ ಉಂಡು ಆಗ್ಲೆ ಹನ್ನೆರಡು ದಿನವಾಗದೆ! ಆಗ ಏನು ಹೇಳ್ತಾಳೆ ಕಾಳಮ್ಮ! ಹೇಳ್ತೀನಿ ಕೇಳು ಕುಕ್ಕೆ ಕೊರಮಿತ್ತವ್ವ! ನನ್ನ ತಾತ ಈಗ ಮೂಗಿನ ಹೊಳ್ಳೆಯುರಿಸಿದರೂ! ಒಂದು ಬುಡಗಾಸಿಲ್ಲ ಕಣವ್ವಾ! ಅನ್ನ ಉಂಡು ಹನ್ನೆಡು ದಿನವಾಯ್ತು! ನಾನು ಹಿಂದಿನ ಕಾಲದಲ್ಲಿ ಈ ತರ ಬಾಳ್ತಾ ಇದ್ದೆ! ಈಗ ನನಗೆ ಮನೆದೇವರಿಂದಲೋ! ಕುಲದೇವರಿಂದಲೋ ಯಾವ ದೇವರಿಂದಲೋ! ನನಗೆ ಬಡಸ್ತನ ಬಂದ್ಬುಟ್ತು ಕಣವ್ವಾ! ನಾನು ಹಿಂದಿನ

ಕಾಲದಲ್ಲಿ ಯಾವ ತರ ಇದ್ದೋ। ಅದೇ ತರ ಬಾಗ್ಯ ಬಸ್ಬುಟ್ತೆ। ಒಂದು ಹಣ ಕೇಳ್ದೀಯಲ್ಲಾ ಆಗ ನಿನಗೆ ಒಂದು ರೂಪಾಯ್ನೇ ಮಡಗ್ತೀನಿ। ಕುಕ್ಕೆ ಕೊರಮಿತ್ತಿ ಅವತಾರದಲ್ಲಿರುವವಳು। ನೆಲ ತಾರಿಸಿಬಿಟ್ಟು। ಗೊಂಬ ದೇವರ ಪೂಜೆ ಮಾಡಿಬಿಟ್ಟು ನಿಮ್ಮ ಮನೆ ದೇವರು ಕುಲದೇವರು ಇಬೂತಿ ಒಳಗೆ ಇದ್ದಾರ ಅಂದಳು। ಹುಂ ಕಣವ್ವಾ ಇದ್ದ। ಅದರಿಂದಲೇ ಇಷ್ಟಾಗಿರೋದು। ಅವನು ಬಂದು ಎಳ್ಳುಮಜ್ಜನಕ್ಕೆ ಎಳ್ಳು ಕೇಳ್ದಾಗ ಎಷ್ಟು ಎಳ್ಳು ಕೊಟ್ಟವ್ವಾ ಅಂದಳಂತೆ। ಅವ್ವಾ ಕುಕ್ಕೆ ಕೊರಮಿತ್ತವ್ವಾ। ಅವರು ಈ ತರವಾಗಿ ಬಂದು ಕೇಳಲಿಲ್ಲ। ಅವರು ಯಾವುದೋ ತರವಾಗಿ ಬಂದು ಕೇಳಿಬುಟ್ರು ನಾನು ಕೊಡಲಿಲ್ಲ। ಅವನನ್ನೇ ಹೋಗಿ ಪಾದ ಹಿಡಿದದ್ದೇ। ಉಂಟಾದ್ರೆ। ನಿನಗೆ ಹಿಂದಿನ ಕಾಲದಲ್ಲಿ ಯಾವ ತರವಾಗಿ ಕೊಟ್ರೋ। ಆ ತರವಾಗಿ ಕೊಡ್ತಾರೆ ಅನ್ಬುಟ್ರು। ಅವರು ಎಲ್ಲಿ ಸಿಕ್ತಾರೋ ಅನ್ಬುಟ್ಲು। ತಿರಗ ಕವಡೆ ಮಾಡಿ ಬುಟ್ಟು ಬುಟ್ಟು। ಪಂಚಾಂಗ ನೋಡ್ಬುಟ್ಟು। ಇದೇ ಮಾರ್ಗವಾಗಿ ಹೋದದ್ದೇ ಉಂಟಾದ್ರೆ। ನಿಮ್ಮ ಎದುರು ಬದುರಾಗಿ ಸಿಕ್ತಾರೆ। ಹೋಗವ್ವಾ ಅಂತ ಹೇಳ್ಬುಟ್ಲು। ಅಲ್ಲಿಗೆ ಹುಡಿಕೊಂಡು ಹೊಯ್ತಾವ್ರೆ। ತಿರುಗಿ ನಮ್ಮಪ್ಪ ಮಾದಪ್ಪನ ಅವತಾರ ತಾಳ್ಕಂಡು। ಕಾವಿ ಕಮಂಡಲ ಧರಿಸಿಕೊಂಡು। ಹಿಂದಿನ ಪಾದಕ್ಕೆ ಹಿಂದಿನ ಜಂಗು। ಮುಂದಿನ ಪಾದಕ್ಕೆ ಮುಂದಿನ ಜಂಗು ಧರಿಸಿಕೊಂಡು। ನಮ್ಮಪ್ಪಾಜಿ ಮಾದಪ್ಪನವರು। ದಂಡ ಕೋಲ್ನಾಗ ಬೆತ್ತ ಹಿಡ್ಕಂಡು। ಅವರು ಎದುರು ಬದರಾಗಿ ಬತ್ತವರೇ ಮಾದೇವಾ।

ಅಹಾ....... ನೋಡಿ ನಮ್ಮ ಶಿವನಾ।

ಆ ಎದುರು ಬದುರಾಗಿ ಬರ್‍ತ ಇರ್‍ತಕ್ಕಂತವರನ್ನು ನೋಡ್ಬುಟ್ಟು। ಆ ಕಾಳಮ್ಮ ನಾಗಿರತಕ್ಕಂತವಳಿಗೆ। ಬಾಳ ಸಂತೋಸ ಬಸ್ಬುಡ್ತು। ಅಮ್ಮಿ ಅಮ್ಮಿ ದ್ಯಾವಾಜಿ। ಸ್ವಲ್ಪ ಮರೆಯಾಗು। ಆ ಸತ್ಯವಂತೆ ಹೇಳಿದ ಮಾತು। ಕಣೆ ಅವಳು ಹೇಳಿದ್ಲು। ಬಾಳ ಸತ್ಯವಾದದ್ದು। ಇದೋ ಎದುರು ಬದರಾಗಿ ಬತ್ತಾ ಅವ್ರೆ। ಇವರೇ ನನಗೆ ಹಿಂದಿನ ಕಾಲದಲ್ಲಿ ಭಾಗ್ಯ ಕೊಟ್ಟಂತ ಗುರುಗಳು। ಗುಡು ಗುಡನೆ ಹೋಗಿ ಕಾಳಮ್ಮ ಅವರ ಪಾದ ಹಿಡಿದವಳೆ।

ಆಹಾ........ ನೋಡಿ ನಮ್ಮ ಶಿವನಾ।

ಯಾವಾಗ ಪಾದ ಹಿಡಿದ್ಬುಟ್ಲೋ। ಆಗ ನಮ್ಮಾಪ್ಪಾಜಿಯವರು ನೋಡ್ಬುಟ್ಟು। ಯಾರವ್ವಾ ಹೆಣ್ಣು ಮಗಳೇ ಯಾಕಿಸ್ಪು। ಅಯ್ಯೋ ಇದೇನು ಸ್ವಾಮಿ ಮರೆತು ಬುಟ್ಟಿದ್ದೀರಲ್ಲಾ ನನ್ನ। ಯಾರವ್ವಾ ನನಗೆ ಕೋಟಾನುಕೋಟಿ ಭಕ್ತರು। ನೀನ್ಯಾರವ್ವಾ ಅಂತ ಕೇಳಿದ್ರಂತೆ। ಆಗ ನಾನಲ್ಲವಾ ಸ್ವಾಮಿ। ಕೌದಳ್ಳಿ ಒಳಗಿದ್ದ ಕಾಳವ್ವನಲ್ವಾ। ಸರಿ ಈಗ ಏನಾಗಬೇಕು ಕಂದಮ್ಮ। ಸ್ವಾಮಿ ನೀನು ಕೊಟ್ಟಂತ ಭಾಗ್ಯವದು। ಮರೆತುಬುಟ್ಟೆ ದಮ್ಮಯ್ಯ। ನೀವು ಕಣದಲ್ಲಿ ಬಂದು। ನೀವು ಯಾವುದೋ ಅವತಾರದಲ್ಲಿ ಬಂದು ಕೇಳ್ಬುಟ್ಟು। ಈ ತರವಾಗಿ ನನಗೆ ಬಡಸ್ತನ ಬಂದು ಬುಡ್ತು। ಉಣ್ಣ ಅನ್ನ ಹಿಟ್ಟು ಬೆಲ್ಲವಾಗಿದೆ। ಕುಡಿಯ ಅಂಬಲಿ ಪಾಯಸವಾಗಿದೆ। ಅನ್ನಕ್ಕುಟ್ಟಿದ ಪರಮಾತ್ಮ ಉಂಡು ಹನ್ನೆರಡು ದಿನವಾಯಿತು। ಸರಿ

ಏನು ಮಾಡಬೇಕು ಕಂದವ್ವಾ। ಹಿಂದಿನ ಕಾಲದಲ್ಲಿ ಕೊಟ್ರಲ್ಲಾ। ಅದೇ ಬಾಗ್ಯವನ್ನು ಎತ್ತಿ ಕೊಟ್ಟಿದ್ದೇ ಉಂಟಾದ್ರೆ। ಮೊದಲಾಗಿ ಬೆಳದಿದ್ದನ್ನು। ನಿಮಗೆ ಮೊಸಲಾಗಿ ಮಡಗ್ತೀನಿ। ತಿರುಗಿ ಮಕ್ಕಳೇ ಉಂಟಾದ್ರೆ। ನಿನ್ನೆಸರು ಕರೀತೀನಿ ದಮ್ಮಯ್ಯ। ನೀವು ಕ್ಷಾಪವೆಲ್ಲಾ ನುಂಗಿಕೊಂಡು ಈ ಬಡಪಾಯಿ ಮೇಲೆ। ಕರುಣೆ ಇಟ್ಟು। ನನಗೆ ಏಳು ಲಕ್ಷದ ಭಾಗ್ಯ ಎತ್ಕೊಡಬೇಕು ಅಂತವಳೇ ಕಾಳಮ್ಮ।

ಆಹಾ....... ನೋಡಿ ನಮ್ಮ ಸಿವನಾ।

ಯಾವಾಗ ಇವಳು ಹೇಳಿದ ಮಾತನ್ನು ಕೇಳಿದ ನಮ್ಮಪ್ಪಾಜಿ ಹುಸಿನಗುತ್ತಾ। ನನ್ನ ಕಂದ ಕಾಳಮ್ಮ ಅಟ್ಟ ಮೇಲೆ ಒಲಿ ಉರೀತು। ಕೆಟ್ಟಮ್ಯಾಲೆ ಬುದ್ಧಿ ಬಂತು ಅಂದಾಗ। ಈಗ ಬುದ್ಧಿ ಬಂತಾ ಕಾಳಮ್ಮ। ಹಾಗಿದ್ದ ಮೇಲೆ ನಿನಗೆ ಕೊಡಬೇಕಾದ್ದೆ ಕಾಳಮ್ಮ। ಇದೋ ಈ ಜಾಲದಟ್ಟೆ ಕೊಳದಲ್ಲಿ ಸ್ನಾನ ಮಾಡಿಕೊಂಡು ಬಾ ಅಂದ್ರಂತೆ। ಕಾಳಮ್ಮನಿಗೆ ಎಲ್ಲಿಲ್ಲದ ಸಂತೋಸವಾಯ್ತು। ಜಾಲದಟ್ಟೆ ಕೊಳದೊಳಗೆ ಸ್ನಾನ ಮಾಡಿಕೊಂಡು ಕೈ ಮುಗಿದುಕೊಂಡು ನಿಂತ್ಕಂಡಳಂತೆ। ಹಿಂದು ಮುಂದಾಗಿ ನಿಲ್ಲಿಸಿಬುಟ್ರು। ಇಂತ ಮುಂಡೆ ಮಕ್ಕಳಿಗೆ ಬಾಗ್ಯ ಕೊಡಬಾರದಲ್ಲಾ। ಧರೆ ಮ್ಯಾಲೆ ಇವರಿಗೆ ಕೊಟ್ಟಿದ್ದೇ ಉಂಟಾದ್ರೆ। ಧರೆ ಹಾಳು ಮಾಡಿ ಬಿಡ್ತಾರೆ। ನಮ್ಮಪ್ಪಾಜಿ ಮಾಯಕ್ಕಾರ ಮಾದಪ್ಪನವರು। ತಮ್ಮ ದಂಡ ಕೋಲನ್ನು ಬೆತ್ತವನ್ನು ಎತ್ತಿ। ನೆತ್ತ ಮ್ಯಾಲೆ ಮಡಗಿದಂತ ಕಾಲದಲ್ಲಿ। ಆ ಕಾಳಮ್ಮ ಅಂತಕ್ಕಂತವಳು। ಅಲ್ಲಿ ಗೋವುಗಲ್ಲಿನಲ್ಲಿ ನಿಂತವಳೇ ಕಾಳಮ್ಮ।

ಆಹಾ...... ನೋಡಿ ನಮ್ಮ ಸಿವನಾ।

ಆ ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರೂ ಏಳು ಮಲೆ ಹೆತ್ತಯ್ಯ। ಭೂಲೋಕದ ಗಂಡ। ಬೂದಿ ಮೆರೆಸಿದ ಕೆಂಡ। ಅಲ್ಲಿ ಕೌದಳ್ಳಿಗೆ ಬಂದ್ಬುಟ್ರು। ಈ ಸತ್ಯವಂತೆ ದ್ರ್ಯಾವಾಜಮ್ಮ ಜುಂಜೇಗೌಡನ। ತನ್ನ ಒಕ್ಕಲು ಮಗಳು। ಇದ್ದಾಳಲ್ಲಾ ಆ ದ್ರ್ಯಾವಾಜಮ್ಮನೂ ಅವಳ ಗಂಡನನ್ನೂ ಕರದ್ಬುಟ್ರು। ನಂಗೆ ವರ್ಷಕ್ಕೆ ಒಂದು ತುಂಬಿದ ಅಮಾವಾಸ್ಯೆ ದಿನ। ಸಿವರಾತ್ರೀಲಿ ನನ್ನ ಎಣ್ಣೆ ಮಜ್ಜನಕ್ಕೆ ಎಳ್ಳಿನ ಕಾಳು ತರಬೇಕು ಅನ್ಬುಟ್ರು। ಅವರನ್ನು ಒಕ್ಕಲು ಮಾಡಿಕೊಂಡುಬಿಟ್ಟು ಆ ನಮ್ಮಪ್ಪಾಜಿಯವರು.

ನೋಡಿ ನಮ್ಮ ಸಿವನಾ।
ಮುದ್ದು ಮಾಯ ಬಲ್ಲವರೇ ಮುದ್ದು ಮಾದೇವಾ
ಮನವ ನೆಚ್ಚಿ ದುಡವಾ ನೋಡೋ ಮಲೆಯ ಮಾದೇವಾ
ಮುದ್ದು ಮಾಯ ಬಲ್ಲವರ್ಯಾರು ಮುದ್ದು ಮಾದೇವಾ
ಮನವ ಒತ್ತಿ ದುಡವ ನೋಡೋ ಮಲೆಯ ಮಾದೇವಾ।
ಮಾಕಾಳಿಯ ಮನೆಯ ಮುರಿದವನೇ।
ಮಾದೇವ ಗಂಡುಗಲಿಯ ಮೇಲೆ ಮೆರೆದವನೇ
ಮನವ ಒತ್ತಿ ದುಡವ ನೋಡೋ ಮಲೆಯ ಮಾದೇವಾ

ಮುದ್ದು ಮಾಯ ಬಲ್ಲವರ್‍ನಾರು ಮುದ್ದು ಮಾದೇವಾ
ಮನವಾ ಒತ್ತಿ ದುಡವ ನೋಡೋ ಮಲೆಯ ಮಾದೇವ್

ಅಯ್ಯೋ ನನ್ನ ಕಂದ ಸತ್ಯವಂತೆ ದ್ಯಾವಾಜಿ। ನೀನು ಭಕ್ತಿವಂತೆ ಮಗಳಮ್ಮ। ನಿನ್ನ ಕೈ ಬುಡ್ಲಾರೆ ನನ ಕಂದ। ಮೂಡ್ಲು ಮಲೆ ದಿಕ್ಕೆ ಮೊಕ ಮಾಡ್ಕಂಡು। ಮಾದೇವ ನನ್ನ ಪಾದವೇ ಗತಿ ಅಂತ್ವೇಳಿ। ಕಣ್ಮುಚ್ಚಂಡು ನನ್ನ ಗ್ಯಾನುಸ್ತು। ನಿನ್ನ ಗಂಡನ್ನ ಕರೆಯವ್ವ ಅಂದ್ರು। ಸತ್ಯವಂತ ದ್ಯಾವಾಜಮ್ಮ। ಜಾಲದ ಕೊಳದಲ್ಲಿ ಕೈ ಕಾಲು ಮೊಕ ತೊಳ್ಕಂಡು। ಎನ್ನಪ್ಪಾಜಿ ಪಾದ ಪೂಜೆ ಮಾಡಿ। ಭಕ್ತಿಯಿಂದ ಕೈ ಮುಗಿದುಕೊಂಡು। ಮೂಡ್ಲದಿಕ್ಕಿಗೆ ಮೊಕ ಹಾಕ್ಕಂಡು। ಮಾದೇವ ನಿನ್ನ ಪಾದವೇ ಗತಿ ಕಣಪ್ಪಾ ಅಂತ್ಹೇಳಿ ಒಂದೇ ದುಡದಲ್ಲಿ। ತನ್ನ ಗಂಡನನ್ನು ಕರೆದವಳೆ ದ್ಯಾವಾಜಮ್ಮ।

ನೋಡಿ ನಮ್ಮ ಸಿವನಾ।

ದ್ಯಾವಾಜಮ್ಮನ ಗಂಡ ಮೊಲ್ಲಾಗ್ರ ಬಂದು ಸತ್ತು ಬಿದ್ದೋನು ಮ್ಯಾಲುಕ್ಕೆದ್ದು ಜಾಲುದ ಕೊಳುದತ್ರಕ್ಕೆ ಬಂದು। ನಮ್ಮ ಸ್ವಾಮಿಯವರ ಪಾದುಕ್ಕೆ ಸರಣ್ಮಾಡುದ್ನಂತೆ। ಆಗ ನಮ್ಮಪ್ಪಾಜಿ। ಕೇಳಿಲೊ ನನ ಕಂದ ದ್ಯಾವಾಜಿ। ನೀನು ನಿನ್ನ ಗಂಡುನ ಜೊತೇಲಿ। ಹಿಂದಿದ್ದೊಡ್ಡೀಲಿ ಜೀವ್ನ ಮಾಡವ್ವಾ ಆದ್ರೆ ನನ ಕಂದ। ದೀವಳಿಗೆ ದಿವಸ ನಿನ್ಮನೆಯಿಂದ ಒಂದ್ದಿಡಿ ಎಳ್ಳ್ ನನ್ನ ಎಣ್ಣೆ ಮಜ್ಜನಕ್ಕೆ ಬರ್‍ಬೇಕು। ನಿನ್ನೊಂಸ ಪರ್ಯಂತ ಎಲ್ಲಿದ್ರೂ ಕೊಟ್ಟು ಕಳುಸಮ್ಮಾ। ಎಲ್ಲಿದ್ರೂ ನನ್ನ ಮರೀಬ್ಯಾಡ ಕಂದಮ್ಮ। ನಿನ್ನ ಮುತ್ತೈದೆ ಸ್ಥಾನ ಸ್ಥಿರಂಜುನವಾಗ್ಲಿ ಅಂತ ಆಶೀರ್ವಾದವನ್ನು ಕೊಟ್ಟು। ಅವ್ರು ಏಳ್ಮಲೆ ಕೈಲಾಸಕ್ಕೆ ಹೊಯ್ತಾರೆ ಮಾದೇವ।

ನೋಡಿ ನಮ್ಮ ಸಿವನಾ।

ಅಯ್ಯೋ ನನ ಕಂದ ದ್ಯಾವಾಜಮ್ಮ। ನೀನು ನನ್ನ ತಂದೆ ಮನೆಗೋಗಿ। ಸುಖವಾಗಿ ಬದುಕಮ್ಮ ಅಂತ್ಹೇಳುದ್ರು। ಮಾದೇವನ ಮಾತು ಕೇಳಿ ದ್ಯಾವಾಜಮ್ಮ। ಮಾದೇವನ ಪಾದುದ ಮೇಲೆ ರಪ್ಪಂತ ಬಿದ್ದಿ। ಮಾದೇವನ ಪಾದವನ್ನು ಹಿಡ್ಕೊಂಡು। ಅವಳು ಕಣ್ಣಲ್ಲಿ ನೀರು ಕೆಡುಗವಳೆ।

ಆಹಾ ನೋಡಿ ನಮ್ಮ ಸಿವನಾ।

ಹೆತ್ತಯ್ಯ ನಮ್ಮ ತಂದೆ ಮನೆಗೋಗಿ ಸುಖವಾಗಿ ಬದುಕು ಅಂತೀರಲ್ಲಾ ಅಪ್ಪಾಜಿ। ನನ್ನಣ್ಣ ತಮ್ಮದೀರು ಬಾಳ ದುಷ್ಟರಲ್ಲ ಗುರುವೆ। ಅಡೋಗ ಉಡೋಗ ಅಟ್ಟಿಯಿಲ್ಲಾ ನೆಂಟ್ರು। ಕೆಟ್ಟಾಗ ಹೆತ್ತೋರ ಹಟ್ಟಿಗೋಗಿ ಹೊರೆಯಾಗ್ಲಾರೆ ಬುದ್ಧಿ। ನನ್ನತ್ತೆಗೆ ಕಾಣಿಸಿದ ಗತೀನೇ ಕಾಣ್ಲೆ ನನ್ನಪ್ಪಾಜಿ। ಐಸ್ವರ್ಯವಂತರ ಮನೆಗೆ ಲಗ್ನವಾಗಿದ್ದಿ। ಬಡುಸ್ತಾನ ಬಂದಾಗ ಬ್ಯಾರೆವರಟ್ಟಿ ಬಾಗ್ಲು ತುಳೀನಾರಿ। ಪರಪಂಚದಲ್ಲಿ ಅಪಕೀರ್ತಿ ಹೊತ್ತು ತೆಗೊಂಡು।

ನಮ್ಮಪ್ಪನ ಮನೆಗೋಗ್ಲಾರಿ ಸ್ವಾಮಿ। ಏಳೊರ್ಸದಲ್ಲಿ ಎತ್ತಿ ಮಾಲೆ ಹಾಕ್ದಾಗ್ಲಿಂದ। ನನ್ನ ಗಂಡನ ಮನೆಯಿಂದ ತಪುರ್‍ಗ್ಹೋದವಳಲ್ಲ। ಈಗ್ಮಾತ್ರ। ನಾನು ಹೋಗ್ಲಾರಿ ಗುರುವೆ। ನನ್ನ ನಿಮ್ಮ ಪಾದಕ್ಕೆ ಕರ್ಕೊಳ್ಳಿ।[೮]

ನೋಡಿ ನಮ್ಮ ಸಿವನಾ।

ಸರಣು ಸರಣು ಗುರುದೇವರಿಗೆ।
ಮಂಗಳಾರತಿ ಮಾದೇವರಿಗೆ।
ಸರಣು ಸರಣು ಗುರುದೇವರಿಗೆ
ಸರಣಾರ್ತಿ ಉತ್ತುರ ದೇಶದ ಅಯ್ಯನಿಗೆ।
ಅಯ್ಯಾ ದೂಪದೀಪ ದ್ಯಾವುರಿಗೆ
ಮಂಗಳಾರತಿ ಮಾದೇವುರಿಗೆ।
ಸರಣು ಸರಣು ಕತ್ತಲು ರಾಜ್ಯದ ದ್ಯಾವುರಿಗೆ।
ಸರಣು ಸರಣು ಗುರು ದ್ಯಾವುರಿಗೆ।
ಅಯ್ಯಾ ದೂಪ ದೀಪ ದ್ಯಾವುರಿಗೆ।
ಮಂಗಳಾರತಿ ಮಾದೇವುರಿಗೆ।
ಸರಣು ಸರಣು ಆಲಂಬಾಡಿ ಬಸಪ್ಪನಿಗೆ
ದೂಪದೀಪ ದ್ಯಾವುರಿಗೆ
ಕಾರಯ್ಯ ಬಿಲ್ಲಯ್ಯ ದೇವರಿಗೆ।
ಸರಣು ಸರಣು ಗುರು ದ್ಯಾವುರಿಗೆ।
ಮಂಗಳಾರತಿ ಮಾದೇವರಿಗೆ।[೯]

## ಟಿಪ್ಪಣಿಗಳು

೧. ಕಂಸಾಳೆ ಸಾಹಿತ್ಯ ೧ನ್ನು ಪ್ರಮುಖವಾಗಿಟ್ಟುಕೊಂಡು ಈ ಸಾಲನ್ನು ಸಂಪಾದಿಸಲಾಗಿದೆ.

೨. ಕಂಸಾಳೆ ೫ರಲ್ಲಿ ಮಾದೇಶ್ವರರು ಎಳ್ಳಿನ ಭಿಕ್ಷೆಗೆ ಬ್ಯಾಡರ ಕನ್ನಯ್ಯನಿಗೆ ಹೇಳ್ತಾರೆ. ಕಂಸಾಳೆ ೧ರಲ್ಲಿ ಕಾರಯ್ಯನಿಗೆ ಹೇಳ್ತಾರೆ. ಬೇವಿನ ಕಾಳಿ ಕೊಟಾರಕ್ಕೆ ಮಾಯದ ಬೂದಿ ಹಾಕಿ ಹಾಳು ಗೆಡವಿದ ಮಾದೇಶ್ವರ.

೩. ಕಂಸಾಳೆ ೩ರಲ್ಲಿ ಬೇವಿನ ಕಾಳಿಯನ್ನು ಮಾಯ ಮಾಡಿಬಿಡ್ತಾರೆ ಮಾದೇಶ್ವರರು.

೪. ಕಂಸಾಳೆ ೭ರಲ್ಲಿ ಎಲ್ಲಾ ಹಾಳಾಗಲಿ ಎಂದು ಶಾಪ ಕೊಡುತ್ತಾರೆ.

೫. ಬೇವಿನ ಕಾಳಿ ಕೊಳ್ಳೇಗಾಲದ ದೇವಾಂಗ ಶೆಟ್ಟರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದಳೆಂದು ಕಂಸಾಳೆ ೪ರಲ್ಲಿ ಬರುತ್ತದೆ. ಕಂ.ಸಾ.೯ರಲ್ಲಿಯ ಕೌದಳ್ಳಿ ಪೇಟೆಯ ಕೋಮಟ ಶೆಟ್ಟರ ಮನೆಯಲ್ಲಿ ಕೆಲಸ ಮಾಡಿ ಕೊಂಡಿರುತ್ತಾಳೆ.

೬. ಕರಿಕಲ್ಲು ಬಂಡೆ ಆದಿಕಂಡು ಬೇವಿನಕಾಳಿ ಸಾಯುತ್ತಾಳೆ ಕಂಸಾಳೆ ೪ರಲ್ಲಿ.

೭. ಬೀರೇಗೌಡನ ಮಗಳು ಬೇವಿನಕಾಳಿ (ಕಂ.ಸಾ. ೯ರಲ್ಲಿ).

೮. (ಕಂ.ಸಾ. ೯ರಲ್ಲಿ) ಬೇವಿನಕಾಳಿ ಮನೆ ಆಳು ಮಲ್ಲಣ್ಣನ ಹೆಂಡತಿ ನಿಂಗಮ್ಮ ಎಂದು ಬರುತ್ತದೆ.

೯. ಕಂಸಾಳೆ ೨ರಲ್ಲಿ ಮಾದೇಶ್ವರರು ಮಾಯದ ವಿಭೂತಿಯಿಂದ ಬೇವಿನಪಟ್ಟಿ ಎಲ್ಲೆಕಟ್ಟೆನೆಲ್ಲಾ ದಗದಗನೆ ಉರಿವಂತೆ ಮಾಡಿ ಬೂದಿ ಮಾಡುತ್ತಾರೆ.

೧೦. ಕಂಸಾಳೆ ೨ರಲ್ಲಿ ಕೊಳಗ, ಕಂಸಾಳೆ ೩ರಲ್ಲಿ ಮಾನ ಎಳ್ಳನ್ನು ಮಾದೇಶ್ವರರು ದಾನ ಕೇಳ್ತಾರೆ.

೧೧. ಕಂಸಾಳೆ ಸಾಹಿತ್ಯ ೪ರಲ್ಲಿ ಬೇವಿನ ಕಾಳಿ ಮೇಲೆ ಕರಿಕಲ್ಲು ಬಂಡೆ ಸಿಕ್ಕಿ ಪ್ರಾಣ ಹೋಗುತ್ತೆ. ಇಲ್ಲಿ ಹನ್ನೆರಡು ಸೇರಿನಿಂದ ಎಳ್ಳಿನ ಭಿಕ್ಷೆ ಆರಂಭವಾಗುತ್ತದೆ.

೧೨. ಕಂಸಾಳೆ ೩ ಹನ್ನೆರಡು ಮಾನದಿಂದ ಆರಂಭ ಎಳ್ಳಿನ ಭಿಕ್ಷೆ. ಮಾದೇಶ್ವರ ಬೇಳ್ಕೆ ಬೂದಿ ಎರಚಿ ಬೇವಿನ ಕಾಳಿಯನ್ನು ಮಾಯ ಮಾಡಿ ಬಿಡುತ್ತಾರೆ.

೧೩. ಕಂಸಾಳೆ ೬-೩ ಕೊಳಗದಿಂದ ಭಿಕ್ಷೆ ಆರಂಭವಾಗುತ್ತದೆ. ಹತ್ತು ಬಳ್ಳ, ಮೂರು ಪಡಿ...... ಹೀಗೆ ಎಲ್ಲಾ ಹಾಳಾಗಿ ಹೋಗಲಿ ಅಂತ ಶಾಪ ಕೊಡುತ್ತಾನೆ ಮಾದೇವ.

೧೪. ೮ನೇ ಕಂಸಾಳೆ. ಮಾನ ಎಳ್ಳುದಾನ ಕೇಳ್ತಾರೆ ಬೇವಿನ ಕಾಳಿಯನ್ನು ಗೋಗಲ್ಲು ಮಾಡಿ ನಿಲ್ಲಿಸುತ್ತಾನೆ ಮಾದೇಶ್ವರ.

## ೫. ಇಕ್ಕೇರಿ ದೇವಮ್ಮ

ಅಯ್ಯ ಬಾ ಮಾದೇವ ಬಾ
ಗಿರಿಯೊಳು ಮಾದೇವ ಲಿಂಗ ಬಾ
ಮೂಡಲು ಮಲೆಯ ಮಾದೇವೋ।।
ಅಯ್ಯ ಬಾ ಮಾದಯ್ಯ ಬಾ
ಗಿರಿಯೊಳು ಮಾದೇವ ಲಿಂಗ ಬಾ।।
ಮೈಯೆಲ್ಲಾ ಸಿರಿ ಗಂದಾವೋ।
ಕಾಡು ಮಲ್ಲಿಗೆ ತಂದೀಯೋ ।। ಗಿರಿಯೊಳು ।।

ಇಕ್ಕೇರಿ ದೇವಿ ಎಲ್ಲಿ ಉಳಿದಿರುವೆ
ಜಾತಿಯಲ್ಲಿ ಕೀಳು ಭಕ್ತರೆಲ್ಲರು
ಎತ್ತು ಕಟ್ಟಿದ ಗೂಟ।।
ಎಮ್ಮೆ ಕಟ್ಟಿದ್ದು ಬೆಳ್ಳಿ ಗೂಟ।
ಏಳು ಕೊಪ್ಪರಿಗೆ ದ್ರವ್ಯವಂತೆ।
ದಾಸೋಹ ದಾನ ಮಾಡೋರೆಲ್ಲಾ।
ಜೋಗಿ ಬಿಕ್ಷ ನೀಡುವಳಲ್ಲಾ।
ಇಕ್ಕೇರಿ ದೇವಿ ಎಲ್ಲುಳಿದಿರುವೆ।
ಗಿರಿಯಲ್ಲಿ ಸಂಪತ್ತೆಲ್ಲವು।
ಬದುಕಿದಂತೆ ಇಕ್ಕೇರಿ ದೇವಿ।
ಏಳು ಜನ ಗಂಡು ಮಕ್ಕಳು।
ಅಲ್ಲಿ ನಿಜಾಂಸವ ನೋಡಬೇಕೆಂದು
ಮುಂಗಾಲಲ್ಲಿ ಮುನ್ನೂರು ಜಂಗು।
ಹಿಂಗಾಲಲ್ಲಿ ಇನ್ನೂರು ಜಂಗು।
ಮತ್ತೇನುಗ್ಯಾನ ಮಾಡವನೇ।
ಹಸವನ್ನೇ ಹಿಡಿದವನೇ।
ನೆಲವೊಂದು ತಾನು ಮಾಡವನೇ।
ಬಿಕ್ಷಾದ ಸುದ್ದಿ ಕೇಳವಳಲ್ಲಾ।

ಅಂದ ಚಂದವ ನೋಡಾವಳಲ್ಲ।
ಕೇಳು ಕೇಳಯ್ಯ ಜಂಗಮಯ್ಯ।
ಬಿಕ್ಷಸದ ಸುದ್ದಿ ಆಗಿರಲಿ ಲಿಂಗ ಬಾ।
ಪಗಡೆಯೊಂದನಿ ಆಡವು।
ಕೇಳು ಕೇಳಮ್ಮ ಇಕ್ಕೇರಿ ದೇವಿ।
ನೀ ಪಾಪಕ್ಕೆ ಒಳಗಾಗಮ್ಮ।
ನಾ ಹೆಣ್ಣು ಮಣ್ಣನ್ನು ತೊರಿದೆನಮ್ಮಾ।
ನಾ ನೀರು ನಿದ್ರೆ ತೊರ್ದಿವಿನಮ್ಮಾ।
ಅನ್ನ ಉಂಡು ಆರೇ ದಿವಸ।
ಶಿವಪೂಜೆ ಮಾಡಿ ಮೂರೇದಿವ್ಸ।
ನೀ ಏನ್ನಾರ ದಾನ ನೀಡಮ್ಮಾ ತಾಯಿ।
ಕೇಳು ಕೇಳಯ್ಯ ಜಂಗಮಯ್ಯ।
ಅಟ್ಟುಂಡ ಮಡಿಕೆ ಅಸ್ವಾದ ಮ್ಯಾಲೆ।
ತಿರಗ ಬೆಂಕಿ ಹಚ್ಚುವಳಲ್ಲ।
ತಿರಗ ಅಕ್ಕಿ ಹಾಕವಳಲ್ಲ।
ನಂಜಯ್ಯನ ಒಕ್ಕಲು ನಾನು।
ಚಿನ್ನ ಕೊಟ್ಟರು ಜಂಗಮರಿಲ್ಲ।
ತುಂಬಿದ ಸೋಮವಾರ ಗುರುವೆ।
ಚಿನ್ನ ನಾನು ಮಾಡಿನೋ।
ತುಂಬಿದ ಸೋಮವಾರ ಬಂದ್ರೆ।
ನಿಂಗೆ ಅನ್ನದ ಧರ್ಮ ನೀಡುವೆ ತಾಯಿ।
ತುಂಬಿದ ಸೋಮವಾರ ದಿನ ಗುರುವೇ।
ಬತ್ತೀನೆಂದು ಒಪ್ಪಾವನಲ್ಲಾ।
ಬತ್ತೀನಂದು ಹೇಳಿಬಿಟ್ಟವನು।
ಅಯ್ಯ ಇಕ್ಕೇರಿ ಚಂದ್ರಪಟ್ಟಣಕಿನ್ನು।
ಹಾವಾಡಿಗ ಬಂದವನಲ್ಲಾ।
ಕೇಳು ಕೇಳಯ್ಯ ಹಾವಾಡಿಗ।
ಒಪ್ಪತ್ತಿಗೆ ಕೂಲಿ ಕನಯ್ಯಾ।
ಒಕ್ಕಳ ರಾಗಿ ಕಣಮ್ಮ।
ಒಂದು ರೂಪಾಯಿ ಕೂಲಿ ಕಣಮ್ಮಾ।
ಅಯ್ಯಾ ಒಕ್ಕಳ ರಾಗಿ ಕೊಟ್ಟವಳಲ್ಲ।
ಕೇಳು ಕೇಳಯ್ಯ ಹಾವಾಡಿಗ।

ಅಟ್ಟಕ್ಕೇಣಿ ಹಾಕವಳಲ್ಲ।
ಚಿನ್ನಾದ ಚೊಂಬ ತೆಗೆದಾವಳಲ್ಲ।
ಬೆಳ್ಳಿ ಬಟ್ಟಲ ತೆಗೆದಾವಳಲ್ಲ।
ಏಳು ಬಟ್ಟಲು ಇಸವನ್ನೇ।
ತೆಗೆದವಳಲ್ಲಾ ಇಕ್ಕೇರಿ ದೇವಿ।
ಕೇಳು ಕೇಳಯ್ಯ ಹಾವಾಡಿಗ।
ಊರಿಂದಾಚೆ ಹೋಗಯ್ಯ।
ಒಕ್ಕಳಕ್ಕಿ ಹಾಕವಳೆ।
ಎಳ್ಳಕ್ಕಿಯ ಬೆಲ್ಲ ಹಾಕವಳೆ।
ಏಳು ಕಜ್ಜಾಯ ಸುಟ್ಟವಳೆ ॥

ಕೋಲು ಮಂಡೆಯ ಜಂಗಮ ದೇವರು।
ಕ್ವಾರಣ್ಯಕೆ ದಯ ಮಾಡವರೇ।
ಅಹಾ.... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।[3]

ಹರಹರಾ ಏಕಾಂಗಿ ವಸ್ತು। ಏಳುಮಲೆಯ ಹೆತ್ತಯ್ಯ। ನೀತಿಗೆ ನಿಂಗಪ್ಪ। ಮುಡುಕು ಮುಂಡುಳ್ಳ ಮಾದೇವ। ಕಲಿಕಾಲದ ಮರಿದೇವರು। ಗುಟ್ಟು ಮಲೆಗೆ ಸುಗ್ಗದರಂತ। ಮೆಟ್ಟಿದ ಕಾಳಿಲತಗಲ ತಕ್ಕಂತ। ಮಲೆಯಮಾದೇಶ್ವರ। ಇದೇ ಬೇವಿನಹಟ್ಟಿ ರಾಜ್ಯವನ್ನು ಸುಟ್ಟು। ಭೂಗಂತರ ಮಾಡ್ಬುಟ್ಟು।[3]

ನಮ್ಮಪ್ಪಾಜಿ ಮಾದೇಶ್ವರ ಸಂದೆ। ಹಳೇ ಕಂಬಳಿ ಜೋಳಿಗೆ ಮಾಡಿಕೊಂಡು ಅಳ್ಳಿ ಕಡ್ಡಿ ನಾಗ ಬೆತ್ತ ಮಾಡಿಕೊಂಡು। ನಮ್ಮಪ್ಪಾಜಿ ಎಕ್ಕದ ಕಾಯನ್ನು ಲಿಂಗ ಮಾಡಿಕೊಂಡು। ರುದ್ರಾಕ್ಷಿ ಮಣಿ ತೆಗೆದು ತನ್ನ ಜೋಳಿಗೆ ತುಂಬಾ ಹಾಕ್ಕೊಂಡು।

ನಮ್ಮಪ್ಪಾಜಿ ಮಾದೇಶ್ವರ। ಅವರು ಮೂಡಲ ಮಲೆಗೆ ದೃಷ್ಟಿ ಮಡಗವರೇ। ಮಾದೇವಾ॥[3]

ಆಹಾ ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವ ಚಂದಾವಾ।
ನೋಡಿ ನಮ್ಮ ಸಿವನಾ।[4]

ಮಲೆ ಮಾದಪ್ಪ ಮೂಡಲ ಮಲೆ ಕೈಲಾಸಕ್ಕೆ ಬಂದು ನಿಂತುಕೊಂಡು। ಕೇಳು ಕೇಳಪ್ಪಾ ನನ್ನ ಕಂದ। ಬೇಡರ ಕನ್ನಯ್ಯ ದಿನ ಮಧ್ಯಾಹ್ನ। ಕ್ವಾರಣ್ಯ ಸಾರಿದೆ। ಹೊನ್ನುಣಸೆ ಬೇವಿನ ಕಾಳಮ್ಮ ದಾನವನ್ನು ಕೊಡಲಿಲ್ಲ। ಸುಟ್ಟು ಭೂಗಂತ ಮಾಡಿ ಬಂದಿದ್ದೇನೆ। ಎಂಬುದಾಗಿ ಕಂದನಾದಂತ ಬೇಡರ ಕನ್ನಪ್ಪನ ಜೊತೆಯಲ್ಲಿ ಹೇಳಿದರು.

ನಮ್ಮಪ್ಪಾಜಿ ಮಾದೇಶ್ವರ ಕಾರ್ಲಡಿ ರಂಗನ ಜಾತ್ರೆ ತೀರಿಸಿಕೊಂಡು ಕೈಲಾಸ ಬುಟ್ಟುಬುಟ್ಟು। ಇಕ್ಕೇರಿ ದೇವಮ್ಮನ ಮನೆಗೆ ದೃಷ್ಟಿ ಮಡುಗುವರೇ ಮಾದೇವಾ।।[8]

ಸರಿಕೆ ಸತ್ಯವಂತೆ ಸಂಕಮ್ಮನವರು। ಏನು ಗುರುವೇ ನಮ್ಮಪ್ಪನ ಮನೆ ಮಾಯಕ್ಕಾರ ಮಂದೇವರೇ। ನಿಮ್ಮ ಸಿಸ್ವರಾಗಿ ಮಾಡಿಕೊಂಡು। ಕರಕೊಂಡು ಹೋಗ್ತಾ ಇದ್ದೀರಲ್ಲಾ। ಗುರುವೇ ನನ್ನ ಮಕ್ಕಳಿಗೆ ಆದಾರ ತೋರಿಸಿ ಅಂತವಳೇ ಸಂಕಮ್ಮಾ।

ಅಹಾ ನೋಡಿ ನಮ್ಮ ಸಿವನಾ।
ಮಲೆಯೋ ಮಾಯಕ್ಕಾರ ಬರುವ ಚಂದಾವಾ।
ನೋಡಿ ನಮ್ಮ ಸಿವನಾ।।

ಸಬಾಸ್ ನನ್ನ ಕಂದ। ಆದರೆ ಹೇಳ್ತೀನಿ ಸಾಮಾನ್ಯವಾಗಿ ಕೇಳು ಮಗಳೇ। ನಿನ್ನ ಮಕ್ಕಳಿಗೇ ನಾನು ಸಿಸ್ವರನ್ನು ಮಾಡಿ ಕೊಂಡೆ ಅಂತೇಳಿದೆ। ನಾನೇನು ನಿನ್ನ ಮಕ್ಕಳಿಗೆ ಮೋಸ ಮಾಡೋದಿಲ್ಲ ಕಣಮ್ಮ। ಇದೇ ಪಶ್ಚಿಮ ದಿಕ್ಕಿನಲ್ಲಿ ಇಕ್ಕೇರಿ ದೇವಮ್ಮ ಅಂತೇಳಿ। ಹ್ಞಾಂ ಆದರೆ ಅವಳು ಬಾಳ ಐಸ್ವರ್ಯದಿಂದ ಏಳು ಕೊಪ್ಪರಿಕೆ ದ್ರವ್ಯ ಸಂಪಾದಿಸಿ ಮಡಗವ್ಳೆ। ಬಹಳ ಅಕ್ರಮವಾಗಿ ಮೋಸದಿಂದ। ಅನ್ಯಾಯದಿಂದ ಸಂಪಾದಿಸವಳೆ। ಆ ಏಳು ಕೊಪ್ಪರಿಕೆ ದ್ರವ್ಯವನ್ನೂ। ನನ್ನ ಕಂದ ನಿನ್ನ ಮಕ್ಕಳಿಗೆ ಆಹಾರ ಮಾಡ್ತೀನಿ ಅಂತವರೆ। ಮಾದೇವ।।

ಮಾದೇವ ಬಂದನು ಆನಂದ ತಂದನು
ತಾವರೆ ಹೂವ ಹಿಡಿದು ಸ್ವಾಮಿ ಬಂದನು।।[9]

ತಂದಾನೊ ತಾನ ತಾನಂದನೊ ತಾನ।।

ಮದ್ದಿಕ್ಕುವರ ಮನೆಯಲ್ಲಿ ಅವ್ರ। ಮದ್ದಾನ್ಕೆ ಮುರುದು ಬರಬೇಕು। ಇಸ ಇಕ್ಕಿದವರ ಮನೆಯಲ್ಲಿ ಅವರ ಸಿಸುಗಳ ಕೊಂದು ಬರಬೇಕು। ಹೊಟ್ಟೆ ಕಚ್ಚೋರ ಮನೆಯಲ್ಲಿ ಅವ್ರ। ಚಟ್ಟಕಟ್ಟಿ ಬರಬೇಕು। ಅಂಕಾರ ಪಟ್ಟೋರ ಮನೆಯಲ್ಲಿ ಅವ್ರ। ಬೆಂಕೀಲಿ ಸುಟ್ಟು ಬರಬೇಕು। ಅನ್ಯಾಯ ಮಾಡೋ ಮುಂಡೆ ಮಕ್ಳ। ಇನ್ನಿಲ್ದಂಗೆ ಮಾಡಬೇಕು। ಹಂಗಂತ ಯೋಚನೆ ಮಾಡುತ್ತಾನೆ। ನನ್ಮಾಯಿಕಾರ ಮಾದೇವ।[8]

ಇಕ್ಕೇರಿ ಪಟ್ಟಣದಲ್ಲಿ ಇಕ್ಕೇರಿ ದೇವಮ್ಮ ಅಂದರೆ ಪರಮಾತ್ಮ। ಜಾತಿಯಲ್ಲಿ ಜಂಗಮರು। ನೀತಿಯಲ್ಲಿ ಲಿಂಗವಂತರ ಮಗಳು। ಇಕ್ಕೇರಿ ದೇವಮ್ಮ ಅಂದ್ರೆ ಅಷ್ಟ ಮದ ಅಹಂಕಾರದಲಿ। ಆ ಇಕ್ಕೇರಿ ದೇವಮ್ಮನವರು ಏನು ಕೆಲಸವನ್ನು ಮಾಡ್ತಾರಪ್ಪಾ ಅಂದ್ರೆ। ಗುರುವೇ ಗುರು ತಂದೆಯೆ। ಇಕ್ಕೇರಿ ಪಟ್ಟಣಕ್ಕೆ। ಯಾವ ದಾಸ, ಜೋಗಿ, ಜಂಗಮ। ನೀಲಗಾರರು ಮಂಟೇದಯ್ಯ। ಪಕೀರನೇ ಆಗಲಿ। ಗರುಡ ಗಂದರ್ವರೇ ಆಗಲಿ। ಮಾಟದ ಮಾನವರೇ ಆಗಲಿ। ಇಕ್ಕೇರಿ ಪಟ್ಟಣಕ್ಕೆ ದಾನಕ್ಕೆ ಹೋದುದೇ ಆದ್ರೆ।

ಆ ಇಕ್ಕೇರಿ ದೇವಮ್ಮನವರು। ದಾಸಕ್ಕೆ ಪೋದಂತ ಜಂಗಮರ ಕರೆದು ಯಾವ ರೀತಿಯಾಗಿ ಹೇಳ್ತಾ ಇದ್ದಪ್ಪಾ ಅಂಪ್ರೆ। ಕೇಳು ಕೇಳಪ್ಪಾ ಜಂಗಮಯ್ಯ। ಯಾವ ದಾಸಪ್ಪ ಜೋಗಪ್ಪ ನೀಲಗಾರರು। ಮಂಟದಯ್ಯ ಪಕೀರನೇ ಆಗಲೀ। ನನ್ನ ಇಕ್ಕೇರಿ ಪಟ್ಟಣಕ್ಕೆ ದಾನಕ್ಕೆ ಬಂದ್ರೆ। ನನ್ನ ಮನೆಗೆ ಬಂದು ಪಗಲು ಬಿಸ್ಸವನ್ನು ತೀರಿಸಿ ಓಗ್ತಾ ಇತ್ತು ಕಣಪ್ಪಾ। ಜಂಗಮಯ್ಯ ಎಂದು ಹೇಳಿಬಿಟ್ಟು ಇಕ್ಕೇರಿ ದೇವಮ್ಮನವರು ಅನ್ನದಲಿ ವಿಸ ಬೆರಸಿ ಬಿಟ್ಟು। ಆ ಜಂಗಮರನ್ನೆಲ್ಲಾ ಕೊಂದುಬಿಟ್ಟು ಇಕ್ಕೇರಿ ದೇವಮ್ಮನವರು। ಏಳು ಕೊಪ್ಪರಿಕೆ ದ್ರವ್ಯವನ್ನು ಅರಮನೆಯಲ್ಲಿ ತೂಗಾಕಿದ್ರಂತೆ। ತೂಗಾಕಿರುವಂತ ಕಾಲದಲ್ಲಿ ನಮ್ಮಪ್ಪಾಜಿ ಮಲೆ ಮಾದಪ್ಪ ನೋಡಿಕೊಂಡು। ಅವರು ಬೇಡರ ಕನ್ನಯ್ಯನನ್ನು ಕರೆದವರೆ। ಮೂಡಲ ಮಲೆಯ ಮಾದೇವಾ।।

ಅಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗಂಗೆ।
ಯಾರು ಬಲ್ಲರು ಮೈಮೆಗಳ ಮಾದಪ್ಪ ತೋರಿಸಯ್ಯ।
ನಿಜರೂಪಗಳ ನಿನ್ನ ಪಾದ ನಂಬಿದ ಜನಕೆ ಹೊನ್ನ ಮಳೆ ಕರೆದು
ಕ್ವಾರಣ್ಯ ನೀಡಮ್ಮ ಮಾದೇವಲಿಂಗನಿಗೆ।।[5]

ಇಕ್ಕೇರಿ ದೇವಮ್ಮನ ಅಟ್ಟ ಅಂದರೆ ಸಾಮಾನ್ಯವಲ್ಲ। ಭಗವಂತ ಏಳು ಸುತ್ತಿನ ಕಳ್ಳಿ ಬೇಲಿ। ಏಳು ಸುತ್ತು ಮುಳ್ಳಿನ ಬೇಲಿ। ಬಾಗಿಲು ಬಾಗಿಲಿಗೆ ಬಿಲ್ಲರ ಪಾರ।

ಮಾದೇಶ್ವರ ತಂದೆ ಉಕ್ಕಿನ ಕಾಸ ಹೆಗಲ ಮ್ಯಾಲೆ ಹೊತ್ತು ಕೊಂಡು। ಬಲದ ಕಾಲಿಗೆ ಗಗ್ಗರ ಕಟ್ಟಿದ್ದಾನೆ। ಮಂಡಿ ತುಂಬಾ ಜಂಗು ಕಟ್ಟಿದ್ದಾನೆ.। ಎಳಗಾವಿ ಎಳೆದಿದ್ದಾನೆ। ಸುಳಿಗಾವಿ ಮುಸುಕಿಟ್ಟುಕೊಂಡು। ನಮ್ಮಪ್ಪಾಜಿ ಮಾದೇಶ್ವರ ತಂದೆ ಇಕ್ಕೇರಿ ದೇವಮ್ಮನ ಮನೆಗೆ ಭಿಕ್ಷಕು ಬರುತವರೇ ಮಾದೇವಾ।।

ಅಹಾ...... ನೋಡಿ ನಮ್ಮ ಸಿವನಾ।

ಹರಹರಾ ಸಿವ ಸಿವಾ। ಇಕ್ಕೇರಿ ದೇವಮ್ಮನ ಮನೆಯ ಹಿಂಬಾಗಿಲಲ್ಲಿ ನಿಂತುಕೊಂಡು। ಪಾದ ತೊಳೆವಂತ ಪಚ್ಚೆಕಲ್ಲಿನ ಮ್ಯಾಲೆ ಮೂರ್ತ ಮಾಡಿಕೊಂಡು। ಮಾದೇಸ್ವರ ತಂದೆ ತುಂಬಿದ ಸೋಮವಾರ। ಸೂರ್ಯ ಹುಟ್ಟುವ ಹೊತ್ತಿನಲ್ಲಿ ಸಿವಸಿವಾ ಎಂಬುದಾಗಿ ಹೇಳಿಬಿಟ್ಟ। ನಮ್ಮಪ್ಪಾಜಿ ಮಾದೇಶ್ವರ ತಂದೆ। ಕಂಚಿನ ಕಂಸಾಳೆ ನಾದ ಮಾಡಿಬಿಟ್ಟು। ಅವರು ಭಿಕ್ಷೆ ಸಾರವರೇ ಮಾದೇವಾ। ಹರಹರಾ ಹರನ ಭಿಕ್ಷ। ಗುರುದೇವರ ಕ್ವಾರಣ್ಯ ಬಿಕ್ಷಾ। ತಾಯಿ ಉತ್ತರಾಜಮ್ಮನ ಬಿಕ್ಷಾ। ತಂದೆ ಸಿವದಾಸಪ್ಪನ ಬಿಕ್ಷಾ। ಕುಂತೂರು ಮಠದ ಪ್ರಭುಲಿಂಗಯ್ಯನವರ ಬಿಕ್ಷಾ। ಅವರು ಪಂಚೇಳು ಅಕ್ಷರ ಸಾರವರೇ ಮಾದೇವಾ।[6]

ಆದರೆ ಕೆಟ್ಟ ಮುಂಡೆ ಇಕ್ಕೇರಿ ದೇವಮ್ಮ। ಅರಮನೆಯಿಂದ ಈಚೆ ಓಡಿ ಬಂದು ಬಗ್ಗಿ ನೋಡವಳೆ। ಇಕ್ಕೇರಿಯಾ ದೇವಮ್ಮಾ।

ಆಹಾ..... ಎಲ್ಲಿದ್ದೀಯಪ್ಪಾ ಮಾದೇವ। ಎಲ್ಲರ ಮನವ ನೋಡೀಯಾ
ಆಹಾ..... ಮನವ ನೋಡಿ ದೃಢವ ಚೆಲ್ಲೋ। ದುಂಡುಳ್ಳ ಮಾದೇವರೇ
ಕ್ಷಾರಣ್ಣ ನೀಡಮ್ಮಾ ಮಾದೇವ ಲಿಂಗನಿಗೆ॥

ಕ್ಷಾರಣ್ಣ ಸಾರಿದ ಕ್ಷಣವೇ ಸಬ್ದ ಕೇಳ್ಸುಟ್ಟು। ದೇವಮ್ಮ ಓಹೋ ಯಾವನೋ ಈವತ್ತು ಬಸ್ಸುಟ್ಟವ್ನೆ। ಆ ಇಕ್ಕೇರಿ ದೇವಮ್ಮನವರು। ಏನು ಸ್ವಾಮಿ ಜಂಗಮರೇ। ಈವತ್ತು ನಮ್ಮ ಮನೆಯಲ್ಲಿ। ಬಿನ್ನ ಮಾಡಿಕೊಂಡೋಗಬೇಕು ಅಂತೇಳಿ। ಆವಾಗಲೀಗ ಆ ಜಂಗಮರನ್ನು। ಅಲ್ಲಿ ನೀವು ಚಾವಡಿ ಒಳಗೆ ಇರಬೇಕು। ನಾನು ಊಟದ ವ್ಯಾಳೆಗೆ ಸರಿಯಾಗಿ। ಮಕ್ಕಳನ್ನ ಕಳಿಸ್ತಾ ಇದ್ದೀನಿ। ಬಂದು ನೀವು ಬಿನ್ನ ಮಾಡಿಕೊಂಡು ಹೋಗಬೇಕು ಸ್ವಾಮಿ ಅಂತೇಳಿ। ಆವಾಗಲೀಗ ಯಾರೀತಿ ಅಡಿಗೆ ದುಡುಕುತ್ತಾಳೆ ಅಂದ್ರೆ। ಏಳು ಜನ ಗಂಡು ಮಕ್ಕಳು। ಏಳು ಜನ ಹೆಣ್ಣು ಮಕ್ಕಳು ಅಂತೇ। ಆ ಗಂಡು ಮಕ್ಕಳಿಗೆ ಒಂದು ಗೋಣಿ ಚೀಲಕೊಟ್ಟು। ಕೈನಲ್ಲಿ ಒಂದು ದೊಣ್ಣೆ ಕೊಟ್ಟು। ನಾಗರ ಹಾವು ಬಡಿಕೊಂಡು ಬರಬೇಕು ಅಂತೇಳಿ। ಆವಾಗಲೀಗ ದೇವಮ್ಮ ಆ ಗಂಡು ಮಕ್ಕಳ ಕಳುಗವಳೇ। ದೇವರಾ॥

ಆಹಾ ನೋಡಿ ನಮ್ಮ ಸಿವನಾ।
ಮಲೆಯೋ ಮಹದೇವ ಬರುವಾ ಚಂದಾವ।
ನೋಡಿ ನಮ್ಮ ಸಿವನಾ॥

ಗಂಡು ಮಕ್ಕಳನ್ನ ಹಾವು ಬಡಿದುಕೊಂಡು ಬನ್ನಿ ಅಂತ ಅವರ ಅಲ್ಲಿಗೆ ಕಳಿಸಿಬಿಟ್ಟು। ಹೆಣ್ಣು ಮಕ್ಕಳಿಗೆಲ್ಲಾ ಕೋಡಗಳ್ಳಿ ಹಾಲು ಕರಕೊಂಡು ಬರಬೇಕು ಅಂತ। ಹೆಣ್ಣು ಮಕ್ಕಳನ್ನ ಆ ಕಡೆ ಕಳಿಸವಳೆ। ನಾಗರ ಹಾವು ತರಿಸಿ। ಆಗಲೇ ಅವುಗಳ ಇಸಾನೆಲ್ಲಾ ತೆಗೆದು ಕೋಲಗಳ್ಳಿ ಹಾಲು ಕರೆಸಿಕೊಂಡು ಬಂದು। ಆವಾಗಲೀಗ ಮೂರು ಮಾನ ಅಕ್ಕಿ ಹಾಕಿ। ಆ ಇಸವನ್ನು ಅದಕ್ಕೆ ಬೆರಸಿ। ಅಲ್ಲಿ ಇಸದ ಕಜ್ಜಾಯ ತಯಾರು ಮಾಡವಳೇ ॥ದೇವಮ್ಮಾ॥

ಆಹಾ..... ನೋಡಿ ನಮ್ಮ ಸಿವನಾ।
ಮಲೆಯೋ ಹುಲಿವಾಹನ ಬರುವ ಚಂದಾವಾ।
ಆಹಾ ನೋಡಿ ನಮ್ಮ ಸಿವನ॥

ಹನ್ನೆರಡು ಗಂಟೆ ಆಯಿತು। ಮುಂಡೆ ಮಗಳ ಕೊಬ್ಬು ಕರಗಿಸಬೇಕು ಅಂತೇಳಿ ನಮ್ಮಾಜಿ ಏಕಾಂಗಿ ವಸ್ತು ಮನೆ ಬಾಗಿಲಿಗೆ ಬಂದು ನಿಂತು। ಕ್ಷಾರಣ್ಣ ಸಾರವರೆ। ದೇವಮ್ಮ ತಕ್ಷಣ ಗುಡುಗುಡನೆ ಓಡಿ ಬಂದ್ಲಂತೆ। ಅಯ್ಯಯ್ಯೋ ನಿಮ್ಮನ್ನೇ ಕಾಯ್ಕಂಡಿದ್ದಿ। ಬನ್ನಿ ಸ್ವಾಮಿ। ಪಾದ ತೊಳೆದು। ನಡುಮನೆ ಒಳಗೆ ಮಂದಲಿಗೆ ಹಾಕಿ ಮಂದಲಿಗೆ ಮೇಲೆ ಕೂಡಿಸಿದಳಂತೆ। ಆವಾಗಲೀಗ ಬಾಳೆ ಎಲೆ ತಕ್ಕಂಡು ಬಂದು ಮುಂದಿಟ್ಟು ಬುಟ್ಟು ಅಲ್ಲೇ ವಿಸದ ಕಜ್ಜಾಯ ಬಡಿಸವಳೆ। ದೇವಮ್ಮ॥

ಆಹಾ..... ನೋಡಿ ನಮ್ಮ ಸಿವನಾ।
ಮಲೆಯೋ ಮಹದೇವ ಬರುವ ಚಂದಾವಾ।
ಕಾಡಿ ಬೇಡಿ ಸಿವನಾ॥

ಕಜ್ಜಾಯ ಬಡಿಸಿಬಿಟ್ಟು। ಇದು ಮೊಸರು ಸ್ವಾಮಿ ಅಂತೇಳಿ। ಕೋಲುಗಳ್ಳಿ ಹಾಲು ತಂದು ಮುಂದ ಮಡಗಿದ್ದಂತೆ। ನಮ್ಮಪ್ಪಾಜಿ ಹುಸಿ ನಗುತ್ತಾ। ಇರಲಿ ಮುಂಡೆ ನಿನ್ನ ಅಹಂಕಾರ ಹಾಳು ಮಾಡಿ। ನಿನ್ನ ಮೋಸಕ್ಕೆ ತಕ್ಕಂತೆ ನಾನೂ ಆಡತೀನಿ। ನೀನು ಯಾವ ರೀತಿ ಮಾಡ್ತಾ ಇದ್ದೀಯ। ಅದೇ ರೀತಿ ನಿನ್ನ ಹಾಳುಪಟ ದೂಳಪಟ ಮಾಡ್ತೀನಿ ಅಂತೇಳಿ। ಅಲ್ಲೇ ಇಸದ ಕಜ್ಜಾಯ ತಿಂತ ಕೂತವರೇ।। ಮಾದೇವ ।।[6]

ಆಹಾ ಜಾಲಾರಗುಡ್ಡೆ ಜಾಣ ಮಾದಪ್ಪ ಧ್ಯಾನಿಸುತ್ತಾನೆ
ಆಹಾ ಎಪ್ಪಾರದೊಳಗೆ ಒಳಗೆ ಕಿರೀಟ ಗೆಜ್ಜುಮಲೆ। ಕೋಡುಗಲ್ಲೊಳಗೇ।
ಆಹಾ ಒಕ್ಕಲ ಗಂಟೆ ಉಲಿಯ ಚರ್ಮ ದೊಡ್ಡ ಮಲೆ ಮಾದೇವಗೇ।
ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।।[2]

ಆದರೆ ಗುರುವೆ ಗುರು ತಂದೆ। ಅವರು ಯಾವ ರೀತಿಯಾಗಿ ಕೇಳ್ತಾವರೆ ಅಂದರೆ। ಕೇಳು ಕೇಳಮ್ಮ ನನ್ನ ಕಂದ। ಹೆಣ್ಣು ಮಗಳೆ ಏನಮ್ಮಾ। ನಾನು ಆರು ಆರವಿ ಪಾನ ಮಾಡಿದ್ರೂ। ಹೊಟ್ಟೆ ಉರಿ ನಿಲ್ಲಲಿಲ್ಲವಲ್ಲಾ। ಮಜ್ಜಿಗೇನಾದ್ರೂ ಇದ್ರೆ ಕೊಡು ಅಂದು। ಆದರೆ ಪರಮಾತ್ಮ ಸುಣ್ಣದ ತಿಳಿ, ಇದೇ ಕಡೆದ ಮಜ್ಜಿಗೆ ಎಂಬುದಾಗಿ। ಮಲೆ ಮಾದೇಸ್ವರನ ಮುಂದಕ್ಕೆ ತಂದು ಮಡಗವಳೆ। ನಮ್ಮಪ್ಪಾಜಿ ಮಲೆ ಮಾದಪ್ಪನವರು। ಮೂರು ಆರವಿ ಸುಣ್ಣದ ತಿಳಿ ನೀರನ್ನು ಕುಡಿದು ಬಿಟ್ಟು। ಪರಂಜ್ಯೋತಿಯಾಗಿ ಕುಳಿತುಕೊಂಡು। ಪರಂಜ್ಯೋತಿಯಾಗಿ ಕುಳಿತುಕೊಂಡು। ನಮ್ಮಪ್ಪಾಜಿ ಮಲೆ ಮಾದಪ್ಪ। ಯಾವ ರೀತಿಯಾಗಿ ಯೋಚ್ನೆ ಮಾಡ್ತಾವ್ನೆ ಅಂದ್ರೆ। ಕೇಳು ಕೇಳು ಮುಂಡೆ ಮಗಳೇ। ಇಕ್ಕೇರಿ ದೇವಮ್ಮ ನಿನ್ನ ನಾಲಿಗೆ ಕೆಚ್ಚು ಮುರಿದು ಒಕ್ಕಲು ಮಾಡಿಕೊಂಡು। ಹೋಗದೇ ಇದ್ದಮೇಲೆ ನನ್ನ ಕಟ್ಟಿದ ಲಿಂಗಕ್ಕೆ ಚಲವಿಲ್ಲ। ಅಂದನಲ್ಲಾ ಮೂಡಲ ಮಲೆಯಾ। ಮಾದೇವಾ।।

ಆಹಾ ಕ್ವಾರಣ್ಯ ನೀಡಮ್ಮಾ ಮಾದೇವ ಲಿಂಗನಿಗೇ।
ಕೋಲು ಮಂಡೆ ಜಂಗಮರು ಕ್ವಾರಣ್ಯಕೆ ದಯಮಾಡವರೇ
ಆಹಾ ಕ್ವಾರಣ್ಯ ನೀಡಮ್ಮಾ ಮಾದೇವ ಲಿಂಗನಿಗೆ।।

ಕಾಡುಕೋಳಿ ಕೂಗುವಾಗ।
ಕನ್ನಯ ರಾಗ ಪಾಡುವಾಗ।
ನವಿಲು ಕುಣಿದಾವು।

ಮಾದಪ್ಪ ನಿನ್ನ ಚಜ್ಜೆ ಮೆರೆದಾವು।
ಆಹಾ ಕಾಡಲ್ಲಿದ್ದ ಮಾದಪ್ಪನಿಗೆ ಕಾಡುಜೇನು ಕರೆದಾವು
ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ನಮ್ಮಪ್ಪಾಜಿ ಮಲೆ ಮಾದಪ್ಪ। ಮುತ್ತಿನ ಜೋಳಿಗೆಗೆ ಕೈ ಹಾಕಿ। ಏಳು ಮೊಕದ ಈಬೂತಿ ಎತ್ತಿಕೊಂಡು। ಈಬೂತಿಗೆ ಯಾವ ರೀತಿಯಾಗಿ ಪದ್ಯವನ್ನು ಹಾಡುತಾವರೆ ಅಂದ್ರೆ। ಮಾಯಕ ಈಬೂತಿ। ಮಂತ್ರಕ ಈಬೂತಿ। ದುಷ್ಟ ಸಂಹಾರ ಮಾಡುವಂತ

ಈಬೂತಿ। ಉಪ್ಪರಿಕೆ ತಿಪ್ಪೆ ಮಾಡುವಂತ ಈಬೂತಿ। ಹಿಂಡಗಳಿಗೆ ಗುಂಡಿಗೆ ಮುರಿಯುವಂತ ಈಬೂತಿ। ಅಡ್ಡಂಡವರ ಮನೆ ಹಾಳು ಮಾಡುವ ಈಬೂತಿ। ನಿಂದಿಸಿದವರ ಮನೆ ನಿರ್ಬಯಲು ಮಾಡುವ ಈಬೂತಿ। ಏಳು ಮುಕದ ಈಬೂತಿ ಎತ್ಕಂಡು। ನಮ್ಮಪ್ಪಾಜಿ ಮಲೆಮಾದಪ್ಪನವರು। ಇಕ್ಕೇರಿ ದೇವಮ್ಮನ ಅಡಿಗೆ ಮನೆಗೆ ಬಿಟ್ರಂತೆ। ಇಕ್ಕೇರಿ ದೇವಮ್ಮನವರು ಅರಮನೆ ಒಳಗೆ ಚಿನ್ನದ ಬಿಂದಿಗೆ। ರನ್ನದ ಬಿಂದಿಗೆ ಒಳಗೆ। ಯಾವಾಗ ಮಾಯದ ಈಭೂತಿ ಬೇಳ್ಕೆಯನ್ನ ಅಡಿಗೆ ಮನೆಗೆ ಒಡೆದಾರೋ। ಆದರೆ ಗುರುವೇ ಗುರು ತಂದೆಯೇ। ಇದ್ದಕ್ಕಿದ್ದಾಗೆ ಅವೆಲ್ಲಾ ಮಾಯವಾಗಿತ್ತು। ಮಾಯವಾಗುವಂತ ವೇಳೆ ನೋಡ್ಕಂಡು। ನಮ್ಮಪ್ಪಾಜಿ ಮಲೆ ಮಾದಪ್ಪನವರು। ಕೇಳು ಕೇಳಮ್ಮ ನನ್ನ ಕಂದ। ಇಕ್ಕೇರಿ ದೇವಮ್ಮ। ಯಾಕೋ ಕಜ್ಜಾಯವನ್ನು ತಿಂದ ಮೇಲೆ। ನನ್ನ ಕತ್ತಲ್ಲೆ ತಗಲ್ಕಂಬುಟ್ಟದೆ, ಸ್ವಲ್ಪ ಕುಡಿಯಕ್ಕೆ ನೀರು ಕೊಡಮ್ಮ। ಎಂಬುದಾಗಿ ಕೇಳವರೆ। ನನ್ನ ಉತ್ತರ ದೇಸದ। ಮಾದೇವಾ।।

> ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
> ಕೆಂಗಾವಿಯ ವೊದ್ದವರೆ ಕೆಂಡಗಣ್ಣಿನ ದಯ ಮಾಡವರೇ।
> ಆಹಾ ದಂಡಿಗೇ ತಕ್ಕಾದ ಗಂಡುಗಲಿ ಮ್ಯಾಲೆ ಜಗ್ಗಿಸಿ
> ನಾಂಟ್ಯವಾಡವರೇ।
> ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೇ।

ಆಗ ನಮ್ಮಪ್ಪಾಜಿ ಮಲೆ ಮಾದಪ್ಪ। ಕುಡಿಯಕ್ಕೆ ನೀರು ಕೇಳುವಾಗ। ಇಕ್ಕೇರಿ ದೇವಮ್ಮನವರು। ಅಂಡೆ ಬಿಂದಿಗೆನೆಲ್ಲಾ ಕೈಯಿಕ್ಕಿ ನೋಡಿದ್ದಾರೆ। ಆದರೆ ಪರಮಾತ್ಮ। ಕುಡಿಯೋಕೆ ಒಂದು ತೊಟ್ಟು ನೀರಿಲ್ಲದೆ ಮಾಯವಾಗಿ ಬಿಟ್ಟದೆ। ಓಡೋಡಿ ಬಂದು ಬುಟ್ಟು। ಇಕ್ಕೇರಿ ದೇವಮ್ಮನವರು। ಕೇಳು ಕೇಳಪ್ಪಾ ಜಂಗಮಯ್ಯನೋರೆ। ನನ್ನ ಅರಮನೆ ಒಳಗೆ। ನೀರು ಇಲ್ದೇ ಇದ್ದ ಕಾಲವೇ ಇರಲಿಲ್ಲ। ಏನಪ್ಪಾ ಇವತ್ತೇನೋ ನನ್ನ ಅರಮನೆ ಒಳಗಡೆ। ಒಂದು ತೊಟ್ಟು ಬೇಳ್ಕೆ ಎತ್ತಿ ಆ ಬೀಗದ ಮೇಲೆ ಮಡಗಿದರಂತೆ।।[೨]

ಆವಾಗ ಲಿಂಗ ಆ ಕೋಲುಗಳ್ಳಿ ಹಾಲನ್ನು ಕುಡಿದು ಬಿಟ್ರಂತೆ। ಏಳು ಜನ ಗಂಡು ಮಕ್ಕಳನ್ನು ಕೂಗಿದ್ಲಂತೆ। ಇನ್ನೊಂದು ಐದು ನಿಮಿಸವೋ ಹತ್ತು ನಿಮಿಸವೋ ಸತ್ತೋಗ್ಬುಡ್ತಾನೆ ಆದ್ರೆ ಇವನ್ನ ತಕ್ಕಂಡೋಗಿ। ನಮ್ಮ ಹಿಂದ್ಗಟ್ಟೆ ಹಿತ್ಲಲ್ಲಿ ಹಳ್ಳ ತೋಡಿ ಸಿದ್ಧ ಮಾಡಕಂಡಿರಿ। ಮೈ ಮೇಲಿರೋ ಆಭರಣನೆಲ್ಲಾ ಕಳ್ಕೋಬೇಕು। ಹೆಣ ಮಾತ್ರ ಹಳ್ಳಕ್ಕೆ ಹಾಕ್ಬುಟ್ಟು ಮುಚ್ಚುಬುಡಿ ಅಂತೇಳಿ। ಅವಳು ಮಕ್ಕಳಿಗೆ ಬುದ್ಧಿ ಹೇಳ್ತಾ ಕುಂತವಳೇ। ದೇವಮ್ಮಾ।

> ಆಹಾ...... ನೋಡಿ ನಮ್ಮ ಸಿವನಾ।
> ಮಲೆಯೋ ಮಾಯಕಾರ ಬರುವ ಚೆಂದಾವಾ।
> ಕಾಡಿ ಬೇಡಿ ಸಿವನಾ।।[೬]

ಇಕ್ಕೇರಿ ದೇವಮ್ಮ ಕೊಟ್ಟಿರುವಂತ ಕಜ್ಜಾಯಗಳನ್ನೆಲ್ಲಾ ತನ್ನ ಮುತ್ತಿನ ಜೋಳಿಗೆಯಲ್ಲಿ ಇಟ್ಟುಕೊಂಡಿದ್ದಾರೆ। ತಾಯಿ ಉತ್ತರಾದೇವಿ ಪಾದ ನೆನೆದು। ತಂದೆ ಪಾದ ನೆನೆದು। ಮಲೆ ಮಾದೇಶ್ವರ ತನ್ನ ಹೊಟ್ಟೆಗೆ ಸಲ್ಲಿಸಿ ಕೊಂಡಿದ್ದಾರೆ। ಕೇಳೆ ಕೇಳೆ ಹೆಣ್ಣು ಮಗಳೇ ನಾನಿನ್ನು ಹೋಗಿ ಬರ್ತಿನಮ್ಮ। ಅಂತ ಹೇಳಿ ನಮ್ಮಪ್ಪಾಜಿ ಮಲೆಮಾದಪ್ಪ।[F]

ಯಾವ ಎಂತ ಜೋಗಿ ಜಂಗಮ ಬಂದ್ರೂ ಕೂಡ। ಗುಡ್ಡಗಳು ಗುರುಗಳು ಬಂದ್ರೂ ಕೂಡ। ಆ ಇಸದ ಕಜ್ಜಾಯ ತಿಂದ ತಕ್ಷಣ ಪ್ರಾಣ ಬಿಡ್ತಾ ಇದ್ದರು। ಇವನ್ಯಾರು ಈ ಜಂಗಮಯ್ಯ ಸಾಯಲೇ ಇಲ್ಲವಲ್ಲಾ ಅಂತೇಳಿ। ಕೈನಟ್ಟಿ ನರುಕೋತಾ ಕುಂತವಳೇ ದೇವಮ್ಮಾ।।

ನೋಡಿ ನಮ್ಮ ಸಿವನಾ।
ಮಲೆಯೋ ಮಹಂತಪ್ಪ ಬರುವ ಚಂದಾವಾ।
ನೋಡಿ ನಮ್ಮ ಸಿವನಾ ।।

ಬಿಕ್ಷ ಈಸಿಕೊಂಡು ಮಟ ಮಂಗಳವಾರ। ಮಧ್ಯಾಹ್ನ ದಿವಸದಲ್ಲಿ ಹೊಸಲು ಬಿಟ್ಟು। ದಾಟುವಂತ ಕಾಲದಲ್ಲಿ। ಕೇಳು ಕೇಳು ಕೆಟ್ಟ ಮುಂಡೆ ಮಗಳೇ। ಐಸ್ವರ್ಯ ನಿನಗೆ ಹಾಳಾಗಲಿ। ನೀನು ಗಂಡ ಕೆಂಡೇಗೌಡನ ಮಾಡಿಕೊಂಡು ಹೊನ್ನಣಸೆ ಬೇವಿನ ಕಾಳಿಯಾಗಿ ಹುಟ್ಟಿ। ಕಾಡಿಂದ ಸೌದೆ ಒತ್ತಿ ತರಬೇಕು। ಬಯಲಿನಲ್ಲಿ ಸೊಪ್ಪು ಕುಯ್ಕಂಡು। ಕೌದಳ್ಳಿ ಕೋಮಟಗೇರಿ ಬೀದಿಲಿ ಬಿಕ್ಷೆ ಮಾಡು ಎಂದವರೇ। ಮಾದೇವಾ।।

ಆಹಾ ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವಾ ಚಂದಾವ।
ನೋಡಿ ನಮ್ಮ ಸಿವನಾ।।

ಏಕಾಂಗಿ ವಸ್ತು ಏಳುಮಲೆ ಜಂಗಮ ಮೂರ್ತಿ। ನೀತಿ ಒಳಗೆ ಲಿಂಗವಂತರು। ಚಂದಕ್ಕೆ ಚಂದ್ರಸೇಕರಮೂರ್ತಿ। ಮುಡಕಿಗೆ ಮುಂಡುಳ್ಳ ಮಾದೇಶ್ವರ। ಇಕ್ಕೇರಿ ದೇವಮ್ಮನಿಗೆ ಸಾಪ ಕೊಟ್ಟುಬಿಟ್ಟು। ಗುರುವೇ ಗುರುಪಾದವೇ ನಿಮ್ಮ ಸಿರಪಾದ ಒತ್ತಲ್ಲಪ್ಪಾ। ಮಾದೇಸ್ವರ ಓದಾರೆಯೋ ಗುರುವೇ।।[*]

ಏಳು ಜನ ಮಕ್ಕಳ ಮೇಲೂ। ಬಾಳ ರುದ್ರಗೋಪ ತಾಳಿದ್ದಂತೆ। ಎಂತ ಹಾಲು ಕರ್ಕೊಂಡು ಬಂದ್ರಿ। ಅಂತ ಹೆಣ್ಣು ಮಕ್ಕಳ ಮೇಲೆ। ಎಂತ ಹಾವು ಬಡಿಕೊಂಡು ಬಂದ್ರಿ ಅಂತ ಗಂಡು ಮಕ್ಕಳ ಮ್ಯಾಲೆ। ಹದಿನಾಲ್ಕು ಮಕ್ಕಳ ಮ್ಯಾಲೆ ಕೀನ ಕಟ್ಟವಾಗಿ ಬೈತಾ ಕುಂತವಳೇ। ದೇವಮ್ಮಾ।।

ಆಹಾ ನೋಡಿ ನಮ್ಮ ಸಿವನಾ
ಮಲೆಯೋ ಮಹದೇವ ಬರುವ ಚಂದವಾ
ನೋಡಿ ನಮ್ಮ ಸಿವನಾ।[F]

ಆಗ ನಮ್ಮಪ್ಪ ಮಲೆ ಮಾದಪ್ಪ ಮುಂದಕ್ಕೆ ಮೂರು ಹೆಜ್ಜೆ ಹಾಕಿ ಬರುವ ಕಾಲದಲ್ಲಿ। ಆವಾಗ ದೇವೇಂದ್ರನ ಪಟ್ಟಣಕ್ಕೆ ದೃಷ್ಟಿ ಮಡಗಿದ್ದಾರೆ। ಹೇಳ್ತೀನಿ ಕೇಳಪ್ಪ ದೇವೇಂದ್ರ ರಾಜ। ಭೂಲೋಕದಲ್ಲಿ ಎಲ್ಲೂ ಮಳೆ ಬರಬಾರದು। ನಾನು ಹೇಳಿದ ಮಾತು ಕೇಳಬೇಕು। ಅಂತ ಹೇಳಿ ನಮ್ಮಪ್ಪ ಮಲೆ ಮಾದಪ್ಪ। ಮಾಯದ ಮಳೆ ಬಳ್ಸಿದ್ದಾರೆ। ಇಕ್ಕೇರಿ ದೇವಮ್ಮನ ಏಳು ಜನ ಮಕ್ಕಳನ್ನು ಕರೆಸಿದ್ದಾರೆ। ನಾಲ್ಕು ಮೂಲೆ ಚವರದೊಳಗೆ ಸೌದೆ ಕಡಕಂಡು ಬಿರ್‍ತಿದ್ದಾರೆ। ಪಾಳು ದೇವಸ್ಥಾನಕ್ಕೆ ಬರುವಂತ ಕಾಲದಲ್ಲಿ। ಆಗ ನಮ್ಮಪ್ಪ ಆದಿ ಮಲೆ ಮಾದಪ್ಪ। ಅವರು ಮತ್ಯಾವ ಗ್ಯಾನ ಮಾಡವರಲ್ಲೊ।।[+]

> ಆಹಾ.... ನೋಡಿ ನಮ್ಮ ಸಿವನಾ।
> ಮಲೆಯೋ ಮಹದೇವ ಬರುವ ಚಂದಾವಾ।
> ನೋಡಿ ನಮ್ಮ ಸಿವನಾ।।

ಆವಾಗಲೀಗ ನಮ್ಮಪ್ಪಾಜಿ ಹೊರ ಹೋಗ್ಬುಟ್ಟು। ಶಿವ ಸಿವಾ ಈ ಕೆಟ್ಟ ಮುಂಡ ಮಗಳ್ಗೆ। ಏನು ಮಾಡಬೇಕು ಅಂತ। ಮೂರು ಮುಕ್ಕಾಲುಗಳಿಗೆ ಯೋಚನೆ ಮಾಡಿದ್ರಂತೆ। ಇಕ್ಕೇರಿ ದೇವಮ್ಮನ ತಂಗಿ ನಿಂಗಮ್ಮ ಅಂತಕ್ಕಂತವಳು। ನಮ್ಮಕ್ಕನ ಮಗಳನ್ನ ನೋಡಿಕೊಂಡು ಬರಬೇಕಂತ। ಬಾಳ ದಿನವಾಯಿತು ಅಂತೇಳಿ। ಅವಳು ಮನೆ ಒಳಗೆ ಕಜ್ಜಾಯ ಸುಡ್ತಾ ಕುಂತಿರುವಳಂತೆ। ನಮ್ಮಕ್ಕನ ಮನೆಗೆ ಹೋಗಬೇಕು ಅಂತೇಳಿ। ನಮ್ಮಪ್ಪಾಜಿ ದಿವ್ಯದೃಷ್ಟಿಯಿಂದ ನೋಡಿದ್ರಂತೆ। ಓಹೋ ಕಜ್ಜಾಯ ಸುಟ್ಕೊಂಡು ಬತ್ತಾವಳೆ। ಇವಳು ಬರೋದ್ರೊಳಗಾಗಿ। ನಾನೊಂದು ಚಾತುರ್ಯ ಮಾಡಬೇಕೆಂತೇಳಿ। ದಮ್ಮಯ್ಯ ಮುಡುಕುತೊರೆ ಮಲ್ಲಿಕಾರ್ಜುನನನ್ನು ಕರೆದ್ರಂತೆ। ಪಟ್ಟದ ರಂಗಸ್ವಾಮಿ ಕರೆದ್ರು। ಏನು ಸ್ವಾಮಿ ಅಂತ ಬಂದ್ರು। ಅವರು ಏನಪ್ಪಾ ಕೇಳು ಬಾವಯ್ಯ ರಂಗಸ್ವಾಮಿ। ನಿನಗೆ ಬಂದ ಕಸ್ಟ ನನಗೆ। ನನಗೆ ಬಂದ ಕಸ್ಟ ನಿನಗೆ। ಇನ್ನು ನಿಮಗಾದ್ರೂ ಕೇಳ ಸ್ವಾಮಿ। ಮುಡುಕುತೊರ ಮಲ್ಲಣ್ಣ। ಈವಾಗ ನಾನು ಹೇಳಿದಂತೆ। ನೀವು ಮಾಡಬೇಕು ಅಂದ್ರಂತೆ। ಆಗಲಿ ಸ್ವಾಮಿ ಏನು ಮಾಡಬೇಕು?। ಇಲ್ಲಿ ಕಳ್ಳರ ಯಾಸ ತಾಳಬೇಕು ಅಂದವರೇ ಮಾದೇವಾ।

> ಆಹಾ..... ನೋಡಿ ನಮ್ಮ ಸಿವನಾ
> ಮಲೆಯೋ ಮಾಯಕಾರ ಬರುವ ಚಂದವಾ
> ಕಾಡಿ ಬೇಡಿ ಸಿವನಾ।

ಯಾಕೆ ಸ್ವಾಮಿ ಅಂದ್ರಂತೆ। ನಾವು ಆಗಿಲ್ಲ ಈಗಿಲ್ಲ ಈವಾಗ ಕಳ್ಳರಾಗವಾ ಸ್ವಾಮಿ ಅಂದ್ರಂತೆ। ಕೊಳ್ರಪ್ಪಾ ನಿಮ್ಮನ್ನ ಕಳ್ಳರಾಗಿ ಅಂತ ನಾನೇಳ್ಲಿಲ್ಲ। ನಮ್ಮ ಹಟ ಸಾಧನೆ ಗೆಲ್ಲಬೇಕಾದರೆ ಆಗಬೇಕು। ಅವತಾರ ಎತ್ತಬೇಕು ಅಂದ್ರಂತೆ। ಯಾತಕ್ಕೆ ಸ್ವಾಮಿ। ನೋಡ್ರಪ್ಪಾ ಇಕ್ಕೇರಿ ದೇವಮ್ಮ ಅಂತಕ್ಕಂತವಳು। ಈ ಪ್ರಕಾರವಾಗಿ ಗುಡ್ಡ, ಗುರು, ದಾಸ, ಜೋಗಿ, ಜಂಗಮರಿಗೂ ಸಹಿತವಾಗಿ। ಯಾರೇ ಹೋದರೂ। ಇಸದ ಕಜ್ಜಾಯ ಇಕ್ಕಿ। ಅವಳು ಪ್ರಾಣ ಕೊಲ್ತಾವಳೇ ದೇವಮ್ಮಾ।।

ಆಹಾ.... ನೋಡಿ ನಮ್ಮ ಶಿವನಾ।
ಮಲೆಯೋ ಮಾದಪ್ಪ ಬರುವ ಚೆಂದವಾ।
ಕಾಡಿ ಬೇಡಿ ಶಿವನಾ।।

ಯಾತಕ್ಕಾಗಿ ಅವಳು ಪ್ರಾಣ ಕೊಲ್ತಾ ಅವಳ ಸ್ವಾಮಿ ಕೇಳ್ತಪ್ಪಾ। ಆದರೆ ಅವರ ಪ್ರಾಣ ಕೊಂದ್ಬುಟ್ಟು। ಅವರ ಮೈಮೇಲೆ ಏನು ಆಭರಣ ಇದ್ರೂ ಕೂಡ। ಅವನ್ನ ಕಳಕೊಂಡು। ಹಿಂದ್ಲಟ್ಟಿ ಹಿತ್ತಲೂಳಗೆ। ಗಂಡು ಮಕ್ಕಳ ಕೈಲಿ ಹಳ್ಳ ತೋಡಿಸಿರ್‍ತವ್ಳೆ। ಅವರ ಪ್ರಾಣ ಬಿಟ್ಟ ತಕ್ಷಣವೇ। ಅವರ ಮೈ ಮೇಲಿದ್ದ ಆಭರಣವನ್ನೆಲ್ಲಾ ಕಳ್ಕಂಬುಟ್ಟು। ಆ ಹಣ ತಕ್ಕಂಡೋಗಿ ದವಸ್ ಮಾಡಿಸಿ ಬರ್‍ತಾಳೆ। ಈ ಪ್ರಕಾರವಾಗಿ ಬಾಳ ಐಸ್ವರ್ಯ ಸಂಪಾದಿಸ್ಬುಟ್ಟವಳೇ। ಈಗ ಅವಳ ಅಹಂಕಾರ ಹಾಳು ಮಾಡಿ। ಹಾಳುಪಟ ಧೂಳುಪಟ ಮಾಡಿ। ಅವಳ ಮನೆ ಗುಡಿಸಬೇಕು ಅಂತೇಳಿ। ಆವಾಗಲೀಗ ಇಬ್ಬರಿಗೂ ಹೇಳಿದಂತ ಕಾಲದಲ್ಲಿ। ಮೂರು ಜನ ಮೂರ್ತಿಗಳೂ ಸೇರಿಕೊಂಡು। ತಲೆಗೊಂದು ದೊಣ್ಣೆ ಕೈಲಂತೆ। ಅರಕುಂಡಿ ಚಡ್ಡಿ। ಆದರೆ ಆವಾಗಲೀಗ ಬರೀ ಮೈಲೇ ನಿತ್ಕಂಡು। ತಲೆಗೊಂದು ರುಮಾಲು ಸುತ್ಕೊಂಡು। ಅವರು ದೊಣ್ಣೆ ಹಿಡ್ಕಂಡು ದಾರೀಲಿ ನಿಂತವರೇ। ಮುನಿಗಳು।

ಆಹಾ.... ನೋಡಿ ನಮ್ಮ ಶಿವನಾ।।

ಹಿಂದಾರಿ ಒಳಗೆ। ಆಕಡೆ ಇಬ್ರೂ। ಈ ಕಡೆ ಇಬ್ರೂ। ಈ ಕಡೆ ನಮ್ಮಪ್ಪಾಜಿ ನಿಂತ್ರಂತೆ। ಇಕ್ಕೇರಿ ದೇವಮ್ಮನ ತಂಗಿ ನಿಂಗಮ್ಮ। ಆವಾಗಲೀಗ ಅಕ್ಕನಿಗೆ ಕಜ್ಜಾಯ ಬುತ್ತಿ ಕಟ್ಕೊಂಡು। ತಲೆಮ್ಯಾಲೆ ಮಡಿಕೊಂಡು। ಆವಾಗಲೀಗ ಹಣವೂ ಅಡ್ಡ ಚೀಲಕ್ಕೆ ಹಾಕ್ಕಂಡು। ಅಕ್ಕನ ಮನೆಗೆ ಸಾಗಿ ಬರ್‍ತಾ ಅವಳೆ ನಿಂಗಮ್ಮ।

ಆಹಾ.... ನೋಡಿ ನಮ್ಮ ಶಿವನಾ।

ಆವಾಗಲೀಗ ಹತ್ತಿರ ಬರೋವರೆಗೂ ಸುಮ್ಮನಿದ್ದು। ಈ ಮೂರು ಜನ ಮೂರ್ತಗಳೂ ಸೇರಿಕೊಂಡು। ಹತ್ತಿರಕ್ಕೆ ಬಂದ ತಕ್ಷಣವೇ। ದೊಣ್ಣೆ ಕೈಲಿಡ್ಕಂಡು ಅಲ್ಲೇ ಅಡ್ಡಗಟ್ಟವರೇ ಮುನಿಗಳು।

ಆಹಾ..... ನೋಡಿ ನಮ್ಮ ಶಿವನಾ।

ಆವಾಗಲೀಗ ಲಬಲಬನೆ ಬಾಯಿ ಬಡ್ಕಂಡು। ಏನಪ್ಪಾ ನನ್ನ ತಾವ ಏನಿದ್ದದು ಸ್ವಾಮಿ। ಯಾತಕ್ಕೆ ಹೀಗೆ ಮಾಡ್ತಾ ಇದ್ದರಿ। ನಾನು ನಿಮ್ಮ ಪಾದ ಅಂತೀನಿ ದಮ್ಮಯ್ಯ। ನನ್ನ ಬುಟ್ಬುಡಿ ಅಂತವಳೇ ನಿಂಗಮ್ಮ।

ಆಹಾ..... ನೋಡಿ ನಮ್ಮ ಶಿವನಾ।

ಇದೇನು ತಲೆಮ್ಯಾಲೆ। ಅಯ್ಯೋ ನಮ್ಮಕ್ಕನ ಮಗಳ ನೋಡಿ ಬಾಳ ದಿವಸ-ವಾಗೋಯ್ತು ಸ್ವಾಮಿ। ಅದಕ್ಕೆ ಕಣ್ರಪ್ಪಾ ಈ ಕಜ್ಜಾಯ ಸುಟ್ಟಕೊಂಡು ಹೋಯ್ತಾ ಇವ್ನಿ।

ಎಲ್ಲಿ ಚೀಲ ತಗಿ ಅಂದ್ರಂತೆ। ಚೀಲ ತೆಗೆದ್ರೆ ಅಲ್ಲಿ ಏನಪ್ಪಾ ಹಣಾವೂ ಅಡ್ಡ। ಆರಾಣಿ ಮಾತ್ರ ಇತ್ತಂತೆ। ಕಜ್ಜಾಯದ ಬುತ್ತಿ ಕಿತ್ಕಂಡ್ರು। ತಿರುಗ ನೋಡಬ್ಯಾಡ ಹೋಗು ಅಂದ್ರಂತೆ। ಸಿವ ಸಿವಾ ಗೊಲೊ। ಅಂತ ದುಕ್ಕ ಮಾಡಿಕೊಂಡು। ನಿಂಗಮ್ಮ ಅದು ಹಣ ಅಡ್ಡಾದರೂ। ಚೀಲದಲ್ಲಿದ್ದರೆ ಸಿವನೇ। ಮಕ್ಕಳಿಗೆ ಕಡ್ಲೆ ಪುರಿನಾದ್ರೂ ತಕ್ಕಂಡು ಹೋಯ್ತಾ ಇದ್ದಲ್ಲಾ। ಅದ್ನೂ ಕಿತ್ಕಂಬುಟ್ರು ಅಂತೇಳಿ। ಅವಳು ದುಕ್ಕ ಮಾಡ್ತಾ ಒಯ್ತಿವಳೇ। ನಿಂಗಮ್ಮಾ॥

ಆಹಾ..... ನೋಡಿ ನಮ್ಮ ಸಿವನಾ।

ನಮ್ಮಪ್ಪಾಜಿ ಮುತ್ತಿನ ಜೋಳಿಗೆಗೆ ಕಜ್ಜಾಯದ ಬುತ್ತಿ ಮಡಿಕಂಡ್ರಂತೆ। ಆವಾಗಲೀಗ ನಮ್ಮಪ್ಪಾಜಿ। ಆದರೆ ಮೂರು ಜನ ಮೂರ್ತಿಗಳೂ ಸೇರಿಕೊಂಡು। ಆವಾಗಲೀಗ ನಮ್ಮಪ್ಪಾಜಿ ಏನು ಮಾಡವರೇ। ಮುಂಗಾಲಿಗೆ ಮೂವತ್ತು ಮುನ್ನೂರು ಜಂಗಂತೆ। ಸಿವ ಸಿವಾ ಕನಕಾಂಗಿ। ಆವಾಗಲೀಗ ಮುತ್ತಿನ ಕಿರೀಟ। ಕುಲಾವಿ ಆಭರಣ ಕರಡಿಗೆಯನ್ನು ದರಿಸ್ಕೊಂಡು। ಸಿವಸಿವಾ ರತ್ನದಲ್ಲಿ ವಜ್ರದಲ್ಲಿ, ವೈಡೂರ್ಯದಲ್ಲಿ ರುದ್ರಾಕ್ಷಿ ಸರವನ್ನು ಮಾಡಿಕೊಂಡು। ಕತ್ತಿಗೆ ಹಾಕಿಕೊಂಡು। ಪಟ್ಟದ ರಂಗಸ್ವಾಮಿಗೆ ಏನು ಹೇಳಿದರೆ ಅಂದ್ರೆ। ನಿನ್ನ ಬಿರಿದು ದರಿಸಪ್ಪಾ ಅಂದ್ರಂತೆ। ಆವಾಗಲೀಗ ಪಟ್ಟದ ರಂಗಸ್ವಾಮಿ। ಅವರ ಬಿರುದು ಧರಿಸಿಕೊಂಡು। ಚಿನ್ನದ ಜಾಗಟೆ। ಚಿನ್ನದ ಸಂಕು, ಚಿನ್ನದ ಬೊಗನಾಸಿ। ಅವರು ಬೇಕಾದಂತ ಬಿರುದು ಧರಿಸಿಕೊಂಡು। ಮುದುಕು ತೊರೆ ಮಲ್ಲಣ್ಣ ಜಗದೀಶ್ವರ ಅವರ ಬಿರುದು ದರಿಸಿಕೊಂಡು। ಮೂರು ಜನ ಮೂರ್ತಿಗಳೂ ಸೇರಿಕೊಂಡು। ದೇವಮ್ಮನ ಮನೆಗೆ ಕ್ವಾರಣ್ಯಕ್ಕೆ ವೊಯ್ತವ್ರೇ। ಮುನಿಗಳು।

ಆಹಾ..... ನೋಡಿ ನಮ್ಮ ಸಿವನಾ।

ಮೂರು ಜನ ಮೂರ್ತಿಗಳೂ ಹೋಗಿ ಮನೆ ಬಾಗಿಲಲ್ಲಿ ನಿಂತುಕೊಂಡು। ಯಾರವ್ವಾ ನನ್ನ ಕಂದ ಮನೆ ಒಳಗೆ। ಆವಾಗಲೀಗ ಆದಿಲಿಂಗಯ್ಯನ ಬಿಕ್ಷ। ಜ್ಯೋತಿ ಸಂಕಯ್ಯನ ಬಿಕ್ಷ। ಗುರುವರ್ಮ ಕ್ವಾರಣ್ಯದ ಬಿಕ್ಷ। ನಮ್ಮ ಗುರುವಿನ ಬಿಕ್ಷ। ನೀಡು ಅಂತವರೇ। ಮಾದೇವಾ॥

ಆಹಾ..... ನೋಡಿ ನಮ್ಮ ಸಿವನಾ।

ಯಾವಾಗ ಕ್ವಾರಣ್ಯ ಸಾರಿಬುಟ್ರೋ ಇಕ್ಕೇರಿ ದೇವಮ್ಮ ಈಚೆಗೆ ಬಂದು ಬಗ್ಗಿ ನೋಡಿಬಿಟ್ಟು। ಯಾವಾಗ ಮೂರು ಜನ ಮೂರ್ತಿಗಳೂ ಇದ್ದ ಅವತಾರ ನೋಡ್ಬುಟ್ಳೋ। ಗುಡುಗುಡನೆ ಒಳಕ್ಕೋಗಿ। ಅಲ್ಲಿ ಮೂರ್ಛಾಗಿ ಬಿದ್ದವಳೇ। ದೇವಮ್ಮಾ॥

ಆಹಾ..... ನೋಡಿ ನಮ್ಮ ಸಿವನಾ।

ಆವಾಗ್ಲೀಗ ಮೂರ್ಛೆ ಹೋಗಿ। ತನ್ನ ಮೂರ್ಛೆ ತಾನೇ ತಿಳಿದ ಮ್ಯಾಲೆ ಮೇಲಕ್ಕೆದ್ದು। ಆದರೆ ತಂಗಿ ಹೋಗಿದ್ದಲ್ಲಾ। ಯಾಕಕ್ಕಯ್ಯ। ಆದರೆ ಈ ರೀತಿ ಮೂರ್ಛಾಗಿ ಬಿದ್ದೋಗ್ಬುಟ್ಟೆ।

ಏನಮ್ಮ ಅವರು ಮೂರು ಜನ ನೋಡ್ಬುಟ್ಟು ನನಗೆ ಬಾಳ ಐಶ್ವರ್ಯ ಸಂತೋಸ ಬನ್ಬುಡ್ತು! ನನ್ನ ಕಣ್ಣೇ ಕಾಣದಂಗೆ ಆಗೋಗ್ಬುಡ್ತು ಅಂದ್ಲಂತೆ. ಇದುವರೆಗೂ ಸಂಪಾದಿಸಿರೋದೆಲ್ಲಾ! ಇವರ ಮೂರು ಜನದ ಮೈಮೇಲೆ! ಇರೋ ಅಂತ ಆಭರಣ ವಸ ಪಡಿಸಿಕೊಂಡುಬಿಟ್ರೆ! ನನ್ನ ಏಳೇಳು ಹದಿನಾಲ್ಕು ಜನ ಮಕ್ಕಳು! ಅವರ ಮಕ್ಕಳೂ ಅವರ ಮಕ್ಕಳ ತಲೆಗೂ ಕೂಡ! ತೀರದಂಗೆ ಆಯ್ತದೇ ದೇವಮ್ಮಾ!

ಆಹಾ..... ನೋಡಿ ನಮ್ಮ ಸಿವನಾ!

ಯಾವ ಯಾವ ಕಾಲಕ್ಕೂ ತೀರದಂತ ಆಸ್ತಿ ಆಗೋಗ್ಬುಡ್ತದೆ! ಅಷ್ಟೇ ಈವಾಗ ಸಂಪಾದಿಸಿರುವುದಕ್ಕಿಂತ ಹೆಚ್ಚಾಗಿ ಐಸ್ವರ್ಯ ಸಂಪಾದಿಸಬಹುದು ಅಂತೇಳಿ! ಇವರು ಮೂರು ಜನಾನೂ ಕೊಲ್ಲೋ ದಾರಿ ಮಾಡಬೇಕು ಅಂತೇಳಿ! ದೇವಮ್ಮ ಏನು ಮಾಡ್ತಾಳೆ! ಮೂರು ಜನರ ಪಾದ ತೊಳೆದು ಪಟ್ಟಾಭಿಷೇಕ ಮಾಡಿ ಏನು ಸ್ವಾಮಿ! ಆದರ ನಾನೊಂದು ಸಣ್ಣ ಮಾತು ಹೇಳ್ತೀನಿ! ನನ್ನ ಹರಕೆ ಒಂದದೆ ಸ್ವಾಮಿ! ಅದಕ್ಕೆ ದಯವಿಟ್ಟು ನೀವು ಒಪ್ಪಿಕೊಳ್ಳಬೇಕು ಅಂದ್ಲಂತೆ! ಏನಮ್ಮಾ ನನ್ನ ಕಂದ! ಕೇಳಿ ಸ್ವಾಮಿ! ನನ್ನ ಪದ್ಧತಿ ಏನೆಂದರೆ ಯಾರೇ ಗುಡ್ಡ, ಗುರು, ದಾಸ, ಜೋಗಿ! ಜಂಗಮ ದೇವರು ಬಂದರೂ ಸರಿಯೇ! ನನ್ನ ಮನೆ ಒಳಗೆ ಬಿನ್ನಹ ಮಾಡದೆ, ನಾನು ಕಳುಹಿಸ ತಕ್ಕವಳೇ ಅಲ್ಲ! ಆದರೆ ಇದುವರೆಗೂ ಈವಾಗ! ನಾನು ಯಾವುದೋ ಕಷ್ಟಕ್ಕೆ ಹರಕೆ ಮಾಡಿಕೊಂಡಿದ್ದೆ. ಅದಕ್ಕೆ ನೀವು ಸರಿಯಾಗಿ ಬನ್ಬುಟ್ರಿ ಸ್ವಾಮಿ! ನೀವೀವತ್ತು ತುಂಬಿದ ಸೋಮವಾರ ಬಂದಿದ್ದೀರಿ! ಈ ಹೊತ್ತು ನನ್ನ ಹರಕೆ ತೀರಿಸಿಬಿಡ್ತೀನಿ! ನೀವು ಬಿನ್ನಹಕ್ಕೆ ಬಂದಿದ್ದು ಹೋಗಬೇಕು ಅಂತವಳೇ! ದೇವಮ್ಮಾ!

ಆಹಾ..... ನೋಡಿ ನಮ್ಮ ಸಿವನಾ!

ಸಭಾಸ್ ನನ್ನ ಕಂದ ದೇವಮ್ಮ! ಬರ್ತೀವಿ ಕಣಮ್ಮಾ ಎಷ್ಟು ಗಂಟೆಗೆ ಬರಬೇಕಮ್ಮಾ! ಹನ್ನೆರಡು ಗಂಟೆಗೆ ಸರಿಯಾಗಿ ಬನ್ಬುಡಿ ಸ್ವಾಮಿ! ಅಷ್ಟೊತ್ತಿಗೆಲ್ಲಾ ಸಿದ್ಧಮಾಡಿಸಿ ಬಿಡ್ತೀನಿ ಅಂದ್ಲಂತೆ! ಆಗಲೀ ಅಂತೇಳಿ! ಮೂರು ಜನ ಮೂರ್ತಿಗಳೂ ಅಲ್ಲೇ ಮಾಯವಾಗವರೇ! ಮುನಿಗಾಳು.....!

ಆಹಾ..... ನೋಡಿ ನಮ್ಮ ಸಿವನಾ!

ಮೂರು ಜನ ಮೂರ್ತಿಗಳೂ! ಮಾಯವಾದಂತ ಕಾಲದಲ್ಲಿ! ದೇವಮ್ಮ ಏನು ಮಾಡ್ತವಳೇ! ಏಳು ಜನ ಗಂಡು ಮಕ್ಕಳ ಕೈಲಿ! ಏಳು ಗೋಣಿ ಚೀಲ ಕೊಟ್ಲಂತೆ! ಏಳು ದೊಣ್ಣೆ ಕೊಟ್ಲಂತೆ! ನಿಮಗೆ ಯಾವ ಹಾವು ಸಿಕ್ತದೋ! ಎಲ್ಲಾ ಹಾವಿಗಿಂತ ಏಳ ನಾಗರ ಹಾವು ಮಾತ್ರ! ಕಂಡಿತವಾಗ್ಲೂ ಜಾಸ್ತಿ ತೆಗೊಂಡು ಬರಬೇಕು! ತಲಗೊಂದೊಂದು ಅರಿವಿ ಕೊಟ್ಲಂತೆ! ಏನ್ರಮ್ಮೋ ನೀವು ಮಂಡಗಳ್ಳಿ ಹಾಲು ಯಾವೊತ್ತೂ ತರಬೇಡಿ! ಕೋಲುಗಳ್ಳಿ ಹಾಲು ಕರೆಕೊಂಡು ತುಂಬ ತುಂಬ ತಕ್ಕಂಡು ಬರಬೇಕು ಅಂತೇಳಿ! ಹೆಣ್ಣು ಮಕ್ಕಳಿಗೆ ಹೇಳ್ಬಿಟ್ಟು! ಅವಳು ಬಾಗಲಿಲ್ಲ ಕಾದು ಕೂತವಳೇ! ದೇವಮ್ಮಾ!!

ಆಹಾ..... ನೋಡಿ ನಮ್ಮ ಸಿವನಾ।

ಆವಾಗಲೀಗ ದೇವಮ್ಮ। ಮಕ್ಕಳು ಎಷ್ಪೊತ್ತಿಗೆ ಬಂದಾರೋ ಮಕ್ಕಳು ಅಂತೇಳಿ। ಕಾದು ಕೂತಿದವ್ಳಂತೆ। ಅಷ್ಪೊತ್ತಿಗೇ ನಮ್ಮಪ್ಪಾಜಿ ಇವರಿಗೆ। ಏನು ಮಾಡವ್ನೆ। ಗಂಡು ಮಕ್ಕಳಿಗೆ ಒಂದು ಹಾವು ಕಂಡ್ರೆ, ಒಂಬತ್ತು ಹಾವು ಕಾಣಬೇಕು। ಆ ರೀತಿ ಮಾಡ್ಬುಟ್ರಂತೆ। ಆದರೆ ಇವರು ಬಡಿದು ಬಡಿದು। ಬರೀ ಹಾವಿನ ಮುದ್ದೇನೇ ಹೊತ್ಗಂಡು ಬನ್ಬುಟ್ರಂತೆ। ಆವಾಗಲೀಗ ಹೆಣ್ಣು ಮಕ್ಕಳು ಏಳು ಆರಿವೆ ಕೋಲುಗಳ್ಳಿ ಹಾಲು ತಕ್ಕಂಡು ಬನ್ಬುಟ್ರಂತೆ। ತಕ್ಕಂಡು ಬಂದ ತಕ್ಷಣ। ದೇವಮ್ಮ ಏನ್ಮಾಡ್ತವಳೇ। ಏಳು ಜನ ಗಂಡು ಮಕ್ಕಳಿಗೂ ಅದೇ ಕೆಲಸ ಕೊಟ್ಬು ಬುಟ್ಲು। ಆ ನಾಗರ ಹಾವಿನಲ್ಲಿ ಇಸ ತೆಗೆದು ತುಂಬಬೇಕು ಅಂತೇಳಿ। ಎಲ್ಲಾ ಇಸ ತೆಗೆದು ತುಂಬುಟ್ರು। ಸಿವ ಸಿವಾ ಮೂರು ಮಾನ ಅಕ್ಕಿ ಹಾಕ್ತಾ ಇದ್ದವಳು। ಆರ ಮಾನ ಅಕ್ಕಿ ಹಾಕಿದ್ಲು। ಆವತ್ತಿನ ದಿನ ಯಾಕೆ ಮೂರು ಜನ ಬಂದವ್ರೆ ಅಂತೇಳಿ। ಮೂರು ಜನಕ್ಕೂ ಜಾಸ್ತಿ ಜಾಸ್ತಿ ಕಜ್ಜಾಯ ಕೊಟ್ಬು। ತಿನ್ನಿಸಿ ಸಾಯಿಸಬೇಕು ಅಂತೇಳಿ। ಆವಾಗಲೀಗ ಆರು ಮಾನ ಅಕ್ಕಿ ಹಾಕ್ಬುಟ್ಲು। ಇಷ್ಟು ಇಸ ತುಂಬುಟ್ಲು। ಅಲ್ಲಿ ಇಸದ ಕಜ್ಜಾಯ ತಯಾರು ಮಾಡ್ತಾ ಕೂತವಳೇ। ದೇವಮ್ಮಾ।

ಆಹಾ..... ನೋಡಿ ನಮ್ಮ ಸಿವನಾ।

ಆವಾಗಲೀಗ ಕಜ್ಜಾಯ ತಯಾರು ಮಾಡಿಬಿಟ್ಲು। ಹನ್ನೆರಡು ಗಂಟೆ ಸಮಯಕ್ಕೆ ಸರಿಯಾಗಿ। ಕಾದು ನಿಂತಿರುವಳಂತೆ। ಎಷ್ಟು ಹೊತ್ತಿಗೆ ಬಂದಾರೋ ಇವರು। ಮೂರು ಜನ ಅಂತೇಳಿ। ಆ ವ್ಯಾಳೆಗೆ ಸರಿಯಾಗಿ। ಮೂರು ಜನ ಮೂರ್ತಿಗಳೂ ಅಲ್ಲಿ ಪ್ರತ್ಯಕ್ಷವಾಗಿ ನಿಂತವರೇ। ಮುನಿಗಳೂ।

ಆಹಾ..... ನೋಡಿ ನಮ್ಮ ಸಿವನಾ।

ಪ್ರತ್ಯಕ್ಷವಾಗಿ ನಿಂತುಕೊಂಡು। ಸ್ರೀಮನ್ನಾರಾಯಣ ಡಣಾರ್ ಅಂತ ಜಾಗಟೆ ಒಡೆದ್ರಂತೆ। ಆವಾಗಲೀಗ ನಮ್ಮಪ್ಪಾಜಿ ಚಿನ್ನದ ಕಂಸಾಳೆ ತಕ್ಕೊಂಡು। ಮೂರು ಸಲ ಸಬ್ದ ಮಾಡಿದ್ರಂತೆ। ಅಯ್ಯಯ್ಯೋ ಬನ್ನಿ ಸ್ವಾಮಿ ನಿಮ್ಮನ್ನೆ  ಕಾಯ್ಕಂಡಿದ್ದೆ ಅಂತೇಳಿ ಮೂರು ಜನ ಮೂರ್ತಿಗಳನ್ನು ಒಳಕ್ಕ ಕರ್ಕಂಡೋಗಿ। ಪಾದ ತೊಳದು ಪಟ್ಟಾಭಿಸೇಕ ಮಾಡಿ ಅಲ್ಲೇ ಊಟಕ್ಕೆ ಬಡ್ಸವಳೇ ದೇವಮ್ಮಾ॥

ಆಹಾ..... ನೋಡಿ ನಮ್ಮ ಸಿವನಾ।

ಆವಾಗಲೀಗ ನಮ್ಮಪ್ಪಾಜಿ ಏಕಾಂಗಿವಸ್ತು। ಏಳು ಮಲೆ ಕರತು। ಮದ್ಯದಲ್ಲಿ ಕೂತ್ಕಂಡ್ರಂತೆ। ಆ ಕಡೆ ಜಗದೀಶ್ವರ ಈ ಕಡೆ ಶ್ರೀಮನ್ನಾರಾಯಣ। ಎಡದಲ್ಲಿ ಇವರನ್ನ। ಬಲದಲ್ಲಿ ಅವರನ್ನ ಕೂಡಿಸ್ಕಂಡು। ನಡುಮದ್ಯದಲ್ಲಿ ಮೂರು ಚೋಟುದ್ದ ಮೂರ್ತವಾಗಿ ಕೂತ್ಕಂಬುಟ್ರಂತೆ। ಸಿವ ಸಿವಾ ದೇವಮ್ಮ ಇಸದ ಕಜ್ಜಾಯ ತಂದು ಬಡಿಸಿದ್ಲಂತೆ।

ಒಂದೊಂದು ಮಣ್ಣಿನ ಗಡಿಗೆ ಒಳಗೆ! ಆ ಕೋಲುಗಳ್ಳಿ ಹಾಲು ತುಂಬಿ ಮಡಗಿದ್ರಂತೆ। ಏನಪ್ಪಾ ಆವಾಗಲೀಗ ಪರಮಾತ್ಮ! ಕಜ್ಜಾಯ ನೋಡ್ಬುಟ್ಟು! ಶ್ರೀಮನ್ ನಾರಾಯಣ ತಿಳ್ಕಂಬುಟ್ರಂತೆ! ಏನು ಸ್ವಾಮಿ ಮಾದೇವ! ಏನು ಬಾವಯ್ಯ! ಇದು ತಿಂದುಬುಟ್ರೇ। ನಾವು ನಮ್ಮ ಹೆಂಡ್ತೀರನ್ನ! ಮುಂಡೆ ಮಾಡ್ಕಳ್ಬೇಕಾಯ್ತದಲ್ಲ! ಈ ಕಜ್ಜಾಯ ನನಗೆ ಬೇಡ ಅಂತವರೇ। ನಾರಾಯಣ।।

ಆಹಾ..... ನೋಡಿ ನಮ್ಮ ಶಿವನಾ।

ಆವಾಗಲೀಗ ನಮ್ಮಪ್ಪಾಜಿ! ಕಿಡುಗಣ್ಣ ಮೂರ್ತಿ ಆವರು! ಸಬಾಸ್ ಬಾವಯ್ಯ ಹೇಳ್ತೀನಿ! ಕೇಳಪ್ಪ ಬಾವಯ್ಯ! ನೀವೇ ಆ ಕಜ್ಜಾಯ ಧೈರ್ಯ ಇದ್ದರೆ ತಿನ್ನು! ಇಲ್ದೇಹೋದ್ರೆ ಬ್ಯಾಡ ಅಂತೇಳಿ! ಆ ಇಸದ ಕಜ್ಜಾಯ ತೆಗೆದು ಜೋಳಿಗೆಗೆ ತುಂಬಿಕೊಂಡು! ಆ ದೇವಮ್ಮನ ತಂಗಿ ಹತ್ತಿರ ಕಿತ್ಕಂಡಿದ್ರಲ್ಲಾ! ಕಳ್ಳ ಯಾಸದಲ್ಲಿ! ಆ ಕಜ್ಜಾಯ ಇತ್ತವರೇ ಮಾದೇವಾ।।

ಆಹಾ..... ನೋಡಿ ನಮ್ಮ ಶಿವನಾ।

ಅದೇ ಪ್ರಕಾರವಾಗಿ ಜಗದೀಶ್ವರರು! ಆದರೆ ಕಜ್ಜಾಯ ನೋಡ್ಬಿಟ್ಟು! ಏನು ಸ್ವಾಮಿ ಮಾದೇಶ್ವರ! ಈವಾಗ ಈ ಕಜ್ಜಾಯ ಏನಪ್ಪಾ! ನೀವು ತಿಂತಿರೋ ಇಲ್ವೋ ಅಂದ್ರಂತೆ! ಏನು ಸ್ವಾಮಿ ನನಗೂ ಬೇಡ ಅಂದ್ರಂತೆ! ಅವರ ಇಸದ ಕಜ್ಜಾಯನೂ ಇವರ ಜೋಳಿಗೆ ತಕ್ಕಂಡು! ಆ ತಂಗಿ ತಕ್ಕಂಡು ಬತ್ತಿದ್ದಲ್ಲ! ಕಳ್ಳ ಯಾಸದಲ್ಲಿ ಕಿತ್ಕಂಡ್ರಲ್ಲಾ! ಅದೇ ಒಳ್ಳೆ ಕಜ್ಜಾಯನ. ಜಗದೀಶ್ವರನಿಗೂ ಇಕ್ಕಿದ್ರಂತೆ! ಅವರಿಬ್ರೂ ಒಳ್ಳೆ ಕಜ್ಜಾಯ ಬಡಿಸ್ಬಿಟ್ಟು! ಈ ಇಸದ ಕಜ್ಜಾಯ ಇಬ್ರುರೂ ತೆಗೆದು! ಜೋಳಿಗೆಗೆ ತುಂಬಿಕೊಂಡು! ಆ ಇಸದ ಕಜ್ಜಾಯ! ಕೋಲಗಳ್ಳಿ ಹಾಲು ತಾವು ಮಾಡಿದ್ದ! ಜಗದೀಸ್ವರ ನಮ್ಮಪ್ಪಾಜಿ ಮುಕ್ಕಣ್ಣ ಮಾರ್ತಿಗಳೂ! ಸಿವ ಸಿವಾ ನಟ್ಟ ನಡು ಮಧ್ಯೆ ಕೂತುಕೊಂಡು! ಮೂರು ಜನ ಮೂರ್ತಿಗಳೂ ಅಲ್ಲಿ ಊಟ ಮಾಡ್ತಾ ಕೂತವರೇ! ಮುನಿಗಳೂ!

ಆಹಾ..... ನೋಡಿ ನಮ್ಮ ಶಿವನಾ।

ಆವಾಗಲೀಗ ಮೂರು ಜನ ಮೂರ್ತಿಗಳೂ! ಊಟ ಮಾಡಿಕೊಂಡು ಮೇಲೆದ್ರಂತೆ! ಆಗ ಕೋಲಗಳ್ಳಿ ಹಾಲು ಕುಡಿದುಬುಟ್ಟು! ಒಂದು ಸಲ ಗುಟ್ರ ಹಾಕ್ಕಂಡು ಮೇಲಕ್ಕೆ ಎದ್ರಂತೆ! ಅಯ್ಯಯ್ಯೋ ಸಿವಸಿವಾ ಆವಾಗಲೀಗ! ಐದು ನಿಮಿಷ ನೋಡಿದ್ರಂತೆ! ಹತ್ತು ನಿಮಿಸ ನೋಡಿದ್ರಂತೆ! ಇನ್ನೊಂದು ಗಳಿಗೆ ನೋಡಬೇಕು! ಇನ್ನೊಂದು ಗಳಿಗೆ ನೋಡಬೇಕು ಅಂತೇಳಿ ಕಾಯ್ಕಂಡು ನಿಂತಿರೋಳಂತೆ! ಕೈ ನಟ್ಟಿ ಬಾಯಿ ನಟ್ಟಿ ನರಕುತ್ತಾ ನಿಂತಿರುವಳಂತೆ! ಅವರು ಈಚೆಗೆ ಬತ್ತವರೇ! ಮುನಿಗಳೂ!

ಆಹಾ..... ನೋಡಿ ನಮ್ಮ ಶಿವನಾ।

ಮನೆ ಒಳಗಿಂದ ಈಚೆಗೆ ಬಂದು। ಹಜಾರದಲ್ಲಿ ಮಂದಲಿಗೆ ಹಾಸಿದಳಂತೆ। ಕುಂತ್ಕಳ್ಳಿ ಸ್ವಾಮಿ ತಾಂಬೂಲ ಹಾಕ್ಕೊಳ್ಳಿ। ಅಂತೇಳಿ ತಟ್ಟೆ ಒಳಗೆ ಎಲೆ ಅಡಿಕೆ ತುಂಬಿ ಮಡಗಿದ್ದಂತೆ। ಇವರು ಎಷ್ಟೋತ್ತಾದ್ರೂ ಸಾಯ್ತಾರೆ ಅಂತೇಳಿ ಮೂರು ಜನ ಮುನಿಗಳೂ ಕೂತುಕೊಂಡು। ಶಿವಸಿವಾ ಏನವ್ವಾ ಮಾಯಕ್ಕಾರ ಮರಿದೇವವರು। ದೇವಮ್ಮನ ಕರೆದು। ಏನವ್ವಾ ನನ್ನ ಕಂದ। ನಿನಗೆ ಮಕ್ಕಳು ಎಷ್ಟು ಜನವವ್ವಾ। ಅಯ್ಯಯ್ಯೋ ಸ್ವಾಮಿ ನಮ್ಮ ಬಡಸ್ತನ ಕೇಳಿದ್ರೆ ನೀವೇನಂತಿರೋ। ಏಳು ಜನ ಗಂಡು ಮಕ್ಕಳು ಏಳು ಜನ ಹೆಣ್ಣು ಮಕ್ಕಳು। ನಾನೇನೆಂದರೆ ಗುಡ್ಡ, ಗುರುಗಳು, ಜಂಗಮ, ದಾಸ, ಜೋಗಿ। ಇಂತವರಿಗೆ ಮಾತ್ರ ನಾನು ವಾರಕ್ಕೊಂದು ಸಲವಾದ್ರೂ ಕೂಡ। ಮನೆ ಕೋಣೆ ಸಾರಿಸಿ ಸುದ್ದ ಮಾಡ್ಕೊಂಡು। ಮಿಂದು ಮಡಿ ಉಟ್ಕಂಡು। ಅವರಿಗೆ ಕಜ್ಜಾಯ ತುಪ್ಪ ಮಾಡಿ। ನಾನು ಬಡಿಸೋ ಪದ್ಧತಿ ಉಂಟು ಅಂತವಳೇ। ದೇವಮ್ಮ।

ಆಹಾ..... ನೋಡಿ ನಮ್ಮ ಶಿವನಾ।

ಆವಾಗಲೀಗ ನಮ್ಮಪ್ಪಾಜಿ। ಮಾಯಕ್ಕಾರ ಮಾದೇಸ್ವರಾ ಕೇಳು ನನ್ನ ಕಂದ। ನಿನ್ನ ಮಕ್ಕಳನ್ನ ಕರೆಯಮ್ಮಾ। ಏಳು ಜನ ಗಂಡು ಮಕ್ಕಳು। ಏಳು ಜನ ಹೆಣ್ಣು ಮಕ್ಕಳು ಅಂತೀಯಲ್ಲಾ। ಆ ಮಕ್ಕಳ ನೋಡ ಬಾರದೇ ಕಂದ। ಆಗ ಏಳೇಳು ಹದಿನಾಲ್ಕು ಜನ ಮಕ್ಕಳನ್ನು ಕೂಗಿದ್ದಂತೆ। ಹದಿನಾಲ್ಕು ಜನ ಬಂದು ನಿಂತ್ಕಂಡ್ರು। ಆದ್ರೆ ದೇವಮ್ಮನ ತಂಗಿ ಬಂದಿದ್ದಲ್ಲಾ। ಅವಳೂ ಬಂದು ನಿಂತ್ಕಂಡ್ಲಂತೆ। ಆವಾಗಲೀಗ ನಮ್ಮಪ್ಪಾಜಿ ಮಾಯಕ್ಕಾರ ಮರಿದೇವರು। ಈ ಇಸದ ಕಜ್ಜಾಯ ಜೋಳಿಗೆಗೆ ತುಂಬಿದ್ರಲ್ಲಾ। ನೋಡು ದೇವಮ್ಮ ನಾನು ಮುಂದ ಊರಿನಲ್ಲಿ। ಇದೇ ರೀತಿ ಬಿನ್ನಹ ಮಾಡಿಕೊಂಡು। ಬರುವಾಗ ಹಿಂಗೆ ನಿನ್ನಂಗೆ। ಒಬ್ಬರ ಮನೆಯಲ್ಲಿ ಬಿನ್ನಹಕ್ಕೆ ಕರೆದರು। ಅವರೂ ಕಜ್ಜಾಯ ತುಪ್ಪ ಮಾಡಿದ್ರು। ಬ್ಯಾಡ ಅಂತಿದ್ರೂ ಕೂಡ। ನನಗೂ ಊಟಕ್ಕೆ ಬಡ್ಸಿ ಜೋಳಿಗೆಗೂ ತುಂಬಿಬಿಟ್ರು। ನಾನು ಮಕ್ಕಳ ನೋಡ್ಬುಟ್ಟು। ಬರೀ ಕೈಲಿ ಅಂಗೇ ಪೋಗಬಾರದು ಕಣಮ್ಮ ಅಂತೇಳಿ। ಎಲ್ಲರ ಕೈಯಲ್ಲೂ ಏಳೇಳು ಹದಿನಾಲ್ಕು ಜನರ ಕೈಲೂ। ಹದಿನಾಲ್ಕು ಕಜ್ಜಾಯ ಕೊಟ್ರಂತೆ, ಸಿವಸಿವಾ ಆ ಹದಿನಾಲ್ಕು ಜನಾನೂ ಒಂದೊಂದು ಕಜ್ಜಾಯ ಈಸ್ಕಂಡು। ಏಳು ಜನ ಗಂಡು ಮಕ್ಕಳು। ಏಳು ಜನ ಹೆಣ್ಣು ಮಕ್ಕು ಕೈನಲ್ಲಿ ಹಿಡ್ಕಂಡು ನಿಂತಿರೋದಂತೆ। ದೇವಮ್ಮ ಏನು ತಿಳ್ಕಂಬುಟ್ಲು। ನಾನು ಇಕ್ಕಿದ ಕಜ್ಜಾಯ ಇವರು ತಿನ್ನುಬುಟ್ಟವರೇ। ಯಾರೋ ಬೇರೆಯವರು ಮಾಡಿದ್ದ ತಕ್ಕಂಡು ಬಂದು ಮಕ್ಕಳಿಗೆ ಕೊಟ್ಟವರೇ ಅನ್ಕಂಬುಟ್ಲು। ಸಿವ ಸಿವಾ ನಾವು ಹೋಗ್ತೀವಿ ನನ್ನ ಕಂದ ಅಂತ ಹೇಳ್ಬಿಟ್ಟು ದೇವಮ್ಮನಿಗೆ। ಮನೆ ಬಿಟ್ಟು ಯಾವಾಗ ಹೊರಬಂದ್ರೋ। ಸಿವ ಸಿವಾ ದೇವಮ್ಮನಿಗೆ ಡಕಡಕಾ ಡಕಡಕಾ ಅಂತ ಬಿಡ್ಕಂತಂತೆ। ಈ ಮುಂಡೆ ಮಕ್ಕಳು ಸಾಯಲಿಲ್ಲಲ್ಲ। ಇಂತವರನ್ನು ಬಿಟ್ಟು ನಾನು

ಕಳಿಸ್ಕಿಕ್ಕಾಗೋದಿಲ್ಲ ಅನ್ಬುಟ್ರು। ಆದರೆ ಇನ್ನಾವತ್ತು ಬಂದೀರಿ ಸ್ವಾಮಿ ಅಂತ। ಒಂದುಗಡೆಗೆ ಹೋದ್ರಂತೆ। ತಾವು ಇನ್ನೊಂದು ದಿವಸ ಯಾವಾಗಾಲ್ಲದ್ರೂ ಬರ್ರೀವಮ್ಮಾ। ಊರೂರು ಮೇಲೆ ಉಪ್ಪಾದಾನ ಮಾಡ್ಕಂಡು ಬರ್ರೀವಿ ನನ್ನ ಕಂದ ಅಂತೇಳ್ಬುಟ್ರು। ಸ್ವಾಮಿ ಇದೊಂದು ದಿವಸ ನೀವು ಬಂದೇ ಬರಬೇಕು ಅಂದ್ಲಂತೆ। ಯಾಕೆ ಈವತ್ತು ಸಾಯಲಿಲ್ಲ। ಇನ್ನೊಂದು ದಿವಸ ಜಾಸ್ತಿ ಜಾಸ್ತಿ ಹಾಕಿ। ಇವರ ಪ್ರಾಣ ತೆಗೀಬೇಕು ಅಂತೇಳಿ। ನೋಡಮ್ಮ ಈಗ ನಾವು ಮುಂದ ಊರ್‍ಗ ಹೋಗಿ। ಬರುವಾಗ। ನಿನ್ನ ಮನೆಗೆ ಬಂದು ವೊಯ್ತೀವಿ ಅಂತೇಳಿ। ಅಲ್ಲಿ ಮಾಯವಾದ್ರು। ಮುನಿಗಳು।

ಆಹಾ..... ನೋಡಿ ನಮ್ಮ ಸಿವನಾ।

ಅವಾಗಲೀಗ ದೇವಮ್ಮ ಹಿಂತಿರುಗಿ ಹೋಗುವಷ್ಟರಲ್ಲಿ। ಏಳು ಜನ ಹೆಣ್ಣು ಮಕ್ಕಳು। ಏಳು ಜನ ಗಂಡು ಮಕ್ಕಳು। ನಮ್ಮಪ್ಪಾಜಿ ಕಜ್ಜಾಯ ಕೊಟ್ಟಿದ್ರಲ್ಲಾ। ಏಳೇಳು ಹದಿನಾಲ್ಕು ಜನರೂ ತಿನ್ಬುಟ್ಟಿದ್ರಂತೆ। ಯಾವಾಗ ದೇವಮ್ಮ ಮನೆಗೆ ವಾಪಸ್ಸು ಹೋಗುವಷ್ಟರಲ್ಲಿ ಅಲ್ಲಿ ಕಕ್ಕಂಡು ಕಕ್ಕಂಡು ಬಿದ್ದವರೇ। ಮಕ್ಕಳು।

ಆಹಾ..... ನೋಡಿ ನಮ್ಮ ಸಿವನಾ।

ವಾಂತಿ ಮಾಡಿಕೊಂಡು। ಹಸಿರು ಪಾಸಾಣವಾದಾಗೇ ಆಗ್ಬುಡ್ತಂತೆ। ಏನು ಮಕ್ಕಳ ಮೈಯೆಲ್ಲಾ। ಸಿವ ಸಿವಾ ಅವರು ಯಾವ ಯಾವ ಜಾಗದಲ್ಲಿ ಬಿದ್ದಿದ್ರೋ। ಅಲ್ಲಲ್ಲೇ ಪ್ರಾಣಬಿಟ್ರಂತೆ। ಏಳೇಳು ಹದಿನಾಲ್ಕು ಜನರೂ ಪ್ರಾಣ ಬಿಟ್ಟಂತ ಕಾಲದಲ್ಲಿ। ದೇವಮ್ಮ ನೋಡಿಬಿಟ್ಟು। ಸಿವ ಸಿವಾ ಈ ಮುಂಡೇ ಮಕ್ಕಳು ಬಂದು। ಇದೇನು ಇಸದ ಕಜ್ಜಾಯ ಕೊಟ್ಬುಟ್ರೋ ಏನೋ ಗೊತ್ತಿಲ್ಲ। ಏನಾದರೂ ಇದು ಕೊಳ್ಳೇಗಾಲದ ಕಚೇರಿಗೆ ತಿಳಿದುಬಿಟ್ರೆ। ನನ್ನ ದಂಡ ವಸೂಲಿ ಮಾಡಿಬಿಡ್ತಾರೆ ಅಂತೇಳಿ। ಆ ಮಕ್ಕಳನ್ನೆಲ್ಲಾ ಅಕ್ಕತಂಗೀರು ಇಬ್ಬರೂ ಸೇರಿಕೊಂಡು। ಅವರು ಹಿತ್ಲಗೆ ಸಾಗಿಸ್ತಾ ಅವ್ರೇ ।ದೇವಮ್ಮ।

ಆಹಾ..... ನೋಡಿ ನಮ್ಮ ಸಿವನಾ।

ಅವಾಗಲೀಗ ಒಂದೊಂದಾಗಿ। ಇಬ್ಬರು ಎತ್ಕಂಡು ಎತ್ಕಂಡು ಹೋಗಿ। ಹಿತ್ಲಗೆ ಸಾಗಿಸ್ತಾ ಇರುವಾಗ। ನಮ್ಮಪ್ಪಾಜಿ ಮಾಯಕ್ಕಾರ ಮರಿದೇವರು। ಪಟ್ಟದ ರಂಗಸ್ವಾಮಿನೇ ಸ್ರೀಮನ್ನಾರಯಣನ್ನ ಪಟೇಲನ್ನ ಮಾಡಿದ್ರಂತೆ। ಮುಡುಕುತೊರೆ ಮಲ್ಲಪ್ಪನ ಚಕ್ರನ್ನ ಮಾಡಿಬಿಟ್ರು। ಸಿವ ಸಿವಾ ಆ ನಮ್ಮಪ್ಪಾಜಿ। ಸ್ವಾನುಬೋಗ್ರಾಗ್ಬುಟ್ರಂತೆ। ಮುಡುಕುತೊರೆ ಮಲ್ಲಪ್ಪನನ್ನ ಚಕ್ರನ ಮಾಡಿ। ನೋಡಪ್ಪಾ ಏನೋ ಬಳಸ್ಕಂಡು ಬರೋಹಾಗೆ ಅವಳ ಹಿತ್ಲಕಡೆ ಹೋಗಿಬಾಪ್ಪಾ ಅಂದ್ರಂತೆ। ಜಗದೀಸ್ವರ ಹೆಗಲಮೇಲೊಂದು ಟವಲ್ ಹಾಕ್ಕಂಡು। ತಲೆಗೊಂದು ರುಮಾಲು ಸುತ್ಕಂಡು। ಅವಾಗಲೀಗ ಜಗದೀಸ್ವರ ಚಕ್ರನವತಾರ ತಾಳಿಕೊಂಡು। ಆ ದೇವಮ್ಮನ ಮನೆಯ ಸುತ್ಕೊಂಡು ಬತ್ತವ್ರೇ। ಜಗದೀಸಾ।

ಆಹಾ..... ನೋಡಿ ನಮ್ಮ ಸಿವನಾ।

ಹೆಂಗಳ ಸಾಗಿಸ್ತಿರುವಂತ ಕಾಲದಲ್ಲಿ। ಏನಪ್ಪಾ ದೇವಮ್ಮ ಇದು ಅನ್ಯುಂಟ್ರಂತೆ। ಅಯ್ಯಯ್ಯೋ ಏನ ನಿಂಗ ನಿಂಗ ಈರೀತಿಯಾಗೋಗ್ಬುಟ್ಟು। ಯಾರಿಗೂ ಹೇಳಬೇಡ ಕಣ್ರಪ್ಪಾ। ನನಗೆ ದಂಡ ವಸೂಲಿ ಮಾಡಿಬುಡ್ತಾರೆ ಅಂದ್ರಂತೆ। ಓಹೋ ನಾನು ಇದನ್ನ ಸಾನುಬೋಗರು ಪಟೇಲರಿಗೆ ಹೇಳದೇ ಹೋದ್ರೆ ನನ್ನ ತಕ್ಕಂಡೋಗಿ ಕೋಳ್ಳೇಗಾಲದ ಕಚೇರಿ ಒಳಗ ನಿಲ್ಲಿಸ್ತಾರೆ ಅಂತೇಳಿ। ಗುಡುಗುಡನೆ ಓಡಿ ಬಂದು। ಅಲ್ಲಿ ಮಾದೇವನಿಗೆ ಹೇಳ್ತಾವರೇ। ಜಗದೀಸಾ।

ಆಹಾ..... ನೋಡಿ ನಮ್ಮ ಸಿವನಾ।

ಆವಾಗಲೀಗ ನಮ್ಮಪ್ಪಾಜಿ ಏಕಾಂಗಿ ವಸ್ತು। ಏಳು ಮಲೆ ಕರ್ತ। ಪಟ್ಟದ ರಂಗಸ್ವಾಮಿ ಪಟೇಲನಂತೆ। ಇವರು ಸ್ವಾನುಬೋಗರಂತೆ। ಅದೇ ಚಕ್ರನ ಅವತಾರದಲ್ಲಿ ಜಗದೀಸನ ಕಳಿಸಿ। ದೇವಮ್ಮನ ಚಾವಡಿಗೆ ಕಳಿಸ್ತವ್ರೇ। ಮಾದೇವ।

ಆಹಾ..... ನೋಡಿ ನಮ್ಮ ಸಿವನಾ।

ಆವಾಗಲೀಗ ಚಾವಡಿಗೆ ಕರಸ್ಬಿಟ್ಟು। ಏನು ದೇವಮ್ಮಾ ಈ ಪ್ರಕಾರವಾಗಿ। ನಿನ್ನ ಮಕ್ಕಳು ಎಲ್ಲಾ ಸತ್ತು ಸತ್ತು ಮಲಗಿದ್ರಂತಲ್ಲಾ। ಹಿತ್ತಿಗೆ ಸಾಗಿಸಿ। ದಪನ್ ಮಾಡಿ ಮಣ್ಣು ಮಾಡ್ತಿದ್ಯಂತಲ್ಲಾ ಏನು ಸಮಾಚಾರ? ಅಂತ ಪಟೇಲರು ಕೇಳಿದ್ರಂತೆ। ಅಯ್ಯಯ್ಯೋ ಸ್ವಾಮಿ। ಈ ಪ್ರಕಾರವಾಗಿ ಯಾರೋ ಮೂರು ಜನ ಜಂಗಮರು ಬಂದಿದ್ದರು। ಈ ರೀತಿಯಾಗಿ ಅವರಿಗೆ ಕಜ್ಜಾಯ ತುಪ್ಪ ಮಾಡಿ। ನಾನು ಬಿನ್ನಕ್ಕೆ ನೀಡಿದೆ। ಹೋಗುವಾಗ ಯಾರ್‍ದೋ ಬೇರೆಯವರ ಮನೆಯಲ್ಲಿ। ಕಜ್ಜಾಯ ತುಪ್ಪ ಮಾಡಿದ್ರು ಅಂತೇಳಿ। ನನ್ನ ಜೋಳಿಗೆಗೆ ಇಕ್ಕಿ ಕಳಿಸಿದ್ರು ಅಂತೇಳಿ। ಸಿವ ಸಿವಾ ಕೇಳಿ ಸ್ವಾಮಿ ಪಟೇಲರೇ। ಆದ್ರೆ ನನ್ನ ಮಕ್ಕಳ ಕೈಗೆಲ್ಲಾ ಒಂದೊಂದು ಕಜ್ಜಾಯ ಕೊಟ್ಬರು। ಅವರು ಬರ್‍ತೀವಿ ತಿರಗಾ ಅಂತೇಳಿ ಹೊರಟೋಗ್ಬಿಟ್ರು। ನನ್ನ ಮಕ್ಕಳು, ಅವರನ್ನು ಕಳುಹಿಸಿ ಬರೋವಷ್ಟರಲ್ಲಿ। ಏಳೇಳು ಹದಿನಾಲ್ಕು ಜನ ಗುರುವೇ। ಅಲ್ಲಿ ಸತ್ತು ಮಲಗವರೇ। ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ।

ಅಲ್ಲಿ ಸತ್ತು ಮಲಗಿದ್ದು। ಏಳೇಳು ಹದಿನಾಲ್ಕು ಮಕ್ಕಳು। ಅವರನ್ನೆಲ್ಲಾ ಹಿತ್ತಲಿಗೆ ಸಾಗಿಸ್ತಿದ್ದೆ ಸ್ವಾಮಿ। ಸಾನುಬೋಗರು ಆಗ ಕೂತಿದ್ರಲ್ಲಾ। ಏನಪ್ಪಾ ಪಟೇಲರೇ। ಇದನ್ನೆಲ್ಲಾ ದಾಕಲು ಮಾಡಿಕೊಂಡು। ಇವಳ ಮನೆ ಜಪ್ತಿ ಆಗ್ಬೇಕು। ಕೊಳ್ಳೇಗಾಲದ ಕಚೇರಿಗೆ ಸಾಗಿಸಬೇಕು ಅಂದ್ರಂತೆ। ಆವಾಗಲೇ ಆ ಚಕ್ರನಿಗೆ ಹೇಳಿದ್ರಂತೆ. ಐದಾರು ಜನ ಆಳುಗಳನ್ನು ಕರ್‍ಕಂಡು ಬಾ ಅಂತೇಳಿ। ಆವಾಗಲೀಗ ನಮ್ಮಪ್ಪಾಜಿ ಹೇಳಿದಂತ ಮಾತು ಕೇಳಿಕೊಂಡು। ಮುಡುಕುತೊರೆ ಮಲ್ಲಪ್ಪನವರು। ಇವರು ಇಬ್ಬರೂ ಮಾಯವಾಗಿ ಹೊರಟು ಬಿಟ್ರಂತೆ।

ನಾವು ಕಚೇರಿ ಒಳಗೆ ಇರ್ತೀವಿ। ನೀವು ಈ ಸಾಮಾನ್ನೆಲ್ಲಾ ತೆಗೊಂಡು। ನೀವು ಕೊಳ್ಳೇಗಾಲದ ಕಚೇರಿಗೆ ಬರಬೇಕು ಅಂತೇಳಿ। ಮಾಯದಲ್ಲಿ ಮಾಯವಾಗ್ಬಿಟ್ಟು। ಅಲ್ಲಿ ವಾಪಸ್ಸು ಬತ್ತವ್ರೇ। ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।

ಆವಾಗಲೀಗ ನಮ್ಮಪ್ಪಾಜಿ। ಏಕಾಂಗಿ ವಸ್ತು। ಇನ್ಸ್‌ಪೆಕ್ಟರ್ ಅವತಾರ ತಾಳ್ಕಂಡು। ಮಾಯದಲ್ಲಿ ಕಚೇರಿ ಒಳಗೆ ಕೂತವರೇ। ನನ್ನ ಕಳಿಸವ್ರೇ ಅಂತೇಳಿ। ಏನಮ್ಮಾ ಏನು ಸಮಾಚಾರ? ಯಾವುದು ನಿನ್ನ ಕೇಸು। ಮುಡುಕುತೊರೆ ಮಲ್ಲಪ್ಪನ್ನ ಇಲ್ಲಿರಿಸ್ಬಿಟ್ಟು ಓಗಿದ್ರಲ್ಲಾ। ಆ ಚಕ್ರನ ಅವತಾರದಲ್ಲಿ। ಇವನ್ನೆಲ್ಲಾ ತಿಳಿಸಿಬಿಟ್ಟು। ಶಿವ ಶಿವಾ ಇವಳ ಮನೆ ಇನ್ಸ್‌ಪೆಕ್ಟರ್ ನಿಂತುಕೊಂಡು ಜಪ್ತಿ ಮಾಡ್ತವ್ರಂತೆ। ಏಳು ಲಕ್ಷ ಬಾಗ್ಯ ಇತ್ತಂತೆ, ಆ ಏಳು ಲಕ್ಷ ಬಾಗ್ಯ ಮೇಲಕ್ಕೆತ್ತಿ। ಆವಾಗಲೀಗ ನಮ್ಮಪ್ಪಾಜಿ ಮಾಯಕಾರ ಮರಿದೇವರು। ಶಿವ ಶಿವಾ ಇವಳಿಗೆ ಐಸ್ವರ್ಯ ಇರಬಾರದು ಅಂತೇಳಿ। ಐಸ್ವರ್ಯ ಮಾಯ ಮಾಡವ್ರೇ। ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।

ಅಕ್ಕ ತಂಗಿ ಇಬ್ರೂ ಕಚೇರಿಗೆ ಬರಬೇಕು ಅಂದ್ರಂತೆ। ಅಯ್ಯಯ್ಯೋ ಸ್ವಾಮಿ ದಮ್ಮಯ್ಯ। ನಿಮ್ಮ ಪಾದ ಅಂತೀನಿ ಸ್ವಾಮಿ। ನಮ್ಮ ಮಾತ್ರ ಕಚೇರಿಗೆ ಕರೀ ಬ್ಯಾಡಿ। ನೀವೇನಾರ ಮಾಡ್ಕಂಡೋಗಿ ಅಂದು ಬುಟ್ಕಂತೆ। ಬೇಕು ಅಂದ್ರೆ ಈ ಊರೇ ಬಿಟ್ಟು ಒಂಟೋಯ್ತೀವಿ ಸ್ವಾಮಿ। ನಮ್ಮ ಕಚೇರಿಗೆ ಕರೀ ಬ್ಯಾಡಿ ಅಂತವಳೇ। ದ್ಯಾವಮ್ಮ।

ಆಹಾ..... ನೋಡಿ ನಮ್ಮ ಶಿವನಾ।

ಆವಾಗಲೀಗ ನಮ್ಮಪ್ಪಾಜಿ ಮಾದೇಸ್ವರ। ಹಾಗಿದ್ದ ಮ್ಯಾಲೆ ನೀವು ಹೊರಟೋಗ್ಬುಡ್ರಿ ಅಂದ್ರಂತೆ। ಮನೆ ಬಿಟ್ಟು ಚಾವಡಿ ಹತ್ತಿರ ಹೋದ್ರಂತೆ।"

> ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲು ಮ್ಯಾಲೆ।
> ಕೋಲು ಮಂಡೆ ಜಂಗಮ ದೇವರು ಕ್ವಾರಣ್ಣವೆಂದು ಸಾರವರೇ।
> ಕ್ವಾರಣ್ಣ ನೀಡಮ್ಮ ಕೋಡುಗಲ್ಲ ಮ್ಯಾಲೆ।

ಗುರುವೇ ಗುರುಪಾದಕೆ ಸರಣೆ। ಇಂತ ಮಾಯಕ್ಕಾರ ಅಂತ ಕಾಣ್ಲಿಲ್ಲ। ಇಂತ ಮದ್ದುಗಾರ ಅಂತ ಕಾಣ್ಲಿಲ್ಲ। ಗುರುವೇ ಗುರು ಪಾದಕೆ ಸರಣು। ನೀವು ನನ್ನ ಏಳು ಜನ ಮಕ್ಕಳನ್ನು ಉಳಿಸಿದ್ದೇ ಉಂಟಾದ್ರೆ। ಗುರುವೇ ನಿಮ್ಮ ಎಪ್ಪತ್ತೇಳು ಮಲೆ ಒಳಗೆ। ಸುತ್ತಾಲೆಯ ನಾಕಟ್ಟಿಸೇನೋ।

ಆಹಾ ಕ್ವಾರಣ್ಣ ನೀಡಮ್ಮ ಕೋಡುಗಲ್ಲಿನ ಮ್ಯಾಲೆ

ಆವಾಗಲೀಗ ನಮ್ಮಪ್ಪಾಜಿ ಮಾದೇಸ್ವರ। ಹಾಗಿದ್ದಮೇಲೆ ನೀವು ಹೊರಟ್ಬುಡಿ ಮನೆಬಿಟ್ಟು ಅಂದ್ರಂತೆ। ಆ ಮನೆ ಬುಟ್ಟು ಚಾವಡಿ ಹತ್ತಿರ ಹೋದ್ರಂತೆ। ಈ ದ್ರವ್ಯನೆಲ್ಲಾ

ಮಾಯ ಮಾಡ್ಬುಟ್ಟು। ಶಿವ ಶಿವಾ ಮಾಯದಲ್ಲಿ ಬಂದು। ಮಾಯದ ಬೇಳ್ಕೆ ಬೂದಿ ಉರುಬಿದ್ರಂತೆ। ದೇವಮ್ಮನ ಮನೆ ಅಂತಕ್ಕತಂದ್ರು। ಅಲ್ಲಿ ದಗ್ಗನೆ ಕತ್ತಿ ದಿಗ್ಗನೆ ಉರಿತದಲ್ಲ। ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।

ಅವಾಗಲೀಗ ಅವಳ ಮನೆ ಒಳಗಿದ್ದ ಅಟ್ಟೆ। ದನ ಕುರಿ ಎಲ್ಲಾನೂ ನಾಸನ ಮಾಡಿ ಬಿಟ್ಟು। ಶಿವ ಶಿವಾ ಅವಳು ಏಳು ಹದಿನಾಲ್ಕು ಜನಾನೂ। ನಾಸ ಮಾಡಿ ಪ್ರಾಣ ತಗೆದು ಆ ದೇವಮ್ಮನಿಗೆ ತಿನ್ನಕ್ಕಿಟ್ಟಿಲ್ಲ। ಉಣ್ಣಕ್ಕನ್ನಿಲ್ಲ। ಉಡೋದಕ್ಕ ಬಟ್ಟೆ ಇಲ್ಲ। ಕುಡಿತೀನಿ ಅಂದ್ರೆ ಒಂದು ತೊಟ್ಟು ನೀರಿಲ್ಲ। ಆ ಪ್ರಕಾರವಾಗಿ ಅಲೆಯುವುದಕ್ಕೆ ಬಿಟ್ಟು ಬಿಟ್ಟು। ಅವರು ದ್ರವ್ಯ ತಕ್ಕಂಡು ಬತ್ತವ್ರೇ ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।

ಏಳು ಕೊಪ್ಪರಿಕೆ ದ್ರವ್ಯ ಮಾಯದಲ್ಲಿ ತಕ್ಕಂಬಂದು। ಇವರ ಇಬ್ಬರು ಮಕ್ಕ ಕಾರಯ್ಯ ಬಿಲ್ಲಯ್ಯ ಅಂತವ್ರಲ್ಲಾ। ನೋಡಪ್ಪಾ ನಮ್ಮ ತಾಯಿ ಸಂಕಮ್ಮ ಕೇಳಿದ ಮಾತು। ನಿಮ್ಮನ್ನು ಸಿಸ್ವರನ್ನು ಮಾಡ್ಕಂಡಬಂದದಕ್ಕೇ। ಇದು ಏಳು ಕೊಪ್ಪರಿಕೆ ದ್ರವ್ಯ। ಇದೇ ನಿಮಗೆ ಆದಾರ ಅಂತವರೇ। ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।
ಮಾದಪ್ಪಾ ನಿನ್ನ ನಾ ನಂಬಿದೆ।
ಆನಂದ ಜ್ಯೋತಿ ಬೆಳಗಿದೆ
ಮಾಯಕ್ಕಾರ ಮಲೆಯ ಮಾದೇಶ್ವರ।
ನಾ ನಿನ್ನ ನಂಬಿದೆ।
ಬಡವರ ಕಷ್ಟ ನೋಡಬೇಕು ದೇವ।
ಮಾದೇವ ನಾ ನಿನ್ನ ನಂಬಿದೆ।
ಪರಮಾತ್ಮ ದಯಮಾಡಬಾರದೇ।
ಮಾದೇವ ನಿನ್ನ ನಾ ನಂಬಿದೆ।
ಅಯ್ಯಾ ನಿನ್ನ ಮಹಿಮೆಯ ಗೊತ್ತಿಲ್ಲ ಮಹಾದೇವ।
ಅಯ್ಯಾ ಬಂದೆ ಕಾಪಾಡೋ ಮಾಯಕಾರ।
ಮಾದೇವ ನಿನ್ನ ನಾ ನಂಬಿದೆ।
ಅನೇಕ ಜ್ಯೋತಿ ಬೆಳಗಿದೆ। ೬

ಆಗ ಇಕ್ಕೇರಿ ದೇವಮ್ಮ ಮಾದೇಶ್ವರರ ಪಾದ ಹಿಡ್ಕೊಂಡು। ಗೋಳು ದುಃಖ ಸ್ವಾಕ ಮಾಡುವಂತ ಕಾಲದಲ್ಲಿ ಕೇಳು ಕೇಳು ಹೆಣ್ಣು ಮಗಳೇ। ಬೂಲೋಕದಲ್ಲಿ ನನಗೆ

ಸತ್ಯವಂತರಿಲ್ಲ ಮಗಳೇ। ನಾ ಮಾಡಿದ ತಪ್ಪು ಕ್ಷಮಿಸ ಬೇಕಂತೇಳಿ ದುಃಖ ಸ್ವಾಕ ಮಾಡುವಾಗ।

> ನನ್ನ ಮಾಯ್ಕಾರ ಕಾಣೋ। ಅಯ್ಯ ಮಾದೇವಾ।
> ತಂದನ್ನ ತಾನು।
> ಅಯ್ಯ ಮಾಯಕಾರ ಕಾಣೋ। ತಂದನಂದೇನ ತಂದನ್ನ ತಾನೋ
> ಶಿವ ತಂದೆನ್ನ ತಾನೊ।
> ಶಿವ ತಂದೆನ್ನೊ ತಾನೊ।
> ತಾನಂದೆನಾನೋ। ತಂದೆನ್ನ ತಾನೋ।

ಇಟ್ಟಕಲ್ಲು ಮೆಟ್ಟಕಲ್ಲು ಗೇಯಿಸಿಕೊಡ್ತೀನಿ ಅಂತ ಹೇಳಿ ಇಕ್ಕೇರಿ ದೇವಮ್ಮ ಹೇಳಿದ್ವಾಳೆ.

ಆಗ ನಮ್ಮಪ್ಪಾಜಿ ಮಾದಪ್ಪ। ತನ್ನ ಮುತ್ತಿನ ಜೋಳಿಗೆಯಲ್ಲಿರುವ। ಮಾಯದ ಬೇಳ್ಳಿ ತೆಗದಿದ್ದಾರೆ। ಈಬೂತಿ ತೆಗೆದುಬಟ್ಟ। ಏಳು ಜನ ಮಕ್ಕಳ ಮೇಲೆ ಬಟ್ಟಿಡುವಂತ ಕಾಲದಲ್ಲಿ। ಸತ್ತು ಸ್ವರ್ಗ ಸೇರಿರುವ ಮಕ್ಕಳು ಮ್ಯಾಲಕ್ಕೆದ್ದವರಲ್ಲೋ...।

ಮೂಡಲ ಮಲೆಯ ಮಾದೇವಾ।

ಏಳು ಜನ ಮಕ್ಕಳನ್ನು ಎಬ್ಬಿಸಿಬಿಟ್ಟ। ಚಿರಂಜೀವಿಯಾಗಿರೆಂದು ಹರಸಿ। ಇಕ್ಕೇರಿ ರಾಜ್ಯದಲ್ಲಿ ಬಾಳಪ್ಪ ಅಂತೇಳವ್ರೆ। ಮಲೆ ಮಾದಪ್ಪಾ। ಆದಾಗ ಕಾವಿ ಕಮಂಡಲವನ್ನು ಧರಿಸಿಕೊಂಡು। ರುದ್ರಾಕ್ಷಿ ಭದ್ರಾಕ್ಷಿ ಧರಿಸಿಕೊಂಡು। ಮುತ್ತಿನ ಜೋಳಿಗೆ ಮುಂಗೈ ಗಾತ್ರ ಮಾಡಿಕೊಂಡು। ಅವರು ಭಾರಿ ಬರಗ ಏರವರೇ। ಮಾಯಕಾರದ ಮಾದೇವ।

ಮೂಡಲ ಮಲೆಯ ಮಾದೇವಾ।

ಇಕ್ಕೇರಿ ದೇವಮ್ಮನಿಗೆ ಅಶೀರ್ವಾದ ಕೊಟ್ಟ। ಇಕ್ಕೇರಿ ದೇವಮ್ಮನಿಗೆ ಬರ್‍ತೀವಿ ಅಂತೇಳಿ। ಮಾದೇವ ಏಳುಮಲೆ ಕೈಲಾಸಕ್ಕೆ ಹೊರಟಿದ್ದಾರೆ। ಅಯ್ಯಾ ಮಾಯವಾಗಿ ನಿಂತವರೆ। ಮಾಯಕ್ಕಾರ।।

> ತಂದನ್ನ ತಾನಾ ತಾನು ತಂದೇನು।
> ತಂದನೆ ತಾನೇ।

ನಿಮ್ಮ ಸತ್ಯಕ್ಕೆ ನಾನು ಒಪ್ಪಿಕೊಂಡುಬಿಟ್ಟೆ। ಅಂತೇಳಿ ಶಿಶುವಾದ ಕಂದ ಬ್ಯಾಡರ ಕಣ್ಣಪ್ಪನವರು। ಮಲೆ ಮಾದೇಶ್ವರನ ಪಾದಕ್ಕೆ ಬಿದ್ದ ಕಾಲದಲ್ಲಿ। ಆಗ ನಮ್ಮಪ್ಪಾಜಿ

ಮಲೆಮಾದೇಶ್ವರ। ಆಗ ಎಡಗಡೆ ಕಾರಯ್ಯ। ಬಲಗಡೆ ಬಿಲ್ಲಯ್ಯ। ನಟ್ಟ ನಡುವೆ ಏಳು ಮಲೆ ಕೈಲಾಸಕೋತವರೇ।

ಇದೇ ಪ್ರಕಾರವಾಗಿ ಮಲೆಮಾದಪ್ಪ। ಹೇಳ್ತಕ್ಕಂತ ಮಾತು। ಇಕ್ಕೇರಿ ದೇವಮ್ಮ ತಾಳು ಬೆಟ್ಟದಿಂದ। ಮೂಡಲ ಮಲೆ ಕೈಲಾಸ। ಇಪ್ಪತ್ತಾಕು ಮೈಲಿ ಕಟ್ಟಿ ಕಲ್ಲು ಮೆಟ್ಟಕಲ್ಲು। ಗೇಯಿಸಿಕೊಂಡು ಬಂದು। ಆದರೆ ಗುರುವೇ ಗುರು ತಂದೆಯೇ। ಹನ್ನೆರಡು ಅಂಕಣ ದೇವಾಲಯದ ಸುತ್ತಾ। ಸುತ್ತು ನಿನ್ನ ಗೇಯಿಸಿ। ಅವಳು ಸಾಯುವ ತನಕ ರಜವನ್ನು ಒಡಕೊಂಡು ಕುಂತವಳೆ। ಇಕ್ಕೇರಿ ದೇವಮ್ಮ।

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಕೋಲುಮಂಡೆ ಜಂಗಮದೇವರು ಕ್ವಾರಣ್ಯಕೆ ದಯ ಮಾಡವರೇ।
ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಆದರೆ ಹರಹರಾ ನಮ್ಮಪ್ಪಾಜಿ ಮಲೆಮಾದೇಸ್ವರ। ಆದರೆ ಗುರುವೆ ಗುರು ತಂದೆಯೆ। ಇಕ್ಕೇರಿ ದೇವಮ್ಮನ ಕೆಚ್ಚು ಮುರಿದು। ಒಕ್ಕಲು ಮಾಡಿಕೊಂಡು ಅವರು ಮತ್ತೊಂದು ಗ್ಯಾನ ಮಡಗವರೇ। ಮಾಯಕಾರ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಆದರೆ ಪರಮಾತ್ಮ। ಮತ್ತೊಂದು ಗ್ಯಾನ ಯಾವ ರೀತಿಯಾಗಿ ಮಾಡವರೇ ಅಂದರೆ। ಏನಪ್ಪಾ ಗುರುವೆ ಗುರು ತಂದೆಯೇ। ನಾನು ಕೊಯಮತ್ತೂರು ನಾಡಿಗೆ ಹೋಗಿಬಿಟ್ಟು ಕೊಂಗ ಮಕ್ಕಳನ್ನು ತಂಬಡಿತನಕ್ಕೆ ಮಾಡಿಕೊಂಡಾಗ। ಕೊಂಗ ಮತ್ತು ಬಾರಿ ಗನವಾಗ್ಬುಡ್ತು। ಈ ಕೊಂಗ ಮತ್ತು ಬಿಡುಗಡೆಯಾಗ ಬೇಕಾದರೆ। ನನಗೆ ಎಣ್ಣೆ ಮಜ್ಜನೆ ಮಾಡ್ತ ತಕ್ಕಂತ। ಭಕ್ತಾದಿಗಳ ಪತ್ತೆ ಮಾಡಬೇಕಲ್ಲಾ। ಎಂಬುದಾಗಿ ಬೇಡರ ಕನ್ನಯ್ಯನ್ನ ಕರೆದವರೆ। ನನ್ನ। ಮೂಡಲ ಮಲೆಯ। ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಯಾರು ಬಲ್ಲರು ಮೈಮೆಗಳ ಮಾದಪ್ಪ ತೋರಿಸಯ್ಯಾ ನಿಜ ರೂಪಗಳು
ಆಹಾ ನಿನ್ನ ಪಾದ ನಂಬಿದ ಜನಕೆ ಒಂದು ಹೊನ್ನು ಮಳೆ ಕರೆದೊ।
ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಏನಪ್ಪಾ ನನ್ನ ಕಂದ ಬೇಡರ ಕನ್ನಯ್ಯ। ನನಗೆ ಎಣ್ಣೆ ಮಜ್ಜನ ಮಾಡತಕ್ಕಂತ ಬಕ್ತಾದಿಗಳನ್ನು ಪತ್ತೆಮಾಡಿಕೊಂಡು। ನಾನು ಮೊದಲು ಮೂಡಲ ಮಲೆಯ ಕೈಲಾಸಕ್ಕೆ ತಕ್ಕಂಡು ಬತ್ತೀನಿ ಕಣಪ್ಪಾ। ನನ್ನ ಕಂದ ಬೇಡರ ಕಣ್ಣಯ್ಯ। ನಾನು ಹೋಗಿ ಬರುವವರಗೂನೂ। ನನ್ನ ಮೂಡಲ ಮಲೆ ಕೈಲಾಸ। ಹನ್ನೆರಡು ಅಂಕಣ ದೇವಾಲಯ। ಪೀಠದಕಲ್ಲು ಮಜ್ಜನದ

ಕೊಳ ಆದಿಸೇಸಣ್ಣ ಆಲಂಬಾಡಿ ಬಸವಣ್ಣ। ಹನ್ನೆರಡು ಅಂಕಣ ದೇವಾಲಯವನ್ನು। ಜೋಪಾನವಾಗಿ ನೋಡ್ಕಂತಿರು ಅಂತೇಳಿ। ಕಂದನಾದಂತ ಬೇಡರಕನ್ನಯ್ಯನಿಗೆ। ಬುದ್ದಿವಾದ ಹೇಳ್ಬುಟ್ಟು। ನಮ್ಮಪ್ಪಾಜಿ ಮಲೆಯಮಾದೇಸ್ವರ ಅವರು। ಸರಗೂರಿಗೆ ಸಾಗಿ ಬತ್ತವರೇ। ಮಾಯಕಾರ ಮಾದೇವಾ॥೨

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಮಂಗಳಾರತಿ ಮಹಾದೇವನಿಗೆ
ಶರಣು ಶರಣು ದೇವನಿಗೆ।
ಮಂಗಳಾರ‍್ತಿ ಮಾದೇವನಿಗೆ।
ಶರಣು ಶರಣು ಗುರುದೇವರಿಗೆ,
ಆಹಾ ದೂಪ ದೇವರಿಗೆ।
ಮಂಗಳಾರತಿ ಮಾದೇವನಿಗೆ।
ಶರಣಾರ್ತಿ ಮಾದೇವನಿಗೆ॥೭

## ಟಿಪ್ಪಣಿಗಳು

೧. ಕಂಸಾಳೆ ಕಥಾ ಸಂಪ್ರದಾಯ ೭ ಚಾಮಯ್ಯ ಹಾಡಿದುದನ್ನು ಪ್ರಮುಖವಾಗಿಟ್ಟುಕೊಂಡು ಪರಿಷ್ಕಾರ ಮಾಡಲಾಗಿದೆ. ಜೊತೆಗೆ, ೧, ೨, ೫, ೬, ೮ ನ್ನು ತೆಗೆದುಕೊಂಡಿದೆ.

೨. ಕಂಸಾಳೆ ಕಥಾ ಸಂಪ್ರದಾಯ ೮ರಲ್ಲಿ ವಿಷ ಮತ್ತು ಕಳ್ಳಿ ಹಾಲನ್ನು ತನ್ನ ಸಾಲ ತೆಗೆದುಕೊಂಡಿದ್ದ ಆಳುಗಳ ಕೈನಲ್ಲಿ ತರಿಸುತ್ತಾಳೆ. ಮಾದೇಶ್ವರರು ರಂಗಸ್ವಾಮಿ, ಮುಡುಕುತೊರೆ ಮಲ್ಲಣ್ಣನ ಜೊತೆಯಲ್ಲಿ ಬಂದು ಕ್ವಾರಣ್ಯ ಸಾರ‍್ತಾರೆ. ಇಕ್ಕೇರಿ ದೇವಮ್ಮನ ತಂಗಿ, ಚಿಕ್ಕ ದ್ಯಾವಮ್ಮ, ಮತ್ತೊಂದರಲ್ಲಿ ನಿಂಗಮ್ಮ ಮಾದೇಶ್ವರರು ಅಗ್ನಿದೇವಿ ಕರೆದು ಇಕ್ಕೇರಿ ದೇವಮ್ಮನ ಮನೆಯನ್ನು ಸುಟ್ಟು ಭಸ್ಮ ಮಾಡುತ್ತಾರೆ, ಅವಳ ವಂಶ ನಿರ್ವಂಶವಾಯಿತು.

## ೬. ಸರಗೂರಯ್ಯನ ಸಾಲು

ಗಂಡುಗತ್ರಿಯ ಸ್ವಾಮಿ ಪವಾಡದವನೆ।
ಗಂಡುಗಲಿಯ ಮ್ಯಾಲೆ ಮೆರೆದವನೆ।
ಧೀರ ಮಾದಯ್ಯ।
ನನ್ನ ಗಂಟಲ ತೊಡಕ ಬಿಡಿಸಯ್ಯೊ॥

ಆಹಾ ನೋಡಿ ನಮ್ಮ ಶಿವನಾ
ಮಲೆಯೋ ಮಾದೇವ ಬರುವ ಚಂದವಾ
ನೋಡಿ ನಮ್ಮ ಶಿವನಾ॥

ನಮ್ಮಪ್ಪ ಮಾಯಕ್ಕಾರ ಗಂಡ। ಕಾಣ ಬಾರದ ಕಾನೆ ಒಳಗೆ। ಸೀಗೆ ಬೆಟ್ಟದ ಮಗ್ಗುಲೊಳಗೆ। ನಮ್ಮಪ್ಪ ಮಾಯಕಾರ ಗಂಡ। ಅಯ್ಯಾ ಕೌದಳ್ಳಿ ಕಾಡ್ನಲ್ಲಿ ಒಯ್ತಾರಲ್ಲೋ। ವರ ಒಳಗೆ॥

ಆಹಾ..... ನೋಡಿ ನಮ್ಮ ಶಿವನಾ।

ಆಗಲೀಗ ಕೌದಳ್ಳಿ ಕೊಂಗರು। ನಮ್ಮಪ್ಪ ಮಾಯಕಾರ ಗಂಡ ನೋಡ್ಬುಟ್ಟು। ಸ್ವಾಮಿ ನೆತ್ತಿ ಒತ್ತೋದುಕ್ಕೆ। ಎಣ್ಣೆ ತಕ್ಕ ಪೊಯ್ತಾರೆ। ಸ್ವಾಮಿ ಮಂಡೆಗೆ ಒತ್ತುತಾರೆ। ಅವನಿಗೆ ಹುಚ್ಚು ಬೆಪ್ಪ ಬನ್ಬುಡ್ತಲ್ಲಾ ಧೀರ। ಮಾದೇವ।

ಆಹಾ..... ನೋಡಿ ನಮ್ಮ ಶಿವನಾ।

ನಮ್ಮಪ್ಪ ಮಾಯಕ್ಕಾರ ಗಂಡನಿಗೆ। ಬಿದಿರಕ್ಕಿ ತಕ್ಕಂಡೋಗಿ। ತಣಿಗೆ ಮಾಡ್ತಾರೆ। ಕಾಡು ಬಾಳೆಹಣ್ಣು ತಂದು ಎಡೆ ಮಾಡ್ತಾರೆ। ನಮ್ಮಪ್ಪ ಮಾಯಕಾರ ಮಾದೇವನಿಗೆ। ಮಂಕು ಮರಳು ಬನ್ಬುಡ್ತಲ್ಲೋ। ದರೆ ಒಳಗೆ।

ಆಹಾ..... ನೋಡಿ ನಮ್ಮ ಶಿವನಾ।

ಆಗಲೀಗ ಮಂಕು ಮರಳು ಮಾಡ್ಬುಟ್ನಂತೆ, ನಮ್ಮಪ್ಪ ಮಾಯಕಾರ ಗಂಡನಿಗೆ। ಆದ್ರೆ ಯೇಳ್ತೀನಿ ಕೇಳಪ್ಪ ಕಂದ 'ಕಾರಯ್ಯ। ಈ ಕೌದಳ್ಳಿ ಕೊಂಗರು, ಉಚ್ಚೆಳ್ಳೆಣ್ಣೆ ತಂದು। ನೆತ್ತಿಗೆ ಒತ್ಬುಟ್ರು। ಪೆಚ್ಚಾಗೋದಿ ನಾನು। ಮರಳೆಣ್ಣೆ ತಂದು ಮಂಡೇಗೊತ್ತಿದ್ರು।

ಬಿದರಕ್ಕಿ ತಂದು ತಣಿಗೆ ಮಾಡಿದ್ರು। ನನಗೆ ಮಂಕು ಮರಳು ಬಂತಲ್ಲೋ। ಕಂದ ಕಾರಯ್ಯ।

ಆಹಾ..... ನೋಡಿ ನಮ್ಮ ಶಿವನಾ।

ಆಗಲೀಗ ಮಂಕು ಮರಳು ಬಸ್ತುಬುತ್ತಪ್ಪಾ ಕಂದ ಕಾರಯ್ಯ, ನನಗೆ ಆರು ಪಡಿ ಅಕ್ಕಿಳ್ಳ ತಕ್ಕೊಂಪು। ಮೂರು ಚಿಟಿಕಿ ಬಿಳಿ ಬೆಲ್ಲ ತಕ್ಕಂಡು। ಸುಣ್ಣ ತಕ್ಕಂಡು। ನನ್ನ ಮುಟ್ಟಿ ಪೂಜೆ ಮಾಡೋ ಸರಣರು ಎಲ್ಲಿ ಸಿಕ್ತಾರಪ್ಪಾ ಕಾರಯ್ಯ।

ಆಹಾ..... ನೋಡಿ ನಮ್ಮ ಶಿವನಾ।

ಯೇಳ್ತೀನಿ ಕೇಳು। ನಿನ್ನ ಸಿರ ಪಾದ ಒತ್ತೇನು, ಮರಿದೇವರೇ। ಹನ್ನೆರಡು ಎಲೆ ಮಡಗಿ। ಹನ್ನೆರಡು ಅಡಿಕೆ ಮಡಗಿ। ಮೂರು ದುಡ್ಡು ಮಡಗಿ। ದೂಪ ಹಾಕಿ ಕರವೆತ್ತಿ ಕೈ ಮುಗಿದರೆ। ಪಂಚ ಗುಂಡ್ಗೆ ನೋಡ್ತೀನಿ ಕಣಪ್ಪಾ,

ಆಹಾ...... ನೋಡಿ ನಮ್ಮ ಶಿವನಾ।

ಅಲ್ಲಿಗೆ ನಮ್ಮಪ್ಪ ಮಾಯಕಾರ ಮಾದೇವ। ಮೂರು ದುಡ್ಡಿಲ್ಲ। ಅಡಿಕೆ ಇಲ್ಲ। ಅವನು ಏನೇನೋ ಗ್ಯಾನ ಮಾಡ್ತಾನೇ ಜಗದೊಡೆಯಾ।

ಆಹಾ..... ನೋಡಿ ನಮ್ಮ ಶಿವನಾ।

ನಾ ತಾಯಿ ಉತ್ತರಾಜಮ್ಮನ ಪಾದ್ದಾಣೆ। ತಂದೆ ಕಲ್ಯಾಣ ಸೇವಕ ಮೂರ್ತಿ ಪಾದ್ದಾಣೆ। ಮೂರು ದುಡ್ಡು ಹಾಕಬೇಕು। ಅಡಿಕೆ ಆಗಬೇಕು ಎಲೆಯಾಗ್ಬೇಕು। ಪಂಚಾಮೂರ್ತಕ್ಕೆ ಅಂತಾನಲ್ಲೋ। ಮಾದಯ್ಯ

ಆಹಾ..... ನೋಡಿ ನಮ್ಮ ಶಿವನಾ।

ಏಳು ಮಲೆ ಕೈಲಾಸಕ್ಕೆ ಹಿಂತಿರುಗಾ ಹೋದರು ಮಾದೇವಾ। ಅವಾಗಲೇ ಬೇಡರ ಕಣ್ಣಪ್ಪ। ಕಾರಯ್ಯ ಬಿಲ್ಲಯ್ಯ। ಆಲಂಬಾಡಿ ಬಸವಣ್ಣ। ಒಂಟ್ ಜಡೆ ಶೇಷಣ್ಣ ಎಲ್ಲಾ ಓಡಿ ಬಂದ್ರು। ಮಹಾದೇವ ಬರ್ತಾ ಇದ್ದಾರೆ। ಮಾದಪ್ಪ ಎಳ್ಳು ಹೊತ್ಕಂಡು ಬಂದಿರಬಹುದು। ನೋಡಬೇಕಲ್ಲ ಅಂತ ಓಡ್ ಬಂದ್ರು। ಬರಿ ಜೋಳ್ಗೆ ಬಸ್ಮ ತುಂಬದೆ। ಎಲ್ಲಿ ಗುರುವೆ ಎಳ್ಳು ಅಂದ್ರು। ಅಯ್ಯೋ ಮಕ್ಕಳೆ। ಆ ಬೇಪಿನ ಕಾಳಮ್ಮ ನನಗೆ ಒಕ್ಲಾದಳ। ಆ ಮುಂಡೇ ಮಗಳು ಅಂಕಾರ ಪಟ್ಟು ಬುಟ್ಟಳು। ದಾಸಯ್ಯನಿಗೆ ಧರ್ಮವಿಲ್ಲ। ಭೀಮನಿಗೆ ಭಿಕ್ಷವಿಲ್ಲ। ಕೆಟ್ಟ ಮುಂಡೆ ಮಗಳು। ಆದರೆ ಆ ಜೀವ ಮುಂಡೆ ಮಡಗಬಾರ್ದು ಅಂತೇಳಿ। ಬೇಕಾದಷ್ಟು ಧರ್ಮದಲ್ಲಿ ಕೇಳ್ದಿ। ಅವಳು ನನಗೆ ಭಿಕ್ಷೆ ಕೊಡ್ದೆ ಹೋದಳು। ಏಳೇಳದಿನಾಲ್ಕು ಹಟ್ಟಿಯನ್ನು। ನಡೆಯುವವರಿಗೆ ದಾರಿ ಆಗಲಿ ಅಂತ। ಕಟ್ಟ ಕಡೆ

ಒಳಗ ಆದೇ ರೀತಿಯಾಗಿ ಬೇಯ್ಸಿಬಿಟ್ಟು ಬಂದಿವ್ನಿ। ನಡೆಯಾಕೆ ದಾರಿ ಮಾಡಿಬುಟ್ಟು। ಕಾರಯ್ಯ। ಕೋಲ ಮಂಡೆ ಕಾರಯ್ಯ। ಇವಾಗಲಾದ್ರೂ ನೋಡಪ್ಪ। ಈ ನಾಕು ರಾಜ್ಯದಲ್ಲಿ ಎಲ್ಲಾದ್ರೂ ಇದ್ರೆ ಬಿಕ್ತರು। ಗಂಡ ಹೆಂಡರು ಒಂದು ನಿಜ ಇರಬೇಕು। ತರಿಗೆಂಡದಲ್ಲಿ ತಳಿಗೆ ಆಗಬೇಕು। ಅಟ್ಟೆಲ್ಲಲ್ಲಿ ಮಜ್ಜನವಾಗಬೇಕು। ಈ ಬ್ಯಾಡ ಗಂಪಣದ ಮಲೆಯೊಳಗೆ। ನನ್ನ ಯಾರೂ ಕೂಡ ಮಾದೇವ ಅಂತೇಳಿ। ಮುಟ್ಟಿ ಪೂಜೆ ಮಾಡೋದಿಲ್ಲ। ಈ ಬೇಡಗಂಪಣದವರ್ಗೆ ಪೂಜೆ ನೈವೇದ್ಯ ಗೊತ್ತಿಲ್ಲ। ಮರಾಳೆಣ್ಣೆ ಮಂಡೆಗೊತ್ತಿದ್ದಾರೆ। ಉಚ್ಚಳ್ಳೆಣ್ಣೆ ನೆತ್ತಿಗೊತ್ತಿದ್ದಾರೆ। ಕಣ್ಣು ಕಾಣೋದಿಲ್ಲ। ಕಿವಿ ಕೇಳೋದಿಲ್ಲ ಕಂದಾ। ಈ ಬರಗಸಕ್ಕಿ ಎಡೆ ಉಣ್ಣುವುದಕ್ಕೆ ಸಾಧ್ಯವಿಲ್ಲ। ಬೂದಿ ಬಾಳೆ ಹಣ್ಣು ನೋಡಿ। ವಾಂತಿ ಬರ್ತಾ ಇದೆ ಕಂದಾ। ನೀನು ದೃಷ್ಟಿ ಇಟ್ಟು ನೋಡಪ್ಪಾ ಕಾರಯ್ಯ। ಗುರುವೇ ಗುರುಪಾದವೇ ನಮ್ಮಪ್ಪಾಜಿ। ನಮ್ಮಿಂದ ಸಾಧ್ಯವಿಲ್ಲ ಗುರುವೆ। ನಾವು ನೀವು ಬರೋವರ್ಗೆ ಏಳು ಮಲೆ ಕೈಲಾಸದಲ್ಲಿ ಸಂತೋಷವಾಗಿ ಧೂಪ ನೈವೇದ್ಯ ಮಾಡ್ಕಂಡಿರ್‍ತೀವಿ। ಪೂಜೆಯ ನೀವೆ ನೋಡ್‌ಕಂಡು ಬನ್ನಿ ಗುರುವೆ ಅಂದ್ರು। ಆಗಾದ್ರೆ ಕಂದಾ। ನಾನು ಮೈಸೂರು ಮೇಲ್ ನಾಡ್ಗೋಗ್ತೀನಿ। ಪೂರ್ವ ಬಾಗಕ್ಕೆ ವೋಗೋಣ ಅಂದರೆ। ಬರಿ ತಮಿಳು ಜನ ಅವರ ಮಾತು ನನಗೆ ಗೊತ್ತಿಲ್ಲ। ಇನ್ನು ತೆಂಕ್ಲಾಗೋಗೋಣ ಅಂದ್ರೆ। ಅದೂ ಕೀಳ್ ನಾಡು ನನಗೆ ಗೊತ್ತಿಲ್ಲ ಅವರ ಮಾತು। ಬಡಗ್ಲಾಗೋಗೋಣ ಅಂದ್ರೆ। ಬರಿ ರೆಡ್ಡಿಗ್ರು। ಅವರ ಮಾತು ಗೊತ್ತಿಲ್ಲ। ಪಡ್ಲಾಗ್ ವೋಗ್ತೀನಿ ಕಣಪ್ಪಾ। ನನ್ನ ಮೈಸೂರು ಮೇಲ್ ನಾಡ್ನ ನೋಡ್ತೀನಿ

ದೃಷ್ಟಿ ಮಡಗಿ ನೋಡುವಂತಾ ಕಾಲ್ದಲ್ಲಿ। ಸರಗೂರಲ್ಲಿ। ಸರಗೂರಪ್ಪನ ಮಗ ನಿಜಗುಣ। ನಿಜಗುಣ ಮೂಗಯ್ಯ ಅಂದ್ರೆ। ಅವನು ಎಂಗವ್ನಪ್ಪ ಅಂದ್ರೆ। ಅವನು ಉಟ್ಟು ಬಟ್ಟೆ ಒಗದಿಲ್ಲ। ತಲೆ ಕೊಳೆ ತೆಗದಿಲ್ಲ। ಹಲ್ಲಿನ ಕಿಂಡೀಗೆಲ್ಲಾ। ಒಂದಿಷ್ಟು ಕಿಟ್ಟ ಕಟ್ಟಿತ್ತಂತೆ। ಅಲ್ಲಿಗೆ ಒಂದೊಂದು ನಿಂಬಿಕಾಯಿ ಗಾತ್ರ ಜಿಬರಂತೆ। ಒಂದಿಟ್ಟಿನ ಗಾತ್ರ ಮೂಗಲ್ಲಿ ಮುಸುರೆ ಅಂತ। ಅಲ್ಲಿಗೆ ಅವನನ್ನು ನೋಡ್ಬುಟ್ಟು। ಅವನು ಅಷ್ಟು ಕೊಳಕ ಆದ್ರೂ। ಮೂಗಯ್ಯ ಅವನು ಇಕ್ಕಿರತಕ್ಕಂಥ ಬಟ್ಟೆ ತಕ್ಕಂಡೋಗಿ। ಬೆಂಕಿಗೆ ಹಾಕಿದ್ರೆ। ಬೆಂಕಿಲೂ ಸಹ ಬೇಯೋಲ್ಲ। ಅಂತ ಕೊಳಕು ಮೂಗಯ್ಯ। ಸರಗೂರಪ್ಪನ ಮಗ ಮೂಗಯ್ಯ ಅಂತ ಅವನು। ಆ ಮೂಗಯ್ಯನಿಗೆ ಏನಪ್ಪಾ ಅಂದ್ರೆ। ಅಂತ ಕೊಳಕನಾದ್ರೂ। ಅವನೆದೆ ಒಳಗೆ। ಪಂಚೈದು ಕಳಸ। ಅವನು ನಮ್ಮಂತ ಶರಣಾರ ಕಂಡದ್ದೇ ಉಂಟಾದ್ರೆ। ಆ ಕಳಸ ಅಂತಕ್ಕಂತಾದ್ದು। ಕಿಲಿಕಿಲಿ ಅಂತ ನಗುತ್ತಲ್ಲಾ ಪರಂಜ್ಯೋತಿ। ಉರಿತದಲ್ಲಾ। ಬಾಳ ಸತ್ವವಂತನಲ್ಲ। ಇವನು ಎಷ್ಟೇ ಕೊಳಕನಾದ್ರೂ। ನಿಜ ಚೆನ್ನಾಗಿದೆ ಅನ್ಬುಟ್ಟು। ಆ ನಮ್ಮಪ್ಪಾಜಿ ಮಾದಪ್ಪನವರು। ಅವನನ್ನು ನಾನು ಒಕ್ಕಲು ಪಡಕೊಳ್ಳಬೇಕಲ್ಲಾ। ಎಣ್ಣೆ ಮಜ್ಜನಕ್ಕೆ ಅಂತೇಳ್ಬುಟ್ಟು ಅವರು ಸರಗೂರಿಗೆ ಬತ್ತವರೋ। ಸರಣಾರು.....।

ಆಹಾ..... ನೋಡಿ ನಮ್ಮ ಸಿವನಾ।

ಅಲ್ಲಿಗೆ ಸರಗೂರಿಗೆ ಬಂದ್ಬುಟ್ಟು। ನಮ್ಮಪ್ಪಾಜಿಯವರು। ಆರು ಮೂರು ಗಳಿಗೆ ಆಲೋಚನೆ ಮಾಡಿ ಬಿಟ್ಟು। ಏಕ್‌ದಂ ನಾನು ಈ ಸರಗೂರಪ್ಪನ ಅಟ್ಟಿಗೆ ಹೋಗೋದು ಎಂಗೆ ಅನ್ಬುಟ್ಟು। ಅಲ್ಲಿಗೆ ಬಂದು ಆಲೋಚನೆ ಮಾಡ್ಬುಟ್ರು। ಸರಗೂರಿನಲ್ಲಿ ನೂರೊಂದು ಒಕ್ಕಲು। ಎಲ್ಲ ಇರತಕ್ಕಂತವ್ರು। ಮುಡುಕುತೊರೆ ಮಲ್ಲಯ್ಯನ ಒಕ್ಕಲು। ತಿರುಪತಿ ವೆಂಕಟರಮಣಸ್ವಾಮಿ ಒಕ್ಕಲು। ಅವರೇ ಬಿಟ್ರೆ ಇನ್ನು ಯಾವ ಒಕ್ಕಲೂ ಅಲ್ಲವಲ್ಲಾ। ಇನ್ನು ಅವರಿಬ್ಬರನ್ನೂ ಹಿಡಕೊಂಡು। ನಾನು ಹೋಗಿ। ನಾನು ಅವರ ಬೆಂಬಲ। ಹೋಗಿ ನಾನು ಪಡೀಬೇಕು ಅಂತೇಳಿ। ನಮ್ಮಪ್ಪಾಜಿ ಮಾದಪ್ಪನವರು। ಮುಡುಕುತೊರೆಗೆ ಹೊಯ್ತಾವರೆ। ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ।
ಮಲೆಯೋ ಮಾಯಕಾರ ಬರುವಾ ಚೆಂದಾವಾ।
ನೋಡಿ ನಮ್ಮ ಸಿವನಾ।

ಮುಡುಕು ತೊರೆಗೆ ಹೋಗ್ಬುಟ್ಟು। ಮೂಡಲ ಮುಡುಕು ತೊರೆ ಮಲ್ಲಯ್ಯನ ಸಹಾಯ ತಕ್ಕೋಬೇಕು। ಅನ್ಬುಟ್ಟು ಓಗಿ। ಮುಡುಕುತೊರೆಗೆ ಹೋಗಿ ನೋಡುವಂತಾ ಕಾಲ್ದಲ್ಲಿ। ಮುಡುಕುತೊರೆ ಮಲ್ಲಪ್ಪ ಏನು ಮಾಡ್ತಾನೆ ಅಂತ ಹೇಳಿದ್ರೆ। ತನ್ನ ಬಂಡಾರ ಪೆಟ್ಟಿ ಬಲಗೈಲಿ ಹಿಡ್ಕಂಡು। ಪಾರ್ವತೀನ ತೊಡೆ ಮ್ಯಾಲೆ ಕೂಡಿಸಿಕೊಂಡು। ಬಂಡಾರ ಸೇವೆ ಮಾಡ್ತಾ ಇದ್ರಂತೆ। ಒಹೋ..... ಒಳ್ಳೆ ವೇಳ್ಗೆ ಬನ್ಬುಟ್ನಲ್ಲಾ। ನಾನು ಈ ವ್ಯಾಳೇಲಿ ಕೂಗಿದ್ದೇ ಉಂಟಾದ್ರೆ। ಎಲ್ಲಿ ರೇಗಾಡ್ತಾರೋ ಅನ್ಬುಟ್ಟು। ಈಚೆ ಬಾಕಲಲ್ಲಿ ನಿಂತ್ಕಂಡು। ಎಂತ ಮಾತ್ನಾಡ್ತಾರೆ ಅಂತ ಹೇಳಿದ್ರೆ। ನಿನಗೆ ಸರಣಾರ್ತಿ ಕಣಪ್ಪಾ ಮಲ್ಲಣ್ಣಾ।

ಆಹಾ...... ನೋಡಿ ನಮ್ಮ ಸಿವನಾ।

ಶರಣಾರ್ತಿ ಕಣಯ್ಯಾ ಮಲ್ಲಣ್ಣ ಅಂತೇಳ್ಬುಟ್ಟು। ಬಾಗಿಲಲ್ಲಿ ನಿಂತ್ಕಂಡು। ಬಂಡಾರ ಸೇವೆ ಮಾಡೋದು ಬಿಟ್ಬುಟ್ಟು। ಮೂರು ಚೋಟುದ್ದ ನಿಂತಿದ್ರು। ಅದನ್ನು ನೋಡ್ಬುಟ್ಟು। ಈಚೆಗೆ ಬನ್ಬುಟ್ಟು। ಏನಪ್ಪಾ ಅಂದ। ಏನು ಇಲ್ಲ ಮಲ್ಲಣ್ಣಾ। ನೀವು ಸರಗೂರಲ್ಲಿ ನೂರೊಂದು ಒಕ್ಕಲು ಮಾಡ್ಕಂಡಿದ್ದರಿ। ನೀವು ವೆಂಕಟರಮಣಸ್ವಾಮಿ ಮಾಡ್ಕಂಡಿದ್ದರಿ। ನಾನು ಹೋಗಿ ಮೂಡಲ ಮಲೆ ಕೈಲಾಸದಲ್ಲಿ। ಜಾಗ ಒಳ್ಳೇದು ಅಂತೇಳ್ಬುಟ್ಟು। ನಾನು ಅಲ್ಲಿ ಒಡೆದು ಮಾಡುಬಿಟ್ಟಿವ್ನಿ ಕಣಯ್ಯಾ। ಅಲ್ಲಿ ನನಗೆ ಕಾಸಿನ ಧೂಪ ಹಾಕೋವ್ರಿಲ್ಲಾ। ಕರವೆತ್ತಿ ಕೈ ಮುಗಿಯೋರಿಲ್ಲ। ಮಹದೇವ ಅನ್ನುವವರೇ ಮೊದಲಿಲ್ಲ। ಇದು ಇನ್ನೊಂದು ಮಾತೇಳ್ತೀನಿ ಕೇಳು ಮಲ್ಲಣ್ಣ। ತಿಂಗಳಿಗೊಂದು ಸಾರಿ ತುಂಬಿದ ಅಮಾವಾಸ್ಯೆ ದಿವಸ। ಸಿವರಾತ್ರಿ ದಿವಸ ನನಗೆ। ಎಣ್ಣೆ ಮಜ್ಜನವಾಗಬೇಕು। ಅದಕ್ಕಾಗಿ।

ಎಣ್ಣೆ ಮಜ್ಜನ ಮಾಡಿಸ್ಕೊಳ್ಳಕ್ಕಾಗಿ। ನನಗೆ ಸೋಮವಾರದ ಒಕ್ಕಲು ಪ್ಕಡ್ಕೋಬೇಕು। ಎಲ್ಲಿ ಪಡ್ಕೋಬೇಕಪ್ಪಾ ಅಂದ್ರೆ। ಹೇಳ್ತೀನಿ ಕೇಳು ಮಲ್ಲಣ್ಣ। ಈ ಸರಗೂರಲ್ಲಿ ನಿಮಗೆ ನೂರೊಂದು ಒಕ್ಕಲು। ಅದೆಲ್ಲಾ ನೂರು ಒಕ್ಕಲು ನೀವು ಒಬ್ಬರೇ ಮಡಿಕಂಬುಡಿ। ಆದರೆ ಕೊನೆ ಒಳಗೆ। ಹುಲ್ಲು ಜೋಪಡಿ ಹಾಕ್ಕಂಡಿದ್ದಾರಲ್ಲಾ। ಕೊಳಕ ಮೂಗಯ್ಯ। ಅವನನ್ನು ಒಂದು ಒಕ್ಕಲು ಮಾಡಿಕೊಟ್ರೆ। ಮಲ್ಲಣ್ಣಾ ಅಯ್ಯಾ ನಿನ್ನಂತ ಮಲ್ಲಣ್ಣ ನನಗಿಲ್ಲ।

ಆಹಾ..... ನೋಡಿ ನಮ್ಮ ಸಿವನಾ।

ಆವಾಗ ಹೇಳುವಂತ ಮಾತನ್ನು ಕೇಳಿಕೊಂಡು ಮಲ್ಲಣ್ಣನವರು ಏನು ಹೇಳ್ತಾರೆ। ಅಯ್ಯೋ ಮಹದೇವ ನನ್ನೊಬ್ಬನದೇ ಅಲ್ಲಯ್ಯ। ಅದು ವೆಂಕಟರಮಣಸ್ವಾಮಿ ಕೇಳಬೇಕು ಅನ್ನುಟ್ರು। ಪರ್ವಾ ಇಲ್ಲ ನಡೆಯಪ್ಪಾ ಅಲ್ಲೂ ಹೋಗೋಣ ಅಂತ ಹೇಳ್ಬುಟ್ರು। ಆಗ ಮುಡುಕುತೊರೆ ಮಲ್ಲಣ್ಣ ಮಾದಪ್ಪ ಇಬ್ಬರೂ ಸೇರಿಕೊಂಡು। ಅಲ್ಲಿಗೆ ಅವರು ಇಬ್ಬರೂ ವೈಕುಂಟಕ್ಕೆ ಬತ್ತವರೇ ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ।

ವೈಕುಂಟಕ್ಕೆ ಬಂದು। ಇಬ್ಬರೂ ಬಾಗಿಲಲ್ಲಿ ನಿಂತ್ಕಂಡಂತಾ ಕಾಲ್ದಲ್ಲಿ ತಿರುಪತಿ ವೆಂಕಟರಮಣಸ್ವಾಮಿ ಆಗಿರತಕ್ಕಂತವರು। ಏನು ಮಾಡ್ತಾರೆ ಅಂದ್ರೆ। ನಾಮದ ಪೆಟ್ಟಿ ಎಡಕ್ಕೆಮೇಲೆ ಮಡಿಕ್ಕಂಡು। ಅಲ್ಲಿ ಲಕ್ಷ್ಮಿ ದೇವಿನ ತೊಡೆಮ್ಯಾಲೆ ಕುಂಡಸ್ಕಂಡು। ನಾಮದ ಸೇವೆ ಮಾಡ್ತಾ ಇದ್ದರಂತೆ। ಅಲ್ಲಿಗೂ ಒಳ್ಳೆ ವ್ಯಾಳೆಗೆ ಪೋದೆ। ಇಲ್ಲಿಗೂ ಒಳ್ಳೇ ವ್ಯಾಳೆಯಲಿ ಬನ್ನುಟ್ಟಲ್ಲ ಅಂತ। ಈವಾಗ ನಾನು ಏನಾದ್ರೂ ಕರದದ್ದೇ ಉಂಟಾದ್ರೆ। ಬಾಳ ರೇಗ್ಸುಡ್ತಾರಲ್ಲ। ಅಂತೇಳ್ಬುಟ್ಟು। ಅಲ್ಲಿಗೆ ನಮ್ಮಪ್ಪಾಜಿಯವರು। ಅಲ್ಲಿ ಮಲ್ಲಣ್ಣನ್ನ ನಿಲ್ಲಿಸ್ಬುಟ್ಟು। ಏನು ಮಾಡ್ತಾರೆ ಅಂತೇಳಿದ್ರೆ। ನಿನಗೆ ಸರಣಾರ್ತಿ ಕಣಪ್ಪಾ ಮಲ್ಲಯ್ಯ।

ಆಹಾ...... ನೋಡಿ ನಮ್ಮ ಸಿವನಾ।

ಯಾವಾಗ ಸರಣಾರ್ತಿ ಅನ್ಬುಟ್ರೋ। ಆಲ್ಲಿಗೆ ವೆಂಕಟರಮಣಸ್ವಾಮಿ ನೋಡ್ಬುಟ್ರು। ಇದೇನು ಅಂತ ಬಂದು। ಬಗ್ಗಿ ನೋಡಿದಂತ ಕಾಲದಲ್ಲಿ। ಈ ಕಡೆ ಮುಡುಕುತೊರೆ ಮಲ್ಲಣ್ಣ। ಇಲ್ಲಿ ಮೂರು ಚೋಟುದ್ದ ನಿಂತವರೇ। ಮಾಯಕ್ಕಾರ ಮಾದಪ್ಪ। ಅಲ್ಲಿಗೆ ನೋಡ್ಬುಟ್ಟು। ಏನಪ್ಪಾ ಇಷ್ಟೊತ್ತಿನಲ್ಲಿ ಬಂದದ್ದು। ಏನು ಕಾರಣ ಅಂತ ಕೇಳಿದ। ವೆಂಕಟರಮಣ ಸ್ವಾಮಿಯವರು। ಆಗ ಮಲ್ಲಣ್ಣ ಹೇಳುವಂತ ಕಾಲದಲ್ಲಿ। ಇದೋ ಇವರು ಬಂದು। ನನ್ನತ್ರ ಇಂತದ್ದ ಕೇಳಿದ್ರು। ಇದೋ ನಿನ್ನತ್ರ ಕರಕೊಂಡು ಬಂದೆ ಅಂದ್ರಂತೆ। ಆಗ ವೆಂಕಟರಮಣ ಸ್ವಾಮಿ। ಮಲ್ಲಣ್ಣ ಇಬ್ಬರೂ। ಕಣ್ಣು ಕಣ್ಣು

ಮಿಟಕಿಸಿಕೊಂಡು। ಏನು ಹೇಳ್ತಾರೆ ಅಂತ ಹೇಳ್ಬುಟ್ರೆ। ಅಯ್ಯಾ ಹೇಳ್ತೀನಿ ಕೇಳಯ್ಯಾ। ನೂರೊಂದು ಒಕ್ಕಲಿನಲ್ಲಿ ನೂರು ಒಕ್ಕಲನ್ನೇ ಬೇಕಾದ್ರೆ ನೀನು ಮಾಡ್ಕೋ। ನಾನು ಇಕ್ಕ ಮನೆ ತೋರಿಸ್ತೀನಿ। ಅಂತೇಳ್ಬುಟ್ರು ವೆಂಕಟರಮಣಸ್ವಾಮಿ ಮುಡುಕುತೊರೆ ಮಲ್ಲಯ್ಯ ಇಬ್ಬರೂ ಸೇರಿಕೊಂಡು। ನೋಡಪ್ಪ ನಾವು ಊಟ ಮಾಡೋ ಮನೆ ನಾನು ತೋರಿಸ್ತೀವಿ। ಊಟ ಮಾಡಿದ್ರೆ ಮಾಡಬಹುದು। ಬಿಟ್ರೆ ಬಿಡಬಹುದು ಅನ್ಬುಟ್ರಂತೆ। ಆಗ ನಮ್ಮಪ್ಪಾಜಿ ಮಾಯಕ್ಕಾರ ಮರಿದೇವ್ರು। ನೀವು ತೋರಪ್ಪಾ ನನ್ನ ಸಕ್ತಿ ಇದ್ರೆ ಮಾಡ್ತೀನಿ। ಇಲ್ಲದಿದ್ರೆ ಬಟ್ಬುಟ್ಟು ಬರ್‍ತೀನಿ ಅನ್ಬುಟ್ರು। ಆಗ ನಡೆಯಪ್ಪಾ ಅಂತ ಹೇಳ್ಬುಟ್ಟು। ಮುಡುಕುತೊರೆ ಮಲ್ಲಣ್ಣ ವೆಂಕಟಸ್ವಾಮಿ ಇಬ್ಬರೂ ಸೇರಿಕೊಂಡು। ಈ ನಮ್ಮಪ್ಪಾಜಿ ಮಾದಪ್ಪನವರನ್ನು। ಸರಗೂರಿನಲ್ಲಿ ಸೋಮವಾರದ ಒಕ್ಕಲನ್ನು ಪಡೆಯುವುದಕ್ಕೋಸ್ಕರವಾಗಿ ಅವರು ಸರಗೂರಿಗೆ ಬತ್ತವರೇ। ಸರಣಾರು।[೭]

> ಮಲೆಯ ಮಾದೇವ ಬರುವ ಚಂದವಾ।
> ನೋಡಿ ನಮ್ಮ ಶಿವನಾ।

ಮಾಯ್ಕಾರ ಗಂಡ ನಮ್ಮಪ್ಪಾಜ ಮಲೆ ಮಾದೇಶ್ವರ ನಾಲಕ್ಕು ಪಾದ್ದ ಜೋಳಿಗೆ ಮುಂಗೈಲಿ ಮಡೀಕೊಂಡು। ಚಿನ್ನದ ಕಂಸಾಳೆ ಲಾದ ಮಾಡ್ಕೊಂಡು।

> ಸರಗೂರ ಹಟ್ಟೀಗೆ ಬಿಕ್ಸುಕೋಯ್ತಾರೆ ಮಾದೇವ।
> ನೋಡಿ ನಮ್ಮ ಶಿವನಾ।
>
> ಭಿಕ್ಷೇ ಭಿಕ್ಷ ನನಕಂದ।
> ಆತಿ ಸಂಕಯ್ಯನ ಭಿಕ್ಷಾ।
> ಕುಂತೂರು ಪುಟ್ಟುಸ್ವಾಮಿಯವರ ಭಿಕ್ಷಾ।
> ಬಂದಿರುವಾತನ ಭಿಕ್ಷಾ" ಅಂತ್ಹೇಳಿ
> ಮೋಕೋಪ್ಪಲ್ಲಿ ಭಿಕ್ಷಾ ಸಾರುದ್ರು।[೮]

ತುಂಬಿದ ಸೋಮವಾರದ ದಿವಸ ಹೋಗಿ। ಬಿಕ್ಷೆ ಸಾರುವಂತ ಕಾಲದಲ್ಲಿ। ಆ ಸರಗೂರಪ್ಪನ ಹೆಂಡ್ತಿ। ಶಿವಸರಣೆ ಗೌರವ್ವ ಅಂತಕ್ಯಂತವಳು ನೋಡ್ಬುಟ್ಟು। ಈಚೆಗೆ ಬಂದು ಬಗ್ಗಿ ನೋಡ್ಬುಟ್ಟು। ಮೊನ್ನ ತಾನೆ ಸೋಮವಾರದ ದಿನ। ನಮ್ಮಪ್ಪನ ಮನೆ ದೇವರು ಬಂದು ತಕ್ಕಂಡೋದ್ರು। ಆಚೆ ಮೊನ್ನೆ ಶುಕ್ರವಾರದ ದಿನ। ನಮ್ಮಪ್ಪನ ಮನೆ ದೇವರು ತಕ್ಕಂಡು ಹೋದ್ರಲ್ಲಾ। ಈವತ್ತು ಯಾರು ಸೋಮವಾರದ ದಿನ ಬಂದವ್ರೆ ಅನ್ಬುಟ್ಟು। ಯಾರಾದ್ರೇನು ನೋಡ್ಬೇಕು ಅನ್ಬುಟ್ಟು। ಶಿವಸರಣೆ ಗೌರವ್ವ ತಲೆ ತುಂಬಾ ಸೆರಗಾಕ್ಕಂಡು। ಬಗ್ಗಿ ನೋಡುವಂತ ಕಾಲದಲ್ಲಿ ಮುಡುಕುತೊರೆ ಮಲ್ಲಣ್ಣ। ಮಧ್ಯೆ ನಿಂತಿರುವವರು ಮಾಯಕಾರ ಮಾದಪ್ಪ। ಆಕಡೆ ವೆಂಕಟರಮಣಸ್ವಾಮಿ। ಯಾರಾದ್ರೇನು?

ನಮ್ಮನೆ ದೇವ್ರು। ನನ್ನ ಗಂಡನ ಮನೆ ದೇವರು ಬಂದಿರುವಾಗ। ನಾ ಕ್ವಾರಣ್ಣ ಕೊಡತಕ್ಕಂತದ್ದು। ಸತ್ಯ ಅನ್ಬುಟ್ಟು ಶಿವಸರಣೆ ಗೌರವ್ವೆ ಅಂತಕ್ಕಂತವಳು। ತಲೆ ತುಂಬ ಸೆರಗೊದ್ಗಂಬುಟ್ಟು। ಕೈಕಾಲು ತೊಳಕೊಂಡು। ಹಣೆಗೆ ಅಕ್ಷತೆ ಇಕ್ಕಂಬುಟ್ಟು। ಕುಂಕುಮ ಇಕ್ಕಂಬನ್ಬುಟ್ಟು। ಅಲ್ಲಿಗೆ ಜೋಳ ರಾಗಿ ತುಂಬ್ಕಂಬುಟ್ಟು। ಅಲ್ಲಿಗೆ ಶಿವ ಸರಣೆ ಗೌರವ್ವ। ಕಾಸಿನ ದೂಪ ಹಾಕ್ಕಂಬುಟ್ಟು। ಶಿವಸರಣೆ ಗೌರವ್ವೆ ಅಲ್ಲಿ। ಕ್ವಾರಣ್ಣ ತತ್ತವಳೇ ಗೌರವ್ವ।

ಆಹಾ...... ನೋಡಿ ನಮ್ಮ ಶಿವನಾ।
ಮಲೆಯೋ ಬೆಳ್ಳಿ ವಾಹನ ಬರುವ ಚಂದಾವಾ।
ನೋಡಿ ನಮ್ಮ ಶಿವನಾ।

ಯಾವಾಗ ಶಿವಸರಣೆ ಗೌರವ್ವ ಬಿಕ್ಷೆ ತಕ್ಕಂಡು ಬಂದು ಬುಟ್ಟು ಮೊರದಲ್ಲಿ। ಆಗ ನೋಡ್ಬುಟ್ಟಿ। ಗೌರವ್ವನಿಗೆ ನಮ್ಮಪ್ಪಾಜಿ ಮಾದಪ್ಪನವರು। ಏನು ಹೇಳ್ತಾರೆ ಅಂತ ಹೇಳಿದ್ರೆ। ಏನಪ್ಪಾ ಮಲ್ಲಣ್ಣಾ। ನೀವು ಇಷ್ಟು ದಿನ। ಬಿಕ್ಷಕ್ಕೆ ಬತ್ತಿದ್ರಲ್ಲಾ। ಈ ಸರಗೂರು ಅಂತಕ್ಕಂತಾದ್ದು ಎಷ್ಟು ಚೆನ್ನಾಗಿದೆ ಕಣಯ್ಯಾ। ಈ ಸರಗೂರನ್ನು ನೀವ್ಯಾರು ಪತ್ರೆ ಕಟ್ಲಿಲ್ಲ ಅನ್ಬುಟ್ಟು। ಶಿವ ಶರಣೆ ಗೌರವ್ವ ಮೊರ ಹಿಡ್ಕಂಡು। ಹಂಗೆ ನಿಂತಿದ್ದಾಳಂತೆ। ಆಗ ನಮ್ಮಪ್ಪಾಜಿಯವರು। ಆ ವೆಂಕಟರಮಣ ಸ್ವಾಮಿಗೂ ಮಲ್ಲಣ್ಣನಿಗೂ ಏನು ಹೇಳ್ತಾರೆ। ಈ ಸರಗೂರು ಅಂತಕ್ಕಂತಾದ್ದು। ಇಷ್ಟು ಚೆನ್ನಾಗಿರೋ ಊರಿಗೆ ನೀವು ಸರಗೂರು ಅಂತ್ಲೇ ಮಾಡಿದ್ದಿರಲ್ಲಾ। ಒಂದು ಪದ್ಯ ಕಟ್ಟ ಬಾರದ ಅಂದ್ರಂತೆ। ಏನಪ್ಪಾ ಪದ್ಯ ಕಟ್ಬೇಕು ಅಂದ್ರೆ। ಹೇಳ್ತೀನಿ ಕೇಳ್ರಯ್ಯಾ ಅನ್ಬುಟ್ಟು। ಅಲ್ಲಿ ಆ ಸರಗೂರಿಗೆ ಏನಂತ ಪದ್ಯ ಕಟ್ಟಿದರು ನಮ್ಮಪ್ಪಾಜಿಯವರು। ಈ ರಾಮವ್ವೆಗೂ ಸೇರಬೇಕು ಅಂತ ಅದಕ್ಕಾಗಿ ಒಂದು ಪದ್ಯ ಹೇಗೆ ಕಟ್ತಾರೆ ಅಂದ್ರೆ-

ಸರಗೂರು ಚಂದಾ। ಸರದ ಮಲ್ಲಿಗೆ ಚಂದ।
ಕರೆವೆಮ್ಮೆ ಹಾಲು ನೊರೆ ಚಂದಾ। ಕರೆವೆಮ್ಮೆ ಹಾಲು ನೊರೆ
ಚಂದಾ ಗೌರಮ್ಮ ನಿನ್ನ ಕೊರಳಲ್ಲಿರುವ ಸಣ್ಣ ರುದ್ರಾಕ್ಷಿ ಸರ ಚಂದ॥
ಆಹಾ..... ನೋಡಿ ನಮ್ಮ ಶಿವನಾ॥

ತಕ್ಷಳಿ ಸ್ವಾಮಿ ಬಿಕ್ಷವ ಅಂತೇಳಿದ್ಲು। ಯಾರು ಗೌರವ್ವ। ಆಗ ಮುಡುಕುತೊರೆ ಮಲ್ಲಣ್ಣ ಏನು ಹೇಳ್ತಾರೆ। ಅಲ್ಲವ್ವಾ ಮೊನ್ನೆ ತಾನೇ ಬಂದು ಕ್ವಾರಣ್ಣ ತಕ್ಕಂಡು ಹೋಗಲಿಲ್ಲವಾ ಅನ್ಬುಟ್ರು। ಸರಿ ಹಾಗಿದ್ರೆ ನೀವು ತೆಗೆದುಕೊಳ್ಳಿ ಸ್ವಾಮಿ ಅಂದ್ಲು ವೆಂಕಟರಮಣ ಸ್ವಾಮಿಗೆ। ಆಗ ವೆಂಕಟರಮಣಸ್ವಾಮಿ ಏನು ಹೇಳ್ತಾರೆ। ಮೊನ್ನೆ ಶನಿವಾರ ಬಂದು। ನಾನು ಕ್ವಾರಣ್ಣ ತಕ್ಕಂಡು ಹೋಗಲಿಲ್ಲವವ್ವಾ ಅನ್ಬುಟ್ಟು। ನೀವಿಬ್ರೂ ತಕ್ಕಳ್ದೆ ಇದ್ಮಾ್ಕಲೆ। ಮತ್ತೇಕೆ ನನ್ನ ಅಟ್ಟಿ ಬಾಗಿಲಿಗೆ ಬಂದ್ರಿ ಅನ್ಬುಟ್ಲು। ಆಗ ಏನೇಳ್ತಾರೆ।

ಇಬ್ಬರೂ ಸೇರಿಕೊಂಡು ಹೇಳ್ತೀರಿ ಕೇಳವ್ವಾ। ಇಗೋ ನಮ್ಮಿಬ್ಬರ ಮಧ್ಯದಲ್ಲಿ ನಿಂತಿರತಕ್ಕಂತದ್ದು। ಸೋಮವಾರದ ಗುಡ್ಡಯ್ಯ। ಈವಾಗ ಸೋಮವಾರದ ಗುಡ್ಡಯ್ಯ ಬಂದವ್ನೆ। ಅವನಿಗೆ ಕ್ವಾರಣ್ಯ ಕೊಡವ್ವಾ ಅಂತೇಳ್ಬುಟ್ರು। ಆಗ ಶಿವಸರಣೆ ಗೌರವ್ವನಿಗೆ ಬಾಳ ಕ್ವಾಪ ಬನ್ಬುಡ್ತು। ಏನು ಸ್ವಾಮಿ ಇಂತ ಮಾತೇಳ್ತಿದ್ದೀರಲ್ಲಾ। ನನ್ನ ಗಂಡನ ಮನೆ ದೇವರು। ನಮ್ಮಪ್ಪನ ಮನೆ ದೇವರು। ಎರಡು ಒಕ್ಕಲು ಬಿಟ್ಟು ಬಿಟ್ರೆ ಸೋಮವಾರದ ದಿನ ನನ್ನ ಸಿರಾನಾ ತೆಗೆದು ಮಡಗಿದ್ರೂ ಆಗೋಲ್ಲ ಅನ್ಬುಟ್ಳಂತೆ। ಆವಾಗಲೀಗ ಮುದುಕುತೊರೆ ಮಲ್ಲಣ್ಣ। ವೆಂಕಟರಮಣ ಸ್ವಾಮಿ। ಇಬ್ಬರೂ ಸೇರಿಕೊಂಡು। ಏನಪ್ಪಾ ಮಹದೇವ ಇದೋ ನಾವು ಇಕ್ಕೋ ಮನೆ ತೋರಿದ್ದಿವಿ। ಊಟ ಮಾಡಿದ್ರೆ ಮಾಡು। ಬಿಟ್ರೆ ಬಿಡು। ಅನ್ಬುಟ್ಟು ಅವರಿಬ್ಬರೂ ಹೇಳಿಬುಟ್ಟು। ಅವರಿಬ್ರೂ ಹೊರಟೋಗ್ಬುಟ್ರು। ನಾನೇನು ಬಿಕ್ಸ ಅಂತ ಬಂದಿಲ್ಲವ್ವ। ನಾನು ಏಳು ಮಲೆ ಕೈಲಾಸದಲ್ಲಿ ನೆಲಗೊಂಡಿವ್ನಿ ಕಂದವ್ವಾ। ಅದಕ್ಕಾಗಿ ನಿಮ್ಮ ಮನೆ ಮೇಲೆ ಮನಸು ಬಂದುಬಿಡ್ತು। ಅಲ್ಲಿಗೆ ವರ್ಷಕ್ಕೆ ಒಂದಾವರ್ತಿ। ತುಂಬಿದ ಅಮಾವಾಸ್ಯೆ ದಿವಸ। ಶಿವರಾತ್ರಿ ದಿವಸ। ನಿನ್ನ ಮಗನ ಕೈಲಿ। ನಾನು ಎಣ್ಣ ಮಜ್ಜನ ತಕ್ಕ ಬೇಕು ಅಂತೇಳ್ಬುಟ್ಟು। ಕಂದವ್ವಾ। ನಿಮ್ಮ ಮೇಲೆ ಬಾಳ ಪ್ರೀತಿ ಬಂದಿದೆ। ಆದ್ದರಿಂದ ನಿಮ್ಮಟ್ಟಿಗೆ ಬಿಕ್ಸೆಗೆ ಬಂದೆ ತಾಯವ್ವ। ಕ್ವಾರಣ್ಯ ನೀಡು ಅಂತವರೇ। ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ।
ಕೇಳು ಕೇಳಪ್ಪಾ ಮಾದೇವಾ
ಲಿಂಗಾವ ಕಟ್ಟಿದರೆ ಜಂಗನ್ನು ಧರಿಸಿದರೆ ತಂದನ್ನು ತಾನೋ।
ಲಿಂಗವಂತರ ಮಗನಯ್ಯೋ ತಂದನ್ನ ತಾನ।
ತಂದನ್ನ ತಾನು ತಾನು ತಂದೇನಾ, ತಂದನ್ನು ತಾನು
ಸಿವ ತಂದನ್ನ ತಾನ ತಾನೆಂದೆ ನಾನು, ತಂದೆನ್ನೆ ತಾನು।

ಆದರೆ ಗುರುವೆ ಗುರು ತಂದೆಯೇ। ಏನಪ್ಪಾ ಲಿಂಗ ಕಟ್ಟಿದ್ದೀರಿ। ಜಂಗು ಧರಿಸಿದ್ದೀರಿ ಲಿಂಗವಂತರ ಮಗನಾಗೇ ಕಾಣ್ತಾ ಇದ್ದೀಯಲ್ಲಪ್ಪಾ। ಪರಮಾತ್ಮ ಆದರೆ ನನ್ನ ಮನೆ ಅತ್ರ ಬಂದು। ದಾನವನ್ನು ಸಾರ್ತಾ ಇದ್ದಿ।

ಉಪ್ಪನ್ನು ಮಾರುವರು। ಸೊಪ್ಪನ್ನೇ ಬೆಳೆಯುವರು। ತಂದನ್ನು ತಾನ। ಗುರುವೆ ಊರೂರು ಸುತ್ತ ಮಾರುತ್ತ ಬರುವ ಗುರುವೆ। ತಂದನ್ನ ತಾನೆ। ಏನಪ್ಪಾ ಉಪ್ಪು ಮಾರುವವರು। ಸೊಪ್ಪು ಬೆಳೆಯುವವರು।

ಊರೂರು ಒತ್ತು ಮಾರುವಂತ। ಜಾತಿ ಒಳಗೆ ಉಪ್ಪಾಲಿಗರು ಕಣಪ್ಪಾ। ನನ್ನ ಮನೆ ಹತ್ತಿರ ಬಂದು। ದಾನವನ್ನು ಸಾರ್ತಾ ಇದ್ದಿ ಎಂಬುದಾಗಿ ಕೇಳಿದರು। ಶಿವಶರಣೆ ಆಡ್ಡಿದಂತಾ ಮಾತು ಕೇಳಿಕೊಂಡು। ಮಲೆ ಮಾದೇಶ್ವರ ಯಾವ ರೀತಿ ಹೇಳತಾ

ಅವರೆ ಅಂದರೆ। ಕೇಳು ಕೇಳು ನನ ಕಂದ। ಹೆಣ್ಣು ಮಗಳೇ। ಜಾತಿ ಕೇಳಿಲ್ಲ! ಕುಲಪ್ಪಾ ಕೇಳ್ಲಿಲ್ಲ ಕಣಮ್ಮಾ। ಜಗತ್ತಿನಲ್ಲಿ ಹೆಣ್ಣೊಂದು ಜಾತಿ। ಗಂಡೊಂದು ಜಾತಿ ಕಣಪ್ಪಾ। ನನ್ನ ಕಂದ ಹೆಣ್ಣು ಮಗಳೇ ಯಾತಕ್ಕಾಗಿ ನಾನು ನಿನ್ನ ಮನೆ ಹತ್ತಿರ। ದಾನವಾ ಸಾರ್ತಾ ಇದ್ದೀನಿ ಅಂದ್ರೆ। ನಾನು ಇಂದೇ ಕೊಯಮತ್ತೂರು ನಾಡಿಗೆ ಹೋಗ್ಬಿಟ್ಟೆ! ಕೊಂಗ ಮಕ್ಕಳು ತಂದು। ತಮ್ಮಡಿತನಕ್ಕೆ ಮಾಡಿಕೊಳ್ಳಲಾಗಿ। ಮೂಡ ಭಕ್ತಿಯಿಂದ ಪೂಜೆ ಮಾಡಿ। ಮರಳೆಣ್ಣೆ ಮಂಡೆಗೊತ್ತಿದ್ರು। ಉಚ್ಚೆಳ್ಳೆಣ್ಣೆ ಕುಡಿಸಿದ್ರೂ ಬಿದರಕ್ಕಿ ಅಷ್ಟ ತಳಿಗೆ ಮಾಡಿ ಎಡೆ ಬಡಿಸಿದ್ರು। ಕಾಡು ಬಾಳೆಹಣ್ಣು ಮುರಿದು ಪೂಜೆ ಮಾಡಿದ್ರು! ಕಾಡು ದೂಪ ಹಾಕಿ ಕೈಮುಗದ್ರು। ಕೊಂಗಮತ್ತು ಬಾರಿ ಗನವಾಗ್ಬಿಟ್ಟಿದೆ! ಮೇಲಕ್ಕೇಳಕ್ಕಾಗೊಲ್ಲ! ಎದ್ದರೆ ಕೂತ್ಕಕ್ಕಾಗೋಲ್ಲ! ಈ ರೀತಿಯಾಗ್ಬುಟ್ಟಿದೆ। ನನ್ನ ಕಂದ ಹೆಣ್ಣು ಮಗಳೇ ನಿನ್ನ ಗಂಡ ಸರಣ ಮೂಗಪ್ಪನವರು। ನನ್ನ ಮೂಡಲ ಮಲೆ ಕೈಲಾಸಕ್ಕೆ ಬಂದು। ಆದರೆ ಗುರುವೆ ಗುರು ತಂದೆಯೆ। ಅಂಗೈಲಿ ಎಳ್ಳು ಗೋರಿಕೊಂಡು। ಒನಕೇಲಿ ಕುಟ್ಟಕ್ಕಿಲ್ಲ! ಒರಳಿನಲ್ಲಿ ಆಡಿಸಕ್ಕಿಲ್ಲಾ! ಅಂಗೈನಲ್ಲಿ ಎಳ್ಳು ಮಾಡಿಕೊಂಡು ಮಂಡಿ ಸಂದಿನಲ್ಲಿ ಮೂರು ಸುತ್ತು ಗರಗರನೆ ಸುತ್ತು ಬುಟ್ಟು। ನನ್ನ ಬೋಳು ಮಂಡೆಮ್ಯಾಲೆ। ಮೂರು ಬೊಟ್ಟು ಎಣ್ಣೆ ಮಜ್ಜನ ಮಾಡಿದರೆ। ನನಗೆ ಹಿಡಿದಿರುವಂತ ಹುಚ್ಚು ಬೆಪ್ಪು। ಬಿಡುಗಡೆ ಎಂದಾನಲ್ಲೋ ಮೂಡಲ ಮಲೆಯ ಮಾದೇವಾ।

ಆಹಾ.... ಕ್ವಾರಣ್ಯಗಳ ನೀಡಮ್ಮಾ
ಮಾದೇವ ಲಿಂಗನಿಗೆ,
ಕೋಲು ಮಂಡೆ ಜಂಗಮರು ಕ್ವಾರಣ್ಯಕ್ಕೆ
ಬಂದು ಸಾರವರೇ
ಆಹಾ..... ಕ್ವಾರಣ್ಯ ನೀಡಮ್ಮಾ ಮಾದೇವ ಲಿಂಗನಿಗೆ

ಸಿವಶರಣೆ ರಾಮವ್ವನವರು। ಯಾ ರೀತಿಯಾಗಿ ಹೇಳ್ತಾವ್ರಂದ್ರೆ। ಗುರುವೇ ಗುರು ತಂದೆಯೇ ಕೇಳಪ್ಪಾ। ನನ್ನ ಗಂಡ ಮೂಗಪ್ಪನವರು। ಇಲ್ಲಿಗೆ ಒಂದು ಯೋಜನೆ ಆಗ್ತದೆ ಕಣಪ್ಪಾ। ಉಪ್ಪಿನ ಗಟದಲ್ಲಿ ಉಪ್ಪಿನ ವ್ಯಾಪಾರ ಮಾಡಿಕೊಂಡು। ಅಲ್ಲವ್ರೆ ಕಣಪ್ಪಾ ಇಲ್ಲಿಲ್ಲ! ನಾನು ಯಾವ ರೀತಿಯಾಗಿ ಮತ್ಯಾರನ್ನ ಕಳುಹಲಪ್ಪಾ ಅಂದ್ಲು!'

ಸರಗೂರಯ್ಯನ ಮಠಕ್ಕೆ ದೃಷ್ಟಿ ಮಡಗಿದರು। ಅರಗಣ್ಣು ಕಿರುಗಣ್ಣು ಬಿಟ್ರು ಮಾದಪ್ಪ! ಆವಾಗ ಅವರು ತುಂಬಿದ್ದಂತಹ ರಾಗಿ ಗುಳಿ ಜ್ವಾಳದ ಗುಳಿ। ನಾಳೆ ಸೋಮವಾರ ಮೂಗಯ್ಯನೋರು। ರಾಗಿ ಜ್ವಾಳ ತಕ್ಕಳಕ ಹೋಗ್ತಾರೆ। ಅಷ್ಟು ಹೊತ್ತಿಗೆ ಮಾದಪ್ಪ ರಾಗಿ ಗುಳಿ ಜ್ವಾಳದ ಗುಳಿಯನ್ನೆ। ಅವರು ಬೂದಿ ರಾಸ್ಯ ಮಾಡವರೇ ಮಹದೇವಾ। ಕೊತ್ತೇಗಾಲದ ಹೆಣ್ಣೆ! ಮೂರು ಜನ ಮುನಿಗಳು ಬಂದು ಭಿಕ್ಷೆ ಕೇಳಿದ್ರು। ನೀನು ಭಿಕ್ಷೆ ಕೊಟ್ಟಿದ್ದು ಸರಿಯಾಯ್ತು! ಆ ಮುನಿಗಳೊಂದಿಗೆ ತಿರಗ ಯಾಕೆ ಮಾತಾಡ್ದೆ

ನೀನು। ಈವತ್ತು ನೋಡು ನಮ್ಮ ಬಾಳೀನಾಯ್ತು। ತೆಂಕಲ ಗದ್ದೆಗಾದ್ರು ಹೋಗಿ ಬತ್ತ ಕುಯ್ಕಂಡು ಬತ್ತಿನಿ। ಒಣಗಿಸಿ ಕುಟ್ಟಿ ಗಂಜಿನಾದ್ರು ಕಾಯ್ಸು ಅಂತೇಳಿ। ತೆಂಕಲ ಗದ್ದೆಗೆ ಬರುತವನೆ ಮೂಗಯ್ಯ। ತೆಂಕಲ ಗದ್ದೆಗೆ ಬರೋವತ್ತಿಗೆ। ಮಾಯಕ್ಕಾರ ಗಂಡ ಮಾದೇವಾ। ಆ ಭೂಲೋಕದಲಿ ಹೊಳೆ ಕೆರೆಲಿದ್ದಂತಹ ಗೀಜಗನ ಹಿಂಡನ್ನೆಲ್ಲಾ ಕರೆದು। ಮೂಗಯ್ಯನ ಗದ್ದೆಗೆ ಬುಟ್ಟಿದ್ದಾರೆ। ಮೂಗಯ್ಯ ಮನೆಗೆ ಬಂದ ಟೈಮಿನಲಿ। ಆ ಗೀಜಗನ ಹಿಂಡೆಲ್ಲಾ ಸೇರಿಕೊಂಡು। ತೆಂಕನ ಗದ್ದೆ ಒಳಗೆ ಇರತಕ್ಕಂತಹದ್ದು। ಭತ್ತ ಒಂದು ಕಾಳಿಲ್ದಂಗೆ ಎಲ್ಲಾ ಉಗ್ರ್ಕೊಂಡು। ಬರಿ ಹುಲ್ಲು ನಿಲ್ಲಿಸ್ಬುಟ್ಟೋ। ಮೂಗಯ್ಯ ಹೋಗಿ ನೋಡ್ದ ಎಲ್ಲಾ ಬರಿ ಹುಲ್ಲಾಗದೇ। ತನ್ನ ಮಠ ಮನೆಗೆ ಬರುತವನೇ ಮೂಗಯ್ಯ।

ನೋಡಿ ನಮ್ಮ ಶಿವನಾ।

ಆಗ ರಾಮವ್ವೆ ಹೇಳ್ತಾಳೆ। ಹೆದರಬೇಡ ಯಜಮಾನ। ಆ ಮುನಿಗಳು ಒಂದು ಶಾಪ ಕೊಟ್ರು ಅಂತ ಹೆದರಬೇಡ। ಮಾವ್ವಳ್ಳಿ ಚೌಡ ಮಾಳಕ್ಕೋಗು। ನಮ್ಮ ಜಾತಿ ಪದ್ಧತಿ ಇದ್ದ್ರೇ ಇದೆ। ನಾವು ಉಪ್ಪಾರು। ಆದರೆ ಚೌಡಮಾಳದಲ್ಲಿ ಹೋಗಿ। ಚನ್ನಾಗಿ ಬೆಳ್ಳ ಬೆಳ್ಳಗೆ ಇರುವಂತಹದ್ದು। ಚೌಳ ಮಣ್ಣೆಲ್ಲಾ ಕೆರ್ದು ಗುಡ್ಡೆ ಹಾಕು। ನಾನು ಮನೆಯಿಂದ ತ್ವಾಟದ ಒಳಗೆ। ಎರಡು ಪಾತ್ರ ಕೀರೆ ಸೊಪ್ಪದೇ। ಕೀರೆ ಸೊಪ್ಪು ಕೂಡಾ। ಸೊಪ್ಪು ಬೇಯ್ಸಿಕೊಂಡು ಅಂಬ್ಲಿ ಕಾಯಿಸ್ಕಂಡು ಬರ್‍ತಿನಿ। ನೋಡಪ್ಪ ದೇವೇಂದ್ರರಾಯ। ಯಾವ ಕಡೆ ಗುಡ್ಗು ಮಿಂಚು ಇಲ್ಲದೆ ಇದ್ರೂವೆ। ಆ ಮಾವ್ವಳ್ಳಿ ಚೌಳದ ಮಾಳದ ನ್ಯಾರಕೆ। ಒಂದು ಸಾರಿ ಮಿಂಚಿಸ್ ಬುಟ್ಟು ಸ್ವಲ್ಪ ಮಳೆ ಬಿಳಿಸ್ಬುಡಪ್ಪ। ಮಾಳದಲ್ಲಿರತಕ್ಕಂತಹ ಚೌಳನ ಗುಡ್ಡೆಯೆಲ್ಲಾ ಕೊಚ್ಕಂಡೋಗಿ ಹೊಳೆಗೆ ಬಿದ್ದೋಗ್ಲಿ ಅಂದ್ರಂತೆ ಮಾದಪ್ಪ। ಮಾಯದಂತೆ ಆವಾಗ ದೇವೇಂದ್ರಪತಿ ಒಂದು ಸಾರಿ ಗುಡುಗಿದ್ದಾರೆ। ಒಂದು ಸಾರಿ ಗುಡುಗಿ ಒಂದು ಸಾರಿ ಮಿಂಚಿ। ಆವಾಗ ಮಾವ್ವಳ್ಳಿ ಮಾಳ ಕಟ್ಕಂಡು। ಕಲ್ಲೂರು ತೋಪ ಕಟ್ಕಂಡು। ಇದೂ ಅಲ್ಲದ ಮೇಲ್ಗಡೆ ಹೊಳೆ ಸರದ್ದು ಕಟ್ಕಂಡು ಅವರು ಕುಟುಗಲ ಮಳೆಯ ಕರೆದವನೆ ದೇವೇಂದ್ರ।

ನೋಡಿ ನಮ್ಮ ಶಿವನಾ।

ಯಾವಾಗ ಮಳೆ ಬಿದ್ದು ಬುಡ್ತೋ। ಮೂಗಯ್ಯನವರು ಕೆರದು ಗುಡ್ಡೆ ಹಾಡಿದಂತಹ। ಚೌಳ್ಳ ಉಪ್ಪಲ್ಲ ಕರಗಿ ಮಣ್ಣಾಗಿ ಹೋಗ್ಬಿಡ್ತು। ಅಷ್ಟು ಹೊತ್ತಿಗೆ ಹನ್ನೆರಡು ಗಂಟೆ ಒಂದು ಗಂಟೆ ಆಯ್ತು। ಮದ್ಯಾಹ್ನ ಹೊತ್ತು ತಿರುಗಿ ಬಿಡ್ತು। ರಾಮವ್ವ। ಅಂಬ್ಲಿ ಕಾಯಿಸಿಕೊಂಡು ಸೊಪ್ಪು ಬೇಯಿಸ್ಕಂಡು ಹೊತ್ತಕಂಡು ಬಂದಳು। ಚೌಳ ಮಾಳದಲ್ಲಿ ಮರ್ದಂಡ್ಲಿ ಕೂತಿದ್ದ ಮೂಗಪ್ಪ। ಬನ್ನಿ ಯಜಮಾನ್ರೆ ಊಟ ಮಾಡಿ ಅಂದ್ಲು। ಒಂದು

ಸಾರಿ ಸೊಪ್ಪನ್ನೆತ್ತಿ ಬಾಯ್ಗಾಕಿದ್ದಾನೆ। ಇನ್ನೊಂದು ಸಾರಿ ಕೈ ಹಾಕೊ ಹೊತ್ತಿಗೆ। ಅವನು ಉಣ್ಣುವಂತ ಬಟ್ಟಲ್ಲಿ। ಬೇಯಿಸಿದಂತಹ ಸೊಪ್ಪೆಲ್ಲಾ ಹುಳವಾಗಿ ಮಿಳ್ಳದೆ। ಗುರುದೇವಾ।।

ನೋಡಿ ನಮ್ಮ ಶಿವನಾ।

ಸರಗೂರು ಮಠಕ್ಕೆ ಬಂದು। ಯಾರು। ಮುಡುಕುತೊರೆ ಮಲ್ಲಣ್ಣ। ಸತ್ಯವಂತ ರಾಮವ್ವನ ಹಟ್ಟಿ ಒಳಗೆ ಹೋಗಿ ನಿಂತ್ಕಂಡು। ಕ್ವಾರಣ್ಯ ಸಾರಿದ್ರೂ। ಸ್ವಂತ ರಾಮವ್ವೆ ಬಂದ್ಲು ಈಚೆಗೆ। ಮುಡುಕುತೊರೆ ಮಲ್ಲಣ್ಣ ಈ ಮಾಯಕ್ಕಾರ ಗಂಡನ ಕರಕಂಡು ಬಂದವನೆ। ಇವನ್ಯಾವ ಯಂತ್ರಗಾರನೋ ಮಂತ್ರಗಾರನೋ। ಮೋಡಿ ಹಾಕೋನೋ ಗೊತ್ತಿಲ್ಲ। ನನ್ನ ಜ್ವಾಳದ ಗುಳಿ ರಾಗಿ ಗುಳಿಯೆಲ್ಲಾ ಬೂದಿಯಾಯ್ತು। ಚೌಳು ಮಾಳ್ಗಲ್ಲೋಗಿ। ಚೌಳುಪ್ಪು ಕೆರೆದು ಗುಡ್ಡೆ ಮಾಡಿದ್ದೆ। ಅದು ಕೂಡ ಮಳೆ ಬಂದು ಹೊಕ್ಕೊಂಡು ಹೋಯ್ತು। ಯಿಂತಹ ಜಂಗಮನನ್ನು ಕಣ್ಕಂಬಂದ್ಯಪ್ಪ।

ನೀವು ಹಟ್ಟಿ ಬುಟ್ಟು ಹೋಗಿ ಅಂತವಳೇ ರಾಮವ್ವೆ।। ನೋಡಿ ನಮ್ಮ ಶಿವನಾ।। ರಾಮವ್ವನ ಮಾತ ಕೇಳಿದ್ದೆ। ಮಾದಪ್ಪನಿಗೆ ಸಂತೋಸವಾಯ್ತು। ಯಾತಕ್ಕೆ। ನನ್ನ ತಾಯಿ। ಯಾರು? ಮಾದಪ್ಪನ ತಾಯಿ। ಯಾವ ರೀತಿ ಎಂದರೆ ಉತ್ತರಾಜಮ್ಮನವರು। ಆದೇಸ ನೀಡಿದ್ರು ಇಲ್ಲ ಶಾಪ ಕೊಟ್ಟಿದ್ರು। ತಾಯಿ। ನೀನು ನರಲೋಕದಲ್ಲಿ। ಸುವರ್ಣಾವತಿಯಾಗಿ ನದಿಯಾಗಿ ಹರೀಲಿ ಅಂತೇಳಿ। ಎದೆ ಪಾಲು ಕರೆದುಬುಟ್ಟು। ತವಸರದ ಕಂಬದ ಬೋಳಿಲಿ ಲಿಂಗೈಕ್ಯರಾಗಿ, ಕಲಿಯುಗದಲ್ಲಿ। ನೀವು ಮೇಲ್ಜಕ್ರೆ ಸೆಟ್ರ ಜಾತಿ ಒಳ್ಗುಟ್ಟಿ। ರಾಮವ್ವೆಯಾಗಿ ನೀನ್ಹುಟ್ಟು। ಮೂಗಯ್ಯನಾಗಿ ಸರಗೂರಯ್ಯ ಹುಟ್ಟಲಿ। ನೀವಿಬ್ಬರೂ ಬಂದು। ಏಳು ಮಲೆಯೊಳಗೆ ಕಲಿಯುಗದಲ್ಲಿ ನನಗೆ। ಎಣ್ಣೆ ಮಜ್ಜನ ಮಾಡಿ, ಅಂತೇಳಿ ಶಾಪ ಕೊಟ್ಟಿದ್ರು। ಅದಕ್ಕಾಗಿ ಮಾದಪ್ಪನಿಗೆ ಕ್ವಾಪವಿಲ್ಲ। ತಾಯಿ ಸಿವಶರಣೆ।'

ಮೂಗಪ್ಪನವರು। ಕರಿಕಂಬ್ಳಿ ಗ್ವಾಟೆಯನ್ನು ಹೆಗಲ್ಗಾಕೊಂಡು। ಉಪ್ಪನ ಮ್ಯಾಳ್ಗೆ ಉಪ್ಪದ ಕಟ್ಟೆ ಹೋಗಿದ್ದಾರೆ। ಅರ್ಜನ ಅಣ್ಣದೀರು। ಏಳುಮಂದಿ ಜೀತ್ಗಾರ್ರು। ಮೇಣಿ ಕೈಲಿಡ್ಕೊಂಡು ಹೊಲವನ್ನ ಉಳಕೋಗಿದ್ದಾರೆ। ಸರಗೂರಪ್ಪನ ಸೊಸೇರು ಮನೆ ಒಳುಗೆ ಒಗ್ಗಾನ ಮಾಡ್ತಾ ಇದ್ದಾರೆ। ಅರ್ಜನ ವಾರ್ಗಿತ್ತೀರು। ರಾಮಮ್ಮರಿಗೆ। ಕಾಲಲ್ಲಿ ಕೆಲ್ಸ ತೋರುಸ್ತೆ।

ಕೈಲಿ ಮಾಡ್ಕೊಂಡ್ವತ್ತವುಳೆ ರಾಮವ್ವೆ।
ನೋಡಿ ನಮ್ಮ ಶಿವನಾ।

ಆದ್ರೂ ರಾಮಮ್ಮನವರು। ಬಾಯ್ಬುಟ್ಟು ಒಂದ್ಮಾತ್ನು ಆಡದಂತೆ। ಕಾಲ ಕಳ್ಕೊಂಡೊಯಿತ್ತಿದ್ದಾಳೆ। ಮದ್ದಾನ್ಹೊತ್ಗೆ ಸರಿಯಾಗಿ ಊಟ ತಕೊಂಡೋಗ್ಬೇಕಲ್ಲ।

ಸರಗೂರಪ್ಪನ ಮಡ್ಡಿ ಗೌರಮ್ಮ ನೋಡುದುಲ್ಲ! "ಸೊಸೆ ಮುದ್ದೀರೆ ಬನ್ನಿ" ಅಂತ ಕೂಗುದಿಲ್ಲಲ್ಲ! ಆರ್ಮಂದಿ ಸೊಸೇರು ಗುಡುಗುಡನೋಡ್ಬಂದು! ಅತ್ತೆ ಪಾದುಕ್ಕೆ ಸರಣ್ಮಾಡುದ್ರಂತೆ! ಆವೊತ್ನಲ್ಲಿ ರಾಮಮ್ಮ ಹಜಾರ್ದ ಕಸವನ್ನು ಗುಡುಸ್ತಿದ್ಲು! ಸರಗೂರಪ್ಪನ ಮಡದಿ ಸರಣೆ ಗೌರಮ್ಮ ನೋಡ್ಬುಟ್ಲು! ಮನೆಗೆ ಯಜಮಾನಗಿತ್ತಿ ಯಾರು? ಕಿರಿಸೊಸೆ! ಮೂಗಪ್ಪದ್ಯಾವರ ಮಡದಿ ರಾಮಮ್ಮ! ನೋಡ್ದ ಗೌರಮ್ಮ! ರಾಮಾಯಿ ಮನೆ ಬೇಗ ಇರಾದು ನಿಸ್ತ್ರ! ನಮ್ಮಾತನ್ನ ಗಮ್ನಕಾಕೊಳದಂತೆ! ಕೆಲಸ ಮಾಡ್ತಾ ನಿಂತಿದ್ದಿಯಲ್ಲ!

> ಬೇಗ ಬರುವಳಾಗು ಅಂದವಳೆ ಗೌರಮ್ಮ
> ನೋಡಿ ನಮ್ಮ ಶಿವನಾ!

ಅತ್ತೆ ಮಾವ ಕೇಳ್ದ! ಯಾರು ಪಟ್ಟದ ರಾಮಮ್ಮ! ಹಜಾರ್ದ ಕಸಾ ಗುಡುಸ್ತಿದ್ದಲ್ಲ! ಬರುಳನ್ನಲ್ಲೆ ಬೀಸಾಕ್ಬುಟ್ಟು! ಓಡ್ಬಂದು ಅತ್ತೆ ಮುಂದೆ ನಿಂತುಕೊಂಡು! ನಮಸ್ಕಾರವನ್ನು ಮಾಡಿದ್ಲು! ಅತ್ತಮ್ಮ ಕರುದ ವಿಚಾರವೇನು! ಎಲೋ ರಾಮಾಯಿ! ಅಣ್ಣನ ಮಗಳು ಅಂದ್ಬುಟ್ಟು ತಕಣ್ಬಂದು! ಮಗುಂಗೆ ಲಗ್ನ ಮಾಡ್ವಿ! ಯಜಮಾನ್ತನ ನಿನುಗೆ ಕೊಟ್ಟ! ನಿಂದು ಹೇಳ್ಕೆಯಾಗ್ಬೇಕು! ಇಲ್ಲಿ ನಿಂತಿರೋ ಆರು ಜನ ವಾರ್ಗಿತ್ತೀರು ಕೇಳ್ಕೆ ಆಗ್ಬೇಕು!

> ಅಂದವುಳೆ ಗೌರಮ್ಮ ಮಾದೇವ!
> ನೋಡಿ ನಮ್ಮ ಶಿವನಾ!!

ಅಲ್ಲೆ ನಮ್ಮಪ್ಪಾಜಿ ಮಾದೇವ! ಬಿಳಿ ಪಲ್ಲಿಯಾಗಿದ್ದೋರು ನೋಡುದ್ರು! ಚಿಕ್ಕವಯಸಿನ ಹುಡುಗಿ! ಕೋಲು ಮೊಕದ ಕಪ್ಪು ಬಣ್ಣದ ರಾಮಾಯಿ! ಆಹಾ ಎಷ್ಟು ಸರಣೆ ಎಷ್ಟು ಭಕ್ತಿವಂತಿ! ಮಗ್ಗೆ ಯಜಮಾನ್ತಿತ್ತಿಯಾಗಿದ್ದಾಳೆ! ಇವರ್ನ ನೆದೇವ್ರು ರಂಗಸ್ವಾಮಿ ಮುದುಕುತೊರೆ ಮಲ್ಲಪ್ಪ! ಗಂಡನಾದ ಮೂಗಪ್ಪ ಪೆದ್ದ! ಒಂದು ತಿಳಿದ್ರೆ ಒಂದ್ ಗೊತ್ತಿಲ್ಲ! ಇವುಳ್ಗೆ ಮನೇಲಿ ಆಡಳಿತವೆಲ್ಲ ಇವಳಲ್ಲಿರಿಸ್ಬೇಕು ಅಂತ್ಹೇಳಿ! ಇವುಳ ಮುಂದೇವ್ರು ಕೊಟ್ಟಿದ್ದಾರೆ! ವಾರ್ಗಿತ್ತೀರೆ ಜಗ್ಳ ಕಲಹವನ್ನು ತಂದು!

> ಒಡುದಾಕ್ಬೇಕು ಅಂತವ್ರೆ ಲಿಂಗಯ್ಯ
> ನೋಡಿ ನಮ್ಮ ಶಿವನಾ!

ರಾಮಮ್ಮ ವಾರ್ಗಿತ್ತೀರ್ಗೆ! ನಾನು ದ್ರಿಷ್ಟಿಯನ್ನಿಟ್ಟೆ! ಇವುರಿವುರೆ ಇಂಗಡವಾಗ್ತಿದ್ದಾರೆ ಅಂತ್ಹೇಳಿ! ನಮ್ಮಪ್ಪಾಜಿ ಕಿಡುಗಣ್ಣು! ರಾಮಮ್ಮುನ ಮೇಲೆ ವಾರ್ಗಿತ್ತೀರೆಲ್ಲ!

> ಮಚ್ಚರ ಮಡಗುವಂತಾ ಗ್ಯಾನ ಕೊಟ್ಟವರೆ
> ನೋಡಿ ನಮ್ಮ ಶಿವನಾ!

ಆರ್ಜನ ಸೊಸೇರು। ಅತ್ತಮ್ಮ ನಾವು ರಾಗಿ ಬೀಸ್ತೀವಿ। ನಿನ್ನ ಕಿರಿ ಸೊಸೆಯನ್ನ ಒಲೆ ಹಚ್ಚು ಅನ್ನವ್ವ। ವಾರಗಿತ್ತೀರ್ ಮಾತು ಕೇಳವಳಂತೆ ಸತ್ವಂತೆ ರಾಮಮ್ಮ। ಅಕ್ಕದೀರೆ ಮಾಡದ್ನೋಡುದ್ರೆ ನಮ್ ಕೆಲ್ಸ। ಅತ್ತೆ ಜೊತೇಲ್ಯಾಕೊಪ್ಪಸ್ತೀರಿ। ನನ್ಗೆ ಹೇಳಿದ್ರೆ ನಾನೋಗಿ ಒಲೆ ಹತ್ತೊಲ್ಲ। ಅತ್ತೆ ಜೊತೇಲ್ಯಾತುಕ್ಹೇಳ್ತೀರಿ ನಡಾರಿ ಅಂತ್ಹೇಳಿ। ಮಾದಪ್ಪ ಕ್ವಾಪ ಹುಟ್ಟಿ-

ಕ್ವಾಪಲ್ಲಿ ಮಾತಾಡವ್ಳೆ ರಾಮವ್ವೆ।
ನೋಡಿ ನಮ್ಮ ಶಿವನಾ।

ಆರ್ಜನ ವಾರ್ಗಿತ್ತೀರೋಗಿ ರಾಗಿಯನ್ನು ಬೀಸ್ಕೊಂಡು ಕುಕ್ಕಿಗೆ ತುಂಬ್ಕಂಡು। ಅತ್ತಿಂದ ಅವ್ರು ಬತ್ತಿದ್ರೆ ಇವರ್ಯಾಕೆ ಕೇಳಬೇಕು ಮಾತಾಡುಸ್ಬೇಕು ಅಂತ್ಹೇಳಿ।

ಕ್ವಾಣೆವಳೀಕೆ ಬಂದವ್ಳೆ ರಾಮವ್ವ।
ನೋಡಿ ನಮ್ಮ ಶಿವನಾ।

ಆಲ್ಲೇ ಆರು ಜನ ವಾರ್ಗಿತ್ತೀರು ರಾಗಿ ಬೀಸ್ಕಂಡು ಬಂದ್ರು। ರಾಮವ್ವೆ ಒಲೆ ಹಚ್ಚಿದ್ದಲ್ಲ। ಒಬ್ಬ ಕಾಳ್ಗೊಸ್ಕಂಡು, ಒಬ್ಬ ಸೊಪ್ಪ ಸೋಸ್ಕಂಡು ಒಬ್ಬ ಕಾರ ಅರ್ಕಂಡು।

ಒಂದಾಗಿ ಅಡಿಗೆ ಮಾಡವ್ರೆ ಸೊಸೆಯರು
ನೋಡೆ ನಮ್ಮ ಶಿವನಾ।

ಆರ್ಜನ ವಾರ್ಗಿತ್ತೀರು ಪಟ್ಟದ ರಾಮಮ್ಮ ಒಗ್ಗುಟ್ಟಾಗಿ ಅಡ್ಗೆ ಮಾಡಿದ್ರಲ್ಲ। ಹೊತ್ತಾಯ್ತು ಹೊಲುಕ್ಕೆ ಹಿಟ್ಟೊರಬೇಕು। ರಾಮಾಯಿ ನಾವು ನೀರೂತ್ಕಂಡ್ಬತ್ತಿದ್ದೀವಿ। ಎಸ್ರು ಮಾಡಿ ಎಸ್ರುಗುಪ್ಪಾಕಿ ಕಳೆ ಕೀಳಿಸ್ಕೋ ಅಂತ್ಹೇಳಿ ಚಿನ್ನ ಬೆಳ್ಳಿ, ಚೌರ್‍ಗ ತಗ್ದು ಕಂಕ್ಳಿಗಿರಿಸ್ಕೊಂಡು-

ಅವ್ರು ನೀರುಗ್ಹಂದವ್ರರೆ ಸೊಸೆಯರು।
ನೋಡಿ ನಮ್ಮ ಶಿವನಾ।

ರಾಮಮ್ಮನವರು ಅಲ್ಲಿ ನೋಡಿ ಉಪ್ಪಾಕಿದ್ದಾರೆ। ನಮ್ಮಪ್ಪಾಜಿ ಮಾದಪ್ಪ। ಬಕ್ತಿವಂತ ರಾಮಮ್ಮ ಅಲ್ಲೆ ನೋಡಾಕಿದ್ದಾಳೆ। ವಾರ್ಗಿತ್ತೀರ್‍ಗೆ ಜಗಳ ತಂದಾಕ್ಬೇಕು ಅಂತ ಮಾದೇಶ್ವರ ಎಸ್ರಾಗಿದ್ದ ಎಸ್ರುನೆಲ್ಲ-

ಉಪ್ಪಾನುರಿ ಒಗಚ ಮಾಡವ್ರರೆ ಮಾದೇವ
ನೋಡೆ ನಮ್ಮ ಶಿವನಾ।

ಸಣ್ಣಕ್ಕಿ ಅನ್ನವನ್ನು ಮಾದೇಶ್ವರ ಮಾಯ್ದಿಂದ ಮಾಡಿ। ಅಡ್‌ಗ್ವಾಡೆ ಮ್ಯಾಲೆ ಮೂಗಪ್ಪ ಉಣ್ಣುವಂತ ಬಟ್ಟಲ್ಲಿ-

ಅಲ್ಲಿ ಮುಚ್ಚಿ ಮಡುಗವರೆ ಮಾದೇವ।
ನೋಡೆ ನಮ್ಮ ಶಿವನಾ।

ನೀರ್‍ಗೋಗಿದ್ರಲ್ಲ ಆರ್ಚನ ಸೊಸೇರು। ಬತ್ತ ಬತ್ತಾ ಏನಂತಾರೆ? ಅಕ್ಕಯ್ಯ ನಾವ್ ನೋಡುದ್ರೆ। ಮದುವೆಯಾಗಿ ಹನ್ನೆರಡೊರುಸ್ವಾಯ್ತು। ರಾಮಿ ಮೂರ್‍ತಿಂಗಳಲ್ಲಿ ಮದುವಾಗಿ ಬಂದ। ಅವುಳ್ ಕೈಲಿ ಆಡಳ್ತನೆಲ್ಲ ನಮ್ಮತ್ತೆ ಕೊಟ್ಟಲ್ಲ। ಆವಳು ಹೆಚ್ಚಾದಳು। ನಾವೆಲ್ಲ ಕಮ್ಮಿಯಾದ್ವಲ್ಲ ಅಕ್ಕಯ್ಯ। ಅವ್ವ ನಾವು ಮಾತಾಡ್ಡದೆ ತರವಲ್ಲ। ಒಬ್ಬೆ ಯಾವ್ರೀತಿಯಿಂದ ಕೆಲಸ ಮಾಡ್ತಾಳೊ ಮಾಡ್ಲಿ। ಅತ್ತೆ ಹೇಳ್ದಂಗೆ ನಾವ್ ಕೇಳವ ಅವುಳೇಳ್ದಂಗೆ ನಾವು ಯಾತುಕ್ಕೆ ಕೇಳ್ಬೇಕು ಅಂತ।

ಮಾತಾಡ್ಕೊಂಡು ಬತ್ತವರೆ ಸೊಸೆಯರು।
ನೋಡೆ ನಮ್ಮ ಶಿವನಾ।

ಬಿಂದ್ಗೆ ಮಡಗ್ಬುಟ್ಟು। ಮ್ಯಾಲೆ ಅಂತ್ಕೋಡುದ್ರು ಮೂಗಪ್ಪ ಊಟ ಮಾಡುವಂತ ತಟ್ಟೆ ಒಳಗೆ ಬಿಸಿ ಅನ್ನ ಬಾಳೆ ಸಾರು ಗವುಲ್ಲುತ್ತೋಗಿತ್ತು। ಇದೇನು ನಾವ್ನೋಡುದ್ರೆ ಉಪ್ಪೆಸ್ರು ಮಾಡುದ್ವಲ್ಲ। ಗವುಲೊಡಿತದಲ್ಲ। ಅಂತ್ಕೇಳಿ-

ಅಲ್ಲಿ ಮುಸ್ಕ ತೆಗುದು ನೋಡಿದರು
ನೋಡೆ ನಮ್ಮ ಶಿವನಾ।

ಸಣ್ಣಕ್ಕಿ ಅನ್ನ ಸಣ್ಬೇಳೆ ಎಸ್ರು। ಮೇಲು ತುಪ್ಪ ರಾಮಮ್ಮ ಆರ್ಚನ ವಾರ್‍ಗಿತ್ತೀರು ನೋಡುದ್ರು। ಸ್ವಾಮಿ ನಮುದೆಲ್ಲ ತೆಪ್ಪು। ನೋಡಿ ನಮ್ಮತ್ತೆಯಾದ ಗೌರಮ್ಮನವರು-

ಮಾಡ್ದ ತಪ್ಪು ಅಂತವ್ರೆ ಮಡದೀರು
ನೋಡೆ ನಮ್ಮ ಶಿವನಾ।

ಸ್ವಾಮಿ ನಮ್ಮುನ್ನೆಲ್ಲ ಕಡೆಗಣ್ ಕಂಡು। ಮೂಗಪ್ಪನ ಮಡ್ದಿ ಕಿರೀ ಸೊಸೆ ಪ್ರೀತಿವುಳ್ಳ ವಳು ಅಂತ್ಕೇಳಿ। ಬೀಗು ಮುದ್ರೆಯನ್ ಅವುಳ್ ಕೈಲಿ ಕೊಟ್ಟು। ಮನೆ ಆಡಳಿತವೆಲ್ಲ ಅವುಳ್ಗೆ ಒಪ್ಪುಸ್ತು। ಗಂಡನಾದ ಮೂಗ ದೇವರ್‍ಗೆ। ಸಣ್ಣಕ್ಕಿ ಸಣ್ಣ ಬ್ಯಾಳೆಯನ್ನು ಹಾಕಿ ಮ್ಯಾಲ್ ತುಪ್ಪವನ್ನು ಹಾಕಿ। ಗಂಡುಂಗೆ ಎತ್ತಿ ಮಡಿಕಂಡು। ಭಾವ್ದೀರು ಉಂಡ್ರೆ ಉಣ್ಲೆ ಉಣ್ದೇ ಇದ್ರೆ ಬಿಸಾಕ್ಲಿ ಅಂತ। ಈ ತರ ಅಡ್ಗೆ ಮಾಡಿ।

ಅವ್ಳ ವಂಚಣೆ ಊಟ ಕಳುಗವಳೆ
ನೋಡೆ ನಮ್ಮ ಶಿವನಾ

ಮಡ್ದಿ ಮಾತು ಕೇಳಿ ಆರ್ಚನ ಅಣ್ಣದೀರು। ರುದ್ರ ಗ್ನಾಪವ ತಾಳ್ಕಂಡು। ನಮ್ಮ ಕೂಡ ಮೊದ್ಲೆ ಹೇಳ್ಬಾರ್‍ದಾ ನೀವು। ಅವುಳ್ದು ಮನೆ ಯಜಮಾನ್ಕೆ ನಮುದಲ್ಲ ಅಂತ್ಕೇಳಿದ್ರೆ। ಆ ವಂಚುಣ್ಗಾತಿ ರಾಮಾಯಿ। ಬಲ್ಲುವರ್‍ಕಾರ ಮೂಗಪ್ಪನ-

ದೂರ ಮಾಡಿರೊ ಅಂತಾನೆ ದೊಡ್ಡ ಸರಗೂರ
ನೋಡೆ ನಮ್ಮ ಶಿವನಾ

ಅರ್ಜನ ಅಣ್ತಮ್ದೀರು ಮಾತಾಡ್ಕೊಂತಾ ಇದ್ದಾರೆ। ಎಲೆ ತಮ್ದೀರೆ ಈ ತರ ಅಡ್ಗೆ ಮಾಡಿ ರಾಮಿ ಊಟ ಕಳುಗಿದಾಳೆ। ಗಂಡ ಮೂಗಪ್ಪಾ ರಾಮವ್ವ ಒಂದ್ಗೆ ನೀಸಕ್ಕಾದ್ದು। ದೂರ ಕಳುಗ್ಬೇಕು ಅಂತ್ಹೇಳಿ। ಬೊಯ್ಕೊಂಡು ಗಿಯ್ಕಂಡು। ಊಟ ತಕ್ಕಂಡೋಗಿರುವಂತ ಮದ್ದೀರು। ತಾವ್ ತಾವೇ ಮಾತಾಡ್ಕಂಡು ಬತ್ತಿದ್ದಾರೆ। ಅಕ್ಕ ರಾಮಾಯಿ ಎಂತೇವಕ್ಕ। ಕಳ್ಸ ನೆಟ್ಟುಪ್ರೆ ನೆಚ್‌ಬೋದು। ಒಳ್ಳೇಳು ಅಂತ್ಹೇಳಿ ನಾವು ತಿಳ್ಕೊಂಡಿದ್ವಿ। ಕುಳ್ಳಿ ಈತರ ಮಾಡಿ ಕಳುಸ್ಲಿದ್ದಾಳಲ್ಲ। ಈ ಮಳ್ಳಿ ಮುಂಡ್ಯ। ಅತ್ತೇ ಜೊತೇಲಿ ಒಂದುಕ್ಕೊಂಬತ್ಹೇಳಿ।

ಅವ್ಳು ದೂರ ಮಾಡಬೇಕು ಅಂತಾರೆ ಸೊಸೆಯರು।
ನೋಡೆ ನಮ್ಮ ಶಿವನಾ

ಸರಗೂರಪ್ಪ ಪಟ್ಟೇ ಮಂಚದ್ಮ್ಯಾಲೆ ಮನುಗಿದ್ದಲ್ಲ। ಸೊಸೇರು ಬಂದು ಅತ್ತೆ ಮಾವರ ಪಾದ್ಕೆ ನಮುಸ್ಕಾರ ಮಾಡುದ್ರು। ಸೊಸು ಮುದ್ದೀರೆ ಇದ್ಯಾಕ್ರವ್ವ ಚಿಂತೆ ಮಾಡ್ಕೊಂಡು ಬಂದಿದ್ದೀರಲ್ಲ। ಮಕ್ಕಳು ಏನಾರ ಅಂದ್ರ ಅಥವಾ ಹೊಡುದ್ರಾ। ಹಿರೀ ಸೊಸೆ ಏನಂತಾಳೆ। ಅತ್ತಮ್ಮ ಮಾವಯ್ಯ। ಬಾಳುವಂತ ಗತಿ ಮುಂದಕ್ಕೆ ನಮಗೆ ಬರುವಂಗಿಲ್ಲ। ಬದುಕುವಂತ ರೀತಿ ನಮಗಿಲ್ಲ। ನೋಡಿ ಅಡ್ಗ ಮಾಡ್ಗೋಳು। ನಿಮ್ಮ ಕಿರಿ ಸೊಸೆ। ನಾವು ನೀರ್ಗೋಗಿದ್ದಾಗ ಎಸ್ರುನೆಲ್ಲ ವಸ್ತುವೆಲ್ಲ ಉಪ್ಪಾನುರಿಯನ್ನು ಮಾಡಿ। ಹಿಟ್ಟಾಗಿದ್ದ ಹಿಟ್ಟೆಲ್ಲ ಪಿಸುಗ್ಲಿಟ್ಟ್ಯಾಡಿ। ಕುಕ್ಕೆಗೆ ತುಂಬಿ। ನಮಗೆ ಕೊಟ್ಟು ಕಳುಗ್ದ। ಹೋಗಿ ಇಕ್ಕುದ ತಕ್ಷಣ ಎಸ್ರಾಗಿದ್ದ ಎಸ್ರೆಲ್ಲ ಉಪ್ಪಾನುರಿಯಾಗಿತ್ತು। ಹಿಟ್ಟಾದ ಹಿಟ್ಟೆಲ್ಲ।

ಸರಮುರಿ ಗಂಟು ಅಂತಾರೆ ಸೊಸೆಯರು
ನೋಡೆ ನಮ್ಮ ಶಿವನಾ।

ನೋಡಿ ಅತ್ತಮ್ಮ। ನಮ್ಗುಂಡ್ದೀರ್ಗೆಲ್ಲ ಆತರಾ ಹಿಟ್ಮ್ಯಾಡಿ ಕಳುಗ್ದ। ಅವಳ ಗಂಡನಾದ ಮೈದುನಾದ ಮೂಗಪ್ಪಂಗೆ।

ಒಂದ್ತರಾ ಅಡ್ಗ ಮಾಡವ್ಳೆ ಅಂತಾರೆ ಸೊಸೆಯರು।
ನೋಡೆ ನಮ್ಮ ಶಿವನಾ।

ನಮ್ ಗಂಡ್ದೀರ್ಗಾದ್ರೆ ಗಂಟೂಗಸಿ ಅಡ್ಗೆ ಉಪ್ಪ ಒಗುಚುನ ಅಡಿಗೆ। ಅವ್ಳುಗ್ಗಂಡುನ್ಗೆ ಸಣ್ ಬ್ಯಾಳಿ ಸಣ್ಣಕ್ಕಿಲಿ ಅಡ್ಗೆ ಮಾಡ್ಕೊಂಡವಳೆ।

ನೋಡ್ಡನ್ನಿ ಅಂತಾರೆ ಸೊಸೆಯರು।
ನೋಡೆ ನಮ್ಮ ಶಿವನಾ।

ನಮ್ಮಪ್ಪಾಜಿ ಕಿಡುಗಣ್ಣುಮೂರ್ತಿ ಮಾದೇಶ್ವರ। ಉಪ್ಪಲಗಸೆಟ್ಟಿ ಸರಗೂರಯ್ಯಂಗೆ-

ಅಲ್ಲಿ ಕ್ವಾಪ ಹುಟ್ಟವರೆ ಮಾದೇವ।
ನೋಡೆ ನಮ್ಮ ಶಿವನಾ।

ನಿಜವೇನಮ್ಮ, ಅಂತ್ವೇಳಿ ಸರಗೂರಯ್ಯ ಕೇಳಿದ್ರು। ಮಾವಯ್ಯ ನಿಜಾ ಅಂತ್ವೇಳಿದ್ರು। ಸ್ವಾಮಿ ನಮ್ಮ ಮಾತು ಸುಳ್ಳಾದ್ರೆ ಮಾಡಿರುವಂತ ಅಡಿಗೆಯನ್ನು ತೋರಿಸ್ತೀವಿ ಅಂತ್ವೇಳಿ। ಗುಡು ಗುಡನೋಡ್ಬಂದು ಮಾಯದನ್ನ ಮಾಯಿದೆಸ್ರು ತಂದು।

ತೋರುಸ್ತ ನಿಂತವುರೆ ಸೊಸೆಯರು
ನೋಡೆ ನಮ್ಮ ಶಿವನಾ।

ಮುಂದರಡಿರುವಂತ ಅನ್ನವನ್ನ। ಸರಗೂರಪ್ಪ ನೋಡ್ಬುಟ್ಟು। ಅಪ್ಪಾ ಮಡ್ಡಿ ಗೌರಾಯಿ। ಇರೂವರಗ್ಗೂ ನಮ್ಮ ಮನೇಲಿ। ವಂಚುಣೆ ಆಗತಕ್ಕದ್ದು ಇರಲಿಲ್ಲ। ಈವತ್ತಿನ ಜಿಪ್ಲ ನಡದ್ಬುಡ್ತಲ್ಲ। ಆ ದಾಸಪ್ಪನ ಮಗಳು। ಆ ಮಳ್ಳಿಯಾದ ರಾಮಾಯಿ। ಆ ಮುಂಡೆ ನನ್ನ ಮಕ್ಕಳ್ಗೆ ಇಷವನ್ನಾದರೂ ಹಾಕಿ ಪ್ರಾಣ ತೆಗಿಯಕು ಹೇಸದಿಲ್ಲ।

ಅವ್ವ ನೆಟ್ಟಾದು ಹೆಂಗೆ? ಅಂತವ್ನೆ ಸರಗೂರಪ್ಪ
ನೋಡೆ ನಮ್ಮ ಶಿವನಾ।

ಸೊಸೆಯರ್ಗೆ ಮಡದಿಯಾದ ಗೌರಮ್ಮಂಗೆ ಬುದ್ಧಿ ಹೇಳ್ತಿದ್ರೆ। ಕೊತ್ತೇಗಾಲದ ದಾಸಪ್ಪನ ಮಗಳು ಸತ್ವಂತ ರಾಮಮ್ಮ। ವಾರ್ಗಿತ್ತಿರ್ತೇಳೋ ಮಾತು। ಮಾವನಾದ ಸರಗೂರಪ್ಪ ಅತ್ತೆಯಾಡಿದ ಮಾತನ್ನ। ಗ್ವಾಡೆ ಒರಿಕೊಂಡು।

ಕೇಳ್ತಾ ನಿಂತವುರೆ ರಾಮಮ್ಮ।
ನೋಡೆ ನಮ್ಮ ಶಿವನಾ।

ನೋಡಿದ್ಯಾ ವಾರ್ಗಿತ್ತೀರು। ನನ್ ಬಾಳ್ಗೆಮಿತ್ತಾಗೋ ಮಾತನ್ನು। ಅತ್ತೆ ಮಾವರ ಕೈಲಿ ಹೇಳ್ತಿದ್ದಾರೆ। ನಾನೇ ಹೋಗಿ ಮಾತಾಡ್ಬೇಕು ಅಂತ್ವೇಳಿ। ಗುಡುಗುಡನೋಡ್ಬಂದು। ಅತ್ತೆ ಮಾವತ್ರ ಒಂದು ನಮುಸ್ಕಾರ ಮಾಡಿ ಹೇಳಿದ್ಲಾಳೆ। ಮಾವಯ್ಯನವರೇ ಅತ್ತೆಮ್ಮನವ್ರೇ। ನನ್ನನ್ನು ಮಳ್ಳಿ ವಂಚುಣ್ಗಾತಿ ಅಂತ್ವಳಿ। ನುಡ್ದು ನುಡ್ದು ಜರೀತಿದ್ದೀರಲ್ಲ। ಯಾವ ವಂಚಣೆ ಮಾಡಿದ್ದೇನು।

ಅದನ್ನು ತೋರ್ರೊಡಿ ಅಂತಾಳೆ ರಾಮಮ್ಮ।
ನೋಡೆ ನಮ್ಮ ಶಿವನಾ।

ಮಾವನಾದ ಸರಗೂರಪ್ಪ ಏನಂತಾನೆ। ರಾಮಾಯಿ ನಿನ್ನಲ್ಲಿ ವಂಚುಣೆ ಇದೆ। ಏನಷ್ಟ ಕಂಡಿದ್ದೀರಿ। ನಿಮ್ಮನ್ನೇನಾರ ಬುಟ್ಟು ಊಟ ಮಾಡಿದ್ದೀನ। ವಾರ್ಗಿತ್ತೀರ ಬುಟ್ಟು

ಊಟ ಮಾಡಿದ್ದೀನ! ರಾಮಾಯಿ! ನನ್ನ ದೊಡ್ಡ ಮಕ್ಕಳಿಗೆ ಬ್ಯಾರೆ ಅಡಿಗೆ ಮಾಡಿ ಕಳ್ಳಿದ್ದಿ! ನಿನ್ ಗಂಡುಂಗೆ ಒಂದ್ವರ ಅಡ್ಗೆ-

ಮಾಡಿ ಮಡಿಗ್ಗಿದ್ದಿ ಅಂತಾನೆ ಸರಗೂರಪ್ಪ!
ನೋಡೆ ನಮ್ಮ ಶಿವನಾ!

ಮಾವಯ್ಯ ಅಂತದ್ದೇನ್ನೂ. ನಾನು ಮಾಡಿಲ್ಲಲ್ಲ! ರಾಮಾಯಿ ತೆಪ್ ಮಾಡಿರೋದಲ್ದೆ! ಮಾಡಿರೊ ತೆಪ್ಪ ಮುಚ್ಚುವಂತೆ ರೀತಿ ತೋರ್ತಿಯಲ್ಲ! ಈ ಸಣ್ಣಕ್ಕಿ ಸಣ್ ಬ್ಯಾಳೆ ಅನ್ನವನ್ನು! ನೀನು ಯಾರಿಗೆ ಮಾಡಿ ಮಡ್ಗಿದ್ದಾಯ್! ಮಾವಯ್ಯ ನಾನು ಮಾತ್ರ ಈ ಅಡ್ಗೆ ಮಾಡ್ಲೋಳಲ್ಲ! ಅಮ್ಮ ಸೊಸೇರೆ ಏನ್ರಮ್ಮಾ! ರಾಮಾಯಿ ನಾನ್ ಮಾಡಿಲ್ಲ ಅಂತಳಲ್ಲ! ತೆಪ್ಪ ಅನ್ಯಾಯ ಯಾವ್ದು ಯಾರ್ದು ಅನ್ನೋದ ಹೇಳ್ರಮ್ಮ! ಮಾವ ನಾವು ಮಾಡಿಲ್ಲ ನಾವು ಮಾಡಿಲ್ಲ ಅಂತ್ಹೇಳಿ! ಆರ್ಥನ ಸೊಸೇರೂ ಅಂದ್ಕೊಂಡ್ಬಂದ್ರು! ಎಲೊ ರಾಮಾಯಿ! ಯಾರ್ಹಟ್ಟೀಲೂ ಅನ್ನವಿಲ್ಲ! ನಿನ್ನ ಗಂಡ ಮೂಗಪ್ಪ ಉಣ್ಣುವಂತ ತಟ್ಟೇಲಿ ಅನ್ನ ಅದೆ! ನೀನ್ ಮಾಡಿದ್ದೀಯೆ ಹೊರ್ತು ಮತ್ತಾರೂ ಮಾಡಿಲ್ಲ ಅಂತ್ಹೇಳಿ! ಸರಗೂರಪ್ಪನವರು ಹೇಳ್ತಿದ್ರೆ! ಇಲ್ಲಿಂದೀಚ್ಗೆ ಇವ್ರರಿವ್ರರ್ಗೆ ಕದನೆಯನ್ನು ತಂದು ಮಡುಗ್ಬೇಕೆಂಬುದಾಗಿ! ನಮ್ಮಾಪ್ರಾಜಿ ಮಾಯಕ್ಕಾರ ಮಾದೇಶ್ವರ! ಬಿಳಿಪಲ್ಲಿಯಾಗಿ! ಸರಗೂರಪ್ಪನವರ ಗ್ವಾಡೆಮ್ಯಾಲೆ ಕೂತ್ಕೊಂಡು!

ಲೊಚ್ಚ ಲೊಚ್ಚಿ ನುಡಿತ ಕುಂತವ್ರೆ ಮಾದೇವ
ನೋಡೆ ನಮ್ಮ ಶಿವನಾ!

ನುಡಿವಂತ ಗೌಳಿ ಸಪ್ತವನ್ನು ಸರಗೂರಪ್ಪ ಗೌರಮ್ಮ ಕೇಳ್ಬುಟ್ಟು ಮಂಚದ್ಮೇಲೆ ಕೂತ್ಕೊಂಡು ಆಲೋಚನ ಮಾಡಿದ್ರು! ಅಪ್ಪಾ ಗೌರಾಯಿ! ಈ ರಾಮಾಯಿಯನ್ನ ಹೆಂಗೆ ನೆಚ್ಕೋದು! ಆ ಮರಿದೇವ್ರು ಮುದುಕ್ಕೊರೆ ಮಲ್ಲಪ್ಪನೆ ಬಂದು ಗೌಳಿಯಾಗಿ ನುಡಿತಿದ್ದರಲ್ಲ ಅಂತ್ಹೇಳಿ! ಒಂದುನೂ ಕಾಣದಂತ ಸತ್ವಂತೆ ರಾಮವ್ವನ ಮ್ಯಾಲೆ!

ಕ್ವಾಪ ಹುಟ್ಟುಸವುರೆ ಮಾದೇವ
ನೋಡೆ ನಮ್ಮ ಶಿವನಾ!

ಅತ್ತೆ ಮಾವ್ದೀರ ಮಾತ ಕೇಳ್ಬುಟ್ಟು ಸತ್ವಂತೆ ರಾಮವ್ವ! ಅಯ್ಯೋ ತೊದನಾಡು ಮಸಣಮ್ಮ ಬದನಾಡ್ ಸಿದ್ದದೇವಿ! ಎಂತೆ ಕಷ್ಟಕ್ಕೆ ನನ್ನ ಗುರಿ ಮಾಡುದ್ರಿ ಅಂತ್ಹೇಳಿ!

ಹೋಗಿ ಮಂಚುದ ಮ್ಯಾಲೆ ಮನುಗವ್ಳೆ
ನೋಡೆ ನಮ್ಮ ಶಿವನಾ!

ಆಷ್ಟೊಳ್ಗುಗೆ ಆರ್ಥನ ಸರಗೂರಪ್ಪನ ಗಂಡು ಮಕ್ಕಳು! ದನ ಕರ ಹಟ್ಟೀಗ ಕೂಡ್ಬುಟ್ಟು ಕುರೀ ಕೊಟ್ಟುಗ್ಗೆ ಕುರಿ ಕೂಡ್ಬುಟ್ಟು! ತಂದ ತಾಯಿಗಳೆ! ಆ ಮೂಗಪ್ಪನ ಹೆಡ್ತಿ ನಿಮ್ಮ ಕಿರಿ ಸೊಸೆ!

ಮಾಡೀರೊದುಪಚಾರ ಅಂತಾರೆ ಮಕ್ಕಳು
ನೋಡೆ ನಮ್ಮ ಶಿವನಾ।

ಆ ಸರಗೂರಪ್ಪನವರು ಏನಂತಾರೆ। ಅಪ್ಪಾ ಮಕ್ಕಳೆ ಒಂದ್ತಿಳುದ್ರೆ ಒಂದು ಗೊತ್ತಿಲ್ಲ ಸಮಸ್ಪುಡಿ ಅವ್ಳು ಅಂದ್ರು। ಯಾರು? ಸರಗೂರಪ್ಪನೋರು। ದೊಡ್ಡ ಸರಗೂರ ಸಣ್ ಸರಗೂರ ಏನಂತಾರೆ? ತಂದೇವ್ರೆ ಈವತ್ತುನ ಜಿವ್ವ ಆತರ ಮಾಡುದ್ಲು। ಇಸ್ನೊಂದ್ವಾರಿ ಇಸ್ನೊಂದ್ತರಾ ಮಾಡ್ತಳೆ। ಮೂಗಪ್ಪನ ಒಂದಿಗೆ ನೀಸಕ್ಕಾಗಕ್ಕಿಲ್ಲ।

ಬ್ಯಾರೆ ಕಳುದಾಕ್ಬೇಕು ಅಂತಾರೆ ಮಕ್ಕಳು।
ನೋಡೆ ನಮ್ಮ ಶಿವನಾ।

ಅಷ್ಟೊಳಗೆ ಮೂಗಪ್ಪನವರು। ಉಪ್ಪುನ ಮಾಳ್ಗೆ ಉಪ್ಪದ ಕಟ್ಟಕೋಗಿದ್ರಲ್ಲ। ಮನೆಗೆ ಬಂದ್ರು। ಗಂಡ ಅನ್ಸುವಂತ ಭಾವನನ್ನ ತಿಳ್ಕೊಂಡು ರಾಮಮ್ಮ। ಚೊಂಬಿನಲ್ಲಿ ನೀರ್ರುಂಬ್ಕೊಂಡು ನೀರ್ರೂಡ್ತಿದ್ರೆ। ಆರ್ಧನ ಬಾವ್ತೀರು ನೋಡಿದ್ರು। ಗಂಡ ಬಂದ ತಕ್ಷಣ ಓಡಾಡ್ಕೊಂಡು। ನೀರ್ರೊಡ್ತಿದ್ರಾಳಲ್ಲ। ಅಷ್ಟರೊಳಗಾಗಿ ಕೈ ಕಾಲ್ಮೊಕ ತೊಳ್ಕೊಂಡು ಮೂಗಪ್ಪ ಬಂದ್ರು। ಅಣ್ಣೇರ ತಂದೆವ್ರ। ಯಾತುಕ್ಕೆ ಸುಮ್ನೆ ಕುಂತಿದ್ದಿರಲ್ಲ ಕಾರಣವೇನು। ದೊಡ್ಡ ಸರಗೂರ ಏನಂತಿದ್ದಾನೆ। ಮೂಗಪ್ಪ ನಿನಗ್ಯಾರು ಅಣ್ಣ ನಮಗ್ಯಾರು ತಮ್ಮ। ನನ್ನೆಡ್ತಿ ರಾಮಮ್ಮ ಕರುಕೊಂಡು।

ಬ್ಯಾರೆ ಒಗ್ತಾನ ಮಾಡು ಅಂತಾರೆ ಅಣ್ಣೇರು
ನೋಡೆ ನಮ್ಮ ಶಿವನಾ।

ಅಣ್ಣೇರ ಇದೇನು ಹೊಸ ಮಾತು। ನೋಡಪ್ಪ ನಿನ್ನೆಂಡ್ತಿ ನಿನಗೊಂದ್ದರುವಾಗೆ ಅಡುಗೆ ಮಾಡವಳೆ। ನೀನು ಒಪ್ಪಾ ಚಾರವಾಗಿ ಇಕ್ಕುಸ್ಕೊಂಡು ಊಟ ಮಾಡಪ್ಪ ಅಂದ್ರು। ಅಣ್ಣಯ್ಯ ನನ್ನೆಂಡ್ತಿಗೆ ಒಂದ್ತಿಳುದ್ರೆ ಒಂದು ಗೊತ್ತಿಲ್ಲ। ಸವುಸ್ಕೋಬೇಕು ಅಂದನು ಮೂಗಪ್ಪ। ಸವುಸ್ಕೊಳ್ಳ ಇರಕಾದದಪ್ಪ। ಹದವಾದಡಗೆ ಮಾಡಿ ಮಡ್ಗವ್ಳೆ ತಿಂಬೋಗಪ್ಪ ಅಂದ್ರು ಪಟ್ಟದ ರಾಮಮ್ಮ ತಟ್ಟೆ ತಂದ್ಮಡ್ಗಿ। ಹಿಟ್ಟಿಕ್ಕಿದಳು ಎಸ್ರನ್ನು ಬಿಟ್ಟಳು। ಮೂಗಪ್ಪ ಉಣ್ಣು ಅಂದ್ರು ಸರಗೂರಪ್ಪ। ಮೂಗಪ್ಪ ಕೈಮಡ್ಗಿ ಊಟುದ ಮೇಲೆ ಬಾಯ್ಗಾಕಿದ್ನಲ್ಲ। ಅಡ್ಗೆ ಅಮೂರುತ್ವಾಗಿತ್ತು। ಏನು ಎಡ್ಡು ಕಾಣ್ಲಿಲ್ಲ। ಆರು ಜನ ರಾಮವ್ವ ವಾರ್ಗಿತ್ತೀರು ಮಾತಾಡ್ಕೊತಾ ಇದ್ದಾರೆ. ಅವುಳು ಮಾಡಿರೋ ಎಸ್ರ ಅವುಳ್ಗಂಡ್ನೇ ಉಣ್ಕೋಡ್ಲಿ ಅಂತ ಅವ್ರು। ಮೂಗಪ್ಪ ಊಟ ಮಾಡುದ್ದಲ್ಲ। ಅಣ್ಣಾರೆ ಇದ್ದಲ್ಲೇನು ತಪ್ಪಿಲ್ಲವಲ್ಲ। ಮಾಡಿರುವಂತ ಅಡ್ಗೆ ಎಲ್ಲಾ ದಿವುಸುಕಿಂತ್ಲೂ ಈ ಜಿವ್ವ ರುಚಿಯಾಗದೆ। ಹಂಗಂದ ಮಾತ ಕೇಳಿದ್ದಾನೆ ತಂದೆಯಾದ ಸರಗೂರಪ್ಪ। ಅಪ್ಪಾ ನೀವು ಒಂದೇ ಆಗ್ಗಲ್ಲಿ ಕೂತ್ಕೊಂಡು

ಊಟ ಮಾಡಿ। ಅಣ್ಣೇರು ಮುಕ್ಷ ಊಟಕ್ಕೆ ಬಂದು ಕೂತುಕೊಂಡ್ರು। ಇವರ ಬಾಯ್ಗೆಲ್ಲ ಒಗುಚು ಅವನ ಬಾಯ್ಗೆಲ್ಲಾ ರುಚಿರುಚಿ। ಇವರೆಲ್ಲ ಉಗುದ್ಬುಟ್ಟು ಸುಮ್ನೆ ಕುಂತಿದ್ರೆ-

ಅಲ್ಲಿ ಊಟ ಮಾಡ್ತ ಕುಂತವ್ನೆ ಮೂಗ್ಪಾವ್ರು।
ನೋಡೆ ನಮ್ಮ ಶಿವನಾ।

ಅರ್ಜನ ಅತ್ಗೇರು ನೋಡುದ್ರು। ಮಾದೇಶ್ವರನ ಮೈಮೆ ಗೊತ್ತಾಗ್ಲಿಲ್ಲ। ಬ್ಯಾರೆ ಮೂಗಪ್ಪ ಊಟ ಮಾಡುವಂತ ಹರುವಾಣವಿತ್ತಲ್ಲ। ನೋಡಪ್ಪ ಮೂಗಪ್ಪ। ನಿನ್ಗೆ ಅಂತ್ಹೇಳಿ ನಿನ್ಹೆಡ್ತಿ ಮಾಡಿ ಮಡೀಕೊಂತವ್ಳೆ। ನಾವು ಇದೇ ತರ ಮಾಡ್ತಿದ್ದೆವ। ನಿಮ್ಗೆ ಬ್ಯಾರೆ ಇಕ್ಕಿ ನಮ್ಮ ಗಂಡ್ದೀರ್ಗೆ ಬ್ಯಾರೆ ಇಕ್ತಿದ್ವ। ನಿನ್ಹೆಡ್ತಿಯಾದ ರಾಮಾಯಿ।

ವಂಚುಣ್ಗಾತಿಯಲ್ವ ಅಂತಾರೆ ಅತುಗೇರು
ನೋಡೆ ನಮ್ಮ ಶಿವನಾ।

ನಮ್ಮಪ್ಪಾಜಿ ಕಿಡುಗಣ್ಣೇರಿ ಮಾದೇಶ್ವರ ನೋಡುದ್ರು ಆಹ್ಹಾ ಇದೇ ಒಂದು ಸಮಯವಲ್ವ। ಇವರಿಬ್ಬರ ಎದುರ್ಗೆ ಇವರಿವ್ರುರ್ಗೆ ಕದ್ನ ತಂದ್ಮಡಗ್ಬೇಕು ಅಂತ್ಹೇಳಿ ಮಾದೇವ। ಮೂಗಪ್ಪನ ಮೈ ಮೇಲೆ ಮಾದಪ್ಪ। ಸಂಪೂರ್ಣವಾಗಿ ಮೂರ್ತವಾಗಿ। ಕ್ವಾಪುವನ್ನ ಹುಟ್ಸಿದ್ದಾರೆ। ಅತ್ಗೇರ್ಮಾತನ್ನು ಅಣ್ದೀರ ಮಾತನ್ನು ಮೂಗಪ್ಪ ಕೇಳ್ಬುಟ್ಟು। ಛೇ ಅತ್ಗೇರೆ। ಬಾಳ್ಮರಿಬೇಕು ಅಂತ ಎಲ್ಲಿಗಂಟ ನೀವ್ಪಾರ್ಲೈಸ್ಕೊಂಡಿದ್ರಿ। ನನ್ಹೆದ್ರುಗೆ ಇಷ್ಟವಲ್ಲ ನಾ ಇಲ್ಲದ ಯಾಳ್ಯದಲ್ಲಿ। ನನ್ಹೆಡ್ತಿಗೆ ಎಂತ ಬಂಧಾನ ಕೊಡ್ತಿದ್ರಿ। ನನ್ಹೆಡ್ತಿ ಮಾಡಿಲ್ಲ ಅನ್ನೋ ಅಡ್ಗೇಯ। ಅವಳೇ ಮಾಡವ್ಳೇ ಅಂತಿದ್ದೀರಿ। ನಾನೇ ಬಾಯಾರೆ ಊಟ ಮಾಡಿದ ಅಡ್ಗೆ ಅಮೂರ್ತದ ರುಚಿಯಾಗದೆ। ಅದ್ನ ನಿಮ್ಮ ಗಂಡ್ದೀರು ಉಪ್ಪು ಒಗಚು ಅಂತಿದ್ದಾರಲ್ಲಾ। ಬಾಳ್ಮರ್‍ಯೋ ಕೆಲ್ಸ ಇದೇ ತಾನೇ। ಅಂತ್ಹೇಳಿ-

ಅಣ್ದೀರ್ಮೇಲೆ ಜಗಳಕ್ಕೆ ಬಿದ್ದವ್ನೆ ಮೂಗಪ್ಪ
ನೋಡೆ ನಮ್ಮ ಶಿವನಾ।

ಮೂಗಪ್ಪ ಜಗುಳ್ಕೆ ಬಂದು ಬೀಳ್ತಿದ್ರೆ ನಮ್ಮಪ್ಪಾಜಿ ಮಾದೇಶ್ವರ। ಮೂಗಪ್ಪ ರಾಮವ್ವೆ ಇಬ್ರೆಯೆ ಇಂಗಡವಾಗ್ಬೇಕು। ಮನೆ ಕುಟುಂಬುವೆ ಒಂದಾಗ್ಬೇಕು। ಸರಗೂರಪ್ಪನ ಮನೆಗೆ

ಮಾಯದ ಬೇಳ್ಮೆ ಉರುಬವ್ರುರೆ ಮಾದೇವ
ನೋಡಿ ನಮ್ಮ ಶಿವನಾ।

ಅಲ್ಲೆ ತಂದೆ ತಾಯಿ ಏನಂತಾರೆ?। ಎಲೋ ಮಕ್ಕಳೆ ಸೌರುಸ್ಕೊಂಡು ಬಾಳ್ಕೊಂಡೋಗಿ ಅಂದ್ರು। ಯಾರು। ಸರಗೂರಪ್ಪನವರು। ಮೂಗಪ್ಪ ಏನಂತರೆ?।

ತಂದೆ ಅರ್ಗಿಸಾಗೊಲ್ಲ ಬ್ಯಾರೆ ಒಗ್ತಾನ ಮಾಡ್ತೀನಿ ಅಂದ್ರು। ಅರ್ವನ ಗಂಡ್ಮಕ್ಳೇಸಂತರೆ। ತಂದೇವ್ರೆ, ನಾವೂ. ಅಲ್ಲಿ ನೀಸಕ್ಕಾಕ್ಕಿಲ್ಲ! ಅರ್ವನ್ವೆ ಅಣ್ತಮ್ಮಿರ ಒಂದು। ಮೂಗಪ್ಪನೇ ಒಂದಂತೆ।

ಅಲ್ಲಿ ಕದನ ಉಂಟ್ಮಾಡವುರೆ ಮಾದೇವ
ನೋಡೆ ನಮ್ಮ ಶಿವನಾ।

ಬೇಕ್ ಬೇಕಾದ ಜನುಗಳೆಲ್ಲ! ಮೂಗಪ್ಪಂಗೆ ಶಾಂತಿ ಹೇಳಿದ್ರು ಒಪ್ಪಿಲ್ಲ। ಸರಗೂರಪ್ಪನವರ ಸಮಂದಿಕರೆಲ್ಲ ಬಂದು। ಮೂಗಪ್ಪಂಗೆ ವೈನದ ಮಾತೇಳಿದ್ರು। ಅವುರ್ಮಾತ್ಕೆಲ್ಲ-

ಅವ್ನು ಮರುಳಾಗ್ಲಿಲ್ವಲ್ಲೊ ಮೂಗಪ್ಪ
ನೋಡೆ ನಮ್ಮ ಶಿವನಾ।

ಏಕಾಂಗಿ ವಸ್ತು ಏಳ್ಮಲೆ ಕರ್ತು। ನಮ್ಮಪ್ಪಾಜಿ ಮಾದೇಶ್ವರ ನೋಡುದ್ರು। ಮೂಗಪ್ಪನ ಮಕ್ಳಿಗ್ಗೆ ಜಗಳ ತಂದಿಕ್ಕಿದ್ದೀನಿ। ಕೊಟುಗೇಲ್ಲಿರುವಂತಾದನುವೆಲ್ಲಾ। ಹುಲ್ಲು ನೀರು ಇಲ್ಲುದಂತೆ ಹಸ್ಕೊಂಡು ಕೊಟ್ಗೇಲಿ ನಿಂತಿದ್ದಾವೆ। ಹತ್ತಿದ್ ಜಗಳ ಹರೀನಿಲ್ಲ। ಏಕಾಂಗಿ ವಸ್ತು ನಮ್ಮಪ್ಪಾಜಿ ಕಿಡುಗಣ್ಣು ನೋಡುದ್ರು ನಾನೇ ಹೋಗಿ ಮೂಗಪ್ಪನವರ ಇಂಗ್ದ ಮಾಡುದ್ರ್ಯ। ನನ್ನೊಕ್ಲಾಗ್ತುರೆ ಅಲ್ದೆ ಹೋದ್ರೆ ಒಕ್ಲಾಲಕ್ಕಿಲ್ಲ ಅಂತ್ಹೇಳಿ।

ಮಾಯದ ಯಾಸ ತಾಳ್ತ ನಿಂತವುರೆ ಜಗದೊಡೆಯ
ನೋಡೆ ನಮ್ಮ ಶಿವನಾ।[6]

ಹೇಳ್ತೀನಿ ಕೇಳಿ ಸ್ವಾಮಿ! ನಮ್ಮಪ್ಪನ ಮನೆ ದೇವರು ಮುಡುಕುತೊರೆ ಮಲ್ಲಣ್ಣ। ನನ್ನ ಗಂಡನ ಮನೆ ದೇವರು ವೆಂಕಟರಮಣ ಸ್ವಾಮಿ। ಇವೆರಡು ಒಕ್ಕಲು ಬಿಟ್ಟು ಬಿಟ್ಟು। ನಾನು ಪರದೇವರಿಗೆ ಒಕ್ಕಲಾಗತಕ್ಕಂತ ಮಗಳೇ ಅಲ್ಲ ಸ್ವಾಮಿ ಅನ್ಬುಟ್ಲು। ಆವಾಗ ನಮ್ಮಪ್ಪಾಜಿಯವರು। ಹಾಗಿದ್ದ ಮೇಲೆ ನೀನು ಪರದೇವರಿಗೆ ಒಕ್ಕಲಾಗುವುದಿಲ್ಲವ್ವಾ। ಕಂಡಿತ ಸ್ವಾಮಿ। ನಾನು ನನ್ನ ಸಿರಸ್ಸಾ ತೆಗೆದು ಮಡಗ್ದ್ರು। ನಾನು ಒಕ್ಕಲಾಗೋಲ್ಲ ಪರದೇವರಿಗೆ ಅನ್ಬುಟ್ಲು। ಆಗ ನಮ್ಮಾಪ್ಪಾಜಿಯವರು ಹುಸಿನಗೆ ನಗುತ್ತಾ। ಪರವಾಯಿಲ್ಲ ಅನ್ಬುಟ್ರು। ಆದರೆ ಹಿಂದಕ್ಕೆ ಹೋಗ್ತೀವಿ ಕಣವ್ವಾ ಅನ್ಬುಟ್ರು। ಅಟ್ಟಬಿಟ್ಟು ಈಚೆಗೆ ಬನ್ಬುಟ್ರು। ಅಲ್ಲಿಗೆ ಏನು ಆಲೋಚನೆ ಮಾಡ್ತಾ ಅವ್ರೆ ಅಂತೇಳಿದ್ರೆ। ನೋಡ್ದಾ್ಯ ನೋಡ್ದಾ್ಯ ಇವಳನ್ನು ನನ್ನ ಒಕ್ಕಲು ಪಡೀಬೇಕಲ್ಲಾ ಅನ್ಬುಟ್ಟು। ಇವಳ ಕೈಲಿ ನಾನು ಎಣ್ಣೆ ಮಜ್ಜನ ಮಾಡಿಸ್ಕಂಬೇಕಲ್ಲಾ ಅನ್ಬುಟ್ರು। ನಮ್ಮಪ್ಪಾಜಿ ಮಾದಪ್ಪನವರು। ಇವಳಿಗೆ ಯಾರ ಕಂಡ್ರೆ ಬಾಳ ಪ್ರೀತಿ ಇದ್ದದು ಅನ್ಬುಟ್ರು। ನಮ್ಮಪ್ಪಾಜಿಯವರು ಆರು ಮೂರು ಮುಕ್ಕಾಲು ಗಳಿಗೆ ಆಲೋಚನೆ ಮಾಡ್ತವರೇ। ಮಾದೇವಾ।

ಆಹಾ..... ನೋಡಿ ನಮ್ಮ ಶಿವನಾ।
ಮಲೆಯೋ ಮಾದೇವ ಬರುವ ಚೆಂದವಾ
ನೋಡಿ ನಮ್ಮ ಶಿವನಾ.....।°
ಹರಹರಾ ಶಿವ ಶಿವಾ।

ಸಟ್ಟೀ ಸರಗೂರಪ್ಪನವರು ಹಾಲು ಸಾಗ್ರವಾಗಿ ಬಾಳಾಟ ಮಾಡ್ತಿದ್ದಾರೆ। ಒಂದಾನು ಒಂದು ಜಿವ್ನ। ಸರಗೂರಪ್ಪನವರು ಅವರ ಮಡ್ದಿ ಗೌರಮ್ಮನವರು। ಊಟುವನ್ನು ಮಾಡ್ಕೊಂಡು। ತಾಂಬೂಲವನ್ನು ಹಾಕೊತಾ ಮಾತಾಡ್ತಿದ್ದಾರೆ। ಏನ್ ಸ್ವಾಮಿ ಆರು ಜನ ಮಕ್ಕಳ್ಗೂ ಲಗ್ನವಾಯ್ತು। ನನ್ನ ಪ್ರೀತಿವುಳ್ಳಂತ ಮಗನು-। ಮೂಗಪ್ಪ ದ್ಯಾವುರ್ಗೆ ಲಗ್ನ ಆಗಿಲ್ಲ" ಅಂತವುಳೆ ಗೌರಮ್ಮ।

ನೋಡೆ ನಮ್ಮ ಶಿವನಾ।

ಮಡದಿ ಆಡಿದ ಮಾತ ಕೇಳಿದನು ಸರಗೂರಪ್ಪ। ಮಡ್ದಿ ಗೌರಾಯಿ। ಇಂದಿದ್ದೋರು ನಾಳೆ ಇರೋದಿಲ್ಲ। ನಾಳೆ ಇದ್ದೋರು ನಾಳಿದ್ದಿರೋದಿಲ್ಲ। ಹಿರಿಯರಾರ್ಗನಕ್ಕೂ ಲಗ್ನುವಾಗೈತೆ। ಕಿರೀ ಮಗ ಮೂಗಪ್ಪ ದ್ಯಾವುರ್ಗೆ। ನಾವು ನಿಂತ್ಕಂಡು ಲಗ್ನ ಮಾಡ್ದ ಕಣ್ಣುಚ್ಕೊಂಡ್ರೆ। ಅವುನ್ಗೆ ಮದುವೆ ಮುಂಜಿ ಮಾಡೋರ್ಯಾರ್ಲ ಮಡ್ದಿ। ಈ ಬಾರಿ ನನ್ನ ಮಗನ ಲಗ್ನ ಮಾಡೇ ತೀರ್ಬೇಕು" ಎಂಬುದಾಗಿ। ಹೆಣ್ಣು ಹುಡೀಕೊಂಡು ಬತ್ತವುರೆ ಸರಗೂರಯ್ಯ।

ನೋಡೆ ನಮ್ಮ ಶಿವನಾ॥

ಹೆಣ್ಣ ಹುಡೀಕೊಂಡು ಸರಗೂರಪ್ಪನವರು ಬತ್ತಿದ್ರೆ। ಮಗನಾದಂತ ಮೂಗ್ದೇವುರ್ಗೆ। ತಕ್ಕಾದಂತ ವಧೂ ಒಂದೂ ಸಿಗ್ನಿಲ್ಲ। ಎಲ್ಲಾ ಊರ್ನೂ ಸುತ್ತಂಡು।

ಕೊತ್ತೇಗಾಲುಕ್ಕೆ ಬಂದವ್ರೆ ಸರಗೂರಯ್ಯ।
ನೋಡೆ ನಮ್ಮ ಶಿವನಾ।

ಸರಗೂರಪ್ಪನವರು ಕೊತ್ತೇಗಾಲುಕ್ಕೆ ಬರುವಂತ ಕಾಲದಲ್ಲಿ। ಕೊತ್ತೇಗಾಲದಲ್ಲಿ ಯಾರಪ್ಪ ಹಾಲು ಸಾಗ್ರವಾಗಿ ಬಾಳ್ತಾ ಇರೋರು ಅಂದ್ರೆ। ಕೊತ್ತೇಗಾಲದ ದಾಸಪ್ಪನವ್ರು। ದಾಸಪ್ಪನವರ ಮಡ್ದಿ ಬಲ್ಲಮ್ಮನೋರು। ಅವರೊಟ್ಟೇಲಿ ಒಬ್ಬ ಹೆಣ್ಣುತ್ರಿ ಹುಟ್ಟಿದ್ದಾಳೆ। ಅವಳ್ಹೆಸ್ರು ಏನಪ್ಪಾ ಅಂದ್ರೆ।

ಅಯ್ಯಾ ಕರ ಚಲುವೆ ಕಣೋ ರಾಮವ್ವೆ।
ನೋಡೆ ನಮ್ಮ ಶಿವನಾ

ದಾಸಪ್ಪನವರ ಮನಸ್ಸಾನ ಒಳ್ಗೇದು ಅಂತ್ವೇಳಿ। ಸರಗೂರಪ್ನೋರು ಹೆಣ್ಕೇಳಕ್ಕೆ ಬಂದಿದ್ದಾರೆ। ಸರಗೂರಪ್ನೋರು ಬಂದ್ರು ಅಂತ್ವೇಳಿ ದಾಸಪ್ಪನವರು। ಕೈ ಕಾಲಿಗೆ

ನೀರ್ಕೊಟ್ಟಿದ್ದಾರೆ। ಕೈಕಾಲು ತೊಳ್ಕೊಂಡು ಸರಗೂರಪ್ನೋರು। ಬಲಗಾಲೆತ್ತಿ ಹೊಸ್ಲ ದಾಟ್ಕೊಂಡು। ಹೋಗಿ ಮಂದಲ್ಗೆ ಮ್ಯಾಲೆ ಕುಂತಿದ್ದಾರೆ। ಸರಗೂರಪ್ಪನವರೆ ನೀವೆಂದೂ ನಮ್ಮಟ್ಟಿ ಕಡೀಕೆ ಬಂದೋರಲ್ಲ। ಇಷ್ಟು ದೂರ ತಮ್ಮ ಪಯ್ಣದಾಸಪ್ನೋರು ಕೇಳುದ್ರು। "ದಾಸಪ್ನೋರೆ ನೆನ್ನೆ ಮೊನ್ನೆ ಯಾರೂ ನಿಮಗೆ। ಯಾವ್ದಮಾಚಾರಾನೂ ಕೊಟ್ಟಿಲ್ವೇನಪ್ಪ। ತಿಳೀನಿಲ್ಲಲ್ಲ ಸರಗೂರಪ್ಪನೋರೆ। ಅಯ್ಯೋ ದಾಸಪ್ಪನವ್ರೆ। ನಮ್ ಮನಸ್ಸಾನ್ನು ನಿಮ್ ಮನಸ್ಸಾನ್ನು ಒಳ್ಳೆ ಲಗತ್ತಾಗದೆ। ನಮ್ಮ ನಿಮ್ಮ ನಡೋಳ್ಗೆಗಳು ಸಮ ಆಯ್ತವೆ। ನಿಮ್ಮ ಮಟ್ಟದ್ಲಿ ನಾವಿವಿ। ನಮ್ ಮಟ್ಟದ್ಲಿ ನೀವಿದ್ದೀರಿ। ಆ ನಾರಾಯಣ ಸ್ವಾಮಿ ದಯವಿದ್ರೆ। ನಿಮ್ಗು ಮನಸೊಪ್ಪೋದಾದ್ರೆ।

ನಮ್ಗು ನಿಮ್ಗು ನಂಟುಸ್ತಾನ ಆಗಬವುದ।
ನೋಡೆ ನಮ್ಮ ಶಿವನಾ।

ಸರಗೂರಪ್ಪನವುರೆ। ನಮ್ಗು ನಿಮ್ಗು ನಂಟು ಬೆಳೀಬೇಕು ಅನ್ನೋದಿದ್ರೆ। ಬ್ರಂಮ್ಮುಗಂಟನ್ನ ಯಾರ್ ಕೈಲಿ ತಪ್ಸಕ್ಕಾಯ್ತದೆ ಸ್ವಾಮಿ। ನಮ್ಮೆಂಡ್ರನ್ನು ಒಂದು ಮಾತು ಕೇಳ್ಬೇಕು।

ಅವುಳ್ನ ಕೇಳಿ ಬರ್ತೀನಿ ತಾಳಿ ಅಂತಾರೆ
ನೋಡೆ ನಮ್ಮ ಶಿವನಾ।

"ಏನ್ನಾ ಮಡ್ಡಿ ಸರಗೂರಪ್ಪನೋರು ನಮ್ಮನೆ ನೆಂಟ್ಬೇಳ್ಲೋಕೆ ಅಂತ ಬಂದವ್ರೆ। ನಿನಗೆ ಒಪ್ಗಗೆ ಇದ್ದೀತಾ ಮಡ್ಡಿ। ಸ್ವಾಮಿ ನಮ್ಮಗ್ಳು ರಾಮಾಯಿ। ಸೇರುದ್ಮನೇಲಿ ಸುಕುವಾಗಿರ್ಬೇಕು ಅನ್ನೋದೆ ನನ್ನಾಸೆ। ಅಂತೆ ಒಳ್ಳೆ ನಂಟು ತಾನಾಗೇ ಬಂದಿರೋಗ। ನಾನ್ಬೇಳೋ ಅಂತದ್ದು ಬ್ಯಾರೆ ಇದ್ದತ?।

ನೀವೊಪ್ಪಂಗೆ ಅಂತಾಳೆ ಬಲ್ಲಮ್ಮ
ನೋಡೆ ನಮ್ಮ ಶಿವನಾ।

ಬಲ್ಲಮ್ಮನವರ ಒಪ್ಗೆ ಪಡ್ಕೊಂಡು ದಾಸಪ್ಪ ನೋರು। ಸರಗೂರಪ್ಪನ ತಾವ್ಕೆ ಬಂದ್ರು। ಸ್ವಾಮಿ ಸರಗೂರಪ್ಪನವುರೆ ನಮ್ಹೆಂಡ್ರ ಒಪ್ಪೇಯೂ ಐತೆ।

ನಮ್ಮ ನಂಟು ಬೆಳೀಲಿ ಅಂತಾರೆ ದಾಸಪ್ಪ
ನೋಡೆ ನಮ್ಮ ಶಿವನಾ।

ದಾಸಪ್ಪನವುರೆ ನಿಮ್ಮ ಮಾತ್ಕೇಳಿ। ನಂಗೆ ಹಾಲು ಅನ್ನ ಉಂಡಂಗಾಯ್ತು। ನಿಮ್ಮ ಬಾಲೆ ಹೆಸ್ರೇನು ಅಂತ ಕೇಳ್ದವುದೆ। "ಅಯ್ಯೋ ಸ್ವಾಮಿ ಎರಡು ಗಂಡ್ಮಾಕ್ಳಾದ್ರೂ

ಹೆಣ್ ಮಕ್ಳೆ ಇರ್ಲಿಲ್ಲ! ಶ್ರೀಮನ್ ನಾರಾಯಣ್ ಸ್ವಾಮ್ಗೆ ಹರ್ಕೆ ಮಾಡ್ಕೊಂಡು। ನಮ್ಮ ಮರಿದೇವ್ರ ಶ್ರೀಮನ್ನರಾಯ್ಣ ಒಬ್ಬ ಹೆಣ್ಬುತ್ರಿಯನ್ನು ಕೊಟ್ಟ। ಅವ್ಳಿಪ್ಸ ಏನಂತ ಕರಿಸಿದ್ದೀನಿ ಅಂದ್ರೆ। ಅಂದ ಚೆಂದ ಚೆಲುವ ಭಾವ ನೋಡಿ। ಉದ್ದ ಭೂಷಣ ನೋಡಿ। ಕರಚೆಲುವೆಯಾದ ನನ್ನ ಮಗಳ್ಳ।

ರಾಮವ್ವೆ ಅಂತ ಕರದಾವಿ ಅನುತಾರೆ
ನೋಡೆ ನಮ್ಮ ಶಿವನಾ।

ಅಯ್ಯಾ ನನ್ ಮಂದೇವ್ರು ಶ್ರೀಮನ್ನಾರಾಯಣ ಮುಡುಕ್ಟೂರ ಮಲ್ಲಪ್ಪ। ನನ್ನ ಮಗುನ್ನ ಮೂಗಪ್ಪ ಅಂತ್ಹೇಳಿ ಕರ್ದಿದ್ದೀನಿ। ಇಬ್ಬರಿಗೂ ಜೋಡಿ ತಕ್ಕನಾಗದೆ। ಶಾಸ್ತ್ರ ಕೇಳವ ಮುಂದೆ ಲಗ್ನ ಮಾಡವ। ಒಪ್ಪೊ ಮಾತ್ಗೋಸ್ಕರ ಈಳ್ಯ ಹಿಡ್ದಿದ್ದೀನಿ ಅಂತ್ಹೇಳಿ।

ಈಳ್ಯ ಮಡುಗವರೆ ಸರಗೂರಯ್ಯ
ನೋಡೆ ನಮ್ಮ ಶಿವನಾ।

ನಾಳೆ ಜಿವ್ವ ತಗರಾಲ್ ಮಾಡೋ ಹಂಗಿಲ್ಲ। ಇಳ್ಯ ಹಿಡುದ ಮ್ಯಾಲೆ ಒಪ್ಮಾತು ಆಯ್ತು ತಾನೇ ಆಯ್ತು ಸ್ವಾಮಿ। ನಾಳೆ ಜನ ಹೋಗಿ ಜೋಯಿಸ್ರು ಕೈಲಿ ಶಾಸ್ತ್ರ ಕೇಳಿ। ಯಾವತ್ ಚಪ್ರಾ ಯಾವತ್ ಧಾರೆ ಅಂತ್ಹೇಳಿ। ಕೇಳ್ಕಂಬರದಾಯ್ತದೆ ನಾ ಹೋಗಂವ। ಅಂತ ಸರಗೂರಪ್ಪ ಹೇಳದ್ರು। ಅಗ್ಲಿ ಹೋಗಿದ್ದು ಬನ್ನಿ ಸ್ವಾಮಿ। ಅಂತ್ಹೇಳಿ ದಾಸಪ್ಪ ಹೇಳಿದ್ರು। ಊಟವಾಯ್ತು ಊಟವನ್ನು ಮಾಡ್ಕೊಂಡು ಸರಗೂರಪ್ಪ।

ಅವರು ಕೊತ್ತೇಗಾಲ ಬಿಟ್ಟು ಬರುತಾರೆ
ನೋಡೆ ನಮ್ಮ ಶಿವನಾ।

ಬಂದ ತಂದೆ ಮೊಕವನ್ನು। ಆರು ಜನ ಗಂಡ್ಮಕ್ಳು ನೋಡುದ್ರು। ತಂದೇವ್ರೆ ತಮ್ಮುನ್ನೆಲ್ಲಿ ನೋಡ್ಕಂಡು ಬಂದ್ರಿ। ಅಪ್ಪಾ ಮಕ್ಕಳೇ। ಪ್ಲೋಳೆವ್ಳೆಗ್ಳ ಮಸ್ತಾಗಿ ನಂಟಿದ್ರೂ। ಮೂಗಪ್ಪಂಗ್ ತಕ್ಕಾದ ವಧು ಎಲ್ಲೂ ಸಿಕ್ಕಿಲ್ಲ। ಕಡೇಬಾರೀಕೆ ಕೊತ್ತೇಗಾಲಕ್ಕೆ ಬಂದೆ। ಕೊತ್ತೇಗಾಲದಲ್ಲಿ ದಾಸಪ್ಪನವರ ಮಗ್ಳು ರಾಮವ್ವೆಗೆ।

ಒಪ್ಮಾತ ಕೊಟ್ಟಿವ್ನಿ ಅಂತಾರೆ ಸರಗೂರಯ್ಯ
ನೋಡೆ ನಮ್ಮ ಶಿವನಾ।

"ತಂದೆಯವರೇ ಸಭಾಸ್। ಅವರ ಮನಸ್ತಾನಕ್ಕೂ ನಮ್ಮನುಸ್ತಾನಕ್ಕೂ। ಅಕ್ಕಿಯರಳು ಬೆರುದಂಗೈತೆ। ತಮ್ಮನ್ನೆ ಸಂತೋಷದಿಂದ ಬಳ್ಗಾನೆಲ್ಲ ಕರೇಸಿ। ಲಗ್ನವನ್ನು ಮಾಡೋವಾಂತ್ಹೇಳಿ। ಆರ್ಜನ ಗಂಡು ಮಕ್ಳು ಹೇಳುದ್ರು। ಕಟ್ಟ ಕಡೇ ಗಾಲದಲ್ಲಿ। ಉಪ್ಪಿನ ಮ್ಯಾಳೇಗ। ಉಪ್ಪನ್ನ ಹದಾ ಕಟ್ಟಕ್ಕೆ ಹೋಗಿದ್ದಲ್ಲ। ಆ ಸರಗೂರಪ್ಪನ ಮಗನು

ಮೂಗಪ್ಪ ಬಂದ್ರು। ಅಯ್ಯೋ ನನ ಕಂದ। ಲಗ್ನ ಆಗೋ ನನ ಕಂದ ಅಂತ ಸರಗೂರಪ್ಪ ಹೇಳಿದ್ರು। ನಿಮ್ಮಿಷ್ಟ ತಂದೇವ್ರ ಅಂತ್ಹೇಳಿ ಮೂಗಪ್ಪ ಅಂದನು। ಅಪ್ಪಾ ಮಗುವೆ ಕಚ್ಚಿ ಕಟ್ಟಿದ್ದೀಯೆ ರುಂಡಿ ಕಾಣುಸ್ತೀಯ। ಅಂಗ್ಯೆ ಮುಂದುಕೆ ಮೈ ತುಂಬ ಕೊಳೆ ಮುತ್ತೆತೆ। ಗಂಡು ನೋಡಬೇಕು ಅಂತ ದಾಸಪ್ಪನವರು ಬಂದು। ನಿನ್ನ ಮೊಕ ನೋಡಿದ್ರೆ ಕಂದ ಅಸಯ್ಯ ಪಟ್ಕೊತಾರೆ।

ಹೋಗಿ ಸ್ನಾನಮಾಡು ಅಂತಾರೆ ಸರಗೂರಯ್ಯ
ನೋಡಿ ನಮ್ಮ ಶಿವನಾ।[6]

ಆಹಾ..... ನೋಡಿ ನಮ್ಮ ಸಿವನಾ
ಮಲೆಯೋ ಮಾದೇವ ಬರುವ ಚಂದಾವಾ
ನೋಡಿ ನಮ್ಮ ಶಿವನಾ।

ಆಲೋಚನೆ ಮಾಡ್ಕಂಡು। ಏನು ಹೇಳ್ತಾರೆ ಅಂತೇಳಿದ್ರೆ। ಈ ಉಪ್ಪರಿಗರಿಗೆಲ್ಲಾ। ಕಾಮಗೆರೆ ಒಳಗೆ ಕೆಂಪೇಗೌಡ ಅಂತವನು। ಅವರ ಜಾತೀರ್‍ಗೆಲ್ಲಾ ಬಾಳ ದೊಡ್ಡ ಮನುಸ್ಯ। ಆ ಕಾಮಗೆರೆ ಕೆಂಪೇಗೌಡ ಅಂದರೆ। ಕುಲದವರಿಗೆಲ್ಲಾ ಇವನು ಗೌಡ। ಯಾವ ಕಾರ್ಯ ಮಾಡಬೇಕಾಗಲೀ। ಯಾವ ದೇವರ ಮಾಡಬೇಕಾಗಲೀ। ಅವನನ್ನು ಕಟ್ಟಿಕೊಂಡು ಮಾಡ್ಬೇಕಾದಂತಾದ್ದು। ಆ ಕೆಂಪೇಗೌಡನ ಅವತಾರ ತಾಳಿಕೊಂಡು। ನಾನೋಗಿ ಅವಳನ್ನು ಬಗ್ಗಿಸಿ। ನಾನು ಒಕ್ಕಲು ಮಾಡ್ಕೋಬೇಕು ಅನ್ನುಟ್ಟು। ನಮ್ಮಪ್ಪಾಜಿ ಮಾಯಕ್ಕಾರ ಮಾದಪ್ಪನವರು। ಕಾಮಗೆರೆ ಕೆಂಪೇಗೌಡನ ಅವತಾರ। ಯಾವ ತರವಪ್ಪಾ ಅಂದ್ರೆ। ಅಡ್ಡ ರುಮಾಲು ಸುತ್ಕೊಂಡು ಬುಟ್ಟು। ನಿಲುವಂಗಿ ಇಟ್ಕಂಡು। ಅಡ್ಡಂಗಿ ಇಕ್ಕಂಡು। ಅಲ್ಲಿಗೆ ಮೈ ಮೇಲೆ ಒಂದು ಸಲ್ಯ ಹಾಕ್ಕಂಡು। ದೊಣ್ಣೆ ಕೈಲಿಟ್ಕೊಂಡು। ಕಾಮಗೆರೆ ಕೆಂಪೇಗೌಡನ ಅವತಾರ ತಾಳವ್ರೇ। ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ
ಮಲೆಯೋ ಮಾದೇವ ಬರುವ ಚಂದಾವಾ।
ನೋಡಿ ನಮ್ಮ ಶಿವನಾ।[7]

ಕಾಮಗೆರೆ ಕೆಂಪೇಗೌಡನವತಾರ ತಾಳ್ಕಂಡು। ತಿರುಗಿ ಅಟ್ಟಿಗೆ ಬಂದ್ಬುಟ್ಟು। ಯಾರವ್ವಾ ತಾಯಿ ಮನೆ ಒಳಗೇ ಅನ್ಬುಟ್ಟು ಬಾಕಲು ತಟ್ಟುಟ್ರು। ಅದೇ ಸಿವಶರಣೆ ಗೌರವ್ವ ಬಂದುಬಿಟ್ಟು। ಬಾಕಲು ತೆಗೆದು ನೋಡೋದ್ರೊಳ್ಗೆ। ಕೆಂಪೇಗೌಡ್ರು। ಓಹೋ.... ಬನ್ನಿ ಗುರುಗಳೇ। ಅನ್ಬುಟ್ಟು। ಬನ್ನಿ ಬನ್ನಿ ಅಂತೇಳ್ಬುಟ್ಟು। ಕೈಕಾಲಿಗೆ ನೀರು ಕೊಟ್ಟಳಂತೆ। ಅಲ್ಲಿಗೆ ನಮ್ಮಪ್ಪಾಜಿ ಮಾಯಕ್ಕಾರ। ಕೆಂಪೇಗೌಡನ ಅವತಾರದಲ್ಲಿ। ಹುಸಿನಗೆ ನಗುತ್ತಾ। ನೋಡ್ದಾಕ್ಕ ಮುಂಡೇ ಮಕ್ಕಳು। ಕೆಳಗೆ ಮ್ಯಾಲೆ ಹಲ್ಲುಟ್ಟ ನರ ಮುಂಡೇ ಮಕ್ಕಳು

ಸಂಬಬಾರದು ಅಂತೇಳಿ। ನಮ್ಮಪ್ಪಾಜಿ ಕೈಕಾಲು ತೊಳಕೊಂಡು ಬಂದ್ರಂತೆ। ಅಲ್ಲಿಗೆ ಶಿವಶರಣೆ ಗೌರವ್ವ ನಡುಮನೇಲಿ ಮಂದಲಿಗೆ ಹಾಸಿ। ಮಂದಿಲೆಗೆ ಮ್ಯಾಲೆ ಮಣೆ ಹಾಕಿ ಕುಂಡುಸ್ಬುಟ್ಟಂತೆ। ಕಾಮಗೆರೆ ಕೆಂಪೇಗೌಡರ ಅವತಾರದಲ್ಲಿದ್ದವರು। ಅವರು ದೊಣ್ಣೆ ಕೆಳಗೆ ಮಡ್ಗುಬುಟ್ಟು ಕೂತ್ಕಂಬುಟ್ರು। ಕೂತ್ಕಂಬುಟ್ಟಂತ ಕಾಲದಲ್ಲಿ। ಏನಪ್ಪಾ ಡ್ರಾಳಪ್ಪಾ ಅಂತೇಳದ್ರೆ। ಸಿವ ಸರಣೆ ಗೌರವ್ವ ಎಲೆ ಅಡಿಕೆ ತಕ್ಕಂಬಂದು ತಟ್ಟೆಮ್ಯಾಲೆ ಮಡಗ್ಬುಟ್ಟು। ತ್ವಾವಟಿಗೆ ಮಾಲೆ ಮಡಗಿ ಬುಟ್ಲು। ಎಲೆ ಅಡಿಕೆ ಹಾಕ್ತಾ ಹಾಕ್ತಾ। ಅಲ್ಲಿ ಮಾತಾಡ್ತ ಕುಂತಿದ್ರಂತೆ। ಈ ಗೌರವ್ವನ ಮಗನಾಗಿರತಕ್ಕಂತ ಮೂಗಪ್ಪ। ಎಲೆ ಕಟ್ಟ ಹೆಗಲ ಮೇಲಿಟ್ಕಂಡು। ಅಷ್ಟೊತ್ತಿಗೆ ಅಟ್ಟಿಗೆ ಬಂದ್ನಂತೆ। ಅಲ್ಲಿಗೆ ಕೆಂಪೇಗೌಡನ ಅವತಾರದಲ್ಲಿ ಕುಂತಿರುವಂತ ಮಾಯಕಾರ ಮರಿದೇವರು ನೋಡ್ಬುಟ್ಟು। ಇವರು ಯಾರಪ್ಪಾ ಅಂತ್ಕೇಳಿದ್ರು। ಏನು ಸ್ವಾಮಿ ಹೀಗೆ ಕೇಳ್ತೀರಾ। ನನ್ನ ಮಗನಲ್ವಾ ಅಂತ। ನಿನ್ನ ಮಗನಿಗೆ ಮಕ್ಕಳೆಷ್ಟವ್ವಾ ಅಂದ। ಅಯ್ಯೋ ಸ್ವಾಮಿ ಮಕ್ಕಳು ಕೇಳ್ತೀರಲ್ಲಾ। ನಾವು ಮದುವೆ ಮಾಡ್ಕೊಬೇಕಾದರೆ। ಗೌಡರನ್ನ ಬಿಟ್ಟು ಬಿಟ್ಟು ಮದ್ವೆ ಮಾಡಿದ್ನಾ। ಇದೇನು ಕೇಳ್ತೀರಲ್ಲಾ। ಇನ್ನೂ ಮದುವೆ ಇಲ್ಲ ಅಂದ್ಲಂತೆ। ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಕೆಂಪೇಗೌಡನ ಅವತಾರದಲ್ಲಿ ಕುಂತಿದ್ದವ್ರು। ಏನು ಹೇಳ್ತಾರೆ। ಚೀ ಚೀ ಬಿಡು ಗೌರವ್ವಾ। ನಿನ್ನ ಬುದ್ದಿ ನಾ ಒಪ್ಪಲಿಲ್ಲ। ಈ ವರ್ಷ ಲಗ್ನ ಅಂತ ಏರ್ಪಾಡು ಮಾಡಿವ್ನಿ। ಎಲ್ಲಪ್ಪಾ ಅಂತ ಕೇಳಿದ್ರು। ಅದ್ಕೆ ಸ್ವಾಮಿ ಕೊತ್ತೇಗಾಲದಲ್ಲಿ। ಯಾರಪ್ಪಾ ಅಂದ್ರು। ಬಲ್ಲವ್ವ ಮಗಳನ್ನು ನೋಡುಬಿಟ್ಟಿವ್ನಿ। ಅಯ್ಯಯ್ಯೋ ಬಿಡುಬಿಡು। ನಿನ್ನ ಬುದ್ಧಿ ನಾ ಒಪ್ಪಿಲ್ಲ। ಅದ್ಯಾಕೆ ಸ್ವಾಮಿ ಅಂದಳು। ಹೇಳ್ತೀನಿ ಕೇಳವ್ವಾ। ಬೂದು ಗುಂಬಳಕಾಯಿ ಊದಲಗೆಕ್ಕೆ ಬಿಟ್ಕಂಡು। ಕಣ್ಣಲ್ಲಿ ನೀರು ಸುರಿಸ್ಕಂಡು। ಬಾಯಲ್ಲಿ ಜೊಲ್ಲ ಹರಿಸ್ಕಂಡು। ಹೊಟ್ಟೇನಾ ಮಡಕೆ ಗಾತ್ರ ಬಿಟ್ಕಂಡು। ಕಿವುಡು ಆವಳಿಗೆ। ಇತ್ತಾಗ ಕರೆದ್ರೆ ಅತ್ತಾಗ ತಿರಗವ್ಳೇ।

ಆಹಾ..... ನೋಡಿ ನಮ್ಮ ಸಿವನಾ

ಅಲ್ಲವ್ವ ಅಂತ ಮಗಳನ್ನು ತಕ್ಕಂಬಂದು ಚೆಂದ ಮಗನಿಗೆ ಕಟ್ಬೇಕು ಅಂತ ಮಾಡಿದ್ದಿಯಲ್ಲಾ ಅನ್ಬುಟ್ರಂತೆ। ಆವಾಗ ಗೌರವ್ವ ಏನು ಹೇಳ್ತಾಳೆ। ಏನು ಸ್ವಾಮಿ ಕೆಂಪೇಗೌಡರೇ। ನಮ್ಮ ಕುಲಕ್ಕೆ ದೊಡ್ಡವರು ನೀವು। ಒಂದು ಕಾರ್ಯಕಲಾಪ ಮಾಡಿದ್ರೆ। ನಿಮ್ಗೆ ತಕ್ಕಂಬಂದು। ನ್ಯಾಯ ಒಪ್ಪಿಸತಕ್ಕಂತವರು ನಾವು। ನೀವೇ ಇಂತ ಮಾತೇಳ್ಬುಟ್ರ್ಯಲ್ಲಾ ಸ್ವಾಮಿ। ನಾನು ಏನಾರ ಹೋಗಿ। ಒಪ್ಪೀಳ್ಯ ಮಾಡ್ಬುಟ್ಟು ಅರಿಸಿನ ಬಾಳೆಹಣ್ಣು ಮಡಗ್ಬುಟ್ಟಿವ್ನಿ। ಈಗ ನಾವೇನನಾರ ಆ ಹೆಣ್ಣು ಬ್ಯಾಡ ಅನ್ಬುಟ್ರೆ। ನಿಮ್ಮನ್ನೆಲ್ಲಾ ನ್ಯಾಯ ಸೇರಿಸಿಬಿಟ್ರೆ। ನಮ್ಮನ್ನ ಬಿಟ್ಟಾರಾ ಸ್ವಾಮಿ ಕುಲದವರು ಅಂದುಬುಟ್ಲಂತೆ।

ಹುಂ..... ಏನೋ ಆಗಿದ್ದು ಆಗೋಯ್ತು। ಹೇಳ್ತೀನಿ ಕೇಳವ್ವಾ। ಈಗ ನಾನು ಒಯ್ತಿವ್ನಿ ಕಣವ್ವಾ। ಅವರೇ ಹೊಲದಲ್ಲಿ ಓರಿಗಳನ್ನು ಕಟ್ಟಾಕಿ ಬಂದಿವ್ನಿ। ಆ ಓರಿಗಳು ಕಿತ್ಕಂಡು। ಅವರೇ ಕಡೆ ಮೇಯ್ಕಂಬುಟ್ಟಿದ್ರೆ। ನನಗೆ ಬಾಳ ತೊಂದ್ರೆ ಬಂದು ಬುಡುತ್ತೆ। ನನಗೇನೋ ಬೇಜಾರಾಯ್ತು ಬಂದೆ ಕಣವ್ವಾ ಅಂತಂದ್ಬುಟ್ರಂತೆ। ಆಗಿದ್ದು ಆಗಲಿ ಪರಿಣಾಮ। ಸಂಬಂಧ ಇದ್ದಂಗಾಗೋಯ್ತು। ಆದ್ರೆ ನನ್ನ ಮದುವೆಗೆ ಕರಿಬೇಕವ್ವಾ। ಇದೇನು ಸ್ವಾಮಿ ಕೆಂಪೇಗೌಡರೇ ಇಂತ ಮಾತು ಹೇಳ್ತೀರಲ್ಲಾ। ನೀವೇ ಮುಂದಾಳು ಗೌಡರು। ಇಂತದ್ರಲ್ಲಿ ನೀವು ಹೀಂಗಂತೇಳ್ತೀರಲ್ಲಾ ದಮ್ಮಯ್ಯಾ। ನನ್ನನ್ನು ಕರದ್ದೇ ಉಂಟಾದ್ರೆ ನಾನು ಹತ್ತು ಜನರ ಸಮ್ಮುಖ ಬರ್ತೀನಿ। ನಾನೂ ಒಂದೆಲೆ ಅಡಿಕೆ ತಕ್ಕಂತೀನಿ। ಒಂದ ಹಣ ಮುಯ್ಯಿ ಹಾಕ್ತೀನಿ ಕಣವ್ವಾ ಅಂದ್ರಂತೆ। ಆಗ್ಲಿ ಓಗಿ ದಮ್ಮಯ್ಯ ಅಂದು ಬುಟ್ಲು। ನೋಡ್ದ್ಯಾ ನೋಡ್ದ್ಯಾ... ಕಾಮಗೆರೆ ಕೆಂಪೇಗೌಡರ ಅವತಾರ ತಾಳಿದ್ದಕ್ಕೆ। ನನಗೆ ಮರ್ಯಾದೆ ಕೊಟ್ಟಳಲ್ಲ। ಇರಲಿ ಅಂತೇಳ್ಬುಟ್ಟು। ಮುಂಡೇ ಮಕ್ಕಳೇ ನಿಮಗೆ ನಾನು ಸೋಮವಾರದ ಒಕ್ಕಲು ಪಡಕೊಂಡು। ನಿನ್ನ ಕೈಲಿ ಮಜ್ಜನ ಮಾಡಿಸ್ಕಳ್ದೇ ವೋದ್ರೆ। ನಾನು ಈ ಕಾಡಿನಲ್ಲಿ ಹುಟ್ಟಿ ನೆಲೆಗೊಂಡು ಫಲವೇನು ಅನ್ಬುಟ್ಟು। ನಮ್ಮಪ್ಪಾಜಿ ಮಾದಪ್ಪನವರು। ಅವರು ಏಳು ಮಲೆಗೆ ಬತ್ತವರೇ। ಮಾದೇವಾ

ಆಹಾ..... ನೋಡಿ ನಮ್ಮ ಸಿವನಾ।

ಇನ್ನು ಕೊತ್ತೇಗಾಲಕ್ಕೆ ಹೋಗಿ ಸ್ವಲ್ಪ ಹೇಳಬೇಕಲ್ಲಾ ಅನ್ಬುಟ್ಟು। ನಮ್ಮಪ್ಪಾಜಿ ಮಾದಪ್ಪನವರು ಕೊತ್ತೇಗಾಲಕ್ಕೆ ಬತ್ತವರೇ।

ಆಹಾ...... ನೋಡಿ ನಮ್ಮ ಸಿವನಾ।

ಕೊತ್ತೇಗಾಲದಲ್ಲಿ ಬಲ್ಲಪ್ಪನ ಹಟ್ಟಿಗೆ ಬನ್ಬುಟ್ರಂತೆ। ಅಲ್ಲಿಗೆ ಅದೇ ಕಾಮಗೆರೆ ಕೆಂಪೇಗೌಡನ ಅವತಾರದಲ್ಲಿ ಬನ್ಬುಟ್ರು। ಅಲ್ಲಿಗೆ ಯಾರವ್ವಾ ಮನೆ ಒಳಗ। ಅಂತ ಬಾಗಿಲು ತಟ್ಟಿದರು। ಆವಾಗ ಬಂದು ಬಲ್ಲವ್ವಾ ನೋಡಿದಂತ ಕಾಲದಲ್ಲಿ। ಏನು ಹೇಳ್ತಾರೆ ಅಂತ ಹೇಳಿದ್ರೆ। ನಿನ್ನ ಮಗಳಿಗೆ ಮಕ್ಕಳೆಷ್ಟವ್ವಾ ಅಂತ ಕೇಳಿದ್ರು। ಇದೇನು ಸ್ವಾಮಿ ಮಕ್ಕಳು ಕೇಳ್ತಿದ್ದರಲ್ಲಾ। ನನ್ನ ಮಗಳಿಗೆ ಮದುವೇನೇ ಮಾಡಿಲ್ಲ। ಎಲ್ಲವ್ವ ಗಂಡು ನೋಡಿದ್ದೀಯಾ?। ಸರಗೂರಪ್ಪನ ಮಗ ನಿಜಗುಣ ಮೂಗಯ್ಯ। ಅವನ್ನ ನೋಡಿದ್ದೀನಿ ಸ್ವಾಮಿ ಅನ್ಬುಟ್ಲು। ಅಯ್ಯೋ ಅಯ್ಯೋ ತೆಗಿ ನಿನ್ನ ಬುದ್ಧಿ ನಾ ಒಪ್ಪಿಲ್ಲ। ಏನು ಆ ಸರಗೂರಪ್ಪನ ಮಗ। ಮೂಗಯ್ಯ ಅಂತಕ್ಕವನು ಯಾವ ತರವಾಗವ್ನೆ ಗೊತ್ತಾವ್ವಾ। ಯಾವ ತರ ಇದ್ದಾನೆ। ಸ್ವಾಮಿ ಹೇಳ್ತೀನಿ ಕೇಳವ್ವಾ। ಅವನು ತಲೇಲಿ ಹೇನು ಮೂಗಂಡಗ। ಸೀರು ಮೂಗಂಡಗ। ಮರಿ ಮಾಡ್ಕಂಡು ವಾಸ ಮಾಡ್ತವೆ। ಒಂದು ಕಣ್ಣಿನಲ್ಲಿ ಒಂದು ನಿಂಬೇ ಕಾಯಿ ಗಾತ್ರ ಜಿಬರುಂಟು। ಮೂಗಿನಲ್ಲಿ ಒಂದು

ಹಿಟ್ಟಿನ ಮುದ್ದೆ ಗಾತ್ರ ಮುಸುರೆ ಉಂಟು। ಅವನ ಬಟ್ಟೆ ಬೆಂಕೀಲೂ ಸಹ ಬೇಯೋದಿಲ್ಲವಲ್ಲಾ। ಅಂತ ಕೊಳಕ ಮೂಗಯ್ಯನ ನಿನ್ನ ಮಗಳು ಒಪ್ಪಿದಳಲ್ಲಾ। ನಿನ್ನ ಬುದ್ಧಿ ತರವಲ್ಲಾ ಅಂತವ್ರೇ। ಕೆಂಪೇಗೌಡ।

ಆಹಾ...... ನೋಡಿ ನಮ್ಮ ಸಿವನಾ।

ಅವಳು ಆಗ ಏನು ಹೇಳ್ತಾಳೆ ಅಂತೇಳ್ಬುಟ್ರೆ। ಏನೋ ಸ್ವಾಮಿ ಒಪ್ಪಿದ್ದಾಗೋಯ್ತು। ಮಾತಾಡಿದ್ದಾಗೋಯ್ತು। ಇನ್ನು ಮದುವೆ ಮಾಡೋದು ಎರಡು ದಿನ ಇದೆ। ಬೇಸ್ತವಾರ ಲಗ್ನ ಕಟ್ಟಕ್ಕೆ ವೊಯ್ತೀನಿ ದಮ್ಮಯ್ಯ ಅನ್ಬುಟ್ಲು। ಹಾಗಿದ್ದ ಮೇಲಾಗೋಯ್ತು। ಋಣಾನುಸಂಬಂಧ ಇದ್ದಮ್ಯಾಲೆ ಆಗೋಯ್ತು ಕಣವ್ವಾ। ನೀವು ನನ್ನ ಲಗ್ನಕ್ಕೆ ಕರೀರವ್ವಾ ಅಂತೇಳಿದ್ರು। ಏನು ಸ್ವಾಮಿ ನಮ್ಮ ಕುಲಗುರು ಬುಟ್ಟು ಲಗ್ನ ಮಾಡೀವಾ। ಕರೀತೀವಿ ಸ್ವಾಮಿ ಅಂದ್ಬುಟ್ಲಂತೆ ಕೊತ್ತೇಗಾಲದ ಬಲ್ಲವ್ವ। ಸರಗೂರಪ್ಪನ ಹೆಂಡತಿ ಗೌರವ್ವ ಅಂತಕ್ಕಂತವರು। ಬೀಗ ಬೀಗತೀರು ಸೇರ್ಕಂಡು। ಅಲ್ಲಿಗೆ ಲಗ್ನ ಕಟ್ಟೋದಕ್ಕೆ। ಅವರು ಕೊಳ್ಳೇಗಾಲಕ್ಕೆ ಒಯ್ತವರೇ ಬೀಗಬೀಗರು।

ಆಹಾ...... ನೋಡಿ ನಮ್ಮ ಸಿವನಾ।

ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಇದೇ ನನಗೆ ಒಳ್ಳೆ ಸಮಯ ಅಂತೇಳ್ಬುಟ್ಟು। ದೇವಂಗ ಸೆಟ್ಟಿ ಅವತಾರ ತಾಳ್ಕಂಡು। ನಮ್ಮಪ್ಪಾಜಿ ಹಾರುಗಚ್ಚೆ ಹಾಕಿಕೊಂಡು ಬಿಟ್ರು। ಒಂದು ತುಂಡು ಪಂಚೆ ಮೈಗೆ ಹೊದ್ದಗಂಡುಬಿಟ್ಟು। ಅಲ್ಲಿಗೆ ಹಾರುವಯ್ಯನ ಯಾಸ ತಾಳ್ಕಂಬುಟ್ರು। ಅತ್ತಿಂದ ಬರ್ತಾ ಇದ್ದರಂತೆ। ಇತ್ತಿಂದ ಇವರು ಬೀಗ ಬೀಗತೀರು ಹೋಗ್ತಾ ಇದ್ದರಂತೆ। ದೇವಂಗ ಸೆಟ್ಟಿ ಮನೆಗೆ ಲಗ್ನ ಕಟ್ಟಿಸಕ್ಕೆ ವೊಯ್ತಿದ್ರಲ್ಲಾ। ಇವರು ನೋಡ್ಬುಟ್ರು। ಆರ್ಧದಾರಿ ಒಳಗೆ। ಏನು ಸ್ವಾಮಿ ದೇವಂಗ ಸೆಟ್ಟರೇ ಈವತ್ತು ಎಲ್ಲಿಗೋ ಪಯಣ ಅಂದ್ರು। ನಾವು ಲಗ್ನ ಕಟ್ಟಕ್ಕೆ ಬತ್ತಿದ್ವಲ್ಲಾ। ಹಿಂದಕ್ಕೆ ಓಗಕ್ಕೆ ಆಗಲ್ಲ। ನೀವು ಲಗ್ನ ಕಟ್ಟಬೇಕು ಅಂದ್ರೆ। ಈ ಅರಳಿ ಮರದ ತಾವ ಕೂತುಕೊಂಡು। ಕಟ್ಟಿ ಕೊಡ್ತೀನಿ ಅಂದ್ರಂತೆ। ಎಲ್ಲಾದ್ರೇನಂತೆ ನಿಮ್ಮ ಕೈ ಮುಟ್ಟಿ ಕಟ್ಬುಡಿ ಈ ಲಗ್ನಾವ ಅನ್ಬುಟ್ರು। ಆ ಅಸ್ವತ್ತ ಕಟ್ಟೆ ಮೇಲೆ ವೋಗೀ। ಸಾರಿಸಿಬಿಟ್ಟು। ರಂಗೋಲೆ ಬಿಟ್ಟು ಬಿಟ್ಟು ಕುಂತ್ಕಂಡ್ರು। ಆ ಅಕ್ಕಿ ಮಡಗಬುಟ್ಟು। ಬೆಲ್ಲದ ಅಚ್ಚ ಮಡಗಿಸಿಕೊಂಡು ಬಿಟ್ರು। ಲಗ್ನ ಬರೆದ್ಬುಟ್ರು। ಯಾವ ತರವಾದ ಲಗ್ನ ಬರೆದ್ಬುಟ್ರು। ಒಂದು ವಿಸದ ಲಗ್ನ। ಒಂದು ಅಮೃತದ ಲಗ್ನ। ಅಲ್ಲಿಗೆ ಅವರು ಕೇಳ್ತಾರೆ। ವಿಸದ ಲಗ್ನ ಅಂತ ಹೇಳಿದ್ರೆ। ಸುಕ್ರವಾರ ಚಪ್ಪರ ಸನಿವಾರ ಧಾರೆ। ಆಯಿತವಾರ ಚಪ್ಪರ। ಸೋಮವಾರ ಲಗ್ನ ಅಂದ್ರೆ ಅಮೃತ ಲಗ್ನ। ಇದೇನು ದೇವಂಗ ಸೆಟ್ಟರೇ ಹೀಗೇಳ್ತೀರಿ। ಅವ್ವಾ ಲಗ್ನ ಬಂದದ್ದು ಹಾಗೆ ಹೇಳ್ತೀನಿ। ನಾನೇನು ಬರ್ಕಂಡಿದ್ನಾ ಅಂದ್ರು। ನೋಡಿ ಸ್ವಾಮಿ ದೇವಂಗ ಸೆಟ್ಟರೇ।

ನಮಗೆ ಸನಿವಾರ ಒಕ್ಕಲು। ನಮಗೆ ಸುಕ್ರವಾರದ ಒಕ್ಕಲು। ಸನಿವಾರ ನನ್ನ ಗಂಡನ ಮನೆ ದೇವರು। ಸುಕ್ರವಾರ ನಮ್ಮಪ್ಪನ ಮನೆ ದೇವರು। ಇವೆರಡು ಬಿಟ್ರೆ ಸೋಮವಾರದ ಒಕ್ಕಲು ನಮಗೆ। ಕಂಡಿತಾ ಆಗೋಲ್ಲ ಅಂದ್ಬುಟ್ಟಂತೆ। ಸುಕ್ರವಾರ ಚಪ್ಪರ। ಸನಿವಾರ ಧಾರೆ ಅಂತ ಇಸದ ಲಗ್ನ ಬರದ್ಬುಟ್ರು। ನೋಡ್ವಾ್ಯ ನೋಡ್ವಾ್ಯ ತಕ್ಕಂಡೋಗ್ಬುಟ್ರು। ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು। ಇದರಲ್ಲೂ ಬಗ್ಗಲಿಲ್ಲಾ ಇರಲಿ ಬಗ್ಗಿಸ್ತೀನಿ ಅನ್ಬುಟ್ಟು। ಲಗ್ನ ಬರೆದು ಕೊಟ್ಬುಟ್ರು। ಕೆಂಪೇಗೌಡರಿಗೆ ಹೇಳೋದೇ ಮರೆತುಬಿಟ್ರು। ಲಗ್ನದ ಪಾಡಿಗೆ ಲಗ್ನ ಆಗೋಯ್ತು।

ನಮ್ಮಪ್ಪಾಜಿ ಮಾಯಕಾರ ಮಾದಪ್ಪನವರು ಕೆಂಪೇಗೌಡನ ಅವತಾರ ತಾಳ್ಕಂಡು। ಅವರು ಸಿವ ಸರಣೆ ಗೌರವ್ವನ। ಸರಗೂರಿಗೆ ಬತ್ತವರೇ ಸರಣಾರು।

ಆಹಾ...... ನೋಡಿ ನಮ್ಮ ಸಿವನಾ।

ಸರಗೂರಿಗೆ ಬಂದ್ಬುಟ್ರು ಬಾಗಲು ತಟ್ಟಿದ್ರಂತೆ। ಅಲ್ಲಿಗೆ ಗೌರವ್ವ ನೋಡ್ಬುಟ್ಟು। ಬನ್ನಿ ಸ್ವಾಮಿ ಅಂತೇಳಿ ಕೈಕಾಲಿಗೆ ನೀರು ಕೊಟ್ಟಳು। ಕೆಂಪೇಗೌಡ್ರೇ ನಿಮ್ಮ ನಾನು ಮದುವೇಗೆ ಕರೆಯೋಕೆ ಬ್ಯಾಗ ಆಗೋಯ್ತು ಸ್ವಾಮಿ। ಯಾವ ಕುಲಸ್ತರಿಗೂ ಹೇಳಲಿಲ್ಲ ಸ್ವಾಮಿ। ಅಯ್ಯೋ ಏನೋ ಬುಡವ್ವಾ ಮೀರಿದ ಕೆಲಸಕ್ಕೇನು ಅಂತೇಳಿ ಕುಂತ್ಕಂಬುಟ್ರು। ಅಲ್ಲಿಗೆ ಗೌರವ್ವ। ತನ್ನ ಮಗನಾಗಿರತಕ್ಕಂತ ಮೂಗಪ್ಪನ ಕರೆದು ಬುಟ್ಟು। ಇದೋ ಗೌಡರಿಗೆ ಎಲೆ ಅಡಿಕೆ ಕೊಡಬೇಕು ತಕ್ಕಂಬಾಪ್ಪಾ ಅಂದ್ಲಂತೆ। ಅಟ್ಟದ ಮ್ಯಾಲೆ ಹತ್ಬುಟ್ಟು ತಕ್ಕಂಬಾಪ್ಪಾ ಅಂತೇಳ್ಬುಟ್ಟು। ಆ ಎಲೆ ಮಡಗಿದ್ದ ಗುಡಾಣದಲ್ಲಿ ಎಳೆ ನಾಗರ ಮರಿಯಾಗಿ ಒರಗವರಲ್ಲಾಪ್ಪಾ।

ಆಹಾ...... ನೋಡಿ ನಮ್ಮ ಸಿವನಾ।

ಯಾವಾಗ ಮೂಗಪ್ಪ। ಅಟ್ಟದ ಮ್ಯಾಲಕ್ಕೆ ಅತ್ಬುಟ್ಟು ಗುಡಾಣಕ್ಕೆ ಕೈ ಹಾಕಿದ್ನೋ। ಎಲೆತಕ್ಕಳದ್ನೇ। ಕೈ ಹಾಕಿದಂತ ಕಾಲದಲ್ಲಿ। ಎಳೆನಾಗರ ಅವನ ಕೈಯ್ಯನ್ನು ಕಚಕ್ಕನೆ ಕಡ್ದವರೇ। ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ।

ಅಟ್ಟದ ಮ್ಯಾಲಿಂದ ದಪ್ ಅಂತ ಬಿದ್ದೋಗ್ಬುಟ್ಟ ಮಗ। ಎಲ್ಲಾ ಮದುವೆಗೆ ಬಂದಿದ್ದೋರೆಲ್ಲಾ ಎದ್ದು ನೋಡುವೆಂತ ಕಾಲದಲ್ಲಿ। ಅಲ್ಲಿಗೆ ಮೂಗಪ್ಪ ಅಂತಕ್ಕವನು। ಅಲ್ಲಿಗೆ ಸತ್ತು ಮನಗವನೇ ಮೂಗಯ್ಯಾ।

ಆಹಾ...... ನೋಡಿ ನಮ್ಮ ಸಿವನಾ।

ಎಲ್ಲಾ ಗೋಳೋ ಅಂತ ಅಳಕ್ಕೆ ಸುರುಮಾಡಿಬಿಟ್ಟು। ಕೆಂಪೇಗೌಡನ ಅವತಾರದಲ್ಲಿ ಕುಂತಿರ ತಕ್ಕಂತ ಮಾಯಕಾರ ಮಾದಪ್ಪನವರು। ಏನಪ್ಪಾ ನಾನು ಒಳ್ಳೇ ಸಮಯಕ್ಕೆ ಬಂದೆನಲ್ಲಾ ಅಂತೇಳ್ಬುಟ್ಟು। ನಾನು ಓಯ್ತಿನಿ ಕಣವ್ವಾ ಅಂತೇಳಿ। ಒಂಟೋಗ್ಬುಟ್ರು। ಮುಡುಕುತೊರೆ ಮಲ್ಲಯ್ಯನಿಗೆ ಓಗ್ಬುಟ್ಟು ಏನಪ್ಪಾ ಮಲ್ಲಣ್ಣಾ। ನಿನ್ನ ಒಕ್ಕಲು ಮಗನು ಸತ್ತು ಮಲಗವ್ನೆ। ಓಗು ಅಂದ್ರಂತೆ। ಆವಾಗ ಮಲ್ಲಣ್ಣ ಬಂದು ನೋಡುವಂತ ಕಾಲದಲ್ಲಿ ಸತ್ ಮಲಗಿರುವಂತ ಕಾಲದಲ್ಲಿ। ಅವಳು ಕೈ ಕಾಲು ಹಿಡಿದಂತಾ ಕಾಲದಲ್ಲಿ ಯಾರು ಸಿವಸರಣೆ ಗೌರವ್ವ। ಆವಾಗ ಏನು ಹೇಳ್ತಾರೆ। ಇದು ಯಾರಿಂದಲೂ ಆಲ್ಲ ಕಣಮ್ಮಾ। ಸೋಮವಾರದ ಒಕ್ಕಲು ಪಡೆಯಲಿಕ್ಕೆ ಬಂದಿದ್ದಲ್ಲ। ಆ ಮಾಯಕಾರ ಮರಿದೇವರೇ ಹೊರತಾಗಿ। ಇನ್ಯಾರದೂ ಇಲ್ಲ ಅನ್ಬುಟ್ರು। ಆಗ ಏನು ಮಾಡಬೇಕು ಸ್ವಾಮಿ ಅನ್ಬುಟ್ಲು। ಈಗ ಓಗಿ ನೀನು ಅವನನ್ನೇ ಪಾದ ಹಿಡಿದು। ಪಟ್ಟಾಭಿಸೇಕ ಮಾಡಿ ಕೇಳ್ಕಂಡದ್ದೇ ಉಂಟಾದ್ದೆ। ನಿನ್ನ ಮಗ ಬದುಕ್ತಾನೆ ಅನ್ಬುಟ್ರು। ಯಾರು ವೆಂಕಟರಮಣ ಸ್ವಾಮಿ। ಮುಡುಕುತೊರೆ ಮಲ್ಲಣ್ಣ ಅನ್ಬುಟ್ರು। ಆಗ ಗೌರವ್ವ ಓಡ್ಹೋಗಿ। ಮಾಯಕಾರ ಮರಿದೇವರನ್ನು। ಅವಳು ಪಾದ ಹಿಡಿದವಳೇ ಗೌರವ್ವಾ।

> ಆಹಾ...... ನೋಡಿ ನಮ್ಮ ಸಿವನಾ।
> ಮಲೆಯೋ ಬೆಳ್ಳಿ ವಾಹನ ಬರುವ ಚಂದವಾ।
> ಕಾಡಿ ಬೇಡಿ ಸಿವನಾ।

ಯಾವಾಗ ಪಾದ ಹಿಡ್ಕಂಡ್ಳೋ। ಆಗ ಯಾರವ್ವ ಅಂತ ಕೇಳ್ತಾರೆ। ನಾನು ಸ್ವಾಮಿ ಸರಗೂರಪ್ಪನ ಹೆಂಡತಿ। ಗೌರವ್ವ। ನಾನು ಅಹಂಕಾರ ಮಾಡ್ದೆ ಸ್ವಾಮಿ। ನನ್ನ ಮಗ ಸತ್ತು ಮಲಗವ್ನೆ। ನೀವು ಬಂದು ಪ್ರಾಣದಾನ ಮಾಡಬೇಕು। ಅಂದ್ರಂತೆ। ಆಗ ಹುಸಿನಗುತ್ತಾ ನಮ್ಮಾಪ್ಪಾಜಿಯವರು। ಈಗ ನೀನು ಸೋಮವಾರದ ಒಕ್ಕಲು ಆಗೋದಕ್ಕೆ ಒಪ್ಕಂಡ್ಕಲ್ವಾ ಅಂದ್ರು। ಆಗಲೀ ಒಪ್ಕಂಡಿದ್ದೀನಿ ಅಂದ್ಲು। ಆಗ ನಮ್ಮಪ್ಪಾಜಿಯವರು। ಸೆಟ್ಟಿ ಸರಗೂರಿಗೆ ಬಂದ್ಬುಟ್ಟು। ತೀರ್ಥವಿಟ್ಟಂತಾ ಕಾಲದಲ್ಲಿ। ಆ ಸತ್ತು ಮಲಗಿರತಕ್ಕಂತಾ ನಿಜಗುಣ ಮೂಗಪ್ಪ। ಅವನು ಉಸ್ ಅಂತ ಎದ್ದು ಕೂತವನೆ ಮೂಗಯ್ಯ।

ತುಂಬಿದ ಅಮಾವಾಸ್ಯೆಯ ದಿನ। ಸಿವರಾತ್ರಿ ಹಬ್ಬದಲ್ಲಿ ಬಂದು। ನನಗೆ ಎಳ್ಳು ಮಜ್ಜನ ಮಾಡೋದಕ್ಕೆ। ನನ್ನ ಒಕ್ಕಲು ಪಡ್ಕಳ್ಳೊಕ್ಕೋಸ್ಕರ। ನಾನು ಇಷ್ಟು ಮಾಡದ್ನಪ್ಪ ಅನ್ಬುಟ್ಟು। ಎಲ್ಲರನ್ನೂ ಹರಿಸಿ ಆಸೀರ್ವಾದ ಮಾಡ್ಬುಟ್ಟು। ನಮ್ಮ ಮಾಯಕಾರ ಮಾದಪ್ಪನವರು। ಅವರು ಏಳು ಮಲೆಗೆ ಓಯ್ತವರೇ। ಮಾದೇವಾ।

> ಆಹಾ..... ನೋಡಿ ನಮ್ಮ ಸಿವನಾ।
> ಮಲೆಯೋ ಮಾಯಕಾರ ಬರುವ ಚಂದವಾ
> ಕಾಡಿ ಬೇಡಿ ಸಿವನಾ॥ೕ

ನಮ್ಮಪ್ಪ ಆಗಲೀಗ। ಸೆಟ್ಟಿ ಸರಗೂರಯ್ಯ ಮೂರು ಚಿಕ್ಕಚ್ಚು ಬೆಲ್ಲ ತಕ್ಕಂಡು। ಕತ್ತರಿಸಿದ ಎಲೆ ತಕ್ಕಂಡು। ಉತ್ತರಿಸಿದ ಅಡಿಕೆ ತಕ್ಕಂಡು। ಏಡು ಸೇರು ಸುಣ್ಣ ತಕ್ಕಂಡು। ಎಳೆ ಒಂಬಾಳೆ ತಕ್ಕಂಡು। ನಡ್ದವ್ನೇ।

ಆಹಾ..... ನೋಡಿ ನಮ್ಮ ಸಿವನಾ।

ಸೆಟ್ಟಿ ಸರಗೂರಯ್ಯ ಗುಡಿ ಬಾಕಲಿಗೆ ಹೋಗಿ। ದೂಳು ಕಾಲಲ್ಲಿ ನುಗ್ಗಿದೇಟಿಗೆ। ಅವನಿಗೆ ಹನ್ನೆರಡು ಕಂಡುಗ ದೂಪದ ಹೊಗೆ। ಕಾದಂಗೆ ಆಯ್ತಲ್ಲೋ ಧರೆ ಒಳಗೇ

ಆಹಾ...... ನೋಡಿ ನಮ್ಮ ಸಿವನಾ।

ಆಗಲೀಗ ಮೂರು ಸೆರೆ ಎಳ್ಳ ತಕ್ಕಂಡು। ಸೆಟ್ಟಿ ಸರಗೂರಯ್ಯ। ಆಗಲೀಗ ಮೂರು ಸೆರೆನೂ ಹಿಡಕೊಂಡು। ಅವನ ಮಂಡೆಮ್ಯಾಲಕ್ಕೆ ಇನ್ನು ಇಂಡನೋ

ಆಹಾ..... ನೋಡಿ ನಮ್ಮ ಸಿವನಾ।

ಆಗಲೀಗ ನಮ್ಮಪ್ಪ ಮಾಯಕ್ಕಾರ ಗಂಡ। ಬಾಳ ಸಂತೋಷ ಪಟ್ರು। ತಿಂಗಳ ಸ್ಯಾವೆಗೆ ನೀನು ಬಂದೇ ಬರಬೇಕು ಅಂತಾನಲ್ಲೋ ಧೀರಾ। ಮಾದಯ್ಯ।

ಆಹಾ ನೋಡಿ ನಮ್ಮ ಸಿವನಾ।

ಆಗಲೀಗ ನಮ್ಮಪ್ಪ ಮಾಯಕಾರಗಂಡ। ಮೂಗಯ್ಯ ಓಗುವಾಗ್ಗೆ। ಅವ ಒಡೆದು ಮೂಡ್ತವ್ನೆ। ಧರೆ ಒಳಗೇ॥

ಆಹಾ...... ನೋಡಿ ನಮ್ಮ ಸಿವನಾ।

ಅಯ್ಯ ಬಾ ಮಾದೇವಾ ಬಾ।
ಗಿರಿಯೊಳು ಮಾದೇವ ಲಿಂಗ ಬಾ। ॥ ಪ ॥

ಧೈರ್ಯಕಾರ ಮಾದೇವ ಬಾ
॥ಗಿರಿಯೊಳು॥

ಮರೆತವರ ಮನೆಯ ಮುರಿದವನೇ।
॥ಗಿರಿಯೊಳು॥

ದಬ್ಬೆಹುಲ್ಲ ತುಳುಕೊಂಡು ಬಾ
॥ ಅಯ್ಯ ಬಾ॥

ಕಬ್ಬೆ ಹುಲ್ಲ ತುಳುಕೊಂಡು ಬಾ
॥ ಗಿರಿಯೊಳು॥

ಹೆಬ್ಬುಲಿ ಮ್ಯಾಗೆ ಮೆರೆದವನೇ।
॥ ಗಿರಿಯೊಳು ॥

ಹಳ್ಳತಳ್ಳುವ ನೀರೆಲ್ಲೋ।।

॥ ಗಿರಿಯೊಳು ॥

ಅಲ್ಲಿ ಮಾದಯ್ಯನ ಸಿವ ಪೂಜೆ।।

॥ ಗಿರಿಯೊಳು ॥

ಬೆಳ್ಳಿ ಗಂಟೆ ಬಳಿ ಬಂದು।

॥ ಗಿರಿಯೊಳು ॥

ಎತ್ತಬಾರದ ಸುತ್ತ ಗಂಟೆ ಸುತ್ತ ಸರ್ಪನ
ಕಣಿವೆ

ನೆತ್ತಿಯ ಮೇಲೆ ಕಿರುಗಣ್ಣು
ಆಹಾ ನೋಡಿ ನಮ್ಮ ಸಿವನಾ।
ನೆತ್ತಿಯ ಮ್ಯಾಲೆ ಕಿಡಗಣ್ಣು।
ಮಲೆಯ ಮಹದೇವಾ ಬರುವಾ ಚಂದವಾ।
ಆಹಾ ನೋಡಿ ನಮ್ಮ ಸಿವನಾ।
ಸರಗೂರಪ್ಪ ಸರಣ ಬರುವಾ ಚಂದಾವಾ
ನೋಡಿ ನಮ್ಮ ಸಿವನಾ।।[೬]

ಹನ್ನೆರಡು ತಿಂಗಳೊಳಗೆ। ಮೂಗಪ್ಪ ಕಟ್ಟಿದ ಕಾಣಿಕೆ ತೆಗೆದುಕೊಂಡು। ಮಾದೇಸ್ವರನ ಬೆಟ್ಟಕ್ಕೆ ಹೊರಟು ನಿಂತಿದ್ದಾನೆ। ಮೂಗಯ್ಯ ರಾಮವ್ವೆಗೆ ಹೇಳ್ತಾನೆ। ಮಾದೇಸ್ವರನಿಗೆ ಹೆಣ್ಣು ಪ್ರಜೆ ಆಗೋಲ್ಲ। ಆದಕ್ಕೆ ಅವನು ಏಳು ಮಲೆಯಲ್ಲಿ ಅಡಗವನೆ। ಮಾದೇಸ್ವರರು ನಾನೇ ಬರಬೇಕು ಅಂದ್ರು। ನೀನು ಬರಲಿಕ್ಕೆ ಸಾಧ್ಯವಿಲ್ಲ ಅಂದ್ರು। ನಮಗೆ ಕೋಪ ಬರೋಲ್ವಾ। "ನಿನ್ನ ಮಾಯಕ್ಕಾರ ದೇವ। ಭೂಲೋಕಕ್ಕೆ ಹೇಗೆ ಬಂದ ತಾಯಿ ಇಲ್ಲದೆ।। ಸ್ವಾಮಿ ಕೋಪ ಮಾಡಬೇಡಿ ಗುರುವಿಲ್ಲದ ಭಕ್ತ ಇರುತ್ತಾನೆಯೇ? ಈಗ ದೇವನನ್ನು ಕೇಳ್ತೀನಿ ಬುತ್ತಿ ಕಟ್ಟು ಅಂದ್ರು। ರಾಮವ್ವೆ ಸರಗೂರಿನಿಂದ ಆಲಮಡ್ಡಿ ದೂಪ। ಮೂರು ಮುಂಗ್ಯೆ ಗಾತ್ರ ಬುತ್ತಿ ಕಟ್ಟಿಕೊಂಡು। ಕೈಲಾಸಕ್ಕೆ ಹೊರಟವಳೆ। ಕೈಲಾಸದಲ್ಲಿ ಐದು ಬಳಸು ಬಂದು। ನನ್ನಲ್ಲಿ ಗರ್ವ ಅಂಕಾರ ಇದ್ರೆ ಸುಟ್ಟು ಬುಡು। ಇಲ್ಲದೇ ಹೋದ್ರೆ ಮೂರು ಮಾತಾಡು ಅಂದ್ಲು। ದೂಪ ಹಾಕಿ। ಆಗ ಮಾದಪ್ಪ ಅವಳ ಭಕ್ತಿಗೆ ಮಾತಾಡಬೇಕಾಯಿತು। ಸಾಕಿದ ತಾಯಿ ಬಂದ್ರೂ ನಾನು ಈಗ ಮುಕ ತೋರ್‍ಸಿಲ್ಲ। ಈಗ ನಿಂಗೇನಾಗ್ಬೇಕವ್ವಾ। ಎಂದು ಕೇಳ್ತಾರೆ। ನನಗೆ ಭಕ್ತಿ ಒಂದೇ ಸಾಕು। ಕ್ವಾಪ ಮಾಡಬೇಡ ಸ್ವಾಮಿ। ನನ್ನಂತ ಎಣ್ಣು ಜನ್ಮ ನಿನ್ನ ಸೇವೆಗೆ। ಉಗೇ ಅಂತ ವೆಚ್ಚಾಳ್ಗದಿಂದ ಬರಬೇಕು। ಇದುವರೆಗೆ ಇಂಗೆ ಕೇಳವರು ಯಾರೂ ಇಲ್ಲ। ಆಗಲಿ ಅಂತ ಒಪ್ಪಿಕೊಂಡ್ರು। ಕೊಂಗಳ್ಳಿ ಮಲ್ಲಪ್ಪನಿಗೆ ಆಗಲ್ವಲ್ಲಾ ಅಂತ ನೋಡಿದ।

ಸರಗೂರಪ್ಪ ಸ್ನಾನ ಮಾಡಿ। ಐದು ಜಾತಿ ಪುಸ್ಪ ತೆಗೆದುಕೊಂಡು। ಪರಮಾತ್ಮನ ಐದು ಬಳಸು ಬಂದು। ಸಿವನ ಭಕ್ತಿಯಿಂದ ಸ್ಮರಣೆ ಮಾಡಿ। ಐದು ಹಿಡಿ ಎಳ್ಳು

ತೆಗೆದು। ಸ್ವಾಮಿ ನೆತ್ತಿ ಮ್ಯಾಲೆ ಹಿಂಡಿದರು। ಹಾಲಲ್ಲಿ ಮಜ್ಜನ ಮಾಡಿ ಭಕ್ತಾದಿಗಳು। ಸಿವನ ನೆತ್ತಿಮ್ಯಾಲೆ ಎಣ್ಣೆಯನ್ನು ಗರಗರನೆ ತೀಡಿ। ಕತ್ತಲು ರಾಜ್ಯದ ಲಿಂಗಕ್ಕೆ ಎಣ್ಣೆ ಮಜ್ಜನೆ ಸೇವೆ ಎಂದು। ಅಮಾಸ್ಯೆ ಕತ್ತಲಲ್ಲಿ। ನರಮಾನವರಿಗೆ ಕಾಣದಂತೆ ಭಕ್ತಿಯಿಂದ। ಮಾಡಿ ಬೇಡಿದರು। ಸಾಲೂರು ಮಠದ ಭಕ್ತರು ಹನ್ನೆರಡು ಅವತಾರ ತಾಳ್ಕೊಂಡು। ನರ ಮಾನವರಿಗೆ ಕಾಣದಂತೆ। ಭಕ್ತಿಯಿಂದ ಪೂಜುವವರಿಗೆ ಲಿಂಗರೂಪವಾಗಿ ಕಂಡು। ನಿಜರೂಪವಾಗಿ ಕಂಡು ಲಿಂಗವಾಗಿ ಮರೆಯಾದ ಮಾದೇಸ್ವರ"

## ಟಿಪ್ಪಣಿಗಳು

೧. ಈ ಸಾಲಿನಲ್ಲಿ ವರಕೋಡು ಮಾದಯ್ಯ ಮತ್ತು ಮೂಗಯ್ಯ ಹಾಡಿರುವ ಕಂಸಾಳೆ ಸಾಹಿತ್ಯವನ್ನು ಪ್ರಮುಖವಾಗಿಟ್ಟುಕೊಂಡು ಮಿಕ್ಕವುಗಳಲ್ಲಿನ ಅಪರೂಪದ ಘಟನೆಗಳನ್ನು ಜೋಡಿಸಲಾಗಿದೆ.

೨. ಕಂಸಾಳೆ ೧ರಲ್ಲಿ ಗೌರವ್ವೆ ಮೂಗಯ್ಯನ ತಾಯಿ.

೩. ಕಂಸಾಳೆ ೨ರಲ್ಲಿ ರಾಮವ್ವೆ ಮೂಗಯ್ಯನ ತಾಯಿ.

೪. ಕಂಸಾಳೆ ೧,೨,೬ ರಲ್ಲಿ ಸರಗೂರಯ್ಯ, ೪ರಲ್ಲಿ ಮೂಗಯ್ಯನ ಕಥೆ ಎಂದು ಬರುತ್ತದೆ. ಕೆಲವು ಕಂಸಾಳೆ ಸಾಹಿತ್ಯದಲ್ಲಿ ದೊಡ್ಡ ಸರಗೂರಯ್ಯ ಚಿಕ್ಕ ಸರಗೂರಯ್ಯ ಎಂದು ಬರುತ್ತದೆ.

೫. ಕಂಸಾಳೆ ಎರಡರಲ್ಲಿ ಮಾದಪ್ಪನವರು ರಾಮವ್ವೆ-ಮೂಗಯ್ಯನವರನ್ನು ಈಚೆ ಕರೆದು ಮಾಯದ ಬೆಳ್ಕೆ ಬಿಟ್ಟು ಅರಮನೆಯನ್ನು ಸುಟ್ಟು ಬೂದಿ ಮಾಡಿದರು. ಬಡತನ ಅನುಭವಿಸುತ್ತಾರೆ. ಪೋಲೀಸ್ ಸ್ಟೇಷನ್‌ಗೆ ಹೋಗುತ್ತಾರೆ. ಆಗ ನಾರಾಯಣ ಒಕ್ಕಲು ಮಾಡಿಸುವ ಭರವಸೆ ನೀಡುತ್ತಾನೆ. ಅವರನ್ನು ಒಪ್ಪಿಸುತ್ತಾನೆ. ಆಗ ರಾಮವ್ವೆ ಮಾದೇಶ್ವರನ ಒಕ್ಕಲಾಗಲು ಒಪ್ಪಿಕೊಳ್ಳುತ್ತಾರೆ.

೬. ಹಲವು ಕಂಸಾಳೆ ಕಲಾವಿದರು ಸರಗೂರಯ್ಯನ ಸಾಲು ಎಂದಿರುವುದರಿಂದ ಸರಗೂರಯ್ಯನ ಸಾಲೆಂದೇ ಇಟ್ಟುಕೊಳ್ಳಲಾಗಿದೆ.

೭. ಕಂಸಾಳೆ ೯ರಲ್ಲಿ ಮೂಗಯ್ಯನ ಹೆಂಡತಿ ರಾಮವ್ವೆ

೮. ಕಂಸಾಳೆ ೪ರಲ್ಲಿ ಸರಗೂರಪ್ಪನಿಗೆ ಹಾವು ಕಚ್ಚಿ ಸಾಯ್ತಾನೆ. ಮದ್ದೆ ಮಾಡಿಕೊಂಡ ರಾಮವ್ವೆಯನ್ನು ಮನೆಯಿಂದ ಆಚೆ ತಳ್ಳಾಳೆ ಗೌರವ್ವ. ಕೊರವಂಜಿ, 'ಅವರು ಬರುತ್ತಾರೆ ಕೊಳ್ಳೇಗಾಲದಿಂದ ಮೋಡಿ ಹೊಡೆಯೋ ಪಂಡಿತರ ಕರೆತನ್ನಿ' ಅಂತಾಳೆ. ಹಾಗೆ ಮಾಡಲು ಹಾವು ವಿಷ ಹೀರಿ ಆತ ಬದುಕಿಕೊಳ್ಳುತ್ತಾನೆ. ಆಮೇಲೆ ರಾಮವ್ವೆಗೂ ಮೂಗಯ್ಯನಿಗೂ ಮದುವೆ ಆಗುತ್ತೆ. ಇದು ಮಾದೇಶ್ವರರು ಆಕೆಯನ್ನು ಒಕ್ಕಲು ಮಾಡಿಕೊಳ್ಳಲು ಮಾಡಿದ ತಂತ್ರ.

೯. ಸರಗೂರಪ್ಪನ ಅಡ್ಡ ಹೆಸರು ಮೂಗಯ್ಯ. ಬಲ್ಲಮ್ಮ-ದಾಸಪ್ಪ ದಂಪತಿಗಳ ಮಗಳೇ ರಾಮವ್ವೆ. ಸರಗೂರಯ್ಯ-ಗೌರಮ್ಮ ದಂಪತಿಗಳ ಮಗ ಮೂಗಯ್ಯ.

## ೭. ಆಲಂಬಾಡಿ ಜುಂಜೇಗೌಡನ ಸಾಲು

ನಮ್ಮಪ್ಪಾಜಿಯವರು। ಮೂಡಲ ಮಲೆ ಕೈಲಾಸದಲ್ಲಿ ಯಾವ ತರವಪ್ಪಾ ಅಂತೇಳಿದ್ರೆ। ಸೀಗೆ ಸಿರಿಗಂಧ। ಬಾಡು ಬಾಗಲಗುತ್ತಿ। ನುಗ್ಗೆಲಾರದ ಜಾಲಿ ಒಳಗೆ। ಹುಲಿ ಕರಡಿ ಚಿರತೆ ಎಲ್ಲಾ ವಾಸ ಮಾಡತಕ್ಕಂತಾ ದೇಸ। ಆ ಮಲೆ ಎತ್ತರ್ಯ್ಯನವರು। ಹನ್ನೆರಡಾಳುದ್ದ ಜಲ ಕಂಡು ನಮ್ಮಪ್ಪಾಜಿಯವರು। ಅಲ್ಲಿ ಕರಿಯ ಕಲ್ಲಾಗಿ ಒಡೆದು ಮೂಡವರೇ ಮಾದೇವಾ...।

ಆಹಾ...... ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವಾ ಚಂದಾವಾ।
ನೋಡಿ ನಮ್ಮ ಸಿವನಾ॥

ಯಾವಾಗ ಕರಿಯ ಕಲ್ಲಾಗಿ ಒಡೆದು ಮೂಡುಬಿಟ್ರೋ ನಮ್ಮಪ್ಪಾಜಿಯವರು। ಅಲ್ಲಿ ಮಾದೇವ ಅಂತಕ್ಕಂತವರು ಬರಲಿಲ್ಲ। ಕಣಿವೆ ಕೆಳಗೆ ಕೊಂಗರು। ಇವರ ಮಾತು ನನಗೆ ಗೊತ್ತಾಗದಲ್ಲ ನನ್ನ ಮಾತು ಇವರಿಗೆ ತಿಳಿಯೋದಿಲ್ಲವಲ್ಲಾ। ಕಾಸಿನ ದೂಪ ಹಾಕಪ್ರಿಲ್ಲ। ನನಗೆ ಕರವೆತ್ತಿ ಕೈ ಮುಗಿಯೋವ್ರಿಲ್ಲಾ। ನನ್ನ ಮಾದೇವ ಅನ್ನುವರೇ ಮೊದಲಿಲ್ಲ

ಆಹಾ ನೋಡಿ ನಮ್ಮ ಸಿವನಾ।

ಈವಾಗ ನಾನು ನರರನ್ ಪಡೀಬೇಕಾದ್ರೆ ಯಾವುದಾದ್ರೂ ಗುಡಿಬೇಕು ಆ ಗುಡಿ ಕಟ್ಟಿಸಿಕೊಂಡ್ರೆ। ಕಾಸಿನ ಧೂಪ ಹಾಕ್ತಾರೆ, ಕರವೆತ್ತಿ ಕೈ ಮುಗೀತಾರೆ। ಆದರೀಗ ಒಂದು ಗುಡಿ ಕಟ್ಟಿಸ್ಕೊಂಬೇಕಲ್ಲಾ ಅನ್ನುಟ್ಟು। ಅದು ಅಲ್ದೇ ನಾನು ಮಳೆ ಬಂದ್ರೆ ನೆನೀತೀನಿ। ಬಿಸಿಲು ಬಂದ್ರೆ ಒಣಗ್ತೀನಿ। ಇದು ಸರಿಯಲ್ಲ ಅಂತೇಳ್ಬುಟ್ಟು। ಯಾರಾದ್ರೂ ನನಗೊಂದು। ಮೂರು ಅಂಕಣ ಕಲ್ಲು ಗುಡಿ ಕಟ್ಟಿಸೋ ಅಂಥ ಬಕ್ತ ಎಲ್ಲಿದ್ದಾನೋ। ಯಾತವಿದ್ದಾನೋ ಅಂತೇಳ್ಬುಟ್ಟು। ನಮ್ಮಪ್ಪಾಜಿ ಮಾದಪ್ಪನವರು। ಅವರು ದೃಷ್ಟೀನೆ ಮಡಗಿ ನೋಡ್ತವರೇ। ಮಾದೇವಾ...

ಆಹಾ..... ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವಾ ಚಂದಾವಾ।
ನೋಡಿ ನಮ್ಮ ಸಿವನಾ॥

ಅಲ್ಲಿಗೀಗ ನಮ್ಮಪ್ಪ ಮಾಯಕ್ಕಾರ ಗಂಡ। ಆ ರಾಜ್ಯದೊಳಗೆ ದಿಟ್ಟಿಸಿ ನೋಡಿದ್ನಂತೆ। ಆಲಂಬಾಡಿ ಜುಂಜೇಗೌಡನ ಸೊಸೆ ಜಾಲದೂವು ಮುಡ್ಕಂಡು। ಜೂಲನಾಯಿ ಕಟ್ಕಂಡು। ಹಾಲರುವಿ ಒತ್ಕಂಡು। ಅವಳು ಕಾದಳ್ಳಿ ಪ್ಯಾಟೆಗೆ ಪೊಯ್ತಾಳೋ ಸಿವಸರಣೆ।

ಆಹಾ..... ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವಾ ಚಂದಾವಾ।
ನೋಡಿ ನಮ್ಮ ಸಿವನಾ॥

ಅಲ್ಲಿಗೆ ಕೌದಳ್ಳಿ ಪ್ಯಾಟೆಗೆ ಓಗುವಾಗ। ನಮ್ಮಪ್ಪ ಮಾಯಕ್ಕಾರ ಗಂಡ। ಎಡದಲ್ಲಿ ಎಳಗಾವಿ ಧರಿಸಿಕೊಂಡು। ಬಲದಲ್ಲಿ ಸುಳಗಾವಿ ಧರಿಸಿಕೊಂಡು। ಆ ಮದ್ಯ ದಾರೀಗೆ ದಯವಾದ। ದೀರ ಮಾದೇವಾ।

ಆಹಾ..... ನೋಡಿ ನಮ್ಮ ಸಿವನಾ।

ಅಲ್ಲಿಗೀಗ ಮಾಯ್ದಲ್ಲಿ ನಿತ್ಕಂಡು। ನಮ್ಮಪ್ಪ ಮಾಯಕ್ಕಾರ ಗಂಡ। ಆ ಆಲಂಬಾಡಿ ಜುಂಜೇಗೌಡನ ಸೊಸೆಯನ್ನು। ಯಾವ ಸೀಮೆಯವ್ವಾ। ಹೆಣ್ಣು ಮಗಳೇ ಅಂದ್ನಂತೆ। ಯಾವೂರಪ್ಪಾ ಅಂದ್ರೆ। ನಾನು ಆಲಂಬಾಡಿ ಜುಂಜೇಗೌಡನ ಸೊಸೆ ಕಣಯ್ಯ ಅಂದ್ಲಂತೆ। ನೀವು ಯಾರಯ್ಯ ಕೇಳಕ್ಕೆ ಜಂಗಮರೇ।

ಆಹಾ..... ನೋಡಿ ನಮ್ಮ ಸಿವನಾ।

ಯೇಳ್ತೀನಿ ಕೇಳವ್ವಾ। ನನ್ನ ಕಂದ ಹೆಣ್ಣು ಮಗಳೇ ಬ್ಯಾಸಗೆ ಬಿಸಿಲೊಳಗೆ ಮೊಕ ಬಾಡ ಹೊತ್ತಿನೊಳ್ಗೆ। ನಂದು ಜೀವ ಪೊಯ್ತದಲ್ಲಾ। ನೀನು ಒಂದು ಹೋಳು ಹಾಲು ಬಿಡ್ಕೇನವ್ವಾ ಹೆಣ್ಣುಮಗಳೇ...

ಆಹಾ ನೋಡಿ ನಮ್ಮ ಸಿವನಾ।

ಆವಾಗ್ಲೀಗ ಒಂದು ಬಿಂದಿಗೆ ಹಾಲು ಬಿಡು ಹೆಣ್ಣುಮಗಳೇ ಅಂದ್ನಂತೆ। ನಮ್ಮಪ್ಪ ಮಾಯಕ್ಕಾರ ಗಂಡ। ಯೇಳ್ತೀನಿ ಕೇಳಯ್ಯ ಜಂಗಮರೇ। ಒಂದು ಬಿಂದಿಗೆ ಹಾಲು ವೊತ್ಕಂಡು ಒಯ್ತಾ ಇವ್ನಿ। ಕೌದಳ್ಳಿ ಪ್ಯಾಟೆ ಒಳಗೆ। ನಾನು ಅಡ್ಡ ದಿಡ್ಡಿ ಮಾರ್ತೀನಿ ಕಣಯ್ಯ। ಜಂಗಮರೇ।

ಆಹಾ..... ನೋಡಿ ನಮ್ಮ ಸಿವನಾ।

ಅಲ್ಲಿಗೆ ಮೂರು ಹಣ ಬತ್ತದೆ। ಮೂರು ಹಣ ತಕ್ಕಂಡೋಗಿ ನಮ್ಮತ್ತೆಗೆ ಕೊಡ್ತೀನಿ। ಮೂರು ಹಣದೊಳಗೆ ಮೂರು ಕಾಸು ಕಮ್ಮಿ ಆಗಿದ್ದೇ ಆದ್ರೆ। ನನ್ನ ಮಂಡೆ ಎತ್ಕೊಳ್ತಾರೆ ಕಾಣೊ। ಜಂಗಮರೇ।

ಆಹಾ..... ನೋಡಿ ನಮ್ಮ ಶಿವನಾ।

ಆ ಮಂಡೆ ಎತ್ಕಂಡು। ಗಾಜಿನ ಕಂಬಕ್ಕೆ ಕಟ್ಕಂಡು। ಏಳು ಜನ ಗಂಡು ಮಕ್ಕಳನ್ನು ಕೂಗಿ। ಏಳು ಚಬ್ಬೆ ತರಸಿ। ಒಂದು ಕಾಸು ಕಮ್ಮಿ ಆದ್ರೆ। ನನಗ ಬಾರಿ ಸಿಕ್ಕೆ ಕೊಡ್ತಾರೆ ಕಣಯ್ಯಾ। ಜಂಗಮರೇ।

ಆಹಾ..... ನೋಡಿ ನಮ್ಮ ಶಿವನಾ।

ಹೇಳ್ತೀನಿ ಕೇಳು। ಆಗಲೀಗ ಹೆಣ್ಣು ಮಗಳೇ। ನನ್ನಿಂದ ನೀನು ಒಂದು ಹೋಳು ನೀರ್‍ನಾದ್ರೂ ಬಿಡಿಸ್ಕೊಳ್ಳುವೆ। ನನಗೆ ಒಂದು ಹೋಳು ಹಾಲು ಬಿಡವ್ವಾ। ಹೆಣ್ಣುಮಗಳೇ

ಆಹಾ..... ನೋಡಿ ನಮ್ಮ ಶಿವನಾ।

ಕೇಳು ಕೇಳು ಜಂಗಮರೇ। ನೀನು ಇಂತ ಬಿಂಕದ ಮಾತಾಡ್ಬೇಡ। ಇಂತ ಬಿನ್ನಾಣದ ಮಾತಲ್ಲ। ನಾನು ಹಾಲು ಬಿಡುವಂತ ಮಗಳಲ್ಲ ನಾನು। ಬಂದ ದಾರು ಗುಂಟ ಹೋಗಿ। ಜಂಗಮರೇ...

ಆಹಾ..... ನೋಡಿ ನಮ್ಮ ಶಿವನಾ।

ಬಂದಾರಿಗುಂಟ ಒಗಯ್ಯ ಜಂಗಮರೇ ಅಂದ್ಲಂತೆ। ಯೇಳ್ತೀನಿ ಕೇಳವ್ವಾ। ನನ್ನ ಕಣ್ಣಿಗೆ ಕೆಟ್ಟವಳೇ ನೀನು। ಯೇಳ್ತೀನಿ ಕೇಳು। ನನ್ನ ಮುತ್ತಿನ ಜೋಳಿಗೆ ಸಿಂಗಾರವಾಗಿತ್ತು। ನನ್ನ ಎಪ್ಪತ್ತೇಳು ಮಲೆ ಸಿರಿ ಲಿಂಗಾವಾಗಿತ್ತು। ದಾರಿ ಹುತ್ತದ ಸಿರಿಲಿಂಗವಾಗಿತ್ತು। ನನ್ನ ಮುತ್ತಿನ ಪಾದ ಎತ್ತು ಕೊಟ್ಟವಳೇ।

ಆಹಾ..... ನೋಡಿ ನಮ್ಮ ಶಿವನಾ।

ಅಲ್ಲಿಗೆ ಮುಂದಕ್ಕೊಂದು ಪಾದ ಎತ್ತು ಜಂಗಮರೇ ಅಂದ್ಲಂತೆ। ಆಗಲೀಗ ಹೇಳಿದ್ದಂತೆ। ನಮ್ಮಪ್ಪ ಮಾಯಕ್ಕಾರ ಗಂಡ। ನಮ್ಮ ಏಳು ಮಲೆ ಸಿರಿಲಿಂಗವಾಗೋಯ್ತು। ನನ್ನ ಮುಂದಕ್ಕೊಂದು ಪಾದ ಎತ್ತಿ ಮಡುಗು ಕೆಟ್ಟವಳೇ ಅಂದ್ನಂತೆ। ಅಲ್ಲಿಗೆ ನಮ್ಮಪ್ಪ ಮಾಯಕಾರ ಗಂಡ। ಮುಂದಕ್ಕೆ ಒಂದು ಪಾದ ಎತ್ತಿ ಮಡಗು ಕೆಟ್ಟವಳೇ ಅಂದಾಗ। ಅವಳ ತಲೆಮ್ಯಾಕೆ। ಬೂಮಿ ತೂಕದ ವರ ಕೊಟ್ಟ। ದೀರಾ ಮಾದೇವಾ....।

ಆಹಾ..... ನೋಡಿ ನಮ್ಮ ಶಿವನಾ।

ಅಲ್ಲಿಗೆ ಬೂಮಿ ತೂಕದ ಹೊರೆ ಹೊತ್ಕಂಡು। ಸ್ವಾಮಿ ಎರಡು ಕಾಲು ಬರ್ದೇ ವೋದ್ಲಂತೆ। ಮದ್ಯೆ ಮರೆದಲ್ಲಿ ಆಗ ಕಣ್ಣು ಮಿಣ ಮಿಣ ಬುಡ್ತಾಳಲ್ಲೊ। ಧರೆವೊಳಗೇ।।

ಆಹಾ..... ನೋಡಿ ನಮ್ಮ ಶಿವನಾ।

ಆಗಲೀಗ ಮದ್ಯ ಮರೆದಲ್ಲಿ। ಕಣ್ಣು ಮಿಣ ಮಿಣ ಬಿಡುವಾಗ। ಯೇಳ್ತೀನಿ ಕೇಳು। ನಿಮ್ಮ ಸಿರಿ ಪಾದ ಒತ್ತೇನು। ನನ್ನ ಮಾಯಕಾರ ಅನ್ನದನ್ ಕಾಣ್ನೆಲ್ಲ। ಮಂತ್ರಗಾರ ಅನ್ನದ ಕಾಣ್ನೆಲ್ಲ। ನನ್ನ ಕಾಲು ಬಂದುದ್ದೇ ಉಂಟಾದ್ರೆ। ನಿನಗೆ ಅರಿವ್ಹಾ ಹಾಲು ಸಲ್ಲಿಸ್ತೀನಿ ಕಣೋ। ನಿನ್ನ ಸಿವಪಾದೋ।

ಆಹಾ..... ನೋಡಿ ನಮ್ಮ ಸಿವನಾ।

ಈ ಅರಿವಿ ಹಾಲನ್ನು ಸಲ್ಲಿಸ್ತೀನಿ। ಅಂತ ಹೇಳ್ತಾ ಇದ್ದೀಯಲ್ಲಾ। ನಿನ್ನ ಅತ್ತೆಯವರಿಗೆ ಏಳು ಯೋಳೀಯವ್ವಾ। ಹೆಣ್ಣು ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ಹೇಳ್ತೀನಿ ಕೇಳೋ। ನಿನ್ನ ಸಿವ ಪಾದ ಒತ್ತೇನು। ಹಿಂದೆ ಗುಳಿ ಬಿತ್ತು। ಮುಂದೆ ಗುಳಿ ಬಿತ್ತು। ಎದುರ್ಕಂಡು ನಾನು। ಮದ್ಯ ಮರದೊಳಗೆ। ಹಾಲರುವಿ ಎತ್ತಾಕ್ಬುಟ್ಟೆ ಅಂತೀನಿ। ಹಾಲು ಊಟ ಮಾಡ್ಕೋ ಅಂತೀನಿ। ನಿನ್ನ ಸಿರ ಪಾದೋ।

ಆಹಾ..... ನೋಡಿ ನಮ್ಮ ಸಿವನಾ।

ಏಳ್ತೀನಿ ಕೇಳು ನನ್ನ ಕಂದ। ಹೆಣ್ಣು ಮಗಳೇ ಆಲಂಬಾಡಿ ಜುಂಜೇಗೌಡರ ಹೆಂಡ್ರಿಗೆ। ಹಾಲಗ್ ಕಮ್ಮಿ ಇಲ್ಲ। ಪಾಲಿಗ್ ಕಮ್ಮಿ ಇಲ್ಲ। ಸೋದನೆ ಮಾಡಿಸಿದಾಗ। ನೀನು ಏನಂತ ಯೇಳಿಯವ್ವಾ। ಎಣ್ ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ಆಗಲೀಗ ಯೇಳ್ತೀನಿ ಕೇಳು। ನಿನ್ನ ಸಿರಿಪಾದ ಒತ್ತೇನು। ನಾನು ಒಂದು ಸುಳ್ಳು ಮಾತು ಯೇಳ್ಬುಟ್ಟೀನಿ। ಮಾಯದ ಮಾದೇವನ ಗುಟ್ಟು। ಹಾಲರುವಿ ಕೊಟ್ಕೊಯ್ತು ಅಂದ್ಬುಡ್ತೀನಿ। ನೀನು ಹಾಲು ಊಟ ಮಾಡ್ಕೊಪ್ಪಾ। ಸುದ್ದ ನಡುಮಲ್ಕೋ।

ಆಹಾ..... ನೋಡಿ ನಮ್ಮ ಸಿವನಾ।

ಯೇಳ್ತೀನಿ ಕೇಳವ್ವಾ ನನ್ನ ಕಂದ ಹೆಣ್ಣು ಮಗಳೇ। ನಾನು ಆಗಲೀಗ ಹಾಲು ಬಿಡಕ್ಕ ಬರ್ಲಿಲ್ಲ। ಕಾನ ಬಾಕಲ ಕಣವೆ ಒಳಗೆ। ಕಾನ ಬಾಕಲ ಮಗ್ಗಲೊಳಗೆ। ಹುತ್ತದಲ್ಲಿ ಒಣಗಿ ಸಾಕಾಗೋದೆ ಕಣವ್ವಾ। ಹೆಣ್ಣು ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ಉತ್ತದಲ್ಲಿ ಒಣಗೋಗಿ। ಸಾಕಾಗೋದಿ ಕಣವ್ವಾ ಹೆಣ್ಣು ಮಗಳೇ। ನನಗೀಗ ನೀನು ಒಂದು ಅಂಕಣ ಕಲ್ಲು ಗುಡಿ ಕಟ್ಟಿಸ್ಕೊಡ್ಬೇಕು ಕಣ್ ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ಹೇಳ್ತೀನಿ ಕೇಳು। ಸಿರಿ ಪಾದ ಒತ್ತೇನು। ಒಂದು ಬಿಂದಿಗೆ ಹಾಲು ಒತ್ಗೋ ಪೋಯ್ತೀನಿ। ಕಾದಳ್ಳಿ ಪ್ಯಾಟೆ ಒಳಗೆ। ಅಡ್ಡ ಬಡ್ಡ ಮಾಡ್ತೀನಿ। ಮೂರಣ ತಕ್ಕಂಡೋಗಿ ನಮ್ಮತ್ತೆಯವರಿಗೆ ಕೊಡ್ತೀನಿ। ಕಲ್ಲು ಗುಡ್ಡವ ಕಟ್ಟಿಸಿಕೊಡ್ಲೆ ನಿಂಗೆ । ಒಂದು ಕಾಸು ಕಮ್ಮಿ ಹೌದು ಆದ್ರೆ। ನಂಗೆ ಬಾರಿ ಸಿಕ್ಸೆ ಕೊಡ್ತಾಳೆ। ಸುದ್ದು ನಡುಮಲ್ಲೋ।

ಆಹಾ..... ನೋಡಿ ನಮ್ಮ ಸಿವನಾ।

ನನ್ನ ಹನ್ನೆರಡು ಉದ್ದದ ಮಂಡೆಯ। ಗಾಜಿನ ಕಂಬಕ್ಕೆ ಕಟ್ಟಂಡು। ಏಳು ಜನ ಗಂಡು ಮಕ್ಕಳನ್ನು ಕೂಗಿ। ಏಳು ಚಿಬ್ಬೆ ತರಿಸಿ। ನನಗೆ ಬಾರಿ ಸಿಕ್ಸೆ ಕೊಡ್ತಾಳೆ ಕಣಪ್ಪಾ। ಮರಿದೇವರೇ।

ಆಹಾ..... ನೋಡಿ ನಮ್ಮ ಸಿವನಾ।

ಯೇಳ್ತೀನಿ ಕೇಳೋ। ನಿನ್ನ ಸಿರಪಾದ ಒತ್ತೇನು। ನನ್ನ ಜುಂಚೇಗೌಡನ್ಗೆ। ಸೇರ್ಕೊಂಡಿದ್ದೆ ಆದ್ರೆ। ಮಸ್ತಾಗಿ ರಾಗಿ ಮಾರ್ತಾನೆ। ಮಸ್ತಾಗಿ ಬತ್ತ ಮಾರ್ತಾನೆ। ಮಸ್ತಾಗಿ ಎತ್ತು ಮಾರ್ತಾನೆ। ಮಸ್ತಾಗಿ ಕೂಲಿ ಮಾಡ್ತಾನೆ। ನಮ್ಮ ಜುಂಚೇಗೌಡನ ಕೇಳು ಪೋಗಿ ನನ್ನ ಸಿರ ಪಾದೋ।

ಆಹಾ..... ನೋಡಿ ನಮ್ಮ ಸಿವನಾ।

ನನ್ನ ಕಂದ ಹೆಣ್ಣು ಮಗಳೇ। ಬತ್ತ ಬೆಳ್ದಾನೂ ರಾಗಿ ಬೆಳ್ದಾನೂ। ಅವನು ಕಸ್ಪ ಮಾಡಿದ ಸೊತ್ತಿನಲ್ಲಿ। ನಾನು ಗುಡಿ ಕಟ್ಟಿಸಿಕೊಂಡಿದ್ದೇ ಉಂಟಾದ್ರೆ ನನಗೆ ದರ್ಮ ಬರೋದಿಲ್ಲ। ನೀನು ಹಾಲು ಮಾರಿ। ಗುಡಿ ಕಟ್ಟಿಸ್ಬೇಕು ಕಣವ್ವಾ ಹೆಣ್ಣು ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ಯೇಳ್ತೀನಿ ಕೇಳು। ಸಿರ ಪಾದ ಒತ್ತೇನು। ಮೂರಣೆನ ಮ್ಯಾಲೆ ಮೂರು ಕಾಸು। ಅಡ್ಡೆಲಿಗೂ ಇಲ್ಲ। ನಿನ್ನ ಪಾದ ಮುಟ್ತೀನಿ। ನಿನ್ನ ದಂಡ ಕೋಲು ಮುಟ್ತೀನಿ। ನಿನ್ನ ಸಿವ ಮುತ್ತಿನ ಕಂತೆ ಮುಟ್ತೀನಿ। ಮೂರಣೆನ ಮ್ಯಾಲೆ ಮೂರು ಕಾಸಿಲ್ಲ ಕಣೋ। ನಿನ್ನ ಸಿರ ಪಾದೋ।

ಆಹಾ..... ನೋಡಿ ನಮ್ಮ ಸಿವನಾ।

ನನ್ನ ಕಂದ ಹೆಣ್ಣು ಮಗಳೇ। ಮೂರು ಹಣ ಬರೋದಕ್ಕೆ ಇಪ್ಪತ್ತು ಮೂರಣ ಕೊಡ್ತೀನಿ। ಮೂರಣ ತಕ್ಕಂಡೋಗಿ ನಿಮ್ಮತ್ತಮ್ಮನ ಕೈಗೆ ಕೊಟ್ಬುಬುಡು। ಇಪ್ಪತ್ತಣಾ ತಕ್ಕಂಡೋಗಿ ನಿನ್ನ ಅಡವಿಗೆ ತುಂಬುಡು। ನೀನು ನನಗೆ ಗುಡಿ ಕಟ್ಟಿಸಿಕೊಡ್ತೀಯೇನವ್ವಾ। ಹೆಣ್ಣು ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ನಿನ್ನ ಗುಡಿ ಕಟ್ಟಿಸ್ತೀನಿ। ನನಗೆ ಪುತ್ರ ಸಂತಾನವಿಲ್ಲ ಕಣಪ್ಪಾ ಸುದ್ದ ನಡುಮಲ್ಯೋ।

ಆಹಾ..... ನೋಡಿ ನಮ್ಮ ಸಿವನಾ।

ಯೇಳ್ತೀನಿ ಕೇಳವ್ವಾ। ನನ್ನ ಕಂದ ಹೆಣ್ಣು ಮಗಳೇ। ನಿನಗೆ ಬಾಳ ಸಿರಿ ಬರ್‍ತದೆ। ನಿಂಗೆ ಬಾಳ ಸಂಪತ್ತು ಬರ್‍ತದೆ। ನಿನಗೆ ನನ್ನ ಜಂಗಮದೇವರಾಗೇ ಮಾಡ್ತುಬಿಟ್ಟಿಯಲ್ಲಾ ಹೆಣ್ಣು ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ನಾನು ನೋಡಿದ್ರೆ ಹೆಣ್ಣು ಹೆಂಗಸು। ನಾನು ಮರೆವಂತ ಹೆಂಗಸಲ್ಲ। ಒಂದು ಅಂಕಣ ಕಲ್ಲು ಗುಡಿ ಕಟ್ಟಿಸಿ ಕೊಡ್ತೀನಿ। ನನಗೆ ಪುತ್ರ ಸಂತಾನ ಕೊಡ್ಬೇಕು ಕಣೋ। ಸುದ್ದ ನಡುಮಲ್ಯೋ।

ಆಹಾ..... ನೋಡಿ ನಮ್ಮ ಸಿವನಾ।

ಅಲ್ಲಿಗೆ ಯೇಳ್ತೀನಿ ಕೇಳವ್ವಾ। ನನ್ನಕಂದ ಹೆಣ್ಣು ಮಗಳೇ ಗಿರಿಯ ಮೂರು ಬಾರಿ ತಿರುಗು। ಮೂರು ಬಂದಿಗೆ ಆಯ್ತದೆ। ಮೂರು ಜನ ಗಂಡು ಕುಮಾರರನ್ನು ಕೊಡ್ತೀನಿ। ಈ ಆಲರವಿ ಎತ್ಕಂಡೋಗಿ। ನೀನು ಕೌದಳ್ಳಿ ಪ್ಯಾಟೆ ಒಳಗೆ। ಮಾರವ್ವಾ ಹೆಣ್ಣು ಮಗಳೇ।

ಆಹಾ..... ನೋಡಿ ನಮ್ಮ ಸಿವನಾ।

ಆಲಂಬಾಡಿ ಬೀದಿವೊಳಗೆ ಬಂದ್ರು ನಮ್ಮಪ್ಪಾಜಿಯವರು। ಆಲಂಬಾಡಿ ಸೀಮೆ ಐ ಬೋಗ ನೋಡ್ತಾವರೇ। ಜುಂಜಪ್ಪ ಏಳು ನೂರು ಗೊಲ್ಲರ ಪೋಡು ಕಟ್ಟಿದ್ದಾನೆ। ಏಳುಂಡಿ ದನ ಏಳುಂಡು ಕುರಿ। ಏಳು ಜನ ಜೀತಗಾರರ ಇಟ್ಕೊಂಡು। ಆರು ಜನ ಗಂಡುಮಕ್ಕಳು ಇಟ್ಕಂಡು। ಬಾಳ ಐಸ್ವರ್ಯದಲ್ಲಿ ಬಾಳ್ತಾ ಇದ್ರು ಹಿಂದಿಗ ಮೇಲಾಗಿರಕ್ಕಂಥ ಜಲಗೊಂಟಿನ ಬಸವಣ್ಣ। ಕರುವನ್ನು ಹಾಕಿ ಹನ್ನೆರಡು ದಿನವಾಗಿದೆ। ಡೊಳ್ಳೊಟ್ಟೆ ಜುಂಜಪ್ಪ ಹಂಡತಿ ಮಲ್ಲಾಜಮ್ಮ।

ಜುಂಜಪ್ಪ ಬಾಳಾದ ಐಸ್ವರ್ಯದಲ್ಲವರೇ ಜುಂಜಯ್ಯ।

ನೋಡಿ....... ನಮ್ಮ ಸಿವನಾ

ಕಾರಯ್ಯ ಬಿಲ್ಲಯ್ಯನ್ನ ಕರಕೊಂಡು ನಮ್ಮಪ್ಪ ಮಾಯಕ್ಕಾರ ಆ ಕೌದಳ್ಳಿ ಹೊಸಳ್ಳಿ ಮಠದ ಮ್ಯಾಕೆ ಬಂದ ಧೀರಾ ಮಾದಯ್ಯ।

ಮಲೆಯ ಮಾರುದ್ರ ಬರುವಾ ಚಂದಾವ।
ಹ್ಹಾಂ....... ನೋಡಿ ನಮ್ಮ ಸಿವನಾ।।

ಸಿವಸಿವಾ ಉಟ್ಟುದ್ದು ಉತ್ತರ ದೇಸ। ಕುಂತುದ್ದು ಕುಂತೂರು ಮಠ। ಪಂಚೀಳು ದೀಕ್ಷೆಯನ್ನು ಪಡೆದು ನಮ್ಮಪ್ಪಾಜಿ ಮಲೆ ಮಾದಪ್ಪನವರು। ಸಿವಸಿವಾ ಕಾಣಬಾರದೆ ಕಾನೆ। ಕಾಡು ಗೌಳಿ ಮಲೆ ಸೀಗೆ ಸಿರಿಗಂದ। ಬಾಡ ಬಾಗಿಲ ವತ್ತಿ ವಿಷಂಪಾರಿ ಗುತ್ತಿ। ಏಳು ಬಾಯುತ್ತಕ್ಕೋಗಬೇಕಂತೇಳಿ। ಕೆಂಗಣ್ಣು ಮಾಲೆ ಮಾದಪ್ಪ ಅವರು। ಬಾರಿಯ ಬರಗ ಏರಿ ಬರ್ತಾವರಲ್ಲಾ। ಮೂಡಲ ಮಲೆಯ ಮಹದೇವ।

ಕ್ವಾರಣ್ಯಗಳ ನೀಡಮ್ಮ ಗುರು ಕೋಡಗಲ್ಲು ಮುನಿಗೆ।।

ಮಲೆ ಮಾದೇಶ್ವರ। ಎಳಗಾವಿ ಎಳೆದದ್ದು। ಸುಳಿಗಾವಿ ಮಂಡೆ ಮ್ಯಾಲೆ ಮುಸುಕಿಟ್ಟು। ಏಕ ಮೊಕದ ರುದ್ರಾಕ್ಷಿ ಎದೆ ಮ್ಯಾಲೆ ಚಜ್ಜಲಿಂಗ। ಬಂಗಾರ ತ್ರಿಸೂಲ ಬಲಗೈಲಿಡಿದು। ಕಂಕಳಲ್ಲಿ ಮುತ್ತಿನ ಜೋಳಿಗೆ। ಮಾಯದ ಇಬೂತಿ ಮಾಯಕಾರ ಮಲೆ ಮಾದಪ್ಪನವರು। ಮುತ್ತಿನ ಜೋಳಿಗೆ ಮಾಯದ ಜೋಳಿಗೆಗಿಟ್ಟುಕೊಂಡು ಸುದ್ದ ಮೂಡಲಾಗಿ ಕಡದು ಬರುತ್ತಿದ್ದರಂತೆ। ಮೂರು ಕೊಡದ ಕೋವಿನಲ್ಲಿ ಸಿವಸಿವ। ಕಾಣಬಾರದ ಕಾನೆ ಹಳ್ಳದಲ್ಲಿ ಸಿವ ಸಿವಾ ಬೇವಿನಹಟ್ಟಿ ಕಾಳಮ್ಮನವರು। ಒಂಟಿ ದೊಡ್ಡಿ ಕಟ್ಟಿಕೊಂಡು ವಾಸ ಮಾಡ್ತಿದ್ರು। ತಾಳದ ಬೆಟ್ಟದ ಕೋವಿನಲ್ಲಿ ಎಕ್ಕದೆಲೆ ಎದೆಕಟ್ಟು। ತೇಗದ ಎಲೆ ಮುಸುಕಿಟ್ಟು। ಉಗಿನಿ ಎಲೆ ಉಡುಗೆ ಮಾಡಿ। ಅಂದಕ ನಿಂದವಾಗಿ। ಗೆಡ್ಡೆ ಗೆಣಸು ತಿಂದು। ಅರಣ್ಯದಲಿ ಕಾಲ ಹರಣೆ ಮಾಡುತಿದ್ದರಂತೆ। ಹರಹರಾ ನಮ್ಮಪ್ಪಾಜಿ ಮಲೆಮಾದಪ್ಪನವರು। ಹನ್ನೆರಡು ಹೆಜ್ಜೆ ಹುಲಿಯನ್ನು ಹಿಡಿದು ನಿಲ್ಲಿಸಿ। ಮುತ್ತಿನ ಜೋಳಿಗೆ ಮುಂಗೈ ನೀಡಿ। ಮಾಯದ ಇಬೂತಿ ತೆಗೆದು। ಮಾಯಕ್ಕಾರ ಮಾದಪ್ಪನವರು। ಈ ಅಮ್ಮನಿಗೆ ಬಡತನ ಬಯಲು ಮಾಡಿ। ಸಿರಿ ಸಂಪತ್ತು ಕೊಟ್ಟು। ಮೂಡಲ ಮಲೆಯ ಕೈಲಾಸಕ್ಕೆ ಸೇರಿದರೆ। ಇನ್ನುಳಿದಂತ ಹೆಣ್ಣೇಳು ಕೋಟಿ। ಗಂಡೇಳು ಕೋಟಿ। ಅಜ್ಜೀಪುರ, ಮಾವುಂಟಳ್ಳಿ, ಚುಜ್ಜಟ್ಟಿಕಾನೆ। ಯಳಂದೂರು ಬೀದಿ। ದ್ವಾವರಹಳ್ಳಿ। ಮಾರ್ಗದಿಂದ ಕೋಟಿ ಮಂದಿಗಳು ಎಪ್ಪತ್ತೇಳು ಮಲೆಗೆ ಬರುವಾಗ। ಹಾಲುದಾನ, ಅನ್ನದಾನ, ಯಾಲಕ್ಕಿ ಎಲೆದಾನ। ಶಿವದಾನ ಮಾಡಿದರಂತೇಳಿ। ಅವರು ಸಕಲ ಸಂಪತ್ತು ಕೊಡುತಾವನಲ್ಲೋ। ಮೂಡಲ ಮಲೆಯ ಮಾದೇವ।

ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ।

ಮುತ್ತಿನ ಜೋಳಿಗೆ ಒಳಗೆ। ಮಾಯದ ಇಬೂತಿ ತೆಗೆದು। ಮಾಯಕ್ಕಾರ ಮಾದಪ್ಪನವರು। ಒಂಟಿ ದೊಡ್ಡಿ ಮ್ಯಾಲೆ ಮಾಯದ ಇಬೂತಿ ಇಡುವಾಗ। ಸೊಪ್ಪಿನ

ಗುಡ್ಲು ಮಾಯವಾಗಿ। ಮುತ್ತಿನ ಮುಂಬಾಗಿಲು। ರತ್ನದಲ್ಲಿ ತಲೆಗೊಂಬೆ। ಗಂದದ ಉಪ್ಪರಿಗೆ। ಗೌಡರ ಸಾಲೆ। ಯಿಚಿತ್ರವಾದ ಒಳತೊಟ್ಟಿ ಸಾಲುಗಳು। ರಾಮ ಲಕ್ಷ್ಮಣರು ಅಂತೇಳಿ ಕಣಜಾ ಏಳು ಕೊಪ್ಪರಿಕೆ ದ್ರವ್ಯ। ಏಳು ಸಾವಿರ ದನವಂತೆ। ಏಳು ಸಾವಿರ ಎಮ್ಮೆಗಳಂತೆ। ಏಳು ಸಾವಿರ ಕುರಿ। ಏಳು ಸಾವಿರ ಮೇಕೆ। ಎಪ್ಪತ್ತೇಳು ಸಾವಿರ ಕಾಲ್ನಡಿಗೆ ರಾಸುಗಳನ್ನು ಕೊಟ್ಟು। ಅಸ್ವೈಸ್ವರ್ಯ ಹಾಲು ಸಾಗರವಾಗಿ ಮಾಡಿ। ಅವರು ಮೂಡಲ ಮುನ್ನಾಗಿ ಕಡೆದು ಛತ್ರವನೆ।

ನನ್ನ ಹೆಂಡರಿಲ್ಲಂದ ಕೆಂಡಗಣ್ಣ ಮಲೆ ಮಾದೇವಾ।
ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।
ಕೋಲು ಮಂಡೆ ಜಂಗಮ ದೇವರು ಕ್ವಾರಣ್ಯಕ್ಕೆ ದಯ ಮಾಡಿದರು।
ಮಾದೇವನೇ ದಯ ಮಾಡವರೆ
ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ

ಮಾದೇಸ್ವರ ಕಾಣಬಾರದ ಕಾನೆ। ಕಾಡು ಗೌಳಿ ಮಲೆ। ಸೀಗೆ ಸಿರಿಗಂದ। ಬಾಡ ಬಾಕಲು ಗುತ್ತಿ ವಿಷಂಪಾರಿಗುತ್ತಿ। ಏಳು ಬಾಯಿ ಹೊನ್ನುತ್ತ। ಅರಿವಿಲ್ಲದ ಮಲೆಯು ನೇತ್ರ ಕಾಣಸ್ತಂತೆ। ಏಳು ಬಾಯಿ ಹೊನ್ನುತ್ತದಲ್ಲಿ। ನಮ್ಮಪ್ಪಾಜಿ ಮಲೆ ಮಾದಪ್ಪನವರು। ಆನಂದವಾಗಿ ಕೂತು।

ಅಖಂಡ ಯಾಗ ಮಾಡವನಲ್ಲೋ ಮೂಡಲ ಮಲೆಯ ಮಾದೇವಾ।
ಆಹಾ...... ಕ್ವಾರಣ್ಯಗಳ ನೀಡಮ್ಮಾ ಕೋಡುಗಲ್ಲು ಮುನಿಗೆ।

ತನ್ನ ಅರ್ಧಾಂಗಿ ಪಾರ್ವತಿಯನ್ನು ಬಿಟ್ಟ। ಅರ್ದನಾರೀಶ್ವರನಾಗಿ ಕೂಡಲ ಸಂಗಮದೇವ। ಮಲೆ ಮಾದಪ್ಪನವರು ಅರಿವಿಲ್ಲದ ಮಲೆವೊಳಗೆ। ಅಖಂಡ ಯಾಗವನ್ನು ಮಾಡುತ್ತಿದ್ದರಂತೆ। ಮಾನವನಾದ ಶ್ರವಣ ಮಹಾರಾಜನನ್ನು ಕೊಂದಾಕಬೇಕು ಅಂತೇಳಿ। ಏಳು ರಾತ್ರಿ ಏಳು ಹಗಲು। ಅಖಂಡ ಯಾಗವನ್ನು ಮಾಡಿ। ಅನಂತರ ಮಲೆ ಮಾದಪ್ಪನವರಿಗೆ। ಪರಮಾತ್ಮ ಒಳಗಡೆ ಪ್ರಸಾದವನ್ನು ನೀಡಿದರು। ಹಸಿವಾಗ ಬಂದ ಕಾಲದಲ್ಲಿ ಮಲೆ ಮಾದಪ್ಪನವರು। ಈ ಬಾರತ ದೇಸವನ್ನು ವೇಗ ದೃಷ್ಟಿಯಿಂದ ನೋಡಿದನಂತೆ। ಕುಲ ಹದಿನೆಂಟು ಜಾತಿಗಳು। ಆವತ್ತಿನ ದಿನ ಆಳಿಕೆ ಆಳುತ್ತಿತ್ತು। ಹೆಣ್ಣೇಳು ಕೋಟಿ ಗಂಡೇಳು ಕೋಟಿ। ಮಹನವರು ಜಗತ್ತಿನಲ್ಲಿ ಆಳಿಕೆ ಆಳುವಾಗ। ಆಲಂಬಾಡಿ ಜುಂಜೇಗೌಡನ ಆರಮನೆ ನೋಡುವಂತ ಕಾಲದಲ್ಲಿ। ಆ ಗೌಡನ ಮನೆ ಒಳಗೆ ಏಳು ಸಾವಿರ ಗೋವುಗಳು। ಏಳು ಸಾವಿರ ಗೋವಿನಲ್ಲಿ ಹಿಂಡಿಗೆ ಮೇಲಾದುಂತ।

ಕಾಮಜೇನು ಹಸು। ಮಾದೇವನ ಕಣ್ಣಿಗೆ ಕಾಣಿಸ್ತು। ಮಲೆ ಮಾದಪ್ಪನವರು ಕಾಮ ಜೇನಿಗೆ ಕಣ್ಣಿಟ್ಟು। ಕರೆದವನೆ।

ಮೂಡಲಮಲೆಯ ಮಾದೇವಾ।
ಕ್ಯಾರಣ್ಯಗಳ ನೀಡಮ್ಮ ಗುರು ಕೋಡುಗಲ್ಲು ಮುನಿಗೆ।

ಕಾಮಜೇನಿಗೆ ಕಣ್ಣಿಟ್ಟು। ಆನೆಮಲೆ ಜೇನುಮಲೆ ಗುತ್ತಮಲೆ ಗುಲಗಂಜಿ ಮಲೆ। ನಾಗಮಲೆ, ರುದ್ರಾಕ್ಷಿ ಬದ್ರಾಕ್ಷಿಮಲೆ। ಕೊಕ್ಕಿಲೆ ಕೊಂಬದಿಕ್ಕ ಮಲೆ। ಕೂಡಗಲ್ಲು ಕೋಡಗಲ್ಲು ಮಲೆ। ಮದ್ದುಮಲೆ, ಮಂಜ; ಗುಂಜಿ ಗುರಗಂಜಿಮಲೆ। ಎಪ್ಪತ್ತೇಳು ಮಲೆ ದಾಟಿ ಬಂದು। ಮದ್ಯದ ಮಲೆ ಒಳಗೆ। ಮಲೆಯ ಮಾದೇಶ್ವರನ ಬೆಟ್ಟದಲ್ಲಿ ಮೂರು ಕೂಡಿದ ಕೋವಿನಲ್ಲಿ। ಏಳು ಬಾಯಿ ಹೊನ್ನುತ್ತಕ್ಕೆ ತನ್ನ ಎದೆಗಳನ್ನು ಬಿಟ್ಟು। ಕೂಡಲ ಸಂಗ ಮಾದೇಶ್ವರನಿಗೆ ಹಾಲು ಹಿಂಡತಾ ಇತ್ತಂತೆ। ಮಲೆ ಮಾದಪ್ಪನವರು ಹೊನ್ನುಬಾಯಿ ಮೂಗುತ್ತದಲ್ಲಿ ಕೂತು। ಹಾಲು ಕುಡಿದು ಒಳಗೆ ನಿದ್ರೆ ಮಾಡುತ್ತಿದ್ದ ಮಲೆ ಮಾದಪ್ಪನವರು। ಅಷ್ಟ ಬೆಟ್ಟ ಹಾಸಿಕೊಂಡು। ಅಷ್ಟ ಬೆಟ್ಟ ಹೊದ್ದುಕೊಂಡು। ಅಷ್ಟ ಮಲೆ ಕಿತ್ತು ಒಳಗೆ ನಿದ್ರೆ ಮಾಡುತ್ತಿದ್ದನಂತೆ। ಹಾಲು ಕರೆದಂತಾ ಹಸು। ಆಲಂಬಾಡಿ ಜುಂಜೇಗೌಡನ ಅರಮನೆಗೆ ಕಡೆದು ಪೊಂಟೊಯ್ತು।

ಆಹಾ..... ನೋಡಿ ನಮ್ಮ ಶಿವನಾ।
ಮಲೆಯೋ ಮಾದೇವಾ ಒಲಿವಾ ಚಂದಾವಾ।
ನೋಡಿ ನಮ್ಮ ಶಿವನಾ।[5]

ಆಹಾ.... ನೋಡಿ ನಮ್ಮ ಶಿವನಾ।
ಮಲೆಯೋ ಮಾದೇವಾ ಬರುವ ಚಂದಾವಾ।
ನೋಡಮ್ಮ ಶಿವನಾ॥[11]

ನಾಲ್ಕು ಎದೆ ತೊಟ್ಟಲ್ಲೂವೆ। ರಕ್ತ ಬಂದು ಬಿದ್ದು[11] ಮಲ್ಲಾಜಮ್ಮ ನಿಲ್ಲಿಸ್ಟಟ್ರು। ಓಡಿ ಬಂದು ಜುಂಜಪ್ಪನವರ ಪಾದಕ್ಕೆ ನಮಸ್ಕಾರ ಮಾಡಿ

ಅವರು ಪತಿಗೆ ದೂರ ಹೇಳವರೇ ಮಲ್ಲಾಜಮ್ಮಾ
ನೋಡಿ ನಮ್ಮ ಶಿವನಾ॥

ಯಜಮಾನ್ರೆ ಯಜಮಾನರೇ। ಇನ್ನೀಗ ನಮ್ಮ ಒಗತಾನ ಕೆಟ್ಹೋಯ್ತು ಅಂದ್ರು। ಏನಾಯ್ತು ಮಲ್ಲಾಜಿ ಅಂದ್ರು। ಏನಾಗುವುದು ಯಜಮಾನ್ರೆ। ನಮ್ಮ ಒಂಡಿಗೆ ಮೇಲಾಗಿರತ್ಕಂಥ ಜಲಗೊಂಬಿನ ಬಸವಣ್ಣ। ರಕುತ ಕರೆದು ಬಿಟ್ಟಿದ್ದಾನೆ। ಯಾವ

ಕಾಡಿಗೋಗಿದ್ರೂ। ಯಾವ ಯಂತ್ರಗಾರ ಮಂತ್ರಗಾರ। ಅಡ್ಡ ಸ್ವಾಮಿಗ ಬಿಡ್ಡ ಸ್ವಾಮಿಗ ಏನು ಮಾಡಿದ್ದಾನೋ। ನೋಡಿ ಬನ್ನಿ ಯಜಮಾನ್ರೆ ಅಂದ್ರು। ಆವಾಗ ಜುಂಜಪ್ಪನವರು। ಮಡದಿಯಾದ ಮಲ್ಲಾಜಮ್ಮನವರಿಗೆ ಸಮಾಧಾನ ಮಾಡಿದರು। ಏಳು ಜನ ಜೀತಗಾರರ ಕರೆದು ಏನಪ್ಪಾಆಳುಗಳೇ। ಯಾವ ಕಾಡಿಗೋಗಿದ್ರಿ। ಯಾರು ಸಿಕ್ಕಿದ್ರು ನಿಮಗೆ ಅಂತ ಕೇಳಿದ್ರು। ಇಲ್ಲಾ ಗೌಡರೇ। ಹಿಂದೆ ನಾವು ಯಾವ ಕಾಡಿಗೆ ಹೋಗ್ತಿದ್ದೋ। ಅದೇ ರೀತಿಯಾಗಿ ಮೂಡಲ ಗಡುವಿನಲ್ಲಿ। ಮೇಯಿಸ್ಕಂಡು ದನಾ ನೀರು ಕುಡಿಸ್ಕೊಂಡು ಬಂದೋ ಅಂದ್ರು। ಮಲ್ಲಾಜಿ ದುಃಖ ಮಾಡಬೇಡ। ಆಳುಗಳನ್ನು ನಾವು ಏನೂ ಕೊಲೆ ಕೊಡಬಾರದು। ನಾನೇ ಪರೀಕ್ಷೆ ಮಾಡ್ತೀನಿ ಅಂತೇಳಿ ಸಮಾಧಾನ ಮಾಡ್ಕಂಡು। ಜುಂಜಪ್ಪನವರು

> ಅವರು ನಿದ್ರೆ ಮಾಡಿ ಮಲಗವರೇ ಜುಂಜಪ್ಪಾ
> ನೋಡಿ ನಮ್ಮ ಸಿವನಾ॥"
>
> ಕೋಲು ಮಂಡೆ ಜಂಗಮರು ಕ್ವಾರಣ್ಯಕೆ ದಯ ಮಾಡಿದರು।
> ಗುರು ಮಾದಯ್ಯನೇ ದಯ ಮಾಡವರೇ।
> ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ।

ಸಿವಸಿವಾ ಆಗ ನಮ್ಮಪ್ಪಾಜಿ। ಮಲೆಯ ಮಾದಪ್ಪ। ಏಕಾಂಗಿ ವಸ್ತು ಏಳು ಮಲೆ ಲಿಂಗಪ್ಪನವರು। ಮಾತಿಗೆ ಮರಿದೇವರು ನೀತಿಗೆ ನಿಂಗಪ್ಪ। ದುಡಿಕಿಗೆ ದುಂಡಪ್ಪ ಮಾದೇಸ್ವರ। ಬೂದಿ ಮುಚ್ಚಿದ ಕೆಂಡ। ಬೂಲೋಕದಲ್ಲಿ ಉದ್ಭವಿಸಿ ಬಂದಂತ। ಕೆಂಡಗಣ್ಣು ಮಲೆ ಮಾದಪ್ಪನವರು। ಅಷ್ಟ ಮಲೆ ಹಾಸಿಕೊಂಡು। ಅಷ್ಟ ಮಲೆ ಹೊದ್ದುಕೊಂಡು। ಅಷ್ಟ ಮಲೆ ಕಿತ್ತು ಒಳಗೆ ನಿದ್ದೆ ಮಾಡುತ್ತಿದ್ದನಂತೆ। ಹೊನ್ನ ಬಾಯ ಮೂಗುತ್ತದಲ್ಲಿ। ಕೆಂಡಗಣ್ಣು ಮಲೆ ಮಾದಪ್ಪನವರು। ಆ ಏಳುಬಾಯಿ ಹೊನ್ನುತ್ತದಲ್ಲಿ ವಾಸ ಮಾಡುವಾಗ। ಆಲಂಬಾಡಿ ಜುಂಜೇಗೌಡ ಆಳುಕಾಳುಗಳಿಗೆ। ಅರಮನೆ ಒಳಗೆ ಕೊಲೆ ಕೊಡುತ್ತಿದ್ದ। ಆತನ ಮಗ ಬೀರಪ್ಪನವರು। ತಂದೆ ಸನ್ನಿದಾನದಲ್ಲಿ। ಎಲ್ಲಿ ಓಗ್ತದೋ ಬರುತ್ತದೋ। ಹೋದದ್ದೆ ಹೋದೆಜ್ಜೆಯನ್ನೇ ಕಂಡು ಹಿಡಿದವನಿಲ್ಲ। ನಾಳೆಯಿಂದ ಏಳು ಸಾವಿರ ಗೋವುಗಳನ್ನು। ನಾನೇ ಮೇಯಿಸಿಕೊಂಡು ಬರುತೀನಿ ಎಂದವನೇ ಆಲಂಬಾಡಿ ಬೀರಯ್ಯ।

> ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡಗಲ್ಲು ಮುನಿಗೆ।

ಅಪ್ಪಾಜಿಯವರೇ ನಾಳೆಯಿಂದ। ಏಳು ಸಾವಿರ ಗೋವುಗಳನ್ನು ನಾನೇ ಮೇಯಿಸಿಕೊಂಡು ಬರುತೀನಿ। ಆಳುಕಾಳುಗಳು ಅಪರಾಧವನ್ನು ಮಾಡಲಿಲ್ಲ। ಅವರು

ಹಿಂಗಟ್ಟು ಮುರಿಗಳನ್ನು ಬಿಚ್ಚಿ। ಮತ್ತೂ ಉದ್ದೇಸಕ್ಕೆ ಕಳಿಸಿ ಎಂದನು। ಆಗ ಅಲಂಬಾಡಿ ಜುಂಜೇಗೌಡ। ಸಣ್ಣ ಮಗ ಬೀರಪ್ಪನ ಮಾತುಗಳನ್ನು ಕೇಳಿ। ಸಿವ ಸಿವಾ ಆಲಂಬಾಡಿ ಜುಂಜೇಗೌಡ। ಏಳು ಜನ ಆಳು ಕಾಳುಗಳ ಹಿಂಗಟ್ಟುಗಳನ್ನು ಮುರಿಬಿಚ್ಚಿದನಂತೆ। ಮತ್ತು ಕಳುಹಿದರು। ಆ ಇರುಳು ಕಳೆದೋಯ್ತು। ಸೋಮವಾರದ ದಿವಸ। ಬೆಳಗಿನ ಜಾವ ಏಳೂವರೆ ಗಂಟೇಲಿ। ಏಳು ಸಾವಿರ ಗೋವುಗಳ ಬಟ್ಟ ಆಲಂಬಾಡಿ ಜುಂಜೇಗೌಡನ ಮಗ ಬೀರಪ್ಪನವರು। ತನ್ನ ಮಗ ಅಂದ್ರೆ ಸಿವ ಸಿವಾ। ಅಷ್ಟು ಮುಷ್ಟಿಯಿಂದ ಅಂಕಾರದಲ್ಲಿ। ಏಳು ಸಾವಿರ ಗೋವುಗಳನ್ನು ಬಿಟ್ಟು। ಆಲಂಬಾಡಿ ಜುಂಜೇಗೌಡನ ಮಗ ಬೀರಪ್ಪನವರು। ಬಲಗೈಲಿ ಗಂಡುಗೊಡಲಿ ಬಿರುದು ಹಿಡಿದು। ಏಳು ಸಾವಿರ ಗೋವಿನಲ್ಲಿ। ಹಿಂಡಿಗೆ ಮೇಲಾದಂತ ಕಾಮಜೇನು। ಬೆನ್ನಾಲಿ ಬರುತಾವರೆ। ಆಲಂಬಾಡಿ ಬೀರಯ್ಯನವರು

ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡಗಲ್ಲು ಮುನಿಗೆ।

ಹೊನ್ನಬಾಯಿ ಮೂಗುತ್ತದ ಹತ್ತಿರ ಬಂದು ನಿಂತು। ತನ್ನ ಎದೆಗಳನ್ನು ಬಿಟ್ಟು ಮಲೆ ಮಾದೇಸ್ವರರಿಗೆ ಹಾಲು ಹಿಂಡ್ತಾ ಇತ್ತು। ಆಲಂಬಾಡ ಜುಂಜೇಗೌಡನ ಮಗ ಬೀರಪ್ಪನವರು । ಆಕಾಸ ಅಂತು ನೋಡಿ। ದರಣಿ ಬಗ್ಗಿ ನೋಡಿದನಂತೆ। ಆ ಹುತ್ತವನ್ನು ಬಗ್ಗಿ ನೋಡಿದ। ಆ ಹುತ್ತದ ಕೋವಿನಲ್ಲಿ ಸಿವಸಿವಾ ಅವನ ಕಣ್ಣಿಗೆ ಆಕಾಸವೇಣಿ ಭೂಮಿತಾಯಿ। ಅಷ್ಟ ಪಾಲಕ ದಿಕ್ಕು ಸೂರ್ಯ ಚಂದ್ರಾದಿಗಳಾಗಲೀ ಯಾರೂ ನೇತ್ರಕ್ಕೆ ಕಂಡು ಬಂದಾಗಾಗಲಿಲ್ಲ। ಇಲ್ಲಿ ಯಾರಾಗಿರಬಹುದು। ತ್ರಿಲೋಕ ಅಂತಕ್ಕಂತ ತ್ರಿಮೂರ್ತಿಗಳು। ವಾಸ ಮಾಡಬಹುದೇ। ನನ್ನ ಸರಿ ಸಮಾನ ಯಾರಿದ್ದಾರೆ ಅಂತೇಳಿ। ಹಲ್ಲು ಕಡಿದು ತನ್ನ ಮುಷ್ಟಿಯಿಂದ। ಬಲಗೈಲಿ ಗಂಡುಗೊಡ್ಲಿ ಬಿರುದು ಹಿಡಿದಿದ್ದಾನಲ್ಲಾ। ಹಸು ಹುತ್ತಕ್ಕೆ ಹಾಲು ಹಿಂಡುವಾಗ ಮಲೆ ಮಾದೇಸ್ವರ ಅಂತು। ಹಾಲು ಕುಡಿವಾಗ ಬೀಸಿ ಹುತ್ತಕ್ಕೆ ವೊಡೆದವ್ನಲ್ಲಾ। ಆಲಂಬಾಡಿ ಬೀರಯ್ಯನು।

ಆಹಾ...... ಕ್ವಾರಣ್ಯಗಳ ನೀಡಮ್ಮ ಕೋಡಗಲ್ಲು ಮುನಿಗೆ।

ಆ ಗಂಡುಗೊಡಲಿಯಿಂದ ಬೀಸಿ ಹುತ್ತಕ್ಕೆ ಹೊಡೆದ್ರಂತೆ ಅವರು ಹೊಡೆದಂತ ಏಟು। ಹೊನ್ನು ಬಾಯಿ ಮೂಗುತ್ತಕ್ಕೆ। ಮಲೆ ಮಾದೇಸ್ವರರ ಹಣೇ ಪಟ್ಟಿಗೆ ಬೀಳ್ತು। ಹುತ್ತ ಎರಡು ತುಂಡಾಯ್ತಂತೆ। ಆ ಮೋಟುದ್ದದ ಕೋವಿನಲ್ಲಿ। ರಕ್ತ ಈಚೆಗೆ ಉಕ್ಕಿ ಬಂತು। ಪರಮಾತ್ಮ ರಕ್ತವನ್ನು ನೇತ್ರದಲ್ಲಿ ನೋಡಿದ। ಆಲಂಬಾಡಿ ಜುಂಜೇಗೌಡನ ಮಗ ಬೀರಪ್ಪನವರು। ಅವನ ಕಣ್ಣು ತಿರುಗದಾಯ್ತು। ತಲೆ ದಿಗ್ಭ್ರಮೆ ಆಯಿತು। ಕಾಲು ಕೈ ನಡುಗಲು ಬರುತ್ತಂತೆ। ಹಿಂದೆ ಬೇದಿ ಮುಂದು ವಾಂತಿ ಕಂಡು ಬಂತು। ಉಗಳು ರಕ್ತ ಬೂಮಿ ಮೇಲೆ ಗೆಡ್ಡೆಗೆಡ್ಡೆಯೇ। ಬಕ್ಕ ಬಕ್ಕನೆ ಕಕ್ಕಿ ಪಕ್ಕನೆ ಪ್ರಾಣ ಬಿಟ್ನಂತೆ।

ಆಲಂಬಾಡಿ ಜುಂಜೇಗೌಡನ ಮಗ ಬೀರಪ್ಪನವರು। ಹೊನ್ನಬಾಯಿ ಮೂಗುತ್ತದ ಹತ್ತಿರ। ಮೂರ್ತಿ ಹೋಗಿ ಬಿದ್ದಾವನಲ್ಲೋ। ಆಲಂಬಾಡಿ ಬೀರಯ್ಯ।

ಆಹಾ..... ಕ್ವಾರಣ್ಗಳ ನೀಡಮ್ಮ ಗುರು ಕೋಡಗಲ್ಲು ಮುನಿಗೆ।

ಅವನು ಹೊಡಕೊಂಡು ಹೋಗಿರತಕ್ಕಂತ। ಏಳು ಸಾವಿರ ಗೋವುಗಳು। ಏಳು ಹೊನ್ನ ಬಾಯಿ ಮೂಗುತ್ತದಿಂದ ಹಿಡಿದು। ಆಲಂಬಾಡಿ ನಡು ಬಾಕಲ ತನಕ। ಏಳು ಸಾವಿರ ಗೋವುಗಳು। ನಾಲಿಗೆ ಇರಿದು। ಒಟ್ಟಿಗೆ ಮೂರ್ಛೆ ಹೋದವಂತೆ। ಶಿವ ಸಿವಾ। ನಿಶಾ ರಾತ್ರಿ ಒಳಗೆ। ಏಳು ಸಾವಿರ ಗೋವುಗಳು। ಇಂಡಿಗೆ ಮೇಲಾದಂತ ಕಾಮಜೇನು। ಒಂಟಿ ಹಸು ಅರಮನೆ ಮುಂಬಾಗಿಲಲ್ಲಿ ಬಂದು ನಿಂತಾದಲ್ಲಾ। ಒಂದೇ ಕಾಮಜೇನು।

ಆಹಾ..... ಕ್ವಾರಣ್ಗಳ ನೀಡಮ್ಮ ಕೋಡಗಲ್ಲು ಮುನಿಗೆ।

ಜುಂಜೇಗೌಡನಿಗೆ। ನಿದ್ರೆ ಬರದೆ ಹೋಗುಂತಂತೆ। ತನ್ನ ಪುತ್ರನೂ ಬರಲಿಲ್ಲ। ಏಳು ಸಾವಿರ ಗೋವುಗಳು ಬಂದಿಲ್ಲ। ಒಂದೇ ಹಸು ಅರಮನೆ ಬಾಗಿಲಲ್ಲಿ ಬಂದು ನಿಂತಿದೆ। ಇದೇನು ಕಾರಣ ಪರಮಾತ್ಮ ಅಂತೇಳಿ। ಮನದಲ್ಲಿ ಧ್ಯಾನ ಮೂಡಿ। ಕಣ್ಣಿಗೆ ನಿದ್ರೆ ಬಾರದೆ। ಅರಮನೆ ಮುಂಬಾಗಲಲ್ಲಿ ಕಾಯ್ದು ಕೂತಿದ್ದನಂತೆ। ಆಗ ನಮ್ಮಪ್ಪಾಜಿ ಮಲೆ ಮಾದಪ್ಪನವರು। ಮಾತಿಗೆ ಮರಿದೇವರು। ನೀತಿಗೆ ನಿಂಗಪ್ಪ। ದುಡುಕಿಗೆ ದುಂಡುಳ್ಳ ಮಾದೇಶ್ವರ। ಬೂದಿ ಮುಚ್ಚಿದ ಕೆಂಡ। ಭೂ ಲೋಕದಲಿ ಉದ್ಭವಿಸಿ ಬಂದಂತ ಕೆಂಡಗಣ್ಣು ಮಲೆ ಮಾದೇವ। ಉತ್ತರಾಜಮ್ಮನ ಪುತ್ರ ಮಲೆ ಮಾದ್ದಪನವರು। ಇದೇ ನನಗೆ ತಕ್ಕಾದ ಸಮಯ। ಕೆಟ್ಟು ಮುರಿದು ಒಕ್ಕಲು ಪಡೆದು। ಬರಬೇಕಂತೇಳಿ। ಅವರು ಕೊರವಂಜಿ ಯಾಸ ತಾಳಿ ಬತ್ತಾವನೋ। ನನ್ನ ಮೂಡಲ ಮಲೆಯ ಮಹಾದೇವ।

ಆಹಾ..... ಕ್ವಾರಣ್ಗಳ ನೀಡಮ್ಮ ಗುರು ಕೋಡಗಲ್ಲು ಮುನಿಗೆ।

ಯಾರೋ ಮುನಿಗಳು ಬಂದ್ರು ಅಂತೇಳಿ। ಅರಮನೆವೊಳಗೆ ಆನಂದವಾಗಿ ಕರೆದರಂತೆ ಜುಂಜೇಗೌಡ। ಮಾದಪ್ಪನವರು ಆನಂದವಾಗಿ ನುಗ್ಗಿ ಬಂದು ನಿಂತವನಲ್ಲೋ ಮಲೆಯ ಮಾದೇವಾ।

ಕೊರವಂಜಿ ಗೂಡೆ ಬಲಗಡೆ ಮಡಗಿ। ಕವಡೆಗಳನ್ನು ಬಿಟ್ಟು। ಕಂಡದ್ದು ಕಂಡಾಗೆ ಸಾಸ್ತ್ರ ಹೇಳುತ್ತ ಕೂತವನೆ ನಮ್ಮ ಮೂಡಲು ಮಲೆಯ ಮಾದೇವ।

ಆಹಾ ಕ್ವಾರಣ್ಗಳ ನೀಡಮ್ಮ ಗುರು ಕೋಡಗಲ್ಲು ಮುನಿಗೆ।

ಕಂಡದ್ದು ಕಂಡಾಗೆ ಶಾಸ್ತ್ರವನ್ನು ಹೇಳಿದರು। ಕೆಂಡಗಣ್ಣ ಮಲೆ ಮಾದೇಶ್ವರ।

ಶಿವ ಶಿವಾ ನಿನ್ನ ಮನೆ ಒಳಗೆ ಸಾವಿರ ಗೋವಿನಲ್ಲಿ। ಹಿಂಡಿಗೆ ಮೇಲಾದಂತ ಕಾಮಜೇನು ಹಸು। ಏಳು ರಾತ್ರಿ ಏಳು ಹಗಲು। ಒಂದು ತೊಟ್ಟು ಹಾಲು ಕೊಡಲಿಲ್ಲವಂತೆ। ಏಳು ಜನ ಆಳು ಕಾಳುಗಳನ್ನೆಲ್ಲ। ನೀನು ಹಿಂದ್ಲಟ್ಟಿ ಕಂಬಕ್ಕೆ ಕಟ್ಟಾಕಿ ಇಂಗಟ್ಟು ಮುರಿ ಹಾಕಿ ನಿಲ್ಲಿಸಿ। ಬಾರಿ ಬಂದಾನದ ಕೂಲೆ ಕೊಡುವಾಗ। ನಿನ್ನ ಪುತ್ರನಾದ ಬೀರಪ್ಪನವರು। ನಿನ್ನ ಸನ್ನಿದಾನದಲ್ಲಿ ನಿಂತು। ಅಪ್ಪಾಜಿಯವರೆ ಆಳು ಕಾಳುಗಳು ಅಪರಾಧವನ್ನು ಮಾಡಲಿಲ್ಲ। ಹಸು ಎಲ್ಲಿ ಹೋಗ್ತದೋ ಬರ್‍ತದೋ। ನಾಳಿಂದ ನಾನೇ ಕಂಡು ಬರುತ್ತೀನಿ ಅಂತೇಳಿ। ನಿನ್ನ ಮಗ ಒಪ್ಪಿ। ಏಳು ಸಾವಿರ ಗೋವುಗಳನ್ನು। ಹೊಡೆದುಕೊಂಡು ಹೋದನಂತೆ। ಗೋವಿನಲ್ಲಿ ಹಿಂಡಿಗೆ ಮೇಲಾದಂತ ಕಾಮಜೇನು ಹಸು। ಕಾಣಬಾರದ ಕಾನ ಒಳಗೇ ಅರಿವಿಲ್ಲದ ಮಲೆ ಒಳಗೆ। ಏಳು ಬಾಯಿ ಹೊನ್ನುತ್ತಕ್ಕೆ। ತನ್ನ ಎದೆಗಳನ್ನು ಬಿಟ್ಟು ಮಲೆ ಮಾದೇಶ್ವರರಿಗೆ ಹಾಲು ಹಿಂಡುತ್ತಿತ್ತಂತಪ್ಪ। ಮಲೆ ಮಾದಪ್ಪನವರು ಹಾಲು ಕುಡಿದಂತ ಕಾಲದಲ್ಲಿ। ನಿನ್ನ ಮಗನಾದ ಬೀರಪ್ಪ। ತನ್ನ ಅಹಂಕಾರದಿಂದ। ಬಲಗೈಲಿ ಗಂಡುಗೊಡಲಿ ಹಿಡಿದು। ಬೀಸಿ ಹುತ್ತಕ್ಕೆ ಹೊಡೆದನಂತೆ। ಅವರು ಹೊಡೆದ ಏಟು। ಕೆಂಡಗಣ್ಣು ಮಾದಪ್ಪನವರಿಗೇ ಹಣೆ ಪಟ್ಟಿಗೆ ಬಿದ್ದು। ಅವರ ದೃಷ್ಟಿಗಳಿಂದ ಏಳು ಸಾವಿರ ಗೋವುಗಳು ಮೂರ್ಛೆ ಬಿದ್ದುವು। ನಿನ್ನ ಮಗನು ಮೂರ್ಛೆ ಹೋಗವ್ನೆ। ಅವನು ಎಚ್ಚರಿಸಿ ನಿನ್ನರಮನೆಗೆ ಬರಬೇಕಾದರೆ। ನಿನ್ನ ಮಗ ಮಾಡಿರತಕ್ಕಂತ ಅಪರಾಧಗಳ ಕ್ಷಮಿಸಲು। ಮಾದೇವನ ಪಾದದಲ್ಲಿ ನಮಿಸಿ। ಕೊಟ್ಟು ಮಾದೇವನ ಒಕ್ಕಲಾಗಿ। ನೀನು ಕೇಳದ ಹರಕೇನ ನಾ ಕೊಡುತೀನಿ ಅಂದಾವನಲ್ಲಾ। ಆಲಂಬಾಡಿ ಜುಂಜೇಗೌಡನೂ।

ಆಹಾ..... ಕ್ವಾರ್‍ಣ್ಯಾಗಳ ನೀಡಮ್ಮ ಕೋಡಗಲ್ಲು ಮುನಿಗೆ।

ಆಗಲೀಗ ಆಲಂಬಾಡಿ ಪ್ಯಾಟೆಗೆ ಬಂದು ನಿಂತು। ನಮ್ಮಪ್ಪ ಮಾಯಕಾರ ಗಂಡ। ಆಲಂಬಾಡಿ ಜುಂಜೇಗೌಡನ ಸೊಸೆ ಹಿರೀ ಮಗ। ಪಡಸಾಲೆ ಮೇಲೆ ಮಲಗಿದ್ದಂತೆ। ಆಗಲೂ ನಮ್ಮಪ್ಪ ಮಾಯಕಾರ ಗಂಡ। ಆಲಂಬಾಡಿ ಜುಂಜೇಗೌಡನಟ್ಟಿ ಬಾಗಲಲ್ಲಿ ನಿಂತುಕೊಂಡು ಆಲಂಬಾಡಿ ಜುಂಜೇಗೌಡನಟ್ಟಿ ಹಾಳಾಗಲಿ ಅಂತ ಕೂಗ್ತಾನೇ ಧೀರಾ ಮಾದಯ್ಯ।

ಆಹಾ..... ನೋಡಿ ನಮ್ಮ ಶಿವನಾ।

ಆಗಲೀಗ ಮೂರು ಸಲ ಕೂಗಿದ್ದಂತೆ। ಬಾಕಲು ಅರಕದ ಮಾಡಿಕೊಂಡು। ಅಲ್ಲಿಗೆ ಹಟ್ಟಿ ಒಳಗೆ। ಕನಗಡಸು ಹೆಬ್ಬುಲಿಯಾಗಿ ಅವನ ಹಿರೀ ಮಗನ ವೊತ್ತಾರೆ। ಮೂಡಲ ಕೆಬ್ಬೆ ಹೊಲಕ್ಕೆ। ಧರೆಯೊಳಗೇ।

ಆಹಾ.... ನೋಡಿ ನಮ್ಮ ಸಿವನಾ।।

ಅಲ್ಲಿಗೆ ಹುಟ್ಟಿ ಒಳಗೆ। ಕನಗಡಸು ಹೆಬ್ಬುಲಿಯಾಗಿ ನನ್ನ ಹಿರಿ ಮಗನನ್ನು। ಮೂಡಲ ಕೆಬ್ಬೆ ಹೊಲಕ್ಕೆ ವೊತ್ಕೊಂಡು ಒಂಟೋಯ್ತಲ್ಲೋ। ವೆಟ್ಟಾಳದಲ್ಲಿ ಊಟ ಮಾಡ್ಕತಲ್ಲಾ ಅಂತೇಳಿ। ಅವಳು ಲಬಲಬನೆ ಬಾಯಿ ಬಡೀತಾಳಲ್ಲೋ। ಧರೆ ಒಳಗೆ।

ಆಹಾ.... ನೋಡಿ ನಮ್ಮ ಸಿವನಾ।।

ಆಗಲೀಗ ಯಜಮಾನ ಒಡ್ಡಣ್ಣನ ಕರಕೊಂಡು ಹೋಗು ಅಂತೇಳಿ। ಕೌದಳ್ಳಿ ಪ್ಯಾಟಿಗೆ ಕಳಸ್ಬುಟ್ಟು। ಆಗಲೀಗ ಜುಂಜೇಗೌಡನ ಸೊಸೆ। ಮೂರು ಬಿಂದಿಗೆ ಹಚಾನೂವೆ। ಮೂರು ಉಳಸ್ಕಂಡಿದ್ಲು। ಈಚೆಗೆ ಕಳಿಸಿ ಮಡಗ್ಯಾಳಲ್ಲೋ। ಧರೆ ಒಳಗೇ।

ಆಹಾ.... ನೋಡಿ ನಮ್ಮ ಸಿವನಾ।।

ಆವಾಗಲೀಗ ಬೆಳಗಾಗುತ್ತಲೇ ಎದ್ದು। ಎಲ್ಲಾ ಕೈಕಾಲೂ ಮುಖ ತೊಳಕೊಂಡು। ಆವಾಗಲೀಗ ಏಳು ಗಂಟೆ ಟೈಮಾಯ್ತು। ಮಲ್ಲಾಜಮ್ಮ ಒಂದ್ಕಡೆಯಿಂದ ಎಲ್ಲಾ। ಕರಬುಟ್ಟು ಹಾಲು ಕರ್ಕೊಂಡ್ಬಂದ್ರು। ಜಲಗೊಂಬಿನ ಬಸವಣ್ಣನ ಮುಟ್ಲೆಲ್ಲ। ಆವಾಗ ಜುಂಜಪ್ಪನದು ಏಳು ಜನ ಜೀತಗಾರರ ಕರೆದ್ರು। ಅಯ್ಯಾ ಆಳುಗಳೇ। ಈ ಹೊತ್ತು ಈ ಜಲಕೊಂಬಿನ ಬಸವಣ್ಣನಿಗೆ । ಕುತ್ತಿಗೆ ಒಲವು ಗಂಟೆಯನ್ನು ಕಟ್ಟಿ। ಒಂದು ದಂಡವಾರ ಕಟ್ಬುಡಿ। ನಾನೂ ಕೂಡ ಬರ್‍ತೀನಿ। ನಿಮಗೆ ಏನೂ ತೊಂದ್ರೆ ಕೊಡೋದಿಲ್ಲ ಅಂತ್ಹೇಳಿ। ಜೀತಗಾರರಿಗೆ ತಾಕೀತು ಮಾಡಿಕೊಂಡು। ಆವಾಗ ಜುಂಜಪ್ಪನವರು। ಹತ್ತು ಗಂಟೆಗೆ ಸರಿಯಾಗಿ। ಏಳುಂಡಿ ದನ ಬಿಟ್ಕಂಡು। ಬೀಸು ಮಚ್ಚ ಹೆಗಲ ಮೇಲಿಟ್ಕಂಡು.

ಅವರು ಮೂಡಲ ಅಡವಿಗೆ ಬರುತವರೇ ಜಂಗಮಯ್ಯ
ನೋಡಿ ನಮ್ಮ ಸಿವನಾ।।

ಬಸವಣ್ಣನಿಗೆ ಮುಳ್ಳಿನ ದಾರಿ ಬಿಟ್ಟು ಬುಡ್ತು। ಹೋಗಿ ಬಂಡೆ ಮೇಲಿ ನಿಂತ್ಕೊಂಡು। ಹಾಲುಮಜ್ಜನ ಮಾಡ್ತಾವನೆ ಬಸವಣ್ಣ। ಆವಾಗ ಜುಂಜಪ್ಪ। ಮೇಲ್ಕೆದ್ದು ಕುಣ್ಣು ಕಾಲ್ಲೆಲ್ಲ ವಸೀಕೊಂಡು ಕಣ್ಣುಬಿಟ್ಟ ನೋಡ್ತವನೆ ಬಸವಣ್ಣ ಇಲ್ಲಿ। ಎಲ್ಲಯ್ಯ ಆಳುಗಳೇ ಅಂದ್ರು। ಎಲ್ಲಿ ಮಾಯವಾಯ್ತೊ ಕಾಣೆ ಗುರುವೇ ಅಂದ್ರು। ಜುಂಜಪ್ಪ ಒಂದು ಕಡೆಯಿಂದ ಕಡ್ಕಂಡೊಯ್ತಾ ಇದ್ದಾರೆ. ಬಲಗಡೆ ಯಾವಾಗ ಮುಚ್ಚು ತಗಲಿ ಬಿತ್ತೋ ಲಿಂಗಕ್ಕೆ। ಲಿಂಗ ಮ್ಯಾಲಕ್ಕೆ ಹಾರಿಬಿಡ್ತು। ಆ ಲಿಂಗದಲ್ಲಿ ರಕುತವಾಗಿರ್‍ತಕ್ಕಂತಾದ್ದು ಚಿಲ್ಲನೆ ಮೇಲಕ್ಕೆ ಹಾರಿಬಿಡ್ತು।

ನೋಡಿ ನಮ್ಮ ಶಿವನಾ।।

ಆಲಂಬಾಡಿಗೆ ಬಿನ್ನಕ್ಕೆ ಬಂದರು। ಆಲಂಬಾಡಿ ಸೀಮೆಗೆ। ಮೊದಲಾಗ್ಹೋಗಿ। ನಾನು ಊರಲ್ಲಿ ಭಿಕ್ಷೆ ಕೇಳಬಾರದು। ಕೊಟಾರದಲ್ಲಿ ಜುಂಜಪ್ಪ। ಹನ್ನೆರಡು ಕಂಡುಗ ಹಸೀ ಕಡಲೆ ಒಕ್ಕಣೆ ಮಾಡಿ ರಾಶಿ ಹಾಕ್ಕೊಂಡು। ಕಾದು ಕೂತವರೆ। ಅಟ್ನೆ ಗುಡ್ಲೊಳ್ಗೆ। ಆವಾಗ ಮಾದೇವ। ಕೊಟಾರದಲ್ಲಿ ಜುಂಜಪ್ಪನ ದುಡ ನೋಡಬೇಕಂತ್ಹೇಳಿ। ಆ ಭಕ್ತರ ಕೊಟಾರವನ್ನು ಮೂರು ಪ್ರದಕ್ಷಿಣೆ ಬಂದು। ಈಶಾನ್ಯ ಭಾಗದಲ್ಲಿ ನಿಂತುಕೊಂಡು ಲಿಂಗದ ಮೊರ್ಹ ಜಂಗಿನ ಶಬ್ದ ಮಾಡ್ಕಂಡ್ರು। ಕಂಚಿನ ಕಂಸಾಳೆ ಶಬ್ದ ಮಾಡಿ। ಹರ ಹರಾ ಹರನ ಭಿಕ್ಷ। ಗುರುಧರ್ಮ ಕ್ವಾರಣ್ಯದ ಭಿಕ್ಷ। ಯತಿ ಮುನಿಗಳ ಭಿಕ್ಷ। ತಂದೆ ಕಲ್ಯಾಣದವರ ಭಿಕ್ಷ। ತಾಯಿ ಉತ್ತರಾಜಮ್ಮನವರ ಬಿಕ್ಷ। ಜ್ಯೋತಿ ಲಿಂಗಯ್ಯನ ಬಿಕ್ಷ। ಜೋಳಿಗೆ ಹಿಡಿದಾತನ ಬಿಕ್ಷ। ನಾಲ್ಕು ಪಾದದ ಜೋಳಿಗೆ ಬಿಕ್ಷ। ನಾಲ್ಕು ಬೆತ್ತದ ಭಿಕ್ಷ ಅಂತ್ಹೇಳಿ।

ಅವರು ಪಂಚೀಳಕ್ಷರ ಕೂಗವರೆ ಮಾದೇವಾನ
।।ನೋಡಿ ನಮ್ಮ ಶಿವನಾ।।

ಯಾವಾಗ ಭಿಕ್ಷೋ ಭಿಕ್ಷೋ ಅಂತ್ಹೇಳಿ ಕೂಗಿದ್ರೋ ಭವತಿ ಭಿಕ್ಷಾಂದೇಹಿ ಅಂತ್ಹೇಳಿ ಸಾರುದ್ರು ಜೋರಾಗಿ ಭಿಕ್ಷೆ ಸಾರುದ್ರು ಜುಂಜಪ್ಪ ಅಟ್ಟ ಗುಡ್ಲಲ್ಲಿ ನಿದ್ದೆ ಮಾಡ್ತ ಮನಗಿದ್ರು

ಮಲೆಯ ಹುಲಿವಾಹನ ಬರುವ ಚಂದವಾ
ನೋಡಿ ನಮ್ಮ ಶಿವನಾ।

ಆಲಂಬಾಡಿ ಒಳುಗೆ। ಆಲಪ್ಪಗೌಡ ಕುರುಬೇಗೌಡ. ಮರುಜುಂಜೇಗೌಡ ಬೆಟ್ಟೇಗೌಡ ಡೊಳ್ಳೊಟ್ಟೆ ಜುಂಜೇಗೌಡ। ಮುನ್ನೂರು ಮೂವತ್ತು ಪಲ್ಲ ಕಳ್ಳ ಬೆಳ್ದು। ಒಕ್ಕಣೆ ಮಾಡಿ ತೂರ್ಬುಟ್ಟು। ಕಣದಲ್ಲಿ ಬಂದು ರಾಶಿ ಹಾಕ್ಬುಟ್ಟು। ಬಂಗಾರದ ಕುರ್ಚಿಯನ್ನು ತರಿಸ್ಕಂಡು। ಬಂಗಾರದ ಕುರ್ಚಿ ಮ್ಯಾಲೆ ಕೂತ್ಕಂಡು ಬೆಳ್ಳಿ ಮೆರನ ರಾಸ್ಯದಲ್ಲಿ ನೆಟ್ಬುಟ್ಟು। ರಾಸ್ಯದ ಮೂರು ಮೂಲ್ಗುವೆ ಮುದ್ರೆ ಹೊಡದ್ಬುಟ್ಟು। ಮರು ಜುಂಜಯ್ಯನ ಕಾವಲ್ ಮಡಗ್ಬುಟ್ಟು। ಯಾರಾರ ಅರ್‍ದೇಸಿ ಪರದೇಸಿ ಬಂದುದ್ದೇ ಆದ್ರೆ। ಭಿಕ್ಷಾ ಕೊಡಬ್ಯಾಡಪ್ಪ ಮರುಜಂಜಯ್ಯ ಅಂತ್ಹೇಳಿ।

ತಾಕರ್ತಿ ಮಾಡ್ತಾನೆ ಜುಂಜಯ್ಯ
ನೋಡಿ ನಮ್ಮ ಶಿವನಾ।

ಈವತ್ತು ಶುಕ್ರವಾರ ನಾಳೀಕೆ ಸನುವಾರ। ನಾಳೆ ಸನುವಾರದ್ದಿವ್ಸ ರಾಶಿ ಹೆಚ್ಕೊಳ್ಳು ಮಾಡ್ಬೇಕು। ರಾಶಿ ಹೊಚ್ಕೊಳ್ಳು ಮಾಡ್ಬುಟ್ಟು ರಾಶಿ ಗಾಡಿಗ್ ತುಂಬ್ಕೊಂಡು। ಆರ್‍ಲ್ಲ

ಕಳ್ಳೆ ಕಣುದಲ್ ಸುರ್‍ಕೊಂಡು। ಗುಡ್ಡಯ್ಯ ಗೊರವಯ್ಯ ಕಾಳ್ಮುಕಿ ಸನ್ಯಾಸ್ಗೊಳ್ಗೆಲ್ಲ। ಒನೊನ್ದಿಡಿ ಕಳ್ಳೆ ದಾನ ಕೊಡಬೇಕು। ಅಪ್ಪಾ ಮರು ಜುಂಜಯ್ಯ ನಾತ್ವಾರ್‍ಗೊಗಿ। ನೆನೆಯಕ್ಕಿ ನೆನೆಗಳ್ಳೆನೂವೆ ಮುರೀದ್ಯಾಳ ಹಣ್ಣು। ಬೆಜ್ಜಲ್ಕೆ ಕೆಂಡ। ಕಲ್ಪುರ ಸಾಂರಾಣಿ ಗಂಧದ ಕಡ್ಡಿ। ಆಳೆಯೋದ್ಕೆ ಕೊಳ್ಗ ಎಲ್ಲಾನೂ ತತ್ತೀವಪ್ಪಾ। ನಾಳೆ ಹೊತ್ತಂತೆ ಕಳ್ಳೆ ಕಣಕೆ

> ಬತ್ತೀವಿ ಅಂತಾರಲ್ಲೊ ಜುಂಜಯ್ಯ।
> ನೋಡಿ ನಮ್ಮ ಶಿವನಾ।

ನಮ್ಮಪ್ಪಾಜಿ ಮಾಯ್ಕಾರ ಗಂಡ ಹುಲಿವಾಹನದಯ್ಯ। ಈ ಜುಂಜಯ್ಯ ನನ್ಮಾತ ಕೇಳ್ದೇ ಹೋದ್ನಲ್ಲ। ಹಾಕುದ ಕಾಲ ತಗೀನಿಲ್ಲ ಬಗ್ಗುದ ತಲೆ ಆಸಿನಿಲ್ಲ। ಇವು ನಧುನಿಯಾವನ್ನು ಧೂಳಿಪಟ ಮಾಡ್ದೇ ಇದ್ರೆ। ನನಗೆ ಮಾದೇಶ್ವರ ಅನ್ನುವಂತ ಛಲಾ ಯಾಕೆ? ಅಂದ್ಬುಟ್ಟು। ತಾಕುರ್‍ತಿ ಮಾಡ್ಬುಟ್ಟು ಜುಂಜಯ್ಯ ಮನೆಗೊಂಟೋದ್ರಲ್ಲ ಆಗ ನನ್ನೇಳು ಮಲೆ ಹೆತ್ತಯ್ಯ

> ಅದೇ ಕಣ್ಕೆ ಭಿಕ್ಷುಕ ಬರ್‍ತಾರಲ್ಲಪ್ಪ ಮಾದೇವ
> ನೋಡಿ ನಮ್ಮ ಶಿವನಾ।

ಜುಂಜೇಗೌಡ ಕಣುವನ್ನು ಕಾಯ್ಕೊಂಡು ಕುಂತಿದ್ದ। ಯಾರವ್ವ ನನ ಕಂದ ಕೊಟಾರ್‍ದಲ್ಲಿ।

ಅತಿ ಸಂಗಯ್ಯನ ಭಿಕ್ಷಾ। ಜ್ಯೋತಿ ಲಿಂಗಯ್ಯನ ಭಿಕ್ಷಾ ಕಟ್ಗೆ ಸಂಗಯ್ಯನ ಭಿಕ್ಷೆ। ಎತುಗಳ್ ಮುನುಗಳ ಭಿಕ್ಷಾ।

> ನಮ್ಗೆ ಭಿಕ್ಷೆ ಕೊಡಪ್ಪಾ ಮರುಜುಂಜಯ್ಯ
> ನೋಡಿ ನಮ್ಮ ಶಿವನಾ।

ಜುಂಜೇಗೌಡ ಕಳ್ಳೇ ಕಣದಲ್ಲಿ ಕುಂತಿದ್ದವನು। ಮಾದೇವನ ಮೊಕುವನ್ನು ನೋಡಿ। ಯಾರಯ್ಯ ಅವ್ನು? ಕಾಡಬೇಡ ಕರುಣೆಯ ಬೇಡ್ಬೇಡ ಲೋಭಿಯ। ನನ್ ಮನೇ ಮಂದೀರ್‍ಗೆ ಕಳ್ಳೆ ಎತ್ಮಡುಗಿಲ್ಲ। ಇನ್ನೂ ರಾಶಿ ಪೂಜೆಯನ್ನು ಮಾಡಿಲ್ಲ। ಜಂಗೂಮ ನನ್ನಕಣದತ್ರ ನಿಂತ್ಕೊಂಡು ಭಿಕ್ಷೆ ಕೇಳ್ತಿ। ಈವತ್ತು ಸುಕ್ರವಾರ। ಸುಕ್ರವಾರುದ್ದಿವ್ಸ ತುಂಬಿದ ರಾಸ್ಗೆ ಕೈ ಹಾಕಿ ಒಂದಿಡಿ ಕಳ್ಳೇನು ಕೊಡೋ ಹಗಿಲ್ಲ। ಮುಂದುಕ್ಕೋಗಪ್ಪ ಜಂಗುಮಯ್ಯ।

> ನೋಡಿ ನಮ್ಮ ಶಿವನಾ।
> ಜುಂಜಯ್ಯಂಗೆ ದಾನ ಅಂದ್ರೆ, ಗ್ಯಾನುವಿಲ್ಲ
> ಎತ್ತುದ ಜೋಳ್ಗೆ ಇಳುಕ್ಸಿಲ್ಲ ನನ ಕಂದ।

ಮೊದುಲಾಗ ಇಲ್ಲಿಗೆ ಬಂಡಿ ನನ್ನ ಹಂಗೆ ಕಳುಗ್ಬ್ಯಾಡ ನಿನ್ಗೆ ಅನೇಕವಾದ ಪಾಪ ಬರ್‍ತದಪ್ಪ! ನೀನು ಒಂದಿಡಿ ಕಳ್ಳೆ ತಂದು ಪಟ್ಟೇವಲ್ಲಿ ಮ್ಯಾಲೆ ಪಾದೋಬಿಸೇಕ ಮಾಡುದ್ರೆ

ಇದ್ರು ಮೇಲಿನ್ನಷ್ಟು ಭಾಗ್ಯ ಕೊಡ್ತೀನಂತವ್ರೆ ಮಾದೇವ
ನೋಡಿ ನಮ್ಮ ಶಿವನಾ!

"ಜಂಗುಮಯ್ಯ ಒಂದಿಡಿಯಲ್ಲಿ ಒಂದ್ಗಾಳ್ನೂ ಕೊಡಕಿಲ್ಲ ನಮ್ಮಣ್ಣಯನವರ ಮಾತನಾಮೀರಕಿಲ್ಲ ಮೀರಿ ನಿನ್ಗೇ ನಾ ಭಿಕ್ಷೆ ಕೊಡಕಿಲ್ಲ! ಮೂಲ್ ಮೂಲೇಗೂ ಮುದ್ರೆ ಹೊಡುದ್ಬುಟ್ಟೋಗವ್ರೆ!

ಕಡುದೋಗೋ ಕಾಡ ಪರದೇಸಿ,
ನೋಡಿ ನಮ್ಮ ಶಿವನಾ!

ಒಂದಿಡಿ ಕಳ್ಳೆ ಕಾಳ್ ಕೇಳಿದ್ರೆ ನಿನ್ಗೆ ಕ್ವಾಪ್ಪತ್ತಪ್ಪ ಜುಂಜಯ್ಯ! ಕ್ವಾಪ ಅನ್ನೋದು ಬೋ ಕೆಟ್ಟದ್ದಪ್ಪ! ಕ್ವಾಪವನ್ನು ಬುಟ್ಟು ಒಂದಿಡಿ ಕಳ್ಳೆ ಕಾಳ್ ತಂದು! ಪಟ್ಟೆ ವಸ್ತುರದಲ್ಲಿ ಪಾದೋಭಿಸೇಕವನ್ನು ಮಾಡಿ! ಭಿಕ್ಷಾ ಅಂದ್ರ ಲಕ್ಷ್ಯವಿಲ್ಲ! ಸಿರಿ ಸಂಪತ್ತು ಅದ್ದೂರಿ ದೊರ್‍ತನ ಮೋಡಿಯಿಂದ ಕುಂತಿದ್ದಾನೆ! ನಮ್ಮಪ್ಪಾಜಿ ಏಳ್ಳುಲೆ ಹೆತ್ತಯ್ಯ ನೋಡುದ್ರು! ಅಪ್ಪಾ ಜುಂಜಯ್ಯ ತುಂಬಿದ ಶುಕ್ರವಾದ್ದಲ್ಲಿ! ಎತ್ತುದ ಜೋಳ್ಗೆಯ ಎಲ್ಲೂ ಇಳಿಕಿಲ್ಲ ನನ ಕಂದ! ಮೊದಲೇಟ್ಗೆ ಬಂದು ನಿನ್ನ ಕೊಟಾರದಲ್ಲಿ! ಧರ್‍ಮಸಾರ್‍ತಿದ್ದೀನಪ್ಪ! ಅಪ್ಪರ ಕೊಡು ಅಂತ ನಾನು ಕೇಳ್ನಿಲ್ಲ! ನೀನು ಒಂದಿಡಿ ಕಳ್ಳೆ ತಂದು ನನ್ನ ಮುತ್ತಿನ ಜೋಳಿಗೆಗೆ ನೀಡುದ್ರೆ

ನಿಮ್ಮಣ್ಣತ್ತಿಮೀರ್‍ದ್ದಗ್ಗೆ ದೊರ್‍ತನ ಕೊಡ್ತೀನಿ ಅಂದುವರೇ
ನೋಡಿ ನಮ್ಮ ಶಿವನಾ!

ಮಾದೇವನ ಮಾತು ಕೇಳಿ ಜಂಜುಯ್ಯಗೆ! ರುದ್ರಕ್ವಾಪ ಹತ್ತುತಂತೆ! ಎಲೋ ಜಂಗೂಮ! ಏಳೇಳ್ತ ರಾಮ್‌ಕಣೆ ಮಾಡ್ತಿಯಲ್ಲ! ಊರ್‍ಮುಂದುಲ ಕರೀಕಲ್ಲಾಗಿ ಕಾಡ್ತಾ ಬೇಡ್ತಾ ನಿಂತಿದ್ದಿ!

ಕಾಡ್ಟೇಟ ಕಡುದೋಗೋ ಹುಚ್ಚು ಪರದೇಸಿ!
ನೋಡಿ ನಮ್ಮ ಶಿವನಾ!

ಜಂಗಿನ ಪಾದವನ್ನು ಮುಟ್ಟಿ! ಲಿಂಗದ ಭಿಕ್ಷುವನ್ನ ಕೊಟ್ಟುದ್ದೆ ಉಂಟಾದ್ರೆ! ನಿಮ್ಗೆ ಮುನ್ನೂರು ಖಂಡ್ಗ ಹೆಚ್ಹೊಕ್ಕಿಲ್ಲ ಕೊಡ್ತೀನಿ ಜುಂಜಯ್ಯ!

ನೋಡಿ ನಮ್ಮ ಶಿವನಾ!

ಗುಡುಗುಡನೋಡೋಗಿ। ಕಳ್ಳೆ ರಾಸ್ಯಕೆ ನೆಟ್ಟಿರುವಂತ ಮೆಕ್ಕಡ್ಡಿ ತಕ್ಕೊಂಡು। ನಿನ್ನ ಬೋಳು ಮಸ್ತಕದ ಮೇಲೆ ಹೊಡುದುದೇ ಉಂಟಾದ್ರೆ। ನಿನ್ನ ಕತ್ತುನ ಕಳಸ ನೊಟಾರ್ಸ್ನ ನಗ್ಗಿ! ನೀನು ಧರಣಿ ಮ್ಯಾಲೆ ಬಿದ್ದಿ ಒದ್ದಾಡಬೇಕು। ನನ್ನ ಕಳ್ಳೆ ಕೊಟಾರವನ್ನು ಬಿಟ್ಟೋಯ್ತಿಯೋ। ನಿನ್ಗೆ ಮೆರುಕೋಲ್ಲೇಟ್ ಬೇಕೋ? ಅಂತವುನೆ ಜುಂಜಯ್ಯ।

ನೋಡಿ ನಮ್ಮ ಶಿವನಾ।

ಜುಂಜಪ್ಪನ ಕೈಲಿ ನಾನು ಏಟುತಿಂದ್ಬುಟ್ರೆ ಅಗ್ಗಿದೇವಿ ಅರುಗಾಯ್ತಾಳೆ ಗಂಗಮ್ಮ ಮರೆಯಾಯ್ತಳೆ। ಮೇಲೋಕ್ದಲ್ಲಿ ಮಳೆ ತಪ್ಪೋಯ್ತದೆ ಕೆಳ್ಲೋಕದಲ್ಲಿ ಬೆಳೆ ತಪ್ಪೋಯ್ತಾದೆ। ಶಿವ ಅನ್ನೋರ್ಗೆ ಶಿವುನ ಗ್ಯಾನ ತಪ್ಪೋಯ್ತದೆ। ಹರ ಹರಾ ಅನ್ನೋರ್ಗೆ ಹರನ ಗ್ಯಾನ ತಪ್ಪೋಯ್ತದೆ। ಈಗ ನಾನೇನ್ ಮಾಡ್ಲಿ ಅಂತ ನಮ್ಮಪ್ಪಾಜಿ ಮಾದೇಶ್ವರ। ಜುಂಜಪ್ಪ ಎಡೆಗಡೆಗಾಗ್ಬುಂದ್ರೆ ನಮ್ಮ ಸ್ವಾಮಿ। ಬಲುಗಾಡೆ ಜುಂಜಪ್ಪ ಬಂದ್ರೆ ನಮ್ಮಪ್ಪಾಜಿ। ಎಡುಗಡೆಗಾಣೆ ಓಡೋರಂತೆ

ಕಳ್ಳೆ ಕಣ್ಣ ಸುತ್ತ ಅವುರೋಡಾಡ್ರಾ ಅವ್ರೆ ಮಾದೇವ
ನೋಡಿ ನಮ್ಮ ಶಿವನಾ।

ಜುಂಜಯ್ಯ ಒದೀಕೊಂಡು ಓಡಾಡುಸ್ತಿದ್ರೆ। ನಮ್ಮ ಸ್ವಾಮಿ ಹೋಗುವಂತಾ ದಾರೀಲಿ। ಬಾಡ್ ಬಾಕುನ ಮುಳ್ಳೆಲ್ಲ ದಾರಿ ಬುಟ್ ಬುಡವಂತೆ। ಇವ್ನೋಗೋ ದಾರೀಲಿ ಹೆಜ್ಜೆಗೊಂದು ಪಾವ್ ರಕ್ತ ಕಿತ್ಕೊಳದಂತೆ। ಮುನು ಮುಂದೆ ಮಾದೇವ್ನಂತೆ। ಹಿನು ಹಿಂದೆ ಇವ್ನು ಓಡ್ಬತ್ತಿದ್ನಂತೆ। ನಮ್ಮಪ್ಪಾಜಿ ಮಾದೇವ ಮುತ್ತಿನ ಜೋಳ್ಗುಗ್ಗೆ ಬಲದ ಹಸ್ತವನ್ನೂರಿ ಮಂಕುನ ಬೂದಿಯನ್ನು ಕೈಲಿಡುಕೊಂಡು। ಜುಂಜೇಗೌಡ ನಿನ್ಗೆ ಒಡಕೆ ಕಾಲೇ ಬರ್ದೆ ಇರ್ಲಿ ಅಂತ। ಓಂ ನಮ ಶಿವಾಯ ಅಂತ್ಹೇಳಿ ಜುಂಜೇಗೌಡನ ಮೇಲೆ। ಮಾಯದ ದೂಳ್ತ ಉರುಬ್ಬುಟ್ರು। ಜುಂಜೇಗೌಡರಿಗೆ ಹೊಡೆಯಕೆ ಕೈಬಾರುಬಾರ್ದು! ತಿಂದೊಟ್ಟೆ ಕರುಗ್ಬಾರ್ದು! ಎತ್ತುದ್ ತೋಳ್ ಎತ್ತಾದಂಗೆಯೇ। ಬುಟ್ ಕಣ್ಣು ಬುಟ್ಟಂಗಯೆ। ಮರವನ್ನು ತರ್ದು ಯಾವ್ರೀತಿಲಿ ನೆಟ್ಟು ನಿಲ್ಲುಸ್ತಾರೆ। ಆ ರೀತಿ ಮಟಮಟ್ನೆ ಕಣ್ ಬಿಡ್ತಾ ನಿಂತ್ಕೊಳೋಹಂಗೆ।

ದ್ಯಾನ ತಪ್ಪುಸ್ಬುಟ್ನಲ್ಲಪ್ಪ ಮಾದೇವ
ನೋಡಿ ನಮ್ಮ ಶಿವನಾ।

ನಮ್ಮ ಸ್ವಾಮಿಯವರು ನೆಗಾಡ್ತಾ ಇದ್ದಾರೆ। ಜುಂಜಪ್ಪಂಗೆ ಮೆರ ತಕಂಡು ಹೊಡಿಯಪ್ಪ ಅಂತ್ಹೇಳಿದ್ದಾರೆ। ಜುಂಜಪ್ಪಂಗೆ ಮಾತಾಡಕೇ ಬಾಯಿಲ್ಲವಂತೆ। ನಮ್ಮಪ್ಪಾಜಿ ಮಾದೇವ ಕಂಕುಳಗಿರುಕಿರುವಂತ ಜೋಳುಗ್ಗ। ತಗ್ದು ಕಳ್ಳೇರಾಸಿ ಮುಂದೆ ಮಡೀಕೊಂಡು। ಹಣೆಗತ್ತಿಸ್ಕೊಳ್ತೀನಿ ಅಂತೇಳಿದ್ರೂ ಒಂದು ಕಳ್ಳೆ ಚೂರ್ ಬಾರ್ದು।

ಹಂಗೆ ಮುನ್ನೂರು ಮೂವತ್ತು ಪಲ್ಲ ಕಳ್ಳೇನೂ। ಮೂರ್‍ಡ್ಡಿ ಮಾಡ್ಕೊಂಡು ಮುತ್ತಿನ ಜೋಳ್ಗು ತುಂಬಿಕೊಂಡ್ರು। ಭೂಮಿ ತೂಕದ ಜೋಳ್ಗೆಯ ನಮ್ಮ ಕಂಕಳಲ್ಲಿ ನ್ಯಾತಾಕೊಂಡು। ನರಿ ಕಲ್ಲು ಕಂಬುದ ಮಾಲ್ಗೆ। ಅಳ್ಳಾಡ್ತಾ ಅಳ್ಳಾಡ್ತಾ ಹೊತ್ಕೊಂಡೋಯ್ತಿದ್ರೆ।

> ಮಟಮಟನೆ ನೋಡ್ತಾ ನಿಂತವುನೆ ಜುಂಜಯ್ಯ
> ನೋಡಿ ನಮ್ಮ ಶಿವನಾ।
> ಇವನ್ಗೆ ಜ್ಞಾನೋದಯ ಕೊಡ್ತರಲ್ಲಪ್ಪ ಮಾದೇವ
> ನೋಡಿ ನಮ್ಮ ಶಿವನಾ॥

ಭಿಕ್ಷ ಎನ್ನುವಂತ ಶಬ್ದ ಕೇಳಿಬತ್ತು। ಬಲದ ಮೊಗ್ಗಲಾಗಿ ಎದ್ದು ನೋಡಿದ್ರು। ಸೂರ್ಯ ಉದಯವಾಗ್ತಾ ಅವ್ನೆ। ಓ ಯಾರಪ್ಪಾ ಕಾವಿಬಟ್ಟೆ ಜಂಗಮರು ಬಂದವರೆ। ಹಿಂದೆ ನಮ್ಮ ತಾತಂದಿರು ಮುತ್ತಾತಂದಿರು ಹೇಳ್ತಾ ಇದ್ರು। ಹತ್ತು ಜನಕ್ಕೆ ಊಟ ಹಾಕಿ ಸೈ ಅನ್ನಿಸುವುದಕ್ಕಿಂತ। ಒಬ್ಬ ಅಯ್ಯನಿಗೆ ಇಕ್ಬಡಪ್ಪಾ ಮಗನೇ ಅಂತೇಳಿ ಹೇಳ್ತಾಯಿದ್ರು। ಅದೇ ರೀತಿಯಾಗಿ ಒಬ್ಬ ಕಾವಿಬಟ್ಟೆ ಜಂಗಮರು ಬಂದವರೆ। ಆದರೆ ನಾನಿನ್ನೂ ಕೂಡ ಮೇಟಿ ದೇವರ ಪೂಜೆ ಮಾಡ್ಲಿಲ್ಲ। ಕಳದಲ್ಲಿ ಹೆಚ್ಚು ಮಾಡ್ಲಿಲ್ಲ। ದೇವ ಕೊಳಗಕ್ಕೆ ದಿನಸಿ ಮಡಗಲಿಲ್ವಲ್ಲ। ಆದರೆ ನಮ್ಮ ಮನೆದೇವರು ಕುಲದೇವರಿಗೆ। ಕೊಳಗದಲ್ಲಿ ಅಳೆದು ಮಡಗಬೇಕು। ಈ ಜಂಗಮಯ್ಯನಿಗೆ ಏನು ನಾನು ಕೊಳಗದಲ್ಲಿ ಅಳೆಯುವಂಗಿಲ್ಲ। ನನ್ನ ಕೈ ಸಿಕ್ಕಿದಷ್ಟು ದಾನ ಮಾಡ್ಬುಡವಾ ಅಂತ್ಹೇಳಿ। ಅಟ್ಟೆ ಗುಡ್ಡಿಂದ ಇಳಿದು ಬಂದು ಜುಂಜಪ್ಪ। ರಾಶಿ ಮುಂದೆ ನಿಂತ್ಕಂಡು ಕೊಳಗ ಇಟ್ಟುಕೊಂಡು ರಾಶಿಗೆ ನಮಸ್ಕಾರ ಮಾಡಿ। ಹಸಿ ಕಡ್ಲೆ ತುಂಬಿಕೊಂಡು ಬಂದು।

> ಅವರು ದಾನ ಕೊಡುತವರೇ ಜುಂಜಯ್ಯ
> ನೋಡಿ ನಮ್ಮ ಸಿವನಾ॥
> ಮಲೆಯಲಿ ಮಾದೇವ ಬರುವ ಚೆಂದಾವಾ।
> ನೋಡಿ ನಮ್ಮ ಸಿವನಾ॥

ಅವಾಗಲೀಗ ದುಡವುಳ್ಳ ಜುಂಜಪ್ಪನವರು। ದಾನವನ್ನೇ ಕೊಟ್ಬುಟ್ಟು। ಆವಾಗಲೀಗ ನಮಸ್ಕಾರವನ್ನ ಮಾಡಿದ್ರು। ಜುಂಜಪ್ಪ ಕೊಟ್ಟಂತ ದಾನ ತಕ್ಕಂಡ್ರು ಮಾದಪ್ಪ। ಅಯ್ಯಾ ಜುಂಜಯ್ಯ ನಿನ್ನ ಭಕ್ತಿ ದುಡಕ್ಕೆ ನಾನು ಮೆಚ್ಚಿಕ್ಕೊಂಡೆ। ಒಂದು ಮಾತು ಕೇಳ್ತೀನಿ ನಡೆಸಿ ಕೊಟ್ಟಿಯಪ್ಪ ಅಂದ್ರು। ಏನೂ ಇಲ್ಲ ಜುಂಜಪ್ಪ। ನಿನಗೆ ಭಾಗ್ಯ ಕೊಟ್ಟಂಥ ಶಿವನು। ಏಳು ಮಲೆ ಕೈಲಾಸದಲ್ಲಿ। ಬಿಸ್ಲಲ್ಲಿ ಒಣಗ್ತಾ ಇದ್ದಾನೆ। ಮಳೆಯಲ್ಲಿ ನೆನಿತಾ ಇದ್ದಾನೆ ಕಣಪ್ಪಾ। ಅವನಿಗೆ ಒಂದು ಅಂಕಣ ಕಲ್ಲಿನ ದೇವಸ್ಥಾನ ಕಟ್ಟಿಸಿ। ಮುಟ್ಟಿ ಪೂಜೆ ಮಾಡುವುದಕ್ಕೆ ಪೂಜಾರಿ ನೇಮಿಸಿಬಿಟ್ರೆ।

ನಿಮಗೆ ಮತ್ತಷ್ಟು ಭಾಗ್ಯ ಕೊಡುವನು ಮಾದೇವಾ
ನೋಡಿ ನಮ್ಮ ಸಿವನಾ॥

ಏನಪ್ಪಾ ಜಂಗಮ ದೇವರೇ। ಎಂಥ ಮಾತು ಕೇಳ್ತಾ ಇದ್ದೀರಿ। ತಿಳಿದು ಉಣ್ಣೊವುದಕ್ಕೆ ಬಂದಂಥ ಜಂಗಮ। ಹಿರಿ ಹೆಂಡ್ತಿ ಕೇಳಿದಪ್ಪಂದವಾಯ್ತು। ಇವರು ಬಿಕ್ಷಕ್ಕೆ ಬಂದ್ರು ಅಂತ್ಹೇಳಿ। ಬೆಳಗಿನ ಜಾವ ಮೊಟ್ಟಮೊದಲು। ದಾನಕೊಟ್ಟಿದ್ದೀನಿ। ನೀವು ಬಂದಾಗ ನೋಡಪ್ಪಾ। ಅಂಥ ಕಾಡ್ನಲ್ಲಿರುವಂಥ ಹಟಮುನಿ ಜಟಮುನಿ। ಕಾಳಮುಕ ಸನ್ಯಾಸಿಗಳಿಗೆ। ಒಂದಂಕಣದ ದೇವಸ್ಥಾನ ಕಟ್ಟಿಸ್ಕೊಂಡು ಬತ್ತೀನಂದ್ರು। ನನ್ನೆಂಡ್ತಿ ಮಲ್ಲಾಜಮ್ಮ ಕತ್ನಲ್ಲಿರುವಂಥಾ। ಮಾಂಗಲ್ಯವೂ ಎಟಕುವುದಿಲ್ಲ।

ನೀನು ಕಡೆದೋಗಯ್ಯ ಕಾಡು ಪರಕೇಸಿs
ನೋಡಿ ನಮ್ಮ ಸಿವನಾ॥

ಮಲೆಗಳ ನೋಡಯ್ಯ
ಮಾದೇವ ಹೊನ್ನೆ ಗಿಡಗಳ ನೋಡಯ್ಯ
ಮಲೆಯಲ್ಲಿರುವ ಮಾದೇವ ನಿನ್ನ ಐಬೋಗ ನೋಡಯ್ಯ।

ಆವಾಗಲೀಗ ಮಾಯ್ಕಾರಾ ಗಂಡ ಮಾದಪ್ಪ। ಇವನು ಒಳ್ಳೆ ಮಾತ್ನಲ್ಲಿ ಕೇಳುವುದಿಲ್ಲ ಜುಂಜಪ್ಪ। ಇವನಿಗೇನಾದ್ರೂ ಸೂಕ್ಷ್ಮವನ್ನು ಕೊಟ್ಟು। ಕಷ್ಟಕೊಟ್ಟು ನಾನು ಒಕ್ಕಲು ಮಾಡಿಕೊಳ್ಳಬೇಕು ಅಂತೇಳಿ। ಮಾದೇವ ಕೊಟಾರವನ್ನು ಬಿಟ್ಟು।

ಅವರು ಆಲಂಬಾಡಿ ಬೀದಿ ಒಳಗೆ ಬರುತವರೇ।
ಮಾದೇವಾ।

ನೋಡಿ ನಮ್ಮ ಸಿವನಾ॥

ಮಲೆಯನ ಮುನಿ ಹುಲಿ ಮೇಲೆ ಮೆರಿವಾ ಚಂದವಾ
ನೋಡಿ ನಮ್ಮ ಸಿವನಾ॥

ಈಗ ಏಳುಂಡಿ ದನುಗಳ್ಗೂ ನಾಗೇರು ಬಂದು ಸತ್ತೋದೊ। ಏಳೇರತ್ತು ನೆಟ್ಕಣ್ಣು ನೆಟ್ಟಂಗೆ ಬಿಟ್ಕಣ್ಣು ಬಿಟ್ಟಂಗೆ। ಅವು ಸತ್ತೋಗಿ ಮನಗವೆ। ಏಳುಂಡಿ ಕರುಗಳ್ಗೆ ಕೆಂಬಳ್ಳೆ ರೋಗ ಬಂದು ಅವು ಸತ್ತೋಗವೆ। ಆಯ್ಯೋ ಭಗವಂತನೆ। ಮನೇಲಿ ಇದ್ದಬಿದ್ದ ರಾಗಿಯೆಲ್ಲಾ ಕಗ್ಲು ಮುಗ್ಗಾಲದ್ವಂತೆ। ಮನೇಲೊಂದು ಕಾಳು ರಾಗಿ ಇಲ್ಲ! ದನಾಕರ ಕುರಿಗಳಿಲ್ಲದ ಸಂಕ್ಟ। ನಾನೇನು ಮಾಡ್ಬೇಕು ಅಂತ್ಹೇಳಿ ಜುಂಜಯ್ಯ ಮಲಗ್ದ ಮಗ್ಲಾಗಿ।

ಅವ್ನ ಚಿಂತೆಯ ಮಾಡ್ತವ್ನೆ ಜುಂಜಯ್ಯ
ನೋಡಿ ನಮ್ಮ ಸಿವನಾ॥

ಜ್ವಾಳದು ಗುಡೀನೆಲ್ಲಾ ಮರುಳು ಮಾಡವ್ರೆ। ಬತ್ತದ ಗುಳೀನೆಲ್ಲಾ ಹೊಟ್ಟು ಮಾಡವರೆ। ಹೆಡ್ತಿ ಆಲಮ್ಮ ಎರಡು ನೇತ್ರುದಲ್ಲಿ ಜಲಾ ಸುರುಸ್ಕೊಂಡು। "ಸ್ವಾಮಿ

ಈಗ್ಲಾದ್ರೂ ಮಾದೇವನಿಗೆ ಒಕ್ಕಲಾಗಿ" ಅಂದ್ಲಂತೆ। "ಎಲಾ ಮಡ್ಡಿ ನಿನುಗ್ಯಾರ್ ಇಷ್ಟು ದೂರತನ ಕೊಟ್ಟೋರು। ನಿಸ್ಪಕ್ಷಕ್ಕ ನೀನು ಬಿದ್ದಿರು" ಅಂತೇಳಿದ್ರಂತೆ। ಪೆಟ್ಟಿಯೊಳಗೆ ಬಂದು ಹಣ ನೋಡಿದ್ರಂತೆ। ಹಣವಾದ ಹಣುವೆಲ್ಲಾ ಇದ್ದುಲಾಗಿದ್ದಂತೆ। ಅಯ್ಯೋ ಆದಿ ನಾರಾಯಣ ಸ್ವಾಮಿ। ಮುದುಕುತೊರೆ ಮಲ್ಲಪ್ಪ । ನಮಗೀಗಾ ಕಷ್ಟ ಬಂದ್ಬುಡ್ತಾ। ನೀವಾರೂ ನಮ್ಮ ಕಷ್ಟವನ್ನು ನೋಡಬಾರದ್ಯಾಕಪ್ಪಾ ಅಂತೇಳಿ

ಮನೆ ದೇವರ ಸೊರಣೆ ಮಾಡ್ತಾವ್ನೆ ಜುಂಜಯ್ಯ। ನೋಡಿ ನಮ್ಮ ಶಿವನಾ। ಜುಂಜಪ್ಪನವರು ಊಟ ಮಾಡಿ ಪಾರವಾಯ್ತಂತೆ। ದುಕ್ಕ ಸೋಕವನ್ನು ಮಾಡ್ತಾ ಮನುಗಿದ್ರೆ। ಅಲಮ್ಮ ಒಬ್ಬೇ ಕಾಡಿಗೋಗಿ। ಓಣೇ ಮ್ಯಾಗಲ ಸೊಪ್ಪು ಬೇಲಿ ಮ್ಯಾಗಲ ಸೊಪ್ಪ ತಂದು। ಸೊಪ್ಪನ್ನು ಚಂದಾಗಿ ಬೇಯಿಸ್ಬಿಟ್ಟು। ಉಪ್ಪಿಲ್ಲದ ಸಪ್ಪೆ ಸೊಪ್ಪ ಗಂಡಂಗೆ ಕೊಡಕೆ ಬತ್ತಿದ್ರೆ। ನನ್ನೇಳ್ಮಲೆ ಹೆತ್ತಯ್ಯ ಈ ಸೂಪ್ಪು ಇವರಿಗೆ ತಿನ್ನಿಸ್ಬೇಡ್ದು ಅಂತೇಳಿ।

ಅಲ್ಲಿಬ್ಬರು ನಂಟರು ಕೂತವರೆ ಮಾದೇವ
ನೋಡಿ ನಮ್ಮ ಶಿವನಾ।

ಬಂದವರ ಕೈಗೆ ಆಲಮ್ಮ। ಓಡಾಡ್ಕಂದು ಕೊಟ್ಟಿದ್ದಾರೆ। ಕೈಕಾಲು ಮೊಕ ತೊಳ್ಕೊಂಡು ಬಂದು ನೆಂಟ್ರು। ಮಂದಲಿಗೆ ಮೇಲೆ ಕುಂತ್ರಂತೆ। ಆಲಮ್ಮ ಮಡ್ಡಿ ಊಟಕ್ಕರಿತಿದ್ರೆ ಜುಂಜಯ್ಯನವರ ಕಣ್ಣ್ಗೆ ಸೊಪ್ಪು ಮಾಡವರೆ। ನೆಂಟರು ಕಣ್ಣ್ಗೆ ಹಾಲು ಅನ್ನ ಜೇನುಪಾಲು ಪಂಚಾಮೃತ ಮಾಡವ್ರೆ। ನೆಂಟ್ರು ಊಟವನ್ನು ಮಾಡಿಕೊಂಡು ಪ್ರೀತಿಯಿಂದ ವೋಯ್ತೀವಿ ಅಂದಿದ್ದಾರೆ। ಜುಂಜಪ್ಪನವರ ಮನೆಯನ್ನು ಬಿಟ್ಟು।

ಅವರವರ ಸ್ಥಳಕ್ಕೆ ವೊಯ್ತಾರೆ ಗುರುದೇವ
ನೋಡಿ ನಮ್ಮ ಶಿವನಾ॥[೮]

ಆವಾಗಲೀಗ ಬೆಳಗಾಗಾತ್ತಲೇ ಎದ್ದು। ಎಲ್ಲಾ ಕೈಕಾಲು ಮುಖ ತೊಳಕೊಂಡ್ರು। ಆವಾಗಲೀಗ ಏಳು ಗಂಟೆ ಟೈಮಾಯ್ತು। ಮಲ್ಲಾಜಮ್ಮ ಒಂದ್ಕಡೆಯಿಂದ ಎಲ್ಲಾ। ಕರಬುಟ್ಟು ಹಾಲು ಕರ್‍ಕೊಂಡ್ವಂದ್ರು। ಜಲಗೊಂಬಿನ ಬಸವಣ್ಣನ ಮುಟ್ಲಿಲ್ಲ। ಆದಾಗ ಜುಂಜಪ್ಪನವರು ಏಳು ಜನ ಜೀತಗಾರರ ಕರೆದ್ರು। ಅಯ್ಯಾ ಆಳುಗಳೇ। ಈವೊತ್ತು ಈ ಜಲಗೊಂಬಿನ ಬಸವಣ್ಣನಿಗೆ। ಕುತ್ತಿಗೆಗೆ ಒಂದು ಗಂಟೆಯನ್ನು ಕಟ್ಟಿ। ಒಂದು ದಂಡಿವಾದ ಕಟ್ಟುಡಿ। ನಾನೂ ಕೂಡ ಬರ್‍ತೀನಿ। ನಿಮಗೆ ಏನೂ ತೊಂದ್ರೆ ಕೊಡೋದಿಲ್ಲ ಅಂತೇಳಿ। ಜೀತಗಾರರಿಗೆ ತಾಕೀತು ಮಾಡಿಕೊಂಡು। ಆವಾಗ ಜುಂಜಪ್ಪನವರು। ಹತ್ತು ಗಂಟೆಗೆ ಸರಿಯಾಗಿ। ಏಳುಂಡಿ ದನ ಬಿಟ್ಕುಂಡು। ಬೀಸುಮಚ್ಚ ಹೆಗಲ ಮೇಲಿಟ್ಕಂಡು

ಅವರು ಮೂಡಲ ಗಿರಿಗೆ ಬರುತವರೇ ಜಂಗಮಯ್ಯ
॥ನೋಡಿ ನಮ್ಮ ಶಿವನಾ॥[೯]

ಬಸವಣ್ಣನಿಗೆ ಮುಳ್ಳಿನ ದಾರಿ ಬಿಟ್ಟುಬುಡ್ತು। ಹೋಗಿ ಬಂಡೆ ಮೇಲಿ ನಿಂತ್ಕೊಂಡು। ಹಾಲುಮಜ್ಜನ ಮಾಡ್ತಾವನೆ ಬಸವಣ್ಣ। ಆವಾಗ ಜುಂಜಪ್ಪ। ಮೇಲ್ಕೆದ್ದು ಕಣ್ಣು ಕಾಲ್ನೆಲ್ಲ ವಸೀಕೊಂಡು ಕಣ್ಣುಬಿಟ್ಟು ನೋಡ್ತವನೆ ಬಸವಣ್ಣ ಇಲ್ಲ। ಎಲ್ಲಯ್ಯ ಆಳುಗಳೇ ಅಂದ್ರು। ಎಲ್ಲಿ ಮಾಯವಾಯ್ತೊ ಕಾಣೆ ಗುರುವೇ ಅಂದ್ರು। ಜುಂಜಪ್ಪ ಒಂದು ಕಡೆಯಿಂದ ಕಡ್ಕಂಡೊಯ್ತಾ ಇದ್ದಾರೆ ಬಲಗಡೆ ಯಾವಾಗ ಮಚ್ಚು ತಗಲಿ ಬಿತ್ತೋ ಲಿಂಗಕ್ಕೆ। ಲಿಂಗ ಮ್ಯಾಲಕ್ಕ ಹಾರಿಬಿತ್ತು। ಆ ಲಿಂಗದಲ್ಲಿ ರಕುತವಾಗಿರ್ತಕ್ಕಂತಾದ್ದು ಚಿಲ್ಲನೆ ಮೇಲಕ್ಕೆ ಹಾರಿಬಿಡ್ತು।

ಆಹಾ ಜುಂಜಪ್ಪ ಜಂಜಯ್ಯ ನಿಲ್ಲಿಸು ಅಂದ್ರು। ಜುಂಜಪ್ಪ ಅಲ್ಲೆ ಮಚ್ಚು ಬಿಟ್ಟು ಬಿಟ್ಟ। ಯಾರಪ್ಪ ಮುನಿಗಳೇ ಯಾರಪ್ಪಾ ಜಂಗಮರೇ।

ನಿಮ್ಮ ಹೆಸರೇಳಿ ಅಂತವರೆ ಜುಂಜಯ್ಯ।
ನೋಡಿ ನಮ್ಮ ಶಿವನಾ॥

ಉತ್ತರ ದೇಶದ ಮಾದೇವ ಅಂತ್ಹೇಳಿ ಕರೀತಾ ಯಿದ್ದಾರೆ। ಈ ಏಳು ಮಲೆಗೆ ಬಂದ ಮೇಲೆ। ನನ್ನ ಏಳು ಮಲೆ ಮಾದೇಶ್ವರ ಅಂತ ಕೂಗುತವರೆ। ನಿನಗೆ ಮತ್ತಷ್ಟು ಐಸ್ವರ್ಯ ಕೊಡುತೀನಿ। ನಾನು ಹೇಳಿದುದಕ್ಕೆ ದೇವಸ್ಥಾನ ಕಟ್ಟಿಸು ಅಂದರು।

ಆಹಾ..... ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಒಲಿವಾ ಚಂದಾವಾ।
ನೋಡಿ ನಮ್ಮ ಸಿವನಾ।

ಸಿವ ಸಿವ ಬಿಳಿಹಸ ಸೀಗೆ ಸಿರಿಗಂಧ

ಸಿವ ಸಿವಾ ಸಾಯಂಕಾಲ ಊಟ ಮಾಡಿಕೊಂಡು। ಗೌಡ ಮಂಚದ ಮೇಲೆ ಮೂರ್ತ ಮಾಡಿ। ಮಲಗಿರುವಂಥ ಕಾಲದಲ್ಲಿ। ಹನ್ನೆರಡು ಗಂಟೆ ಜಾವದಲ್ಲಿ। ನಮ್ಮಪ್ಪಾಜಿ ಏಳು ಮಲೆ ಎತ್ತಯ್ಯ

ಅವರು ಸಪ್ನದಲ್ಲಿ ಹೇಳುತವರೆ ಮಾದೇವಾ।
ಆಹಾ..... ನೋಡಿ ನಮ್ಮ ಸಿವನಾ।

ಏನಪ್ಪಾ ಜುಂಜೇಗೌಡ ನಾನೊಬ್ಬ ಮಾಯಕಾರ ಜಂಗಮಯ್ಯ ಕಣ್ರಪ್ಪಾ। ನಿನಗೆ ಇನ್ನಷ್ಟು ಐಸ್ವರ್ಯ ಕೊಡಬಲ್ಲೆ। ಹನ್ನೆರಡು ಅಂಕಣ ಗುಡಿ ಕಟ್ಟಿಸಬೇಕು ನಿನ್ನ ಕೈಯಾರೆ ಎಂದ। ಆವಾಗಲೀಗ ಪೂಜೆಗೆ ನೇಮಕ ಮಾಡಬೇಕು ಅಂತ। ಅವರು ನಗುನಾಡುತವರೆ। ಮಾದೇವಾ।

ಆಹಾ...... ನೋಡಿ ನಮ್ಮ ಸಿವನಾ।

ಹಾಗೆಲ್ಲಾ ಭಯಪಡಬೇಡ ಜುಂಜಯ್ಯ। ನಿನಗೆ ಮತ್ತಷ್ಟು ಐಶ್ವರ್ಯ ಕೊಡ್ತೀನಿ ನಾನು ಹೇಳುದಕ್ಕೆ ದೇವಸ್ಥಾನ ಕಟ್ಟಿಸು ಅಂದ್ರು। ಆಗಲೀ ಗುರುವೇ ಅಂದ।

ನಮ್ಮಪ್ಪಾಜಿ ಏಳ್ಮಲೆ ಹೆತ್ತಯ್ಯ ಮಾಯ್ಗೊಂದ

ಅವರು ಹೊನ್ನು ಹುತ್ತಕ್ಕೆ ಬತ್ತರಲ್ಲಪ್ಪ ಮಾದೇವ
ನೋಡಿ ನಮ್ಮ ಸಿವನಾ।

ಒಬ್ರ ಮೊಕಾ ಒಬ್ರು ನೋಡ್ದಂಗಾಗಿದ್ರಲ್ಲ ಅಣ್ತಮ್ದೀರು। ಅವರೆಲ್ಲ ಬಂದು ಸಂತೋಷ್ದಲ್ಲಿ ಮನೆ ಸೇರಪ್ರೆ

"ಏಳ್ಮಂದಿ ಗಂಡ್ಮಕ್ಳು ಸಿಲೇಟು ಪುಸ್ತಕ್ಕಳ್ಳ ಹಿಡ್ಕಂಡು। ಅಮ್ಮಾ ಹಸುವಾಯ್ತದೆ" ಅಂತ್ಹೇಳಿ-

ಹೆತ್ತಮ್ನ ಬಳುಗೋಡಿ ಬತ್ತವ್ರೆ ಮಕ್ಕಳು।
ನೋಡಿ ನಮ್ಮ ಶಿವನಾ

ಮಕ್ಕ ತಮ್ಮೆತ್ತಮ್ಮನ ಬಳುಗೆ ಬಂದಾಗ ಸತ್ಯುವಂತೆಯಾದ ಆಲಮ್ಮ। ಇಷ್ಟು ಜಿನದವರೆಗೆ ನೀವು ಎಲ್ಲಿಗೋಗಿದ್ರಿ ಕಂದುಗಳ್ರಾ। ಅಂತ್ಹೇಳಿ ಏಳು ಮಕ್ಕಳನ್ನೂ ತಬ್ಬಿಕೊಂಡು-

ಅವಳು ದುಕ್ಕ ಮಾಡವಳೆ ಆಲಮ್ಮಾ।
ನೋಡಿ ನಮ್ಮ ಶಿವನಾ।

ಆಲಮ್ಮ ಮಕ್ಕಳ ತಲೆಯನ್ನು ಸವುರಿ। ಹಾಲು ಅನ್ನ ಜೇನು ಸಕ್ಕರೆಯನ್ನು ಊಟಕ್ಕೆ ಬಡುಸವ್ಳೆ ಏಳೇರೆತ್ತು ಗಕ್ಕನೆ ಮ್ಯಾಲಕ್ಕೆದ್ದೊ। ಏಳು ದೊಡ್ಡ ದನಕರಗಳೆಲ್ಲ ಧಡಕ್ನೆ ಮ್ಯಾಕೆದ್ದೊ। ಮುನ್ನೂರು ಮುವ್ವತ್ತು ಪಲ್ಲ ಕಳ್ಳೆ ಕಣದಲ್ಲದೆ। ಮನೇಲಿದ್ದಂತದ್ದೆಲ್ಲ ಮೊದ್ಲಿಂಗಿತ್ತೊ ಹಂಗೆ ಆಯ್ತಂತೆ। ಮೊದಲದ್ದಕ್ಕಿಂತ ಏದ್ರಷ್ಟು ಬಾಗ್ಯ ಬದೀಕೊಂಡ್ಪಂತ್ತಂತೆ।

ಆಮನ್ಗೆ ತುಂಬಿ ತುಳು ಕಾದ್ತ ಬಂತು ಮಾದೇವ।
ನೋಡಿ ನಮ್ಮ ಸಿವನಾ।

ಓಡೋಗಿದ್ದಂತ ಬೆಳ್ಗೊಂಬ ಓಡೋಡಿ ಮನೆಗೆ ಬತ್ತಂತೆ। ನೋಡ್ಬುಟ್ಟು ಡೊಳ್ಗೊಟ್ಟೆ ಜುಂಜಯ್ಯ-

ಆನಂದ ಪಡ್ತವ್ನೇ ಜುಂಜಯ್ಯ।
ನೋಡಿ ನಮ್ಮ ಶಿವನಾ॥[5]

ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ

ಆಲಂಬಾಡಿ ಜುಂಜೇಗೌಡ। ರೂಪಾಯಿ ಬೆಳ್ಳಿ ಪಾವಲಿ ತೆಗೆದು ಮೊಸಲು ತೊಳೆದು ನೆಲಿನ ಕಾಲಿಗೆ ಕಟ್ಟಿ। ಮನೆ ಮುಂಬಾಗಲಿಗೆ ಬಂದರಂತೆ। ಗುರು ಅರಿವಿಲ್ಲದ ಮಲೆಗೆ ಒಬ್ಬರಿಗೂ ಗೊತ್ತಿಲ್ಲದೆ ಹೊರಟೋಗಿದ್ರು। ಏಳು ಸಾವಿರ ಗೋವುಗಳು ಆಲಂಬಾಡಿ ನಡು ಬಾಗಿಲಲ್ಲಿ ಬಂದು ನಿಂತಿತ್ತು। ತನ್ನ ಮಗನಾದ ಬೀರಪ್ಪನವರು। ತಲೆ ಬಾಗಿ ನಿಂತಿದ್ದನಂತೆ। ಮಟಮಂಗಳವಾರದ ದಿವಶ। ಹನ್ನೆರಡು ಗಂಟೆ ಒಳಗೆ ಕೊಪ್ಪರಿಕೆ ದ್ರವ್ಯ ಎತ್ತುಕೊಂಡು। ಆಲಂಬಾಡಿ ಜುಂಜೇಗೌಡ ಏಳು ಬಾಯಿ ಹೊನ್ನುತ್ತಕ್ಕೆ ಕಡೆದು। ಬತ್ತವನಲ್ಲಾ। ಆಲಂಬಾಡಿ ಜುಂಜೇಗೌಡ

ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ।

ಆಲಂಬಾಡಿ ಜುಂಜೇಗೌಡನು ಏಳು ಕೊಪ್ಪರಿಕೆ ವೆಚ್ಚಮಾಡಿ। ಹನ್ನೆರಡು ಅಂಕಣ ದೇವಸ್ಥಾನ। ಎರಡು ಕೊಪ್ಪರಿಕೆ ಖರ್ಚು ಮಾಡಿ ಆಲಂಬಾಡಿ ಬಸವನಿಗೆ। ವೆಚ್ಚಮಾಡಿ। ಪೀಟದಕಲ್ಲು ಮಾಡಿಸಿದನಂತೆ। ಮಜ್ಜನದ ಕೊಳ ಮಾಡಿಸಿ। ಮೂರು ತಿಂಗಳ ಕಾಲ ಅಪ್ಪ ಮಗ ರಜ ಹೊಡದು। ಕಾಲ ಹರಣ ಮಾಡಿದರು ಮಾದೇಸ್ವರನ ಸನ್ನಿಧಿಯಲ್ಲಿ।

ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ।

ಆಲಂಬಾಡಿ ಜುಂಜೇಗೌಡನ ಅರಮನೆ ಒಳಗೆ। ಪ್ರತ್ಯಕ್ಷವಾಗಿ ಎದ್ದು ನಿಂತು। ತಕ್ಕಾ ಅಂದನಂತೆ। ಆಲಂಬಾಡಿ ಜುಂಜೇಗೌಡ। ಆಶ್ಚಿಸಿ ಹಿಂದುಗಡೆ ನೋಡಿದ್ರು। ಮಲೆ ಮಾದೇಸ್ವರ ಪ್ರತಿಕ್ಷೆಯಾಗಿ ಎದ್ದು ನಿಂತಿದ್ರು। ಮಹದೇವ ನಾನು ದನ್ಯನಾದೆ ಮಹಾ ಗುರುವೆ ನಾನು ನಿನ್ನ ಪಾದಕ್ಕೆ ಸೇರುವೆ ಅಂತೇಳಿ। ಆನಂದವಾಗಿ ದೀರ್ಘ ದಂಡ ನಮಸ್ಕಾರ ಮಾಡಿ ನಿಂತವನಲ್ಲಾ ಆಲಂಬಾಡಿ ಜುಂಜೇಗೌಡ

ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲ ಮುನಿಗೆ।

ಹಗಲು ರಾತ್ರಿ ನಾನು ನೆನೆದ ಕೂಡಲೆ ನಿನ್ನ ದರ್ಶನ ಇಲ್ಲದಿದ್ದರೆ। ನಾನು ಅರೆಗಳಿಗೆ ಜೀವಿಸಿ ಇರಲಾರೆ ಅಂದಾವನಲ್ಲ ಆಲಂಬಾಡಿ ಜುಂಜೇಗೌಡನು।

ಆಹಾ...... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ।

ನೀನು ನೆನದ ಕೂಡಲೇ ನನ್ನ ದರ್ಶನ ನಿನಗೆ ಬೇಕಾದರೆ। ನಿನ್ನ ಅರಮನೆ ಒಳಗೆ ನೀನು। ನೆನೆದ ಕೂಡಲೇ ಬಂದು। ನಾನು ದರ್ಶನ ಕೊಡಬಲ್ಲೆ। ನೀನು ಐಕ್ಯವಾದ ಮೇಲೆ ನಿನ್ನ ವಂಶೀಕರು ಅಡಿಗೆ ಮಾಡಿ ಕಾಯ್ದು ಕೂತಿದ್ದರೆ। ನಿತ್ಯ ಮದ್ಯಾಹ್ನ। ಹನ್ನೆರಡು ಗಂಟೆಗೆ ವರ್ಷಂಕೊಂದು ಸಾರಿ। ದೀವಳಿಗೆ ಹಬ್ಬದ ದಿವಸ। ನಿನ್ನ ಮನೆ ಹಗಲು ಬಿನ್ನಕೆ ಬರುತೀನಿ ಅಂದವರೆ ಮೂಡಲ ಮಲೆಯ ಮಾದೇವಾ।

ಆಹಾ..... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮುನಿಗೆ।[5]

ಆಗಲೀಗ ಗುಡಿಗೋಪುರವೆಲ್ಲಾ ಆಗಿ ಆಲಂಬಾಡಿ ಕಡೆ ತಿರುಗಿಸಿಕೊಂಡರಂತೆ। ಬಸವೇಶ್ವರರನ್ನು ಆ ಪರಮಾತ್ಮ ರಾತ್ರಿ ಕಾಲದಲ್ಲಿ ಗೇಯ್ದು ಬಿಟ್ಟು ಸಾಯಂಕಾಲಗಂಟ ಹೋದರೆ। ಪಸುಮ ರಾಜ್ಯಕ್ಕೆ ತಿರುಗಿಕೊಂಡು ನೋಡ್ತಾ ಇದ್ದನಂತೆ ಬಸವೇಶ್ವರನು। ಅಯ್ಯಯ್ಯೋ ಈ ಕಡೆ ತಿರುಗಿಸಿ ಬಿಟ್ರೆ। ಬಸವೇಶ್ವರನು ಈ ಕಡೆಯೇ ತಿರುಗಿ ಕೊಳ್ತಾನಲ್ಲಾ। ಏನಾಗಿರಬೇಕು ಎಂಬುದಾಗಿ ಮನಸಿನಲ್ಲಿ ಇಟ್ಟುಕೊಂಡರಂತೆ ಜುಂಜೇಗೌಡರು। ಆಗಲೀಗ ನೋಡಪ್ಪಾ ಕಂದ। ನಿನ್ನ ಮನೆಗೆ ಅರೆಗಣ್ಣು ಬಿಟ್ಟು ನೋಡ್ತೀನಿ। ನಾನು ಪಸುಮ ರಾಜ್ಯಕ್ಕೆ ಕಣ್ಣು ಬಿಟ್ಟು ನೋಡಬೇಕು। ಅದೇ ನನ್ನಾಸೆ। ಮಗ್ಗ ಮರಳ್ಳಿ ಹೆಗ್ಗಡದೇವನ ಕೋಟೆ ತಾಲ್ಲೂಕು। ಮೈಸೂರು ಮಲೆನಾಡು, ಅರಕೆರೆ, ಬನ್ನೂರು ಮಂಡ್ಯ ಮಾರ್ಗ। ಮಳವಳ್ಳಿ ಗ್ರಾಮ ಕೂಡಿದ ಕೊಳ್ಳೇಗಾಲದ ಬೀದಿ ಗುಂಡ್ಲುಪೇಟೆ ತಾಲ್ಲೂಕು। ಚಾಮರಾಜನಗರ ಗ್ರಾಮ। ನಂಜನಗೂಡು ಗ್ರಾಮ। ಇಂತಿಂತ ದೊಡ್ಡ ಗ್ರಾಮಗಳಿಂದ ಏಳೇಳು ಹದಿನಾಲ್ಕು ಕೋಟಿ ನರ ಮಾನವರು ಮುಂದಿನ ಬೆಳೆ ತಕ್ಕಂಡು। ಕಟ್ಟಿದ ಕಾಣಿಕೆ ತಕ್ಕಂಡು। ಕಟ್ಟಿದ ಮಿಸಲು ತಕ್ಕಂಡು ಕಾಸಿದ ತುಪ್ಪ ಮಿಸಲು ಬೆಣ್ಣೆ ಕಜ್ಜಾಯ ತುಪ್ಪ ಇಂತವುಗಳನ್ನು ತಕ್ಕಂಡು। ಮಹಾಸಿವರಾತ್ರಿ ದಿವಸ ನನಗೆ ವೆಚ್ಚಾಳದಿಂದ ಅಬಿಸೇಕಗಳನ್ನು ಮಾಡಿ। ಓಂ ನಮಃ ಸಿವಾಯ ಓಂ ನಮಃ ಸಿವಾಯ। ಎಂದು ಕೂಗುವರಯ್ಯಾ। ದೇವಾ।

ಸಾಂಬ ಸದಾಸಿವ ಸಾಂಬ ಸದಾಸಿವ
ಸಂಬೋ ಸಂಕರ ಮಾದೇವಾ
ಸಿವ ಸಂಕರ ಮಾದೇವಾ
ಲಿಂಗದ ಬಾಗ್ಯ ಕರುಣಿಸು ಗುರುವೆ
ಹುಲಿವಾಹನದ ಮಾದೇವಾ।
ಸಾಂಬ ಸದಾಸಿವ ಸಾಂಬ ಸದಾಸಿವ।
ಸಂಬೋ ಸಂಕರ ಮಾದೇವಾ।
ಸಿವಾನ ಶಂಕರ ಮಾದೇವ।
ಸಿವನೇ ಸಂಕರ ಮಾದೇವಾ।[6]

ಆಹಾ ನೋಡಿ ನಮ್ಮ ಸಿವನಾ
ಮಲೆಯೋ ಹುಲಿವಾಹನದಯ್ಯ ಬರುವ ಬಂದವಾ
ನೋಡಿ ನಮ್ಮ ಸಿವನಾ।

ಈವಾಗ ನನಗೆ ಆಲಂಬಾಡಿ ಜುಂಜೇಗೌಡ ಎಂದ ಗುಡಿ ಆಯಿತು। ಗೋಪುರ ಆಯಿತು। ಅವನ ಮನೆಯಿಂದಲೇ ಒಂದು ಹಾಲು ಮಜ್ಜನಕ್ಕೆ। ಅಲ್ಲಿಗೆ ಹಾಲು ಆರುವೆ

ಸೇವೆ ಅಂತ ಮಾಡ್ತಾರಲ್ಲ ದೀಪಾವಳಿ ತಿಂಗಳಲ್ಲಿ! ಆ ದೀಪಾವಳೀಲಿ ಹಾಲು ಅರವಿ ಸೇವೆ ಮಾಡಿಕೊಳ್ಳೋದಕ್ಕೆ! ಅವನ ಹಸೀನಲ್ಲೇ ನಾನು ಹಾಲು ತಕ್ಕೋ ಬೇಕಲ್ಲಾ! ಅನ್ನುಟ್ಟು ಈ ನಮ್ಮಪ್ಪಾಜಿ ಏಳು ಮಲೆ ಎತ್ತಯ್ಯನವರು ಆಲಂಬಾಡಿ ಬಸವನ ಗೇಯ್ತಾವನಲ್ಲಾ! ಜುಂಜೇಗೌಡ! ಆ ಬಸವನಿಗ ನೆಟ್ಟಗೆ ಗೇಯಿಸ್ಬಿಟ್ಟು! ರಾತ್ರಿ ಹೊತ್ತು ಬೆಳಕು ಹರಿಯದ್ರೊಳಗೆ! ಬಂದು ನೋಡೋದ್ರೊಳಗಾಗಿ! ಆ ಬಸವ ಅನ್ತಕ್ಕಂತಾದ್ದಾವೆ! ಈ ಕಡೆ ತಿರಿಕ್ಕೊಂಡಿರೋದಂತೆ! ಯಾವ ಕಡೆ ಆಲಂಬಾಡಿ ಕಡೆ ತಿರಿಕ್ಕೊಂಡಿರೋದಂತೆ! ಅವಾಗ ಇದೇ ಪ್ರಕಾರವಾಗಿ! ಎರಡು ಮೂರು ದಿನ ಗೇಯಿಸಿಬಿಟ್ಟು ನೋಡುವಂತ ಕಾಲದಲ್ಲಿ! ನಮ್ಮಪ್ಪಾಜಿಯವರು ಮತ್ತೋಗಿ! ಆಲಂಬಾಡಿ ಜುಂಜೇಗೌಡನಿಗೆ ಏನು ಹೇಳ್ತಾರೆ! ಅಯ್ಯಾ ಜುಂಜೇಗೌಡ!-ನಿನ್ನ ಮನೆಯ ಮ್ಯಾಲೆ! ನನಗೆ ಬಾಳ ಪ್ರೀತಿ ಆಯಿತು! ನಿನ್ನ ಗಂಡ ಹೆಂಡತಿ ಮನಸ್ಸಿನೊಳಗೆ ಒಂದಾಗ್ಬಿಟ್ಟಿದ್ದೀರಾ ಆದ್ದರಿಂದ ನಿಮ್ಮಲ್ಲಿ ಇನ್ನೊಂದು ಮಾತು ಕೇಳ್ತೀನಿ ಕಣಯ್ಯ! ಏನು ಅಂತ ಹೇಳಿದ್ರೆ! ಕೇಳು ಜುಂಜೇಗೌಡ! ನೀನು ಗುಡಿ ಕಟ್ಟಿಸಿ ಕೊಡೋದು ಹೆಚ್ಚಲ್ಲ! ನನಗೆ ಗೋಪುರ ಗಯ್ಸಿದ್ದು ಹೆಚ್ಚಲ್ಲ! ನಿನ್ನ ಮನೆಯಿಂದ ತುಂಬಿದರವಿ ಹಾಲು ಅಂತಕ್ಕದ್ದು! ದೀಪಾವಳಿ ತಿಂಗಳಿನಲ್ಲಿ! ನನಗೆ ಹಾಲು ಅರಿವಿ ಸೇವೆ ಆಗ್ಬೇಕು ಕಣಯ್ಯಾ! ಅದಕ್ಕಾಗಿ ಹಾಲು ಯಾವ ಥರವಾಗಿ ಬರಬೇಕು! ಅಂತೇಳಿದ್ರೆ ಆ ಹಸೂಗೆ ಹೋರಿ ಕೂಡ್ಲಕ್ಕಿಲ್ಲ! ಅದು ಅಂಟಾಗಕ್ಕಿಲ್ಲ! ಮುಟ್ಟಾಗಕ್ಕಿಲ್ಲ! ಅದು ಎಂಜಲಾಗಕ್ಕಿಲ್ಲ! ಆ ಹಸಿನ ಹಾಲು ಕರೆದು! ನನಗೆ ಆ ಹಾಲಲ್ಲಿ ಸೇವೆ ಆಗಬೇಕು ಅಂದ್ರು ಯಾವ ತರವಾಗಿ ಸ್ವಾಮಿ! ಅಂಗಾದ್ರೆ ಏಳ್ತೀನಿ ಕೇಳಪ್ಪಾ! ಈವಾಗ ನೀನು ಗೇಯ್ಸಿದ್ದೆಲ್ಲಾ ಆಲಂಬಾಡಿ ಮ್ಯಾಲೆ! ಆ ನನ್ನ ಮಂಟಪದ ಮೇಲಿನ ಬಸವಾ! ನಿನ್ನಟ್ಟಿ ಒಳಗೆ ಹಸುಗಳು ಏನಾದರೂ ಹೋರಿಗೆ ಬಂದದ್ದೇ ಉಂಟಾದ್ರೆ! ಆ ಹಸೀನ ತಕ್ಕಂಬಂದು! ನನ್ನ ಮುಕ ತೋರ್ಸಿದ್ದೇ ಉಂಟಾದೇ! ಅದೇ ನಿನಗೆ ನೀಡ್ತದೇ ಕಣಯ್ಯಾ ಫಲ! ಆವಾಗ ಕರ ಆಯ್ತದೆ! ಆವಾಗ ಅದು ಎಂಜಲಿಲ್ಲ! ಅಂಟಿಲ್ಲ ಮುಟ್ಟಿಲ್ಲ! ಅಂತದ್ದು ನನಗೆ ಬರಬೇಕು ಅಂದ್ರಂತೆ! ಆಗಲಿ ಸ್ವಾಮಿ ಅಂತ ಒಪ್ಪಿಕೊಂಡು ಬಿಟ್ರು! ಆವಾಗ ನಮ್ಮಪ್ಪಾಜಿಯವರು! ಇನ್ನು ನಾನು ಗುಡಿ ಕಟ್ಟಿಸಿಕೊಂಡದ್ದಾಯ್ತು! ಅವರಿಂದಲೇ ಆಲರ್ವಿ ಸೇವೆಗೆ ಹಾಲು ಇಕ್ಕಂಡಿದ್ದಾಯ್ತು! ಅಂತೇಳಿ ನಮ್ಮಪ್ಪಾಜಿಯವರು ಹನ್ನೆರಡು ಅಂಕಣ ಕಲ್ಲು ಗುಡಿಯೊಳಗೆ! ಅವರು ಒರಗವ್ರಲ್ಲಪ್ಪಾ ಮಾದೇವಾ!

ಆಹಾ..... ನೋಡಿ ನಮ್ಮ ಸಿವನಾ
ಮಲೆಯ ಬೆಳ್ಳಿ ವಾಹನ ಬರುವ ಚಂದವಾ
ನೋಡಿ ನಮ್ಮ ಸಿವನಾ[?]

ಏಳು ಮಲೆ ಕೈಲಾಸಕ್ಕೆ ಬಂದು ಜುಂಜಪ್ಪನವರು। ಎತ್ತಿನ ಹೇರಿನ ಮೇಲಿದ್ದಂಥ ಸಾಮಗ್ರಿಗಳೆಲ್ಲ ಇಳುಕ್ಬುಟ್ರು। ಅಲ್ಲಿರುವಂತ ಬ್ಯಾಡರ ಗಂಪಣದವರೆಲ್ಲಾ ಕರ್ದ್ರು। ಆವಾಗಲೀಗ ಒಬ್ಬ ವೋಟುಮಯ್ಯ ಕರಕೊಂಡು ಬಂದಿದ್ರು। ಪೂಜೆ ಮಾಡುವುದಕ್ಕೆ। ಅಷ್ಟು ಹೊತ್ತಿಗೆ ಮಾದಪ್ಪ। ಅಪ್ಪಾ ಜುಂಜಪ್ಪಾ। ನನ್ನ ವೋಟುಮಯ್ಯ ಪೂಜೆ ಮಾಡುವುದಿರಲಿ। ಮೊದಲಾಗಿ ನನ್ನ ಗುರು ಮಠದಲ್ಲಿರುವಂಥ। ಶಾಂತಮಲ್ಲಿಕಾರ್ಜುನ ಸ್ವಾಮಿ। ಆ ಗುರುಗಳ ಕರಿಯಪ್ಪಾ। ಮೊದಲು ಗುರುಗಳು ಬಂದು। ಆಶೀರ್ವಾದ ಮಾಡಿ ನನಗೆ ಮಜ್ಜನ ಮಾಡಬೇಕು। ಅನಂತರವಾಗಿ ನೀನು ಪೂಜಾರಿ ಮಾಡಬೇಕು। ಅಲ್ಲಿತನಕನೂವೆ ನಿನ್ನ ಪೂಜಾರಿ ಮಾಡುವ ಹಾಗಿಲ್ಲ। ನಮ್ಮ ಗುರುಗಳ ಕರಿ ಅಂದ್ರು। ಆವಾಗ ಜುಂಜಪ್ಪ ವಾದ್ಯ ತಮಟೆ ತಕ್ಕಂಡು। ಆವಾಗ ಛತ್ರಿ ಚಾಮರ ಇಡ್ಕಂಡು ಅವರು ಸಾಲೂರು ಮಠಕೆ ಬರುತಾವರೇ ಜುಂಜಯ್ಯ।

ನೋಡಿ ನಮ್ಮ ಶಿವನಾ।

ಸಾಲೂರು ಮಠದಲ್ಲಿ ಬಂದು ಗುರುಗಳಿಗೆ ಈಬೂತಿ ಈಳ್ಯ ಮಡಗಿ। ಗುರುಗಳ ಪಾದಕ್ಕೆ ದೀರ್ಘ ದಂಡವಾಗಿ ನಮಸ್ಕಾರ ಮಾಡಿದ್ರು। ಜುಂಜಪ್ಪನವರೇ। ಇದೇ ರೀತಿಯಾಗಿ। ಸೂರ್ಯ ಚಂದ್ರಾದಿಗಳು ಇರುವವರೆಗೂವೆ, ಸಾಲೂರು ಮಠದ ಗುರುಗಳು ಬಂದು। ಆ ಮಾದೇಶ್ವರನ ಲಿಂಗಕ್ಕೆ ಮಜ್ಜನ ಮಾಡಬೇಕು। ಅನಂತರದಲ್ಲಿ ನಿಮ್ಮ ಬ್ಯಾಡರಗಂಪಣದವರೆಲ್ಲ। ಪೂಜಾರಿಗಳು ಪೂಜೆ ಮಾಡಬೇಕ್ಕು। ಇದನ್ನು ಅನುಗಾಲ ತಪ್ಪಿಸಬಾರದು। ಅಂತ್ಹೇಳಿ ಆವಾಗ ಗುರುಗಳು। ಆವಾಗಲೀಗ ಛತ್ರಿ ಚಾಮರ ಈಸ್ಕೊಂಡು ಕಾಲು ನಡಿಗೆಯೊಳಗೆ।

ಅವರು ಮಹದೇವ್ನ ಮಠಕ್ಕೆ ಬರುತವರೇ ಗುರುಗಳು।

॥ನೋಡಿ ನಮ್ಮ ಸಿವನಾ॥

ಆವಾಗಲೀಗ ಗುರು ಮಠಕ್ಕೆ ಬಂದು। ಮಾದೇಸ್ವರ ದೇವಸ್ಥಾನಕ್ಕೆ ಬಂದು ಗುರುಗಳು। ಆವಾಗ ನಿಂತ್ಕಂಡು ಜುಂಜಪ್ಪ ತಂದಿರುವಂತ ಸಾಮಗ್ರಿಯನ್ನು। ತುಂಬಿ ಅಭಿಷೇಕ ಮಾಡ್ತಾಯಿದ್ದಾರೆ। ಆವಾಗ ಗುರುಗಳು ಸಾಲೂರು ಮಠಕ್ಕೆ ಹೊರಟೋದ್ರು। ಜುಂಜಪ್ಪ ಆಲಂಬಾಡಿಗೋದ।

ಏಳುಮಲೆ ಕೈಲಾಸಕ್ಕೆ ಬಂದ ಜುಂಜಪ್ಪ। ಬೆಳಗಿನ ಜಾವ ಒಂಬತ್ತು ಗಂಟೆ ಒಳಗೆ। ಒಂದು ದೀರ್ಘ ದಂಡ ನಮಸ್ಕಾರ ಮಾಡಿ। ಮಹದೇವಾ ಮಾಯ್ಕಾರ ಗಂಡ। ನನಗೆ ಒಂದು ವರ ಕೊಡಪ್ಪ। ಮಾತ್ನಾಡಪ್ಪಾ ಅಂದ್ರು। ಮಾದೇಶ್ವರರು ಪ್ರತ್ಯಕ್ಷವಾಗಿ। ಏನಪ್ಪ ಜುಂಜಯ್ಯಾ ಅಂದ್ರು। ನನ್ನ ಮನೆಗೆ ಬಂದು ನೀವು ಭಿನ್ನ ಮಾಡಿಕೊಂಡು ಬರಬೇಕು। ಗುರುವೇ ನಿನ್ನೊಕ್ಕಲಾಗ್ತೀನಿ ಅಂದ್ರು। ನಿನ್ನ ಮನೆಗೆ ಭಿನ್ನಕ್ಕೆ ಬತ್ತೀನಿ ನಾನು ಕೇಳಿದಂತೆ ಅಡಿಗೆ ಮಾಡಿಯಪ್ಪ ಅಂದ್ರು। ಏನಡಿಗೆ ಮಾಡಬೇಕಪ್ಪಾ।

ನಿಮ್ಮ ಮನೇಲಿ ಊಟ ಮಾಡಬೇಕಾದ್ರೆ। ಹಸಿ ಅವರೆ ಏಸುರಾಗಬೇಕು। ಹಸಿ ರಾಗಿ ಮುದ್ದೆಯಾಗಬೇಕು। ಹಸಿ ಮಣ್ಣ ಬಟ್ಟಲಾಗಬೇಕು। ಕುಂಬಾರಗೇರಿಪ್ರೊಳಗೋಗಿ। ಬೆಂಕಿ ಮೇಲೆ ಮಡಗಿ ಬೇಯಿಸಬಾರದು। ಅಂತ ಹಸೀ ಬಟ್ಟಲಾಗಬೇಕು। ಆ ಮಣ್ಣ ಬಟ್ಲಿಗೆ ಹಸೀ ಅವರೇ ಹಸರು ಹಸೀ ರಾಗಿ ಮುದ್ದೆ ಇಕ್ಕಿ। ನನ್ನ ಶಿವಪೂಜೆಗೆ ಹೂವನ್ನು ತಂದು ಮಡಿಗಿ ಭಸ್ಮ ಮಡುಗ್ಬುಟ್ಟು। ನೀವು ಮಲಗುವಂತ ಜಾಗದಲ್ಲಿ ಮಲೀಕೊಳ್ಳಿ। ನಾನು ಬಂದು ಭಿನ್ನ ಮಾಡ್ಕಂಡು ಬರ್ತೀನಿ ಅಂದ್ರು। ಯಾವ ಟೈಮಿಗೆ ಬರ್ತೀಯಾ ಗುರುವೇ।

ನಿಮಗೆ ಗೊತ್ತಾಗಬೇಕಾದ್ರೆ। ಮನೇ ಕಡೇ ಬಾಗ್ಲಲ್ಲಿ ಗಂಟೆ ಕಟ್ಬುಡಿ। ಒಳಗಡೆ ನಾವು ಎಡೆ ಬಡುಸುವ ಜಾಗದಲ್ಲಿ ಒಂದು ಚಿನ್ನದ ಗಂಟೆ ಕಟ್ಟಿಸಿ। ನಾನು ಬಂದು ಬಿನ್ನ ಮಾಡುವಾಗ ಚಿನ್ನದ ಗಂಟೆ ನಾದ ಮಾಡ್ತೀನಿ। ಯಾರೂ ಎದ್ದು ಬರಬೇಡಿ। ಕಂಚಿನ ಗಂಟೇಲಿ ನಾದ ಮಾಡಿ ಹೋಗುವಾಗ ನಿನ್ನ ಮಕ್ಕಳು ಮರೀಗೆಲ್ಲಾ ಇಕ್ಕಿ ಊಟ ಮಾಡಪ್ಪಾ ಅಂದ್ರು।

ಹಸೀ ಅವರೇ ಹೊಸ ರಾಗಿ ಮುದ್ದೆ ಮಾಡಿದ್ರು। ಮಣ್ಣು ಬಟ್ಟಲು ಮಾಡಿಕೊಂಡು ಬಂದು। ನಡು ಮನೆಯೊಳಗೆ ಮಡಗಿ ಬಿಟ್ಟು। ಕೈ ಮುಗಿದು ಬುಟ್ಟು।

ಅವರು ನಿದ್ರೆ ಮಾಡಿ ಮಲಗವರೆ ಮಲ್ಲಾಜಮ್ಮಾ
ನೋಡಿ ನಮ್ಮ ಸಿವನಾ।

ಯಾವಾಗ ನಿದ್ದೆ ಮಾಡಿ ಮಲಕೊಂಡ್ರೋ। ಹನ್ನೆರಡು ಗಂಟೆ ರಾತ್ರಿಯಾಯ್ತು। ಕಲ್ಲನೀರು ಕರಗುವ ಹೊತ್ತು ಅಂದರೆ। ಹಕ್ಕಿ ಗಲಗಿರಬಾರದು। ಪಕ್ಷಿಗಲಗಿರಬಾರದು। ಹರಿಯುವಂತ ಗಂಗಮ್ಮ। ಅರೆ ಗಳಿಗೆ ನಿಂತು ಹೋಗ್ತಾಳೆ। ಆ ಟೇಮಿನಲ್ಲಿ ಮಾದಪ್ಪ। ಮುತ್ತಿನ ಜೋಳಿಗೆ ಮುಂಗೈಲಿಡ್ಕೊಂಡ್ರು। ಕಂಚಿನ ಕಂಸಾಳೆ ಹಿಡಕೊಂಡು। ಧರೆ ಗಾತ್ರ ದಂಡ ಕೋಲು ಹಿಡಕೊಂಡು। ಕೊರಳು ತುಂಬ ರುದ್ರಾಕ್ಷಿ ಉಕ್ಕುವ ಕುಲಾವಿ ಧರಿಸ್ಕಂಡು। ಹಿಂದಲ ಪಾದಕ್ಕೆ ಇನ್ನೂರು ಜಂಗು। ಮುಂದಲ ಪಾದಕ್ಕೆ ಮುನ್ನೂರು ಜಂಗು। ಅಷ್ಟಪಾದಕ್ಕೆ ಗೆಜ್ಜೆ।

ಮಾದೇವ ಆಲಂಬಾಡಿಗೆ ಬರತವರೇ ಮಹದೇವಾ।
ನೋಡಿ ನಮ್ಮ ಸಿವನಾ।

ಚಿನ್ನದ ಗಂಟೇಲಿ ನಾದ ಮಾಡ್ಬುಟ್ಟು ಭಿನ್ನಕ್ಕೆ ಕೂತ್ಕಂಡ್ರು। ಮಾದಪ್ಪ ಭಿನ್ನ ಮಾಡಿಕೊಂಡು। ಆಲಂಬಾಡಿ ಹದಿನಾರು ಸೀಮೆ ಹಾಲು ಸಾಗರವಾಗಿ ಬಾಳು ಅಂತೇಳ್ಬುಟ್ಟು। ಜುಂಜಪ್ಪನಿಗೆ ಆಶೀರ್ವಾದ ಮಾಡುಬುಟ್ಟು ಮಾದಪ್ಪ। ಕಡೇ ಬಾಗಿಲಲ್ಲಿ ಬಂದು ಕಂಚಿನ ಗಂಟೇಲಿ ನಾದ ಮಾಡ್ಬುಟ್ಟು।

ಅವರು ಧೀರಾ ಹೊರಟವರೆ ಮಾದೇವಾ।

॥ನೋಡಿ ನಮ್ಮ ಶಿವನಾ॥

ಮಾದಪ್ಪ ಏಳು ಮಾಲೆಯಲ್ಲಿ ಏಕವಾಗಿ ಒರಗಿದ್ದಾರೆ.

## ಟಿಪ್ಪಣಿಗಳು

೧. ಜುಂಜೇಗೌಡನ ಸಾಲಿಗೆ, ಕಂಸಾಳೆ ಸಾಹಿತ್ಯ-೨, ಮರಿಗಾಳು ಮಾದಪ್ಪ ಮತ್ತು ಪಂಚ-ಲಿಂಗಪ್ಪನವರು ಹಾಡಿದುದನ್ನು ಪ್ರಮುಖವಾಗಿಟ್ಟುಕೊಂಡು ೧,೨,೩,೪,೫,೬,೮,೯ ಕಂಸಾಳೆ ಸಂಪ್ರದಾಯ ತೆಗೆದುಕೊಂಡು ಪರಿಷ್ಕಾರ ಮಾಡಲಾಗಿದೆ.

೨. ಕಂಸಾಳೆ ಸಾಹಿತ್ಯ ೪ : ಜುಂಜೇಗೌಡನ ಹೆಂಡತಿ ಲಿಂಗಮ್ಮ

೩. ಕಂಸಾಳೆ ಸಾಹಿತ್ಯ ೯ : ಜುಂಜೇಗೌಡನ ಹೆಂಡತಿ ಮಲ್ಲಾಜಮ್ಮ

೪. ಕಂಸಾಳೆ ಸಾಹಿತ್ಯ ೧ : ಆಲಮ್ಮ

೫. ಕಂಸಾಳೆ ಸಾಹಿತ್ಯ ೫ : ಕೊಟ್ಟಿಲ್ಲ

೬. ಕಂಸಾಳೆ ಸಾಹಿತ್ಯ ೩ : ಕೊಟ್ಟಿಲ್ಲ

೭. ೩ನೇ ಕಂಸಾಳೆ ಸಾಹಿತ್ಯದಲ್ಲಿ ಜುಂಜೇಗೌಡನ ಆಳುಗಳು ಹಸು ಹಾಲು ಕರೆವಾಗ ರಕ್ತ ಬೀಳುತ್ತದೆ. ಜುಂಜೇಗೌಡನ ಹಿರೇ ಸೊಸೆ ಕಂಚಿನ ಬಟ್ಟಲು ತೆಗೆದು ಕಾಮಜೇನು ಕರೆಯೋಕ್ಕೆ ಬರುವಾಗ ಹಾಲು ಬರುವುದರ ಬದಲು ರಕ್ತ ಬರುತ್ತದೆ, ಕಂಸಾಳೆ ಸಾಹಿತ್ಯ ೨ ರಲ್ಲಿ.

೮. ಕಂಸಾಳೆ ಸಂಪ್ರದಾಯ ೫ ರಲ್ಲಿ ಆಲಂಬಾಡಿ ಜುಂಜೇಗೌಡನ ಮಗನನ್ನು ಮಾದೇಶ್ವರರು ಒಂದು ಅಂಕಣ ಗುಡಿ ಕಟ್ಟಿಸಿಕೊಟ್ಟರೆ ಸಕಲ ಭಾಗ್ಯ ಕೊಡುವೆ ಎನ್ನುತ್ತಾರೆ. ಆಗ ಆತ ಆಲಂಬಾಡಿಗೆ ಬರುತ್ತಾನೆ. ಕಂಸಾಳೆ ಸಂಪ್ರದಾಯ ೫ರಲ್ಲಿ ಬ್ಯಾಡರ ಗಂಪಣ್ಣನ ಮಗ ಬ್ಯಾಡರ ಕನ್ನಯ್ಯನನ್ನು ಹಿಡಿದು ತಮ್ಮಡಿತನ ಮಾಡಿಕೊಳ್ಳಬೇಕೆಂದು ದೃಷ್ಟಿ ಇಡುತ್ತಾನೆ.

೯. ಕಂಸಾಳೆ ೮ : ಮರಿಜುಂಜೇಗೌಡ ಜುಂಜೇಗೌಡನ ತಮ್ಮ.

## ೮. ಶ್ರವಣನ ಸಾಲು

ಮಲೆಯ ಕಡಗಣ್ಣು ಬರುವ ಚಂದವಾ
ನೋಡಿ ನಮ್ಮ ಶಿವನಾ।

ಹರ ಹರಾ ಶಿವ ಶಿವಾ। ದೇವಾನು ದೇವ್ತೆಗಳ್ಳೆಲ್ಲ ಕೈಯಾಳಾಗಿಟ್ಕೊಂಡು। ಶ್ರವಣದೊರೆ ದರಬಾರ ಮಾಡ್ತಿದ್ವಾನೆ। ದೇವಾನು ದೇವತೆಗಳೆಲ್ಲಾ। ಶ್ರವಣ ದೊರೆಯ ಓಂಸೆ ಬಂದಾನವನ್ನು ತಡಿನಾರ್ರ। ಗೋಳೆಂದು ದುಕ್ಕವನ್ನ ಮಾಡ್ತಿದ್ದಾರೆ। ಪರಮೇಶ್ವರ ಏನಂತೇ ವರಾ ಕೊಟ್ಟಿದ್ವಾನಲ್ಲ ಶ್ರವಣದೊರೆ ನನ್ನನ್ನ ಸೆರೆ ಇಟ್ಕೊಂಡು। ಈ ರೀತಿ ದರಬಾರು ಮಾಡ್ತಿದ್ವಾನೆ। ಪರಮಾತ್ಮ ನೀನ್ಯಾವತ್ತು ಬಂದು ಸೆರ ಬುಡುಸ್ತೀಯಪ್ಪಾ। ಅನ್ನುಟ್ಟು। ದೇವಾನು ದೇವತೆಗಳೆಲ್ಲಾ। ಅವರು ಕಣ್ಣಲ್ಲಿ ನೀರು ಕೆಡಗವರೆ। ನೋಡಿ ನಮ್ಮ ಶಿವನಾ।

ಏಳ್ಪಾಯಿ ಹೊನ್ನುತ್ತದಲ್ಲಿ ಮನುಗಿದ್ರಲ್ಲಾ ಮಾದೇವಾ। ಹುತ್ತದೊಳಗಿಂದ ಅಂತು ನೋಡಿದ್ರಂತೆ ಬಂಕಾಪುರ ಶ್ರವಣನ ಪಟ್ಟಣದಲ್ಲಿ। ಸರಮುನ್ನೂರು ಕೋಟಿ ದೇವಮಾನ್ನವನ್ನು। ಒಂದ್ವೇಳೆ ಹೋಗಿ ನೋಡ್ಕಂಬರ್ಬೇಕು ಅಂತೇಳಿ। ಈಟಿಗೆ ಬಂದವರಲ್ಲಪ್ಪಾ ಮಾದೇವಾ

॥ ನೋಡಿ ನಮ್ಮ ಶಿವನಾ ॥[೮]

ಕೋಲು ಮಂಡೆ ಜಂಗಮರು ಕ್ವಾರಣ್ಯಕೆ ದಯಮಾಡವರೇ।
ಆಹಾ ಮಹದೇವಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।
ಕ್ವಾರಣ್ಣಾಗಳ ನೀಡಮ್ಮಾ ಕೋಡುಗಲ್ಲು ಮುನಿಗೆ।

ಸಿವಾ ಸಿವಾ ಆಗ ಉತ್ತರ ದೇಸದ ಪುಟ್ಟ ಮರಿದೇವರು ಉತ್ತರಾಜಮ್ಮನ ಪುತ್ರ। ಮಾತಿಗೆ ಮರಿದೇವರು। ನೀತಿಗೆ ನಿಂಗಪ್ಪ। ದುಡುಕಿಗೆ ದುಂಡುಳ್ಳ ಮಾದೇಸ್ವರ। ಬೂದಿ ಮುಚ್ಚಿದ ಕೆಂಡ। ಭೂಲೋಕದಲ್ಲಿ ಉದ್ಭವಿಸಿ ಬಂದಂತ। ಕೆಂಡಗಣ್ಣು ಮಲೆ ಮಾದಪ್ಪನವರು। ಆಲಂಬಾಡಿ ಜುಂಜೇಗೌಡನ ಹತ್ತಿರ। ಕೆಚ್ಚು ಮುರಿದು ಒಕ್ಕಲು ಪಡೆದು। ಹನ್ನೆರಡು ಅಂಕಣ ದೇವಾಲಯ ಪಡೆದಿದ್ದರಲ್ಲ। ಹನ್ನೆರಡು ಅಂಕಣ

ದೇವಾಲಯದಲ್ಲಿ। ಸಿವ ಸಿವಾ ಮಲೆ ಮಾದಪ್ಪನವರು ಸರಣರಾದ ಬೇಡರ ಕನ್ನಯ್ಯನ್ನ ಕರೆದಾವನೇ। ನನ್ನ ಮೂಡಲ ಮಲೆಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲು ಮುನಿಗೆ।
ಕೋಲು ಮಂಡೆಯ ಜಂಗಮದೇವರು ಕ್ವಾರಣ್ಯಕೆ ದಯ ಮಾಡವರೇ।
ಆಹಾ ಕ್ವಾರಣ್ಯ ನೀಡಮ್ಮ ಮಾದೇವಾ ಲಿಂಗನಿಗೆ॥

ಸಿವಾ ಸಿವಾ ಆದ ನಮ್ಮಪ್ಪಾಜಿ। ಮಲೆ ಮಾದಪ್ಪನವರು ಸಿಸ್ಯನಾದ ಬೇಡರ ಕನ್ನಪ್ಪನನ್ನು ಕರೆದು। ಮಾದೇವ ಅವರು ಬುದ್ಧಿಯ ಮಾತ ಹೇಳಾವರೆ। ನನ್ನ ಮೂಡಲ ಮಲೆಯ ಮಾದೇವಾ॥

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಕೋಲು ಮಂಡೆ ಜಂಗಮ ದೇವರು ಕ್ವಾರಣಕೆ ದಯ ಮಾಡವರೇ।
ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಮಾದೇಸ್ವರ ಸಿಸ್ಯನಾದ ಬೇಡರ ಕನ್ನಪ್ಪನಿಗೆ ಬುದ್ಧಿ ಹೇಳಿದಂತೆ। ಸಿವ ಸಿವಾ ಕೇಳು. ಕೇಳಪ್ಪಾ ಬೇಡರ ಕನ್ನಯ್ಯನವರೇ। ಬೂಲೋಕದಲ್ಲಿ ಬಂಕಾಪುರಿ ಶ್ರವಣ ಮಹಾರಾಜ। ನರ ಮಾನವನು ಹರಿಯನ್ನು ಕುರಿತು। ಹನ್ನೆರಡು ವರುಸ ಅಖಂಡ ತ್ಯಾಗವನ್ನು ಮಾಡಿ। ತಪೋ ಬಲವನ್ನು ಮೆಚ್ಚಿಸಿ। ತ್ರಿಮೂರ್ತಿಗಳಲ್ಲಿ ಮರಣವಿಲ್ಲದಂತ ವರವನ್ನು ಪಡೆದು। ಸಿವ ಸಿವಾ ಸರ ಮುನ್ನೂರ ಮೂವತ್ತಮೂರು ಕೋಟಿ ದೇವತೆಗಳನ್ನು। ಸೆರೆ ಹಿಡಿದು ತನ್ನ ಮದದಿಂದ ಆಳಿಕೆ ಆಳ್ತಾ ಇದ್ದಾನೆ। ಪರಮಾತ್ಮ ಆಕಾಶವೇಣಿ ಬೂದೇವಿಯನ್ನ ಸೆರೆ ಹಿಡಿದಿದ್ದಾನೆ। ಬಂಕಾಪುರಿ ಶ್ರವಣನ ಅರಮನೆ ಒಳಗಡೆ। ಆ ಸೂರ್ಯದೇವನನ್ನು ನಿಲುಗನ್ನಡಿ ಮಾಡಿಕೊಂಡಿದ್ದಾನೆ। ಚಂದ್ರ ಅರಮನೆಗೆ ಬೆಳಗಾಗವನೆ। ವಾಸುದೇವರು ಸಕೆ ಬೀಸ್ತಿದಾನೆ। ದೇವತೆಗಳಿಗೆ ಮೂಗ್ಗೆ ಕವಡೆ ಕಟ್ಟಿ। ರಜ ಒಡಿಸಿಕೊಂಡು ಸಿವ ಸಿವಾ। ನೀರು ಹೊರಸಿಕೊಂತಿದ್ದನಂತೆ। ದೇವತೆಗಳನ್ನೆಲ್ಲಾ ಸೆರೆ ಹಿಡಕೊಂಡು। ಹಲ್ಲು ಕಡಿದು ತನ್ನ ಮನದಲ್ಲಿ। ಮೂರು ಲೋಕದಲ್ಲೂ ನನ್ನ ಸರಿಸಮಾನ ಇನ್ನು ಯಾರು ಇದ್ದಾರೆ ಅಂತೇಳಿ। ಈ ಬೂಲೋಕದಲ್ಲಿ ಉಟ್ಟಿದಂತ ಮಾನವನು। ಶ್ರವಣ ಮಹಾರಾಜ ಹಲ್ಲು ಕಡಿದು। ಬಂಕಾಪುರಿ ಪಟ್ಟಣದಲ್ಲಿ ವೆಚ್ಚಾಳ ದೇವತೆಗಳನ್ನೆಲ್ಲಾ ಸೆರೆ ಹಿಡಿದು। ಬಂದಾನದಲ್ಲಿ ಆಳಿಕೆ ಆಳುತ್ತಿದ್ದ ರಾಜಕವೊಳಗೆ। ಬಂಕಾಪುರ ಶ್ರವಣನಿಗೆ। ಬೆಂಕಿಲಿ ಬೆಂದ್ರೆ ಸಾವಿಲ್ಲ। ಗುಂಡಲ್ಲಿ ಒಡೆದರೆ ಸಾವಿಲ್ಲ। ಕತ್ತಿಲಿ ಕಡಿದರೆ ಸಾವಿಲ್ಲ। ಯಾವ ತರವಾದ ವಾಲೆಬಾಗ್ಯ ಬರದೀರಿ। ಅಂತ ಕೇಳ್ತಾನೆ ಗುರುವೇ। ನನಗೆ ಗೊತ್ತಿಲ್ಲ ಒಡೆಯನೆ। ನಮ್ಮ ಪರಮೇಶ್ವರನ ಕೇಳಿದ್ರೆ ಗೊತ್ತಾಯ್ತದೆ। ಅನ್ನುಟ್ಟು ಆಯ್ಯೋ ಬ್ರಹ್ಮದೇವರು ಹೇಳಿದ್ರಲ್ಲೋ ದೀರ ಮಾದಯ್ಯನಿಗೇ।

ಆಹಾ ನೋಡಿ ನಮ್ಮ ಶಿವನಾ!'

ಆಗ ನಮ್ಮಪ್ಪಾಜಿ ಮಲೆ ಮಾದಪ್ಪನವರು ಏಕಾಂಗಿ ವಸ್ತು! ಏಳು ಮಲೆ ಲಿಂಗಪ್ಪ ಉತ್ತರಾಜಮ್ಮನ ಪುತ್ರ ಮಲೆ ಮಾದೇವ ಆ ಬೇಡರ ಕನ್ನಪ್ಪನಿಗೆ ಬೋದನೆ ಹೇಳ್ತಾ ಇದ್ದಾರೆ! ನಾನು ಬಂಕಾಪುರಿ ಪಟ್ಟಣಕ್ಕೆ ಓಗಿ! ಬರ್‍ತೀನಿ ಕಣೋ ಬೇಡರ ಕನ್ನಪ್ಪನವರೇ! ಬಂಕಾಪುರಿ ಶ್ರವಣ ಮಹಾರಾಜನ ಪಟ್ಟಣಕ್ಕೆ ಓಗಿ! ಬರುವ ತನಕ ನನ್ನ ಎಪ್ಪತ್ತೇಳು ಮಲೆಯಲ್ಲಿ ಎಲ್ಲೆ ಕಟ್ಟನ್ನು! ಗ್ಯಾನವಾಗಿ ನೋಡಿಕೊಂಡಿರುತೀಯಾ! ಆನೆ ಮಲೆ ಜೇನು ಮಲೆ ಗುತ್ತಮಲೆ! ಗುಲಗಂಜಿ ಮಲೆ! ನಾಗಮಲೆ ನಡುಮಲೆ! ರುದ್ರಾಕ್ಷಿ ಭದ್ರಾಕ್ಷಿ ಮಲೆ! ಕೊಕ್ಕಮಲೆ ಕೂಡಗಲ್ಲು ಕೋಡಗಲ್ಲು ಮಲೆ! ಮದ್ದ ಮಲೆ ಮಂಜು ಗುಂಜು ಗುರಗಂಜ ಮಲೆ! ಎಪ್ಪತ್ತೇಳು ಮಲೆ ಎಲ್ಲೆ ಕಟ್ಟನ್ನು ಗ್ಯಾನವಾಗಿ ನೋಡಿಕೊಂಡಿರಬೇಕು! ನಾನು ಹೊರಟು ಹೋದ ಮ್ಯಾಲೆ! ಅಜ್ಜೀಪುರ ಮಾರಟಳ್ಳಿ ಸಜ್ಜಲಟ್ಟಿ ಖಾನಿ! ಎಳಂದೂರ ಬೀದಿ, ದ್ಯಾವರಳ್ಳಿ ಮಾರ್ಗ! ಕಾನಕಾನಳ್ಳಿಯಿಂದ ಮಳಗಾಳಿನಿಂದ! ಕೋಟಿ ಗಣಂಗಳು ಬರ್‍ತಾರೆ! ಸಪ್ಪಟ್ ನಡ್ ರಾತ್ರಿ ಕಲ್ಲು ನೀರು ಕರಗೋ ಹೊತ್ತಿನಲ್ಲಿ! ಆ ವೇಳ್ಯದ ಹೊತ್ತಿನಲ್ಲಿ! ಎಪ್ಪತ್ತೇಳು ಮಲೆಗೆ ಬರುವಾಗ! ಅವರಿಗೆ ಸಾಕಾರವಾಗಿರಬೇಕು! ಹರಿದು ಬರುವಂತ ದಾರಿ ಒಳಗೆ! ಸಿವ ಸಿವಾ ಸರ್ಪನ ಬಾಯಿ ಕಟ್ಟಬೇಕು! ಮೆರೆದು ಬರುವಂತ ವ್ಯಾಗ್ರನ ಬಾಯಿ ಕಟ್ಟಬೇಕು! ಹುಚ್ಚಾನ ಬಾಯಿ ಹುಲಿ ಬಾಯಿ ಕಟ್ಟಬೇಕು! ಕದಿಯಕ್ಕ ಬರತಕ್ಕಂತ! ಕಳ್ಳನ ಗೋವುಗಲ್ಲು ಮಾಡಿ ನಿಲ್ಲಿಸಬೇಕು! ಹೆಣ್ಣೇಳು ಕೋಟಿ ಗಂಡೇಳು ಕೋಟಿ! ಮಾನವರು ಗುಂಪಿನಲ್ಲಿ ಸಿವ ಸಿವಾ! ಪತಿ ಮೊಕ ಸತಿ ನೋಡಿ! ಸತಿ ಮೊಕ ಪತಿ ನೋಡಿ! ಹುಸಿ ನಗೆ ನಗದು! ಪಿಸು ಮಾತಾಡಿ! ಇಬ್ಬರು ಮನಸು ಒಂದಾದಡೆ! ಇಬ್ಬರಿಗೆ ಮಧ್ಯೆ ಬಿದ್ದಿರತಕ್ಕಂಥ ಹೆಚ್ಚಿನ ಗಾತ್ರ ಕಲ್ಲನ್ನೇ! ಹೆಬ್ಬುಲಿ ಮಾಡಿ! ಇಬ್ಬರಿಗೂ ಒಂದು ಬಿಡಬೇಕು! ನಾನು ಬಂಕಾಪುರಿ ಪಟ್ಟಣಕ್ಕೆ ಹೊರಟು ಹೋದ ಮ್ಯಾಲೆ! ಕನ್ನಪ್ಪನವರೇ ಹನ್ನೆರಡು ಅಂಕಣ ದೇವಸ್ತಾನ! ಆಲಂಬಾಡಿ ಬಸವ ಪೀಟದ ಕಲ್ಲು! ಮಜ್ಜನದ ಕೊಳ ಅಂತರಗಂಗೆ! ಆದಿ ಸೇಸಣ್ಣ, ಸಾಲೂರು ಮಟ! ತಮ್ಮಡ ಗೇರಿ ಕಟ್ಟು ಕಲ್ಲು ಚಂಡಿ! ಬಸವಣ್ಣನವರ ಗುಡಿ! ಹಾಲು ಹಳ್ಳ ಕತ್ತಿಪವಾಡದ್ಕ-ಕೊಳ! ಆನೆ ತಲೆ ದಿಂಬು! ರಾಮಪ್ಪನ ಕೊಳ! ರಂಗಸ್ವಾಮಿ ಒಡ್ಡು! ತವಸರೆ ಬೆಟ್ಟ! ವೆಚ್ಚಾಳದಲ್ಲಿ ನೋಡಿಕೊಂಡು ಇರಬೇಕು ಕನ್ನಪ್ಪನವರೇ! ನಾನು ಓಗಿ ಬರುತೀನಿ ಅಂತೇಳಿ! ನಿಂತಾವನಲ್ಲೋ ಮೂಡಲು ಮಲೆಯ ಮಾದೇವಾ!

ಆಹಾ... ಕ್ವಾರಣ್ಣ ನೀಡಮ್ಮ ಮಾದೇವ ಲಿಂಗನಿಗೆ!!

ಆಗಬಹುದು ತಾತಯ್ಯನವರೆ ಓಗಿ ಬನ್ನಿ! ಬಂಕಾಪುರಿ ಶ್ರವಣ ಮಹಾರಾಜನ ಪಟ್ಟಣಕ್ಕೆ! ನಾನು ವೆಚ್ಚಾಳದಲ್ಲಿ ಎಪ್ಪತ್ತೇಳು ಮಲೆ ಎಲ್ಲೆ ಕಟ್ಟನ್ನೆಲ್ಲಾ! ಗ್ಯಾನವಾಗಿ

ನೋಡಿ ಕೊಂಡಿರುತೀನಿ। ಸಿವ ಸಿವಾ ಮಾದೇವ ಅಂತೇಳಿ। ಕಾಸಿನ ದೂಪ ಹಾಕಿ। ಕರವೆತ್ತಿ ಕೈ ಮುಗಿದು। ಎಪ್ಪತ್ತೇಳು ಮಲೆಗೆ ಬಂದವರಿಗೆ। ಅವರ ಬೆನ್ನ ಹಿಂಬಾಗದಲ್ಲಿ। ಎಳೇ ನಾಗರ ಮರಿಯಾಗಿ। ಸಾಕಾರವಾಗಿ ಬರುವೇನು। ಸಿವ ಸಿವಾ ಮಾದೇವನ ನೆನಪಿಲ್ಲದೆ। ಮನೆ ಬಿಟ್ಟತಾವಿಂದ। ಬೆಟ್ಟಗಂಟ ಬಂದರೆ। ಅವರ ಮನೆ ನಿರ್ಬಯಲು ಮಾಡುತೀನಿ। ಅಟ್ಟಿಗಂಟ ಕಳುಹದಿಲ್ಲ। ಕಲ್ಲುಮಲ್ಲಯ್ಯನ ಮದ್ಯ ದಾರಿ ಒಳಗೆ ಮಾಡು ಬುಡ್ತೀನಿ ತಾತಯ್ಯ। ನೀವು ಬಂಕಾಪುರಿಗೆ ಓಗಿ ಬರೋದು ಸರಿ। ಎಂದಾನಲ್ಲೋ ಬೇಡರಾ ಕನ್ನಯ್ಯ। ಗನ ಸರಣಾ।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಪರಮಾತ್ಮ ಆಗ ನಮ್ಮಪ್ಪಾಜಿ। ಮಲೆ ಮಾದಪ್ಪನವರು। ಬಂಕಾಪುರಿ ಶ್ರವಣ ಮಹಾರಾಜನ ಪಟ್ಟಣಕ್ಕೆ ಓಗಬೇಕಾದರೆ। ಉಡುಪುಗಳನ್ನೆಲ್ಲಾ ಕಳೆದು। ಎಳೆಗಾವಿ ಎಳೆದೊದ್ದು। ಸುಳಿಗಾವಿ ಮಂಡೆ ಮ್ಯಾಲೆ ಮುಸುಕ್ಕಿಟ್ಟನಂತೆ। ಏಕ ಮುಕದ ರುದ್ರಾಕ್ಷಿ। ಎದೆ ಮ್ಯಾಲೆ ಬಾರಿ ಸಜ್ಜೆ ಲಿಂಗ। ಬಂಗಾರದ ತ್ರಿಸೂಲ। ಕೈಯಲ್ಲಿ ಹಿಡಿದಿದ್ದ। ಕಂಕಳಲ್ಲಿ ಮುತ್ತಿನ ಜೋಳಿಗೆ। ಏಳು ಮೊಖದ ಮಾಯದ ಈ ಬೂತಿ ತುಂಬಿದ್ದ। ಮಾಯಕ್ಕಾರ ಮಲೆ ಮಾದಪ್ಪನವರು। ಆ ಜೋಳಿಗೆಯನ್ನು ಇಳುಕಿರಲಿಲ್ಲವಂತೆ। ಶ್ರವಣ ಮಹಾರಾಜನ ಪಟ್ಟಣಕ್ಕೆ ಹೋಗುವಾಗ। ಆ ಎಳೆಗಾವಿ ಸುಳಗಾವಿಯೆಲ್ಲ ಕಳೆದು ಮಡಗ್ಬುಟ್ಟು। ಮಲೆ ಮಾದಪ್ಪನವರು। ಹರಕಲು ಜೋಳಿಗೆ। ಮುರುಕಲು ಬೆತ್ತವನ್ನು ಹಿಡಿದು। ಇಕಾರ ರೂಪಿನ ಅವತಾರ ಪುರುಸರಾಗಿ। ಸಿವ ಸಿವಾ ಅವರು। ಬಂಕಾಪುರಿ ಪಟ್ಟಣಕ್ಕೆ ಬತ್ತಾವನಲ್ಲಾ। ಹೆಂಡಿರಿಲ್ಲದ ಕೆಂಡಗಣ್ಣು ಮಲೆ ಮಾದೇವಾ।[^] ಕಂಬದ ಬೋಳಿ ಸೀಮ್ಯಾಲೆ। ನಿಂತ್ಕಂಡು ನೋಡುದ್ರು ದಕ್ಷಿಣ ಬಾಗದಲ್ಲಿ। ಯಾವ್ದೋ ಒಂದು ಅರಮನೆ ಸಿಖರ ಕಂಡ್ಬುಡ್ತು। ಅರಮನೆ ಸಿಖರ ಅಂದ್ರೆ। ಬಂಕಾಪುರಿ ಶ್ರವಣೇಶ್ವರನ ಪಟ್ಟಣ। ಓಹೋ ಯಾವ್ದೋ ಒಂದು ಪಟ್ನ ಕಾಣ್ತಾ ಇದೆ। ಇದನ್ನ ನೋಡಬೇಕಲ್ಲಾ ಅಂತ್ಹೇಳಿ ಮಹಾಗುರುವು। ಮುತ್ತಿನ ಜೋಳಿಗೆ ಧರಿಸ್ಕೊಂಡು। ಕಂಚಿನ ಕಂಸಾಳೆ ಹಿಡ್ಕೊಂಡು। ಧರೆ ಗಾತ್ರ ದಂಡು ಕೋಲ ಹಿಡಕೊಂಡು। ಅವರು ಬಂಕಾಪುರಿಗೆ ದಯಮಾಡವರೆ ಮಾದೇವಾ॥

ನೋಡಿ ನಮ್ಮ ಶಿವನಾ॥[^]

ಹರ ಹರಾ ಸಿವ ಸಿವಾ ಕಂದ। ಕುಂತೂರು ಮಠದ ಪ್ರಬುಸ್ವಾಮಿ ಕೊಟ್ಟಿರುವ। ಹನ್ನೆರಡು ಹೆಜ್ಜೆ ಕರುಬರಗನ ಮ್ಯಾಲೆ ಮೂರ್ತ ಮಾಡಿಕೊಂಡು ಅವರು ಸ್ರವಣನ ಪಟ್ಟಣಕ್ಕೆ ಬತ್ತವರೆ ಮಾದೇವಾ।

ಆಹಾ... ನೋಡಿ ನಮ್ಮ ಶಿವನಾ।
ಮಲೆಯೋ ಮಾದೇವ ಬರುವ ಚಂದಾವಾ
ನೋಡಿ ನಮ್ಮ ಶಿವನಾ।

ಅವಾಗಲೀಗ ನಮ್ಮಪ್ಪಾಜಿ ಇಕ್ಕೇರಿ ದೇವಮ್ಮನ್ನ ಹಾಳು ಮಾಡಿಬಿಟ್ಟು। ಶಿವ ಶಿವಾ ಈಸಾನ್ಯ ಮೂಲೆ ಒಳಗೆ। ಬಂಕಾಪುರಿ ಶ್ರವಣ ದೊರೆ ಅಂದ್ರೆ। ಯಾವ ರೀತಿ ರಾಜ್ಯಭಾರ ಆಳ್ತಾ ಅವನೆ ಅಂದ್ರೆ।" ವಾಸುದೇವ ರಾಜಾ ಒಡೀತಾ ಇದ್ದಾನೆ। ಪಟ್ಟದ ರಂಗಸ್ವಾಮಿ ಹೊತ್ತೊತ್ತಿಗೆ ಪಂಚಾಂಗದ ಕಟ್ಟ ಎತ್ತಿಕೊಂಡು। ಹೆಗಲ ಮೇಲೆ ಹೊತ್ತುಕೊಂಡು। ಪಂಚಾಂಗವನ್ನು ನೋಡ್ತಾ ಇದ್ದಾನೆ। ಕೋಟೆ ಬಾಗಿಲಿಗೆ ಕಾವಲು ಇಟ್ಟಿದ್ದಾರೆ। ಪಟ್ಟದ ಪಾರ್ವತೀದೇವಿ ಅಕ್ಕಿ ಬ್ಯಾಳೆ ಸೋಸ್ತಾ ಇದ್ದಾಳೆ।" ಶಿವ ಶಿವಾ ಅವನ ರಾಜ್ಯಬಾರ ಅಂತಕ್ಕಂತದ್ದೂ। ಮುಡುಕುತೊರೆ ಮಲ್ಲಣ್ಣ। ಜಗದೀಸ್ವರ ಕೋಟೆ ಬಾಗಿಲಲ್ಲಿ ಪಾರವಂತೆ। ಆದರೆ ಅವನ ಕೋಟೆ ಒಳಗೆ। ಪಟ್ಟದ ರಂಗಸ್ವಾಮಿ। ಶ್ರೀಮನ್ನಾರಾಯಣ ಪಂಚಾಂಗ ನೋಡೋದಕ್ಕೆ। ಸಾಸ್ತ್ರ ಹೇಳೋದಕ್ಕೆ ಅವನ್ನ ನಿಲ್ಲಿಸಿಕೊಂಡಿದ್ದ। ಅವಾಗಲೀಗ ನಡುಗಾಡು ನಂಜುಂಡೇಶ್ವರ। ಆದರೆ ಇವನು ಎಲೆ ಅಡಿಕೆ ಉಗಿಯೋದಕ್ಕೆ। ಪೀಕದಾನಿ ಹಿಡ್ಕೊಂಡು ನಿಂತಿದ್ನಂತೆ। ಜಗನ್ನಾತೆ ಭೂಲೋಕ ಮಾತೆ। ಪಟ್ಟದ ಪಾರ್ವತೀದೇವಿ। ಶ್ರೀಮನ್ ಲಕ್ಷ್ಮಿ ದೇವಿ ಸಾರದಮ್ಮ। ಇವರು ಮೂರು ಜನವೂ। ಅವನ ಅರಮನೆಯಲ್ಲಿ ಅಕ್ಕಿ ಬ್ಯಾಳಿ ಮಾಡವ್ರಂತೆ। ಮಾರಿ ಮಸಣೀರೆಲ್ಲಾ ಸೇರಿಕೊಂಡು। ಮೂಗ್ಗೆ ಬಾಯಿಗೆ ಕವಡೆ ಕಟ್ಕಂಡು। ಅವನ ಅರಮನೆಗೆ ನೀರೊರೊಡ್ಕಂತೆ। ಶಿವ ಶಿವಾ ಆದ್ರೆ ದೇವೇಂದ್ರ। ಅವನ ಮನೆ ಬಾಗಿಲಿಗೆ ವಾಸುದೇವನೇ ಕಸ ಗುಡಿಸಬೇಕು। ರಾತ್ರೆ ಚಂದ್ರನೇ ಬೆಳಕಂತೆ। ಹಗಲಲ್ಲಿ ಸೂರ್ಯನೇ ಬೆಳಕಂತೆ। ಇಷ್ಟು ಜನನೆಲ್ಲಾ ಅವನು ಸೆರೆ ಇಟ್ಕೊಂಡು। ಪರಮಾತ್ಮ ಹೆಚ್ಚಿನ ಆ ಸನಿದೇವನ್ನ ಮಾತ್ರ। ಅವನ ಮೆಟ್ಟಲಲ್ಲಿ ಮಂಚದ। ಅಡಿಕ್ಕೆ ಮೆಟ್ಟಲು ಮಾಡ್ಕಂಡಿದ್ನಂತೆ। ಕೆಳಕ್ಕೆ ಇಳಿಯೋದಕ್ಕೆ ಮುಕ್ಕಡನಾಗಿ ಮಲಗಿಸ್ಬಿಟ್ಟು। ಮೆಟ್ಟಲು ಮಾಡಿಕೊಂಡು। ಮುಕ್ಕಾಲು ಮಂಚದ ಮ್ಯಾಲೆ। ಕೊನೆ ಮಿಂಸಿ ತಿರಿಗಿಸ್ಕಂಡು। ಬಿಟ್ಟ ಕಣ್ಣು ಬಿಟ್ಟಾಗೆ। ನೀಡಿದ ಕಾಲು ನೀಡಿದಾಗೆ। ಅವನು ದೊರೆತನದಲ್ಲಿ ಒರಗವ್ನಲ್ಲಪ್ಪಾ। ಶ್ರವಣಯ್ಯ।

ಆಹಾ... ನೋಡಿ ನಮ್ಮ ಶಿವನಾ।"

ಆಹಾ... ನೋಡಿ ನಮ್ಮ ಶಿವನಾ।
ಮಲೆಯೋ ಮಾದೇವ ಒಲಿವಾ ಚಂದಾವ
ನೋಡಿ ನಮ್ಮ ಶಿವನಾ।

ಸಿವಸಿವಾ ಮಾರೀರು ಮಸಣೀರೆಲ್ಲಾ! ದುರ್ಗೀರು ಚೌಡೀರೆಲ್ಲ! ಕರಡಿ ಕಾಡೆಮ್ಮೆ ಜಿಂಕೆ! ಸಿಂಹ ಸಾರ್ದೂಲದಲ್ಲಿ ಹಾಲು ಕರಕೊಂಡು! ಆ ಬಿಂದಿಗೆ ತುಂಬಿಕೊಂಡು ಬರುತ್ತಿದ್ದರು! ಕಂಡುಕೊಂಡ ಮಾಯಕಾರ! ಏನಮ್ಮಾ ತಾಯಿಗಳೇ ನೀವೆಲ್ಲವ್ವಾ ಮಜ್ಜನಕ್ಕೂ ಹೋಗೋದು! ಶ್ರವಣಪ್ಪ ಲಕ್ಷದ ತೊಂಬತ್ತಾರು ಕೋಟಿ ಗಣಂಗಳನ್ನೆಲ್ಲಾ! ಕೈಸೆರೆ ಇಟ್ಕಂಡ! ಏನು ಸ್ವಾಮಿ! ಅವನಿಗೆ ನಾವು ಹಾಲು ಕರಕೊಂಡೊಯ್ತೀನಿ! ಕಾಡು ಮೃಗ ಜಾತಿನೆಲ್ಲಾ! ಅವರು ಸತ್ಯಂಬ ನುಡಿಯ ನುಡಿದಾರು!

ಆಹಾ... ನೋಡಿ ನಮ್ಮ ಶಿವನಾ!

ಸಿವ ಸಿವ ಬಿಂದಿಗೆಯೆಲ್ಲಾ ಕಿತ್ಕೊಂಡು! ಹಳ್ಳಕ್ಕೆ ಸುರುದು ಬಿಟ್ಟ ಮಾಯಕಾರ! ಓಗಿ ನಿಮ್ಮ ಶ್ರವಣಪ್ಪನಿಗೆ ಹೇಳಿ ನೀವು ಅಂದ! ಮಾರಿರೆಲ್ಲಾ ಅಲ್ಲಿಗೆ ಸೆರಗ ತೆಗೆದು ಮಂಡೆ ಮ್ಯಾಲೆ ಇಟ್ಕೊಂಡು! ಆಗ ಮಾರಿರೆಲ್ಲಾ ಕಣ್ಣೀರನ್ನು ತುಂಬಿಕೊಂಡು! ಅವರು ಶ್ರವಣಯ್ಯನ ದಂಡಕೆ ಒಯ್ತಾ ಅವರೇ ಮಾದೇವಾ!

ಆಹಾ... ನೋಡಿ ನಮ್ಮ ಶಿವನಾ!

ಹಾಲೆಲ್ಲಾ ಕಿತ್ತು ಸುರಿದು! ಮಾಯಕಾರ ಹಾಲಳ್ಳ ಅಂತೇಳಿ ಹಳ್ಳಕ್ಕೆ ನಾಮಕರಣ ಮಾಡಿಬಿಟ್ರು! ಮೂರ್ತ ಮಾಡಿ ಕೂತವರೇ ಮಾದೇವಾ! ಕಾವಿ ಗದ್ದುಗೆ ಹಾಸಿಕೊಂಡು! ಆಗ ಮಾರಿರೆಲ್ಲಾ ಬಂದು ಶ್ರವಣಪ್ಪನಿಗೆ ನಮಸ್ಕಾರ ಮಾಡಿದ್ರು! ಏನಮ್ಮಾ ಮಾರಿಯರೇ! ಜಂಗಮಯ್ಯಾ ಆ ಹಳ್ಳದಲ್ಲಿ ಇದ್ದುಕೊಂಡು! ಹಾಲೆಲ್ಲಾ ಹಳ್ಳಕ್ಕೆ ಸುರಿದುಬಿಟ್ಟ ಅಂತೇಳಿ! ಅವರು ಶ್ರವಣಯ್ಯನಿಗೇಳ್ತವರೇ ಮಾದೇವಾ!

ಆಹಾ... ನೋಡಿ ನಮ್ಮ ಶಿವನಾ!

ಆಹಾ ಕ್ವಾರಣ್ಯಗಳ ನೀಡಮ್ಮಾ ಕೋಡುಗಲ್ಲಯ್ಯನಿಗೆ!

ಸಿವ ಸಿವಾ ಆಗ ನಮ್ಮಪ್ಪಾಜಿ ಮಲೆ ಮಾದಪ್ಪನವರು! ಬೂದಿ ಮುಚ್ಚಿದ ಕೆಂಡ! ಭೂಲೋಕದಲ್ಲಿ ಉದ್ಭವಿಸಿ ಬಂದಂತ! ಕೆಂಡಗಣ್ಣು ಮಲೆ ಮಾದಪ್ಪನವರು! ಅವರು ಅವತಾರ ಪುರುಸ! ಅವರು ಕೃತಯುಗದ ಪುರುಸನಂತೆ! ಮಾನವನಾದಂತ ಶ್ರವಣ ಮಹಾರಾಜ! ಹಲ್ಲು ಕಡಿದು ತನ್ನ ಮಠದಲ್ಲಿ ಆಳಿಕೆ ಆಳುತ್ತಿದ್ದನಲ್ಲಾ! ಆತನ ಪಟ್ಟಣದ ಬಾಕಿಲಿಗೆ ಬಂದ! ಪಟ್ಟಣದ ಬಾಕಿಲಲ್ಲಿ ದ್ವಾರಪಾಲಕರಂದರೆ! ಇಬ್ಬರು ಕಾವಲಗಾರರಿದ್ದರಂತೆ! ದ್ವಾರಪಾಲಕರು ಶಿವ ಶಿವಾ! ಬಂದಂತ ಕೆಂಡಗಣ್ಣು ಮಲೆ ಮಾದೇಸ್ವರ ನನ್ನ ತಡೆಗಟ್ಟಿ ನಿಂತರು! ಏಕಪ್ಪಾ ಅಂತೇಳಿ ಮಾದೇವ ನನ್ನ ಕೇಳಿದರು! ಆ ದ್ವಾರಪಾಲಕರು ಸಿವ ಸಿವಾ! ಮಹಾರಾಜ ಇರತಕ್ಕಂತ! ಸನ್ನಿದಾನಕ್ಕೆ ಯಾರನ್ನೂ! ಹೊರಗಡೆ ಬಂದಿರತಕ್ಕಂತ ಗಣಂಗಳನ್ನು! ಒಳಗಡೆ ಬಿಡೋದಿಲ್ಲ ಅಂತೇಳಿ! ನಮ್ಮ

ಮಹಾರಾಜರ ಆಜ್ಞೆ ಆಗಿದೆ। ಅದಕ್ಕೋಸ್ಕರ ನಾವು ಒಳಗಡೆ। ಬಿಡೋದಿಲ್ಲ ಅಂತೇಳಿ। ದ್ವಾರಪಾಲಕರು ಬಾಕಿಲ ಪತ್ತಿರ ತಡೆಗಟ್ಟಿದರಂತೆ ಮಾದೇವನ್ನ। ಆಗ ಮಲೆ ಮಾದಪ್ಪನವರು। ದ್ವಾರಪಾಲಕರಿಗೆ ಬೋದನೆ ಹೇಳ್ತಾ ಇದ್ದಾರೆ। ಸಿವ ಸಿವಾ ನೀವು ಇಬ್ಬರು ನನ್ನನ್ನು ತಡೆಗಟ್ಟಿ ಇಲ್ಲೇ ಇರಿಸಿ ಕೊಳ್ಳಿ। ಇಬ್ಬರು ಪೋಗಿ ಸಿವ ಸಿವಾ ಕೃತಯಾಗದ ಪುರುಸನಂತೆ। ಕೂಡಲ ಸಂಗಮ ದೇವಾ ಉತ್ತರಾಜಮ್ಮನ ಪುತ್ರ। ಮಾತಿಗೆ ಮರಿದೇವರು ನೀತಿಗೆ ನಿಂಗಪ್ಪ। ದುಡುಕಿಗೆ ದುಂಡುಳ್ಳ ಮಾದೇಸ್ವರ। ಮಾನವತೆಯ ದರ್ಶನಕ್ಕೆ ಬಂದವನಂತೆ। ಬೋ ದೂರದಿಂದ ಅಂತೇಳಿ। ಆ ದ್ವಾರಪಾಲಕರ ಕೈಲಿ ಹೇಳಿ ಕಳಿಸಿದ ಮಾದೇವ। ಆಗ ದ್ವಾರಪಾಲಕರಲ್ಲೊಬ್ಬ ತಡೆಗಟ್ಟಿ ನಿಂತನಂತೆ ಮಾದೇವನ್ನ। ಒಬ್ಬ ಓಗಿ ರಾಜನ ಸನ್ನಿದಾನದಲ್ಲಿ ನಿಂತು। ಮಹಾಪ್ರಭು, ಮಹಾಸ್ವಾಮಿಗಳೇ ಅಂದನು। ಏನಯ್ಯಾ ದ್ವಾರಪಾಲಕ ವರ್ತಮಾನ ಅಂತೇಳಿ। ಶ್ರವಣ ಮಹಾರಾಜ ಅವನ ಕಡಗಣ್ಣ ತೆರೆದು ನೋಡಿದರಂತೆ। ಮದದಲ್ಲಿ ಮಾತನಾಡಿದನಂತೆ। ಮಹಾಪ್ರಭು ಉತ್ತರ ದೇಶದವರಂತೆ। ಉತ್ತರಾಜಮ್ಮನ ಪುತ್ರ। ಮಾತಿಗೆ ಮರಿದೇವರಂತೆ। ನೀತಿಗೆ ನಿಂಗಪ್ಪನಂತೆ। ದುಡಿಕಿಗೆ ದುಂಡುಳ್ಳ ಮಾದೇವನಂತೆ। ಮಾದೇವ ನೀವು ಮಾನವರಂತೆ। ಮಾನವರ ದರ್ಸನಕ್ಕೋಸ್ಕರ। ಬಾರಿ ದೂರದಿಂದ ನಡೆದು ಬಂದಿವ್ನಿ। ಅಂತ ಹೇಳಿದನು। ನಾವು ಒಳಗಡೆ ಬಿಡಲಿಲ್ಲ। ಮಹಾಪ್ರಭು ದರ್ಶನಕ್ಕೆ ಬಂದಿದ್ದಾರೆ ಅಂತೇಳಿ। ಹೇಳಿ ಕಳಿಸವ್ನೆ। ನೀವು ದಯಮಾಡಿ ಬರಬೇಕಂತೇಳಿ। ಆ ದ್ವಾರಪಾಲಕನು ಶ್ರವಣ ಮಹಾರಾಜನಿಗೆ ತಿಳಿಸಿದನು। ಆಗ ಹಲ್ಲು ಕಡಿದು। ತನ್ನ ಮದದಿಂದ ಸಿಂಹಾಸನವನ್ನು ತ್ಯಾಜನೆ ಮಾಡಿ। ಮೇಲಕ್ಕೆದ್ದನಂತೆ। ತನ್ನ ದೇಹದಲ್ಲೇ ತಾನೇ ಯೋಚನೆ ಮಾಡಿದನಂತೇ ಶ್ರವಣ। ಹರಿಬಕ್ತ ನಾನು। ಕೃತ ತ್ರೇತಾ ದ್ವಾಪರಾ ಯುಗ ನಾಶವಾಗುವ ತನಕ। ವಿಷ್ಣು ಕೃತಾಯುಗದಲ್ಲಿ ತ್ರೇತಾಯುಗದಲ್ಲಿ ರಾಮ। ದ್ವಾಪರಾ ಯುಗದಲ್ಲಿ ಕೃಷ್ಣ। ಕೃಷ್ಣ ಸತ್ತು ಹರಿಯಾಗಿ ಹುಟ್ಟಿದ್ದಾನೆ। ಹರಿ ವರವನ್ನು ಕೊಟ್ಟವನೆ ಮಾರು ಲೋಕಕ್ಕೂ। ನನ್ನ ಸರಿಸಮಾನಯಾರಿದ್ದಾರೆ। ಅಂತೇಳಿ ಹಲ್ಲು ಕಡಿದು। ಸಿವ ಸಿವಾ ತನ್ನ ಅರಮನೆಯ ಮುಂಭಾಗದಲ್ಲಿ ಬಂದು ನಿಂತ। ಆ ಅರಮನೆ ಮುಂಬಾಗಿಲಲ್ಲಿ। ಕೆಂಡಗಣ್ಣು ಮಲೆ ಮಾದಪ್ಪನವರು। ಹರಕಲು ಜೋಳಿಗೆ ಮುರುಕಲು ಬೆತ್ತ ಹಿಡಿದು। ವಿಕಾರ ರೂಪು ಅವತಾರವೆತ್ತಿ ನಿಂತಿದ್ದಾನಂತೆ। ನೀನು ಯಾವ ನಾಡಿನ ಜಂಗಮ ಅಂತೇಳಿ। ಕೇಳವನಲ್ಲೋ ಬಂಕಾಪುರ ಶ್ರವಣಾ।

ಆಹಾ... ಕ್ವಾರಣ್ಣ ನೀಡಮ್ಮ ಮಾದೇವ ಲಿಂಗನಿಗೆ।

ಕೇಳಿ ಮಹಾಪ್ರಭು ನಾನು ಹುಟ್ಟಿದ್ದು ಉತ್ತರ ದೇಸ। ಬಂದದ್ದು ಬಾಳೆಲೆ ಸೀಮೆ ಕುಂತುದ್ದು ಕುಂತೂರು ಮಠ। ಪಂಚೇಳು ದೀಕ್ಷವನ್ನು ಪಡೆದು। ಕಾಣಾಬಾರದ

ಕಾನಿ, ಕಾಡುಗೌಳಿ ಮೆಳೆ ಸೀಗೆ ಸಿರಿಗಂದ ಬಾಡ ಬಾಕಲಗುತ್ತಿ। ವಿಷಂಪಾರಿಗುತ್ತಿ।
ಅರಿವಿಲ್ಲದ ಮಲೆ ಒಳಗೆ। ಏಳು ಬಾಯಿ ಹೊನ್ನುತ್ತ। ಅಲ್ಲಿ ವಾಸ ಮಾಡತಕ್ಕಂಥವನು।
ನನ್ನ ಹೆಸರು ಮಾದೇವ ಅಂದನಂತೆ। ಮಾದೇವ ಮಾದೇವ ಅಂತ ಏಳು ಸಾರಿ
ಕೂಗಿದ ಮ್ಯಾಲೆ ಮಾದಪ್ಪ। ಪಂಚೀಲು ಸಾರಿ ಹೇಳುವಾಗ ಅವನ ಹೆಸರುಗಳನ್ನ। ಆ
ಮಾನವನಾದಂತ ಶ್ರವಣ ಮಹಾರಾಜನ ಕರಣಗಳಿಗೆ। ಮಾದಿಗ ಅಂತೇಳಿ ಕಂಡು
ಬಂದುಬಿಡತಂತೆ। ನೀನು ಮಾದಿಗನೆ ಅಂತೇಳಿ ನಿಂತಾವನಲ್ಲಾ। ಬಂಕಾಪುರಿ ಶ್ರವಣಾನು।

ಆಹಾ... ಕ್ವಾರಣ್ಣ ನೀಡಮ್ಮ ಮಾದೇವ ಲಿಂಗನಿಗೆ।

ಏನಪ್ಪಾ ನೀನು ಮಾದಿಗನೇ?। ನೀನು ಮಾದಿಗನಾದ ಮೇಲೆ। ನನ್ನ ಪಾದಕ್ಕೆ
ಪಾದರಕ್ಷೆ ಮಾಡಿಕೊಂಡು ಬರ ಬಲ್ಲೆಯೊ। ಅಂತೇಳಿ ಆ ಬಂಕಾಪುರಿ ಶ್ರವಣ
ಮಹಾರಾಜ। ಹಲ್ಲು ಕಡಿದು ತನ್ನ ಮದದಿಂದ। ತನ್ನ ಪಾದವನ್ನು ತೆಗೆದು। ಮಲೆ
ಮಾದೇಸ್ವರನ ಸನ್ನಿದಾನದಲ್ಲಿ ಇಟ್ಟಂತೆ। ಹರಹರಾ ನಮ್ಮಪ್ಪಾಜಿ। ಕೆಂಡಗಣ್ಣ ಮಲೆ
ಮಾದಪ್ಪನವರು। ಮಾದಾರ ಚಮ್ಮಾಳಿಗೆ ಮಾಡ್ಕೊಂಬತ್ತೀಯಾ।। ಆಗ್ಲಪ್ಪ ಕಂಡಿತ್ವಾಗೂ
ಮಾಡ್ಕೊಂಡ್ಬತ್ತೀನಿ। ಅಂಗಾರೆ ನನ್ನ ಕಾಲು ಮುಟ್ಟಿ ಅಳತೆ ತಕ್ಕೋ ಅಂತ ಹೇಳಿದ್ದಾರೆ।
ಶ್ರವಣಯ್ಯನ ಮಾತು ಕೇಳ್ಬುಟ್ಟು ಮಾದೇವ। ಅವರು ಬಾಳ ಚಿಂತಿ ಮಾಡವ್ರೆ

ನೋಡಿ ನಮ್ಮ ಶಿವನಾ।

'ಆಹಾ ಎಂತ ದುರಾಂಕಾರದ ಮಾತಾಡಿದ್ದಾನೆ।' ನನ್ನ ಕಾಲು ಮುಟ್ಟಿ ಅಳತೆ
ತಕ್ಕೋ ಅಂತ ಹೇಳ್ತವನಲ್ಲಾ ನಾನು ಇವನ ಕಾಲು ಮುಟ್ಟಿ ಅಳತೆ ತಕ್ಕೊಂಬುಟ್ರೆ।
ಆಗ್ಗುದೇವ್ರಿ ಅರುಗಾಯ್ತಳೆ। ಗಂಗಮ್ಮ ಮರೆಯಾಗ್ಬುಡ್ತಾಳೆ। ಮೂಲ್ಲೋಕಕ್ಕೆ ಮಳೆ
ತಪ್ಪೋಯ್ತದೆ। ಕೀಳು ಲೋಕದಲ್ಲಿ ಬೆಳೆ ತಪ್ಪೋಯ್ತದೆ। ಶಿವಾ ಅನ್ನೋರ್‍ಗೆ ಶಿವುನ
ಗ್ಯಾನ ತಪ್ಪೋಯ್ತದೆ। ಹರಾ ಅನ್ನೋರ್‍ಗೆ ಹರನ ಗ್ಯಾನ ತಪ್ಪೋಯ್ತದೆ। ಏನ್ಗತಿ ಮಾಡಲಿ
ಅಂತೇಳಿ ನಮ್ಮಪ್ಪಾಜಿ ಮಾದೇವ। ಅವ್ರು ಯೋಚನೆ ಮಾಡ್ತಾ ನಿಂತವರೆ ಮಾದೇವ।

ನೋಡಿ ನಮ್ಮ ಶಿವನಾ।

ನಮ್ಮ ಸ್ವಾಮಿಯವರು ನಿಂತುಕೊಂಡು ಏನೇಳ್ತಾರೆ। ಏನಯ್ಯಾ ಬಂಕಾಪುರಿ
ಶ್ರವಣ ದೊರೆಯೇ। ನಿನ್ನ ಕಾಲ್ಮುಟ್ಟಿ ಅಳ್ತೆ ತಕ್ಕೋ ಅಂತ ಹೇಳತಿ। ಚಮ್ಮಾಳಿಗೆ
ಮಾಡುವಾಗ ಹೆಚ್ಚು ಕಡಿಮೆ ಬಂದ್ಬುಡ್ತದೆ। ಸಿರುಗಂಧದ ಮರವ ಹತ್ತಿ ಹೊಡೀಸಿ।
ನಿನ್ನ ಕಾಲು ಮಡಗಿ ಅಳ್ತೆ ತೆಗುದ್ಕೊಟ್ರೆ, ಆ ಅಳ್ತೆ ಸರಿಯಾಗಿ। ಚಮ್ಮಾಳಿಗೆ ಮಾಡ್ಕೊಡ್ತೀನಿ
ಅಂತವ್ನೆ ಜಗದೊಡೆಯಾ'

ನೋಡಿ ನಮ್ಮ ಶಿವನಾ।

ತನ್ನ ದೇಹದಲ್ಲಿ ತಾನೇ ಯೋಚನೆ ಮಾಡಿದರಂತೆ। ಇದೇನಪ್ಪಾ ಶಿವ ಶಿವಾ। ಕಲೀ ಒಳಗೆ ಉಟ್ಟಿರತಕ್ಕಂತಹ। ನರುಳ ಇವನ ಪಾದವನ್ನು ನಾನು ಮುಟ್ಟಿ। ಇವನ ಪಾದಕ್ಕೆ ಪಾದ್ರಾಕ್ಷಿ ಮಾಡಿಕೊಂಡು ಬಂದು ಕೊಡಬೇಕಂತೆ। ಹಾಗೆ ಆಗಲಿ ಅಂತೇಳಿ। ಆ ಮಲೆ ಮಾದಪ್ಪನವರು ನಿಂತಿದ್ದ ಜಾಗದಲ್ಲೇ। ತನ್ನ ಬೆಳ್ಳು ತಾನೇ ಅಳತೆ ಮಾಡಿಟ್ಟ। ಕೇಳಿದೆ ಮಹಾಪ್ರಭು ಅಂದನಂತೆ। ಪಾದವೇ ಮುಟ್ಟಲಿಲ್ಲ। ಎಷ್ಟಿದೆ ಅಂತೇಳಿ। ಹುಲ್ಲು ಕಡಿದು ತನ್ನ ಮದದಲ್ಲಿ ಮಾತನಾಡಿಸಿದನಂತೆ। ಶ್ರವಣ ಮಹಾರಾಜ ನಿಮ್ಮ ಪಾದದಳತೆ ಕಟ್ಟಗಲ ಒಂದಡಿ ಇದೆ। ಪಾದ ಉದ್ದ ಸಿವಸಿವಾ। ಎರಡೂವರೆ ಅಡಿ ಉದ್ದ ಇದೆ ಅಂತೇಳಿ। ಅಯ್ಯೋ ಕಡ್ಡೀನಿ ಮಲೆ ಮಾದೇಸ್ವರರು ಶ್ರವಣ ಮಹಾರಾಜನ ಕೈಗೆ ಕೊಟ್ಟಿದ್ದಾರೆ। ಆ ಶ್ರವಣ ಮಹಾರಾಜ ತನ್ನ ಕಾಲಿಗೆ। ತಾನೇ ಅಳತೆ ಇಟ್ಟನಂತೆ। ಪರಮಾತ್ಮ ತನ್ನ ಕಾಲಿಗೆ ತಾನೇ ಅಳತೆ ಇಡುವಂತ ಕಾಲದಲ್ಲಿ।

ಆಹಾ ನೋಡಿ ನಮ್ಮ ಶಿವನಾ।

ಚಿನ್ನದ ಕಡ್ಡಿ ಮೊದಲು। ಮಾದಾರಿ ಚನ್ನಯ್ಯ ಬಂದ ಗಳಗೆ ಒಳಗೆ। ಏನು ಕಾರಣ ಕಾಣನಲ್ಲಾ ಅಂತೇಳ್ಬಿಟ್ಟು। ಲೋ ತಿರುಪತಿ ವೆಂಕಟರಮಣ। ಬ್ಯಾಗನ ಬಾರ। ಸಾಸ್ತ್ರವ ಕೇಳ್ಬೇಕು ಕರ್ಕೊಂಡು ಬಾರೋ ಅಂತೇಳ್ಬುಟ್ಟು। ಅವನ ಒಡಾನೆ ಇನ್ನು ಕಳಸವನೇ।

ಆಹಾ ನೋಡಿ ನಮ್ಮ ಸಿವನಾ।

ಕೋಳಿಕೂಗೋ ಮಾದೇವನಾ।
ಇಂದು ಕೂಗೋ ಮುದ್ದು ಮಾದೇವನಾ।

ಕೂಗೋ ಕೂಗೋ ಮಾದೇವನಾ।
ಇಂದು ಕೂಗೋ ದುಂಡು ಮಾದೇವನಾ।

ಎಲ್ಲಾರ ಧೃಡವ ನೋಡವನೆ।
ಇಂದು ಕೂಗೋ ದುಂಡು ಮಾದೇವನಾ।

ಕೂಗೋ ಕೂಗೋ ಮಾದೇವನಾ
ಇಂದು ಕೂಗು ದುಂಡು ಮಾದೇವನಾ।

ಆಗಲೀಗ ನಮ್ಮಪ್ಪ ಮಾಯಕಾರ ಮಾದೇವ। ಊರಾಚೆ ಬರುವಂತ ಕಾಲದಲ್ಲಿ। ಚಿನ್ನದ ಕಡ್ಡಿ ಮುರಿದು। ಮೂರು ತುಂಡಾಗೋಯ್ತಲ್ಲಾ ಗುರುವೆ। ನೀನು ನಂಜನಗೂಡ ನಂಜಯ್ಯನ್ನ। ಬ್ಯಾಗನೆ ಕರಕೊಂಡು ಬಾರೋ ಅಂತಾನಲ್ಲೋ। ಬಂಕಾಪುರಿ ಶ್ರವಣಯ್ಯ। ನಂಜಣ್ಣ ದೊರೆಗಳ ಅಪ್ಪಣೆ ಆಯ್ತು ಬ್ಯಾಗನೆ ಸಾಸ್ತ್ರ ಹೇಳ್ಬೇಕಂತೆ। ಬ್ಯಾಗ ಬರಬೇಕು ಅಂತ ಹೇಳ್ತವ್ರಲ್ಲ ಗುರುವೇ। ಅಯ್ಯೋ ದೊರೆಗಳ ಅಪ್ಪಣೆ ಆಯ್ತಲ್ಲಪ್ಪಾ ಅಂತೇಳೀ ಬಟ್ಟೆ ಸುತ್ತು ಕೊಂಡು ಬರಾಬರನೆ ಬತ್ತಾನಲ್ಲೋ ಗುರುವೇ।

ಆಹಾ... ನೋಡಿ ನಮ್ಮ ಶಿವನಾ।

ಆಗಲೀಗ ಏನು ಮಾಡಬೇಕು ಅಂತೇಳಿ ನಮ್ಮಪ್ಪ ಮಾಯಕ್ಕಾರ ಮಾದೇವ। ಅಂದು ಮಾಯವಾಗೋಯ್ತಾನಲ್ಲೋ। ದೀರ ಮಾದಯ್ಯ।

ಆಹಾ... ನೋಡಿ ನಮ್ಮ ಶಿವನಾ।

ಯೇಳ್ತೀನಿ ಕೇಳಪ್ಪ ನಂಜಣ್ಣ। ಚಿನ್ನದ ಕಡ್ಡಿ ಒಳಗೆ ಹೂವು ಕಿತ್ತು ಏನೂ ದೋಸ ಇಲ್ಲ ಅಂತ ಹೇಳ್ಬುಡಪ್ಪಾ। ಚಂದ್ರಪಾದ ತಳ ತಳನೆ ಬಿದ್ದೋಯ್ತು। ಅಂದ್ರೆ ನೀವು ಗಾಬರಿಯಿಂದ ಏರಿ ಬಿದ್ದೋಯ್ತು. ಅಂತ ಹೇಳಪ್ಪ। ಮಂಗಳವಾರದ ಹೊತ್ತಿಗೆ ನಿಮ್ಮ ಹುಟ್ಟರೆ ಕಲ್ಲಿನ ಮ್ಯಾಲೆ। ಮುತ್ತಿನ ಕಂಬ ಮೂರ್ತ ಮಾಡಬೇಕು ಅಂತೇಳ್ಬುಟ್ಟು। ಈ ಮೂರು ಸುಳ್ಳು ಮಾತೇಳಬೇಕು ಕಣೋ ನಂಜಣ್ಣೋ।

ಆಹಾ... ನೋಡಿ ನಮ್ಮ ಶಿವನಾ।

ಏನು ಮಾಡ್ತಿದ್ದೆ ನಂಜನಗೂಡು ನಂಜಯ್ಯ। ಇಷ್ಟೊತ್ತಗಂಟ ಅಂತ ಕೇಳ್ತಾನೆ। ಅಯ್ಯಾ ಬುದ್ದಿ ಸ್ನಾನ ಮಾಡ್ತಾ ಇದ್ದೆ। ಅಂತಾನಲ್ಲ। ಆಗಲೀಗ ಕವಡೆ ಮಣೆ ತಕ್ಕಂಡು। ಗೌಳಿ ಪಂಚಾಂಗ ತಕ್ಕಂಡು ಗುರುವೇ ಆದ್ರೆ ಯೇಳ್ತೀನಿ ಕೇಳಿ ದೊರೆಗಳೇ। ಚಿನ್ನದ ಕಡ್ಡಿ ಒಳಗೇ। ಹೂವ ಕಿತ್ತು ಏನೂ ದೋಸವಿಲ್ಲ। ನೀವು ಗಾಬ್ರಿಯಿಂದ ಎದ್ದಿ೦। ಚಂದ್ರಪಾದ ತಳತಳಕನಾಗಿ ಬಿದ್ದೋಯ್ತು। ಆದರಲ್ಲೂ ಏನೂ ದೋಸವಿಲ್ಲ। ಮಂಗಳವಾರದ ಮಧ್ಯಾಹ್ನದ ಹೊತ್ತಿಗೆ ಹುಟ್ಟರೆ ಕಲ್ಲಮ್ಯಾಲೆ। ಮುತ್ತಿನ ಕಂಬ ಮೂರ್ತ ಅಂತೇಳಿ ಅಯ್ಯ ಮೂರು ಮಾತು। ಸುಳ್ಳು ಮಾತು ಹೇಳಿದ್ನಲ್ಲೋ। ನಸು ಮೊಗದೊಡಯನೇ।*

ಆಹಾ... ನೋಡಿ ನಮ್ಮ ಶಿವನಾ।

ಯಾವುದೋ ಬುಡು ಬುಡಕೆಯವನು ಬಂದು। ಬಂಕಾಪುರಿ ಶ್ರವಣ। ಮರಣ ಮರಣ ಅಂತ। ಸಾರ್ತವನಲ್ಲೋ। ಗುರುವೆ ಅಯ್ಯ ಶ್ರವಣ ದೊರೆಗೆ। ಬಂದು ಹೇಳ್ತಾನಲ್ಲೋ ದೊರೆಗಳಾಗಿ

ಆಹಾ... ನೋಡಿ ನಮ್ಮ ಶಿವನಾ।

ಆಗಲೀಗ ಅವನು। ಯಾರು ಹಿಡ್ಕಂಡು ಬನ್ರಲಾ। ಎಳ್ಕಂಡು ಬನ್ರಲಾ ಅಂತೇಳಿ। ಊರ ಜನವೆಲ್ಲಾ ಮಾರಿ ಮಸಣೇರ್ಲಿಲ್ಲಾ ಒದ್ದಕೊಂಡೊಯ್ತಾರೆ ಗುರುವೇ। ಬುಡುಬುಡುಕೆ ಹೇಳ್ತಾನೆ ಅವನು। ಮಾಯವಾಗಿ ಒಯ್ತಾನಲ್ಲೋ ಮಾದಯ್ಯೋ।।

ಆಹಾ... ನೋಡಿ ನಮ್ಮ ಶಿವನಾ।*

ಸೂಲು ಹೆಚ್ಚು ಕಮ್ಮಿ ಬರಲಿಲ್ಲ ಬಾರಿ ಪ್ರಮಾಣ ಬುದ್ಧಿ ಸಾಲಿ। ಇದಕ್ಕೆ ಏನೇನು ಸಲಕರಣೆ ಬೇಕು। ಇದಕ್ಕೆ ಒಪ್ಪಂದ ಏನು ಮಾಡಿದ್ದೀಯ। ಅಂತೇಳಿ ಬಂಕಾಪುರಿ ಶ್ರವಣ ಮಹಾರಾಜ। ಪಾದರಕ್ಷೆ ತಂದುಕೊಡತೀಯಾ ಅಂತೇಳಿ। ಬಂಕಾಪುರಿ ಶ್ರವಣ ಮಹಾರಾಜ। ಕೆಂಡಗಣ್ಣು ಮಲೆ ಮಾದೇಸ್ವರನ್ನು ಕೇಳಿದರಂತೆ। ಆಗ ಮಲೆ ಮಾದೇಶ್ವರ। ಪಾದ್ರಾಕ್ಷಿಣೆ ಒಪ್ಪಿಕೊಳ್ಳುವಾಗ। ಮಹಾಪ್ರಭು ನನಗೆ ಇಪ್ಪತ್ತೊಂದು ದಿವಸ ಕೊಡಬೇಕು। ಮಟ ಮಂಗಳವಾರದ ದಿವಸ ಹುಟ್ಟಿದ ಮಧ್ಯಾಹ್ನದಲ್ಲಿ। ಹನ್ನೆರಡು ಗಂಟೆ ಒಳಗೆ ಊರುಬಿಟ್ಟು। ಊರಿಂದಾಚೆಗೆ ಉಟ್ಟರೆ ಕಲ್ಲಿನ ಮ್ಯಾಲಕ್ಕೆ। ನೀವು ಮಣ ಮೂಗಂಡುಗ ಅರಗು ಕೂಡಿಟ್ಟುಕೊಂಡು ತರಬೇಕು। ನಾನು ಇಪ್ಪತ್ತೊಂದು ದಿವಸದಲ್ಲಿ। ನಿಮ್ಮ ಪಾದಕ್ಕೆ ಪಾದ್ರಾಕ್ಷಿ ತಾನೇ। ನಾನು ವೊಲಕೊಂಡು ಬಂದು ಕೊಡುತೀನಿ। ಅಂದಾರಲ್ಲೋ ಮೂಡಲ ಮಲೆಯ ಮಾದೇವಾ

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಹರ ಹರಾ ಆಗ ಶ್ರವಣ ಮಹಾರಾಜನಿಗೆ ಮಾದಪ್ಪನವರು ಹೇಳುವಾಗ। ಆ ಶ್ರವಣ ಮಹಾರಾಜ ವೀಳ್ಯ ಕೊಟ್ಟನಂತೆ। ಮಾದೇಸ್ವರರು ಎರಡು ಹಸ್ತವನ್ನು ಆನಂದವಾಗಿ ಒಡ್ಡಿ ಆತನ ಹತ್ತಿರ ಮಲೆ ಮಾದಪ್ಪನವರು। ವೀಳ್ಯವನ್ನು ಪಡೆದು ಪಾದ್ರಾಕ್ಷಿ ಒಪ್ಪಂದವನ್ನು ಒಪ್ಪಿಕೊಂಡು। ಇವತ್ತಿಗೆ ಇಪ್ಪತ್ತೆಂಟು ದಿವಸಕ್ಕೆ। ನೀವು ಮಣ ಮೂಗಂಡುಗ ಅರಗು ಕೂಡಿಟ್ಟುಕೊಂಡು ಬರಬೇಕು

ಅರಗಿನ ಜವಾಬ್ದಾರಿ ನಮ್ಮದು। ಪಾದ್ರಾಕ್ಷಿ ತರತಕ್ಕಂತದು ನನ್ನ ಬಾರ। ಮಂಗಳವಾರ ದಿವಸ ಹನ್ನೆರಡು ಗಂಟೆ ಒಳಗೆ। ಊರಿಂದಾಚೆ ಹುಟ್ಟರೆ ಕಲ್ಲಿನ ಮ್ಯಾಲೆ ಮೂಗಂಡುಗ ಅರು ಗುಯ್ದು। ಅರಗಿನ ಮ್ಯಾಲೆ ನಾನು ತರತಕ್ಕಂತ ಪಾದ್ರಾಕ್ಷಿ ಮಡಗಿ। ನೀವು ಪಾದ್ರಾಕ್ಷಿ ಧರಿಸೀ ಪಟ್ಟಣದಲ್ಲಿ ಆಳಿಕೆ ಆಳಿದರೆ। ನನಗೆ ಅಷ್ಟೇ ಆನಂದ ಸಾಕೆಂದು ಹೇಳಿ ಕಡೆದು ಬತ್ತವನಲ್ಲೋ ಕೆಂಡಗಣ್ಣು ಮಾದೇವಾ।

ನೋಡಿ ನಮ್ಮ ಶಿವನಾ।

ಅಯ್ಯೋ ಪರಮಾತ್ಮ ನಮ್ಮಸೆರೆ ಬುಡುಸ್ದೆ ಹೋಯ್ತಾ ಇದ್ದೀಯಲ್ಲಪ್ಪ। ಈ ಕಷ್ಟ ಇನ್ನೂ ಎಷ್ಟು ದಿವಸ ಅನುಬೋಗಿಸ್ಬೇಕು ಅಂತೇಳಿ। ಕಣ್ಣಲ್ಲಿ ಕಣ್ಣೀರು ಕೆಡುಗ್ತಾ ಇದ್ದಾರೆ। ಅಯ್ಯೋ ತನ್ನ ಕಂದಗಳ್ರಾ। ನೀವು ಮಾತ್ರ ಹೆದರಬ್ಯಾಡಿ। ಇನ್ನು ವಾರ ವಾರ ತುಂಬೋದ್ರಲ್ಲಿ। ನಿಮ್ಮನ್ನ ನಾನು ಬಂದು ಸೆರೆ ಬಿಡಿಸ್ತೀನಿ ಅಂತ ಮಾದೇವರು ಹೇಳಿದ್ರು। ನಾರಾಯ್ಣ ದಂಡ್ಕಕ್ಕೆ ಬಂದು ಮಾದೇವ। ಅಯ್ಯಾ ರಂಗಸ್ವಾಮಿ ಈ ಶ್ರವಣ

ದೊರೆಯ। ಎಕ್ಕದಗಿಡ್ಡೆ ಎಲಿಚಿ ಗೆಡ್ಡೆ ಕಿತ್ತಂಗೆ ಮಾಡ್ತೀನಿ। ನೀವೊಬ್ರೂ ಹೆದರಬ್ಯಾಡಿ। ಈ ಪಟ್ಟಣದಲ್ಲಿ ನಾನು ಬರೋನ ಗಂಟ ಧೈರ್ಯವಾಗಿರಿ ಅಂತನಲ್ಲ ಮಾದೇವ।

ನೋಡಿ ನಮ್ಮ ಶಿವನಾ!
ಆಹಾ ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಯ್ಯನಿಗೆ।

ಮಲೆ ಮಾದೇವ ತನ್ನ ದೇಹದಲ್ಲಿ ತಾನೇ ಯೋಚನೆ ಮಾಡಿದ। ಹರ ಹರಾ ಆಕಾಸ ಅಂತ್ ನೋಡಿದ। ಧರಣಿ ವೇಗ ದೃಷ್ಟಿಯಿಂದ ನೋಡಿದರಂತೆ। ನಮ್ಮಪ್ಪಾಜಿ ಕೆಂಡಗಣ್ಣು ಮಾದಪ್ಪನವರು। ಬೂಲೋಕದಲ್ಲಿ ಕುಲ ಹದಿನೆಂಟು ಜಾತಿ ಒಳಗೆ। ಸಿವ ಸಿವಾ ಹರಳಪ್ಪ ಗನಸರಣ ಉದ್ಯೋಗವನ್ನು ಮಾಡಿಕೊಂಡಿದ್ದನಂತೆ। ಅವನು ಹರಳಯ್ಯನ ಮಟಕೆ ಕಡದು ಬತ್ತವನಲ್ಲೋ। ಮೂಡಲ ಮಲೆಯ ಮಾದೇವ।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಆಗ ಹರಳಯ್ಯ। ಪಾದ್ರಾಕ್ಷಿ ಹೊಲಿವಂತ ಸ್ಥಳದಲ್ಲಿ। ನಮ್ಮಪ್ಪಾಜಿ ಕೆಂಡಗಣ್ಣು ಮಲೆ ಮಾದಪ್ಪನವರು। ಸುದ್ದ ಮೂಡಲಾಗಿ ನಿಂತು। ಪಂಚೇಳು ನುಡಿ ಧರ್ಮ ಕ್ವಾರಣ್ಯ ಸಾರಿ ನಿಂತವನಲ್ಲಾ। ನನ್ನ ಮೂಡಲ ಮಲೆಯ ಮಾದೇವಾ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಸಿವ ಸಿವಾ ಆಗ ನಮ್ಮಪ್ಪಾಜಿ। ಮಲೆ ಮಾದಪ್ಪನವರು। ಆತಿ ಲಿಂಗಯ್ಯನ ಬಿಕ್ಷೆ। ಜ್ಯೋತಿ ಲಿಂಗಯ್ಯನ ಭಿಕ್ಷೆ। ಜೋಳಿಗೆ ಹಿಡಿದಂತ ತಾತನ ಭಿಕ್ಷೆ। ಗುರು ಕಲ್ಯಾಣದ ಬಿಕ್ಷೆ। ತಾಯಿ ಉತ್ತರಾಜಮ್ಮನ ಭಿಕ್ಷೆ। ತಂದೆಯಾದಂತ ಸಿವದಾಸಪ್ಪನವರ ಬಿಕ್ಷ। ಜೋಳಿಗೆ ಆಧಾರದ ಬಿಕ್ಷ। ಭಿಕ್ಷ ಬಿಕ್ಷ ಭಿಕ್ಷಾಂ ದೇಹಿ ಅಂತೇಳಿ। ಪಂಚೇಳು ನುಡಿ ಧರ್ಮ ಕ್ವಾರಣ್ಯ। ಹರಳಯ್ಯ ಉದ್ಯೋಗ ಮಾಡುವಂತ ಸ್ಥಳದಲ್ಲಿ ನಿಂತು ದಾನ ಕೇಳಿದರಂತೆ। ಹರಳಪ್ಪನವರು ಅತ್ರಿಸಿ ಮೇಲಕ್ಕೆ ಎದ್ದು ನಿಂತು। ಮಲೆ ಮಹಾದೇವನ ಸನ್ನಿದಾನದಲ್ಲಿ ಬಂದು। ಅವರು ದೀರ್ಘದಂಡ ನಮಸ್ಕಾರ ಮಾಡಿ। ನಿಂತವನಲ್ಲೋ ಹರಳಯ್ಯ। ಸಿವ ಸರಣಾನು।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಪರಮಾತ್ಮ ನಾನೇನು ಕೊಡಬಲ್ಲೆ। ಮಹದೇವ ನಾನಿರ ತಕ್ಕಂತದ್ದು। ಸಿವಸಿವಾ ಅರಮನೆ ಆನಂದವಾಗಿದೆ। ನನ್ನ ಅರ್ದಾಂಗಿ ಕಲ್ಯಾಣಮ್ಮನವರಿದ್ದಾರೆ। ಅರ್ದಾಂಗಿ ಇರತಕ್ಕಂತ ಸ್ಥಳದಲ್ಲಿ ಬಂದು ಬಿಕ್ಷವನ್ನು ಕೇಳಿದ್ದಾರೆ। ಚಿನ್ನದ ಗಿಂಡಿ ಒಳಗೆ ಪನ್ನೀರು ತಂದು। ನನ್ನ ಅರ್ದಾಂಗಿ ಕಲ್ಯಾಣಮ್ಮನವರು। ನಾವಿಬ್ಬರೂ ಕೂಡಿ ಮುತ್ತಿನ ಪಾದವನ್ನು ತೊಳೆದು। ನಿನ್ನ ಪಾದತ್ವ ನಮ್ಮ ಹೃದಯಕ್ಕೆ ಸಲ್ಲಿಸಿ ಆನಂದವಾಗಿ। ಪರಮಾತ್ಮ ನಿನ್ನ

ಪಾದದ ಮ್ಯಾಲೆ ಕೆಂಡಸಂಪಿಗೆ। ದೇವಲಿಂಗ ನಾಗಲಿಂಗು ಪುಷ್ಪ ಮುಡಿಸಿ। ಗೆಜ್ಜಲ ಕೆಂಡಕ್ಕೆ ಅಷ್ಟು ದೂರ ಹೊಯ್ದು। ಅಷ್ಟು ದೀರ್ಘ ದಂಡ ನಮಸ್ಕಾರ ಮಾಡಿ। ಮುತ್ತಿನ ಜೋಳಿಗೆಗೆ ನವರತ್ನ ದಾನ ಕೊಟ್ಟು। ಮೂಡಲ ಮಲೆ ಕೈಲಾಸಕ್ಕೆ ಕಳಿಸ್ತಿದ್ದೆ ಮಾದೇವ। ನಾನು ಉದ್ಯೋಗ ಮಾಡುವಂತ ಸ್ಥಳದಲ್ಲಿ ಬಂದು ನಿಂತು। ಬಿಕ್ಷನ್ನ ಕೇಳ್ತಾ ಇದ್ದೀರಲ್ಲಾ ಗುರುವೇ ನಾನೇನು ಕೊಡಬಲ್ಲೆ ಅಂದನಂತೆ। ನಿನ್ನಲ್ಲಿ ದಾನ ಕೇಳಲಿಕ್ಕೆ ಬಂದೆ। ಎಂದಾವನೇ ನನ್ನ ಮೂಡಲ ಮಲೆಯ ಮಾದೇವಾ

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಪರಮಾತ್ಮ ಆಗ ನಮ್ಮಪ್ಪಾಜಿ ಮಲೆ ಮಾದ್ದಪ್ಪನವರು। ಭಕ್ತ ನಿನ್ನಲ್ಲಿ ದಾನ ಕೇಳಲಿಕ್ಕಾಗಿ ನಾನು ಬಂದಿವ್ನಿ। ದಾನವನ್ನು ಕೊಡಬಲ್ಲ ಹಾಗೇ ಕಳುಹಬಲ್ಲೆ ಎಂದರು। ಆಗ ಮಲೆ ಮಾದೇವನ ಮಾತುಗಳನ್ನು ಕೇಳಿ। ಸರಣನಾದ ಹರಳಪ್ಪನವರು। ಶಿವ ಶಿವಾ ನೀನು ನನ್ನಲ್ಲಿ ದಾನ ಕೇಳಲಿಕ್ಕೆ ಬಂದ ಮ್ಯಾಲೆ। ದೇಹ ಪವಿತ್ರವಾಯಿತು। ಜನುಮ ಸಾರ್ಥಕವಾಯಿತು। ಮಹಾದೇವ! ಏನು ಬೇಕಾದರೂ ಕೇಳಬಹುದು। ನಾನು ಸಿರಸಾ ವಹಿಸಿ। ನಿನ್ನ ಸಿರಪಾದ ಸತ್ಯವಾಗಲೂ। ನಡೆಯಬಲ್ಲೆ ಅಂದನಂತೆ। ನನಗೆ ಒಂದು ಜೊತೆ ಪಾದ್ರಾಕ್ಷಿ ಬೇಕು ಅಂತ ನಿಂತಾವನೆ ನನ್ನ ಮೂಡಲ ಮಲೆಯ ಮಾದೇವಾ।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಇಪ್ಪತ್ತೊಂದು ದಿವಸ ನಿನಗೆ ಕಾಲ ಕೊಟ್ಟಿದ್ದೀನಿ। ಮಂಗಳವಾರ ದಿವಸ ಹನ್ನೆರಡು ಘಂಟೆ ಒಳಗೆ। ಶಿವ ಶಿವಾ ಬಂಕಾಪುರಿ ಪಟ್ಟಣದ ಪಕ್ಕದಲ್ಲಿ। ಹುಟ್ಟರೆ ಕಲ್ಲಿದೆ। ಆ ಹುಟ್ಟರೆ ಕಲ್ಲಿನ ಮ್ಯಾಲಕ್ಕೆ ನೀನೇ ಮುಟ್ಟಿ ತರಬೇಕು। ಅದರಳತೆ ಏನೆಂದರೆ ಪರಮಾತ್ಮ ಕಟ್ಟಿಗಲ ಒಂದಡಿ। ಉದ್ದ ಎರಡೂವರೆ ಅಡಿ ಪಾದದ ಅಳತೆ। ನೀನು ಆ ತರವಾಗಿ ಹರಳ ಮೆಟ್ಟಿ ಪಾದ್ರಾಕ್ಷಿ ಹೊಲೀಬೇಕೋ ನನಗೆ ಪಾದ್ರಾಕ್ಷಿ ಕೊಡುತೀಯಾ ಅಂತೇಳಿ ನಿಂತವರೆ। ನನ್ನ ಮೂಡಲ ಮಲೆಯ ಮಾದೇವಾ।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಮಾದೇವಾ ನಾನು ಮಾತಿಗೆ ತಪ್ಪುವವನಲ್ಲ। ಶಿವ ಶಿವಾ ನೀವು ಹೇಳಿದ ಹಾಗೇನೇ। ಆಕಾಸವೇಣಿ ಭೂಮಿತಾಯಿ, ಅಷ್ಟ ಪಾಲಕ ದಿಕ್ರಾಣೆ। ನಿಮ್ಮ ಮುತ್ತಿನ ಪಾದ ಸತ್ಯವಾಗ್ಲೂನೂ ಶಿವ ಶಿವಾ। ನನ್ನರ್ಧಾಂಗಿ ಸತ್ಯವಾಗ್ಲೂನೂ। ಪಾದಕ್ಕೆ ಪಾದ್ರಾಕ್ಷಿ ತಾನೇ ಮಾಡಿಕೊಂಡು ಬರ್ತಿನಿ। ಮಹಾಪ್ರಭು ಅಂತೇಳಿ ಒಪ್ಪಿ ನಿಂತನಂತೆ। ಉಸಿ

ನುಡಿ ಬ್ಯಾಡ ಭಕ್ತ! ಇಲ್ಲಿ ಮಹಾಪ್ರಭು ಸತ್ಯವಾಗಲೂ! ಮಾಡಿಕೊಡುತೀನಿ ಅಂದನು! ನಿನ್ನ ಸತ್ಯಕೆ ನಾನು ಮೆಚ್ಚಿದೆ ಹರಳಪ್ಪನವರೇ! ಆದರೆ ಮತ್ತೊಂದು ಮಾತು! ಅದೇನು ಹೇಳು ಗುರುವೇ ಅಂದನಂತೆ! ನೀನು ಯಾತಾರ ಚರ್ಮದಲ್ಲಿ ಮಾಡುತೀಯಾ ಅಂತೇಳಿ ಕೇಳವನಲ್ಲಾ ಮೂಡಲು ಮಲೆಯ ಮಾದೇವಾ!

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ!

ನಿಮ್ಮಪಾದಕ್ಕೆ ಹನ್ನೆರಡು ಹೆಜ್ಜೆ ಹುಲಿಯನ್ನು! ನಾನು ಒಡೆತಂದು ಅದರ ಚರ್ಮಗಳನ್ನು ಸುಲಿದು! ಅದರಲ್ಲಿ ಪಾದ್ರಾಕ್ಷಿ ಒಲಿದರೆ! ಒಪ್ಪಿಗೆ ಇಲ್ಲವೇ ಅಂತೇಳಿ! ನಿಂತವನಲ್ಲೋ ಹರಳಯ್ಯ ಸಿವ ಸರಣಾನು!

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ!
ಒಜ್ಜಾರದಲೆಗೆ ಒಳಗೆ ಕಿರೀಟ ಗಜ್ಜುಮಲೆ ಕೊಡುಗಲ್ಲೊಳಗೇ!
ಆಹಾ ಒಕ್ಕಲ ಗಂಟೆ ಉಲಿಯ ಚರ್ಮ ದೊಡ್ಡಮಲೆ ಮಾದಪ್ಪನಿಗೆ!
ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ!

ಹೇಳಪ್ಪಾ ಭಕ್ತ! ಆ ಹುಲಿ ಚರ್ಮದ ಪಾದರಕ್ಷೆಗಳೂ ನನಗೆ ಒಪ್ಪಿಗೆ ಇಲ್ಲ ಅಂದನು ಮಾದೇವ! ಮತ್ತ ಯಾತರ ಚರ್ಮದಲ್ಲಾಗಬೇಕು ಮಾದೇವ! ಅದನ್ನು ತಿಳಿಸಿ ಬಿಟ್ಟು ಮುಂದಕ್ಕೆ ಹೋಗುವವರಾಗಿ! ಅಂದರು! ಕೇಳಪ್ಪಾ ಪರಮ ಭಕ್ತ ಹರಳಯ್ಯನವರೇ! ಸಿವ ಸಿವಾ ಹೆಣ್ಣೋಳುಕೋಟಿ ಸ್ತ್ರೀ ಜನ್ಮದಲ್ಲಿ! ಪತಿವ್ರತಾ ಧರ್ಮದಲ್ಲಿ ಯಾರಿದ್ದಾರೆ! ಆಕೇನ ಎಳೆತಂದು! ಆಕೆ ಬುರುಡೆ ಒಡೆದು! ಸಿವ ಸಿವಾ ಅದರಲ್ಲಿ ಎಲ್ಲಾ ಸಲಕರಣೆ, ಉಲ್ಬೆಗಳನ್ನೆಲ್ಲಾ ಧರಿಸಿ! ಅವರ ಚರ್ಮದಲ್ಲಿ ಪಾದ್ರಾಕ್ಷಿ ಒಲಿದು ತಂದು! ನನಗೆ ಒಪ್ಪಿಸಿದರೆ ನಾನು ಒಪ್ಪಿ! ನಾನು ಮೂಡಲ ಮಲೆಗೆ ಹೋಗುವೆ ಎಂದವರೆ! ನನ್ನ ಹೆಂಡಿತಿಲ್ಲದ ಕೆಂಡಗಣ್ಣ ಮಲೆ ಮಾದೇವಾ!

ಆಹಾ... ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಯ್ಯನಿಗೆ!

ಅವರು ಕಂಬದ ಬೋಳಿ ದಿಂಬಾದ ಬೆಟ್ಟಕ್ಕೆ ಬತ್ತವನಲ್ಲೋ! ಮೂಡಲ ಮಲೆಯ ಮಾದೇವಾ! ಮಲೆಮಾದಪ್ಪನವರು! ಕಂಬದ ಬೋಳಿ ದಿಂಬದ ಬೆಟ್ಟದ ಮೇಲೊರಗಿ! ನಿದ್ರೆ ಮಾಡ್ತಿದ್ದರಂತೆ! ಅಷ್ಟ ಬೆಟ್ಟ ಹಾಸಿಕೊಂಡು! ಅಷ್ಟ ಬೆಟ್ಟ ಹೊದ್ದುಕೊಂಡು! ಅಷ್ಟ ಬೆಟ್ಟ ಕಿತ್ತು ಒರಗಿ ನಿದ್ದೆ ಮಾಡುವಂತಾ ಕಾಲದಲ್ಲಿ! ಬಂಕಾಪುರಿ ಶ್ರವಣ ಮಹಾರಾಜಾ! ಸರ ಮುನ್ನೂರ ಮೂವತ್ತು ಮೂರು ಕೋಟಿ ದೇವತೆಗಳನ್ನ! ದನ ಮಾಡ್ಯಾನಾ ಬಿಡುಗಡೆ ಮಾಡಿದನಂತೆ!

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ!

ಹರಳಯ್ಯ ಮಲೆ ಮಾದೇವನ ಸನ್ನಿದಾನದಲ್ಲಿ। ಶಿವ ಶಿವಾ ಆನಂದವಾಗಿ ಪ್ಪಿದನಲ್ಲಾ। ಪಾದ್ರಾಕ್ಷಿಗೆ ಅಂತೇಳಿ। ಆತನು ಅರಮನೆಗೆ ಆನಂದವಾಗಿ ಬರುತಾವನಲ್ಲಾ। ಹರಳಯ್ಯ ಶಿವ ಸರಣಾನು।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।

ಹರನಿಗೆ ದುಃಖ ಶಿವನಿಗೆ ಸೋಕವನ್ನು ಮಾಡಿ। ಚಿಂತಾಕ್ರಾಂತನಾಗಿ। ಅರಮನೆ ಒಳಗೆ ಬಂದು। ಬಂಗಾರದ ಮಂಚ ಅಂತ ಆತನ ಮನೆ ಒಳಗಿತ್ತು। ಅಷ್ಟೈಸ್ವರ್ಯ ಉಳ್ಳಾದಂತ ಪುರುಸ ಹರಳಪ್ಪನವರು। ಮಂಚದ ಮ್ಯಾಲೆ ಮೊಕಣ್ಣನಾಗಿ ಮಲಗಿ। ಹರನಿಗೆ ದುಃಖ ಮಾಡವನಲ್ಲೊ। ಶಿವನಿಗೆ ಸೋಕ ಮಾಡವನೋ।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಅರ್ಧಾಂಗಿಯಾದಂತ ಕಲ್ಯಾಣಮ್ಮನವರು। ತಲೆದೆಸೆ ಒಳಗೆ ಹೋಗಿ। ನಿಂತುಕೊಂಡು ಆನಂದವಾಗಿ। ಆತನ್ನ ವೆಚ್ಚಾಳದಲ್ಲಿ ಕೇಳುತ್ತಾ ನಿಂತಾವರಲ್ಲಾ। ಅರ್ಧಾಂಗಿ ಕಲ್ಯಾಣಮ್ಮ।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಹರನಿಗೆ ದುಃಖ ಶಿವನಿಗೆ ಸೋಕ ಮಾಡಿ ಚಿಂತಾಕ್ರಾಂತನಾಗಿ। ಅರಮನೆ ಮಂಚದ ಮ್ಯಾಲೆ ಮೊಕಣ್ಣನಾಗಿ ಮಲಗಿದ್ದೀರಲ್ಲಾ। ಕಾರಣಾವೇನು ಅಂತ ಕೇಳುತ್ತಾ ನಿಂತವಳಲ್ಲಾ. ಅರ್ಧಾಂಗಿ ಕಲ್ಯಾಣಮ್ಮ।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಶಿವ ಶಿವಾ ಆಗ ಹರಳಪ್ಪನವರು। ಕೇಳು ಕೇಳಮ್ಮ ಕಲ್ಯಾಣಮ್ಮನವರೇ। ಮೂಡಲ ಮಲೆ ಮಾದೇಸ್ವರ ನಾನು ಉದ್ಯೋಗ ಮಾಡುವಂತ ಸ್ಥಳದಲ್ಲಿ। ಬಂದು ನಿಂತು। ಪಂಚೇಳು ನುಡಿ ಧರ್ಮ ಕ್ವಾರಣ್ಯವನ್ನು ಸಾರಿದರು। ಅವರು ಪಾದ್ರಾಕ್ಷಿಗಳನ್ನು ಒಪ್ಪಿಸಿದರು। ಪರಮಾತ್ಮ ಯಾವ ತರ ಚರ್ಮದಲ್ಲಿ ಮಾಡಿಕೊಂಡು ಬರ್ತ್ತೀಯಾ ಎಂದು ಕೇಳಿದರು। ಹುಲಿ ಚರ್ಮದಲ್ಲಿ ಪಾದ್ರಾಕ್ಷಿ ಒಲಿದರೆ ನಿಮ್ಮ ಪಾದಕ್ಕೆ ಒಪ್ಪಿಗೆ ಇಲ್ಲವೇ ಮಾದೇವ ಅಂತ ಕೇಳಿದೆ। ಹೆಣ್ಣೇಳು ಕೋಟಿ ಸ್ತ್ರೀ ಜನ್ಮದಲ್ಲಿ। ಪತಿವ್ರತಾ ಧರ್ಮದಲ್ಲಿ ಯಾರಿದ್ದಾರೋ। ಅವರ ಕೊರಳ ಕೊಯ್ದು। ಅವರ ಬುರುಡೇನಾ ಒಡೆದರೆ ಚಿಪ್ಪಾಗುತ್ತೆ। ಆ ಚಿಪ್ಪಿನಲ್ಲಿ ನೀರಿಟ್ಟಿರ್ಬೇಕು। ತಲೆ ಮರಳು ಕಿತ್ತು ಅಂಟು ಮಾಡಬೇಕು। ಕಣ್ಣಿನ ಘೊರೆ ಕಿತ್ತು ಅಂಜ ಮಾಡಬೇಕು। ನರಗಳ ಕಿತ್ತು ದಾರ ಮಾಡಬೇಕು। ಚರ್ಮ ಸುಲಿಯ ಪಟ್ಟಿ ಮಾಡಬೇಕು। ಉಳಿಸುತ್ತಗೆ ಆ ಮೂಳೆ ಒಳಗೆ ಆಗಬೇಕು। ಅಷ್ಟು

ಆದರಲ್ಲೇ ಸಲಕರಣೆ ಮಾಡಿ ಪಾದ್ರಾಕ್ಷಿ ಹೊಲಿದರೆ। ನಾನು ಒಪ್ಪಿ ಮೂಡಲ ಮಲೆ ಕೈಲಾಸಕ್ಕೆ ಹೋಗುವೆ ಎಂದವರೆ। ಈ ಕಷ್ಟ ಯಾರು ನಿವಾರಣೆ ಮಾಡ್ತಾರೆ। ನಿನ್ನ ಕೈಲೂ ಅಸಾಧ್ಯ। ದೂರ ನಿಲ್ಲುವವಳಾಗು। ಎಂದವನಲ್ಲಾ ಹರಳಯ್ಯ ಶಿವ ಶರಣರು।

ಆಹಾ... ಕ್ವಾರಣ್ಯಗಳ ನೀಡಮ್ಮ ಮಾದೇವ ಲಿಂಗನಿಗೆ।

ಸಿವ ಸಿವಾ ಆಗ ಅರ್ಧಾಂಗಿಯಾದ ಕಲ್ಯಾಣಮ್ಮನವರು। ಪರಮಾತ್ಮ ಇದೆಲ್ಲಾ ನನ್ನಲ್ಲೇ ಇದೆ। ಊಟ ಮಾಡೇಳಿ ಅಂತೇಳಿ। ಕರೆದಾವಳಲ್ಲಾ ನನ್ನ ಅರ್ಧಾಂಗಿ ಕಲ್ಯಾಣಮ್ಮ।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಸಿವ ಸಿವಾ। ಆಗ ಆತ್ರಿಸಿ ಮೇಲಕ್ಕೆದ್ದು। ತನ್ನ ಅರ್ಧಾಂಗಿ ಕೈಲಿ ಗಂಗೆ ಈಸ್ಕೊಂಡ। ಪರಮಾತ್ಮ ವೆಚ್ಚಾಳದಲ್ಲಿ ಕಾಲು ಕೈಮುಖ ತೊಳೆದು। ಆಚಾರಗಳನ್ನು ತೀರಿಸಿ। ಆ ನಡುಮನೆ ಒಳಗೆ ಬಂದು। ಬಂಗಾರದ ಹರಿವಾಣ ಕೊಟ್ಟು। ಬಂಗಾರದ ತಟ್ಟೆಕೊಟ್ಟು ಊಟಕ್ಕೆ ಕಲ್ಯಾಣಮ್ಮನವರು। ಆ ದಿವಸ ಅರ್ಧ ಮುದ್ದೆ ಪ್ರಸಾದ ನೀಡಿ। ಕಲ್ಯಾಣಮ್ಮನವರು ಹರಳಪ್ಪನವರಿಗೆ ಊಟ ಬಡಿಸಿ। ಅವಳು ಪಕ್ಕಾದ ಮನೆಗೆ ಕಡೆದು ಬತ್ತಾವಳಲ್ಲೋ ಕಲ್ಯಾಣಮ್ಮ ಶಿವ ಶರಣೆ।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲು ಮುನಿಗೆ।

ಆ ಕಡೆಯಿಂದ ಹೋಗುವಾಗ। ಈ ಕಡೆಯಿಂದ ಕಲ್ಯಾಣಮ್ಮನವರು ಬಂದರಂತೆ। ಇಷ್ಟೊತ್ತು ಎಲ್ಲೋಗಿದ್ದೆ ಕಲ್ಯಾಣಿ ಅಂತೇಳಿ ಅವರ ಹಸ್ತಗಳನ್ನು ತೆಗೆದು। ಕಲ್ಯಾಣಿ ಕೆನ್ನೆಮೇಲೆ ಒಡೆದವನಲ್ಲೋ ಹರಳಯ್ಯ ಸಿವ ಸರಣಾನೂ।

ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಪರಮಾತ್ಮನ ಚರ್ಮ ಸುಲಿದು। ಪಾದ್ರಾಕ್ಷಿ ವೊಲಿದು ಬಿಡು ಮಹಾಪ್ರಭು। ನಾನು ಐಕ್ಯವಾಗ್ತೀನಿ ಅಂತೇಳಿ। ಅವಳು ಪಕ್ಕನೆ ಪ್ರಾಣ ಬಿಟ್ಟಾವಳಲ್ಲೋ। ಅರ್ದಾಂಗಿ ಕಲ್ಯಾಣಮ್ಮ। ಸಿವ ಸಿವಾ ಆಗ ಸರಣರಾದ ಹರಳಪ್ಪನವರು। ವೆಚ್ಚಾಳದಲ್ಲಿ ತನ್ನ ಅರ್ಧಾಂಗಿ ಕೊರಳು ಕೊಯ್ದು। ಸಿವ ಸಿವಾ ತಲೆ ಬುರುಡೆ ಒಡೆದರಂತೆ। ಕಲ್ಯಾಣಮ್ಮನವರ ಚರ್ಮ ಸುಲಿದು। ಕೂಡಲೇ ಉನಿಯಾಕಿದರು। ಆನಂದವಾಗಿ ಹರಳು ಮೆಟ್ಟಿ। ಪಾದ್ರಾಕ್ಷಿ ಹೊಲಿದು ಕೂತಾವನಲ್ಲೋ। ಹರಳಯ್ಯ ಸಿವ ಸರಣಾನೂ

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಭೂಲೋಕದಲ್ಲಿ ಉದ್ಭವಿಸಿದ ಕೆಂಡಗಣ್ಣು ಮಲೆ ಮಾದೇಶ್ವರ ಸಾದನೆಯಿಂದ ಶ್ರವಣ ಮಹಾರಾಜನ ಕೊಂದಾಕಕ್ಕೆ ಸಂದಿ ಅಂತೇಳಿ। ಕಾದು ಕುಂತಿದ್ದ। ಅದಕ್ಕೆ ತಕ್ಕ ಉಪಾಯ ಹುಡುಕಿ। ನಮ್ಮನ್ನು ಬಿಡಿಸಿ ಕೊಳ್ಳಕ್ಕೆ ಬಂದಿದ್ದಾರೆ। ಅಂತೇಳಿ। ಸರ ಮುನ್ನೂರ ಮೂವತ್ತ ಮೂರು ಕೋಟಿ ದೇವಾನುದೇವತೆಗಳು। ಏಳು ತಿಂಗಳ ಮಗು ಪಾದಕ್ಕೆ ದೀರ್ಗದಂಡ ನಮಸ್ಕಾರ ಮಾಡಿ। ನಿಂತವರಲ್ಲೋ ಸರ ಮುನ್ನೂರ ಮೂವತ್ತು ಮೂರು ಕೋಟಿ। ದೇವಾದಿ ದೇವತೆಗಳು।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಪರಮಾತ್ಮ ಆಗ ನಮ್ಮಪ್ಪಾಜಿ ಮಲೆ ಮಾದಪ್ಪನವರು। ಬೂದೇವಿನ ಕರೆದರಂತೆ। ಕೇಳಮ್ಮ ಭೂಮಿತಾಯಿ ಅದೇನೇಳಪ್ಪಾ ಮಾದೇವ ಅಂತೇಳಿ। ಅವರು ತಲೆಬಾಗಿ ನಿಂತರು। ಸಿವ ಸಿವಾ ಮಟ ಮಂಗಳವಾರದ ದಿವಸ। ಮದ್ಯಾನದಲ್ಲಿ ಅರಗಲ್ಲಿನ ಮ್ಯಾಲೆ ಮಣ ಮಣ ಮೂಗಂಡುಗ ಅರಗುಯ್ದು। ಅರಿಗಿನ ಮ್ಯಾಲೆ ನಾನೇ ಪಾದ್ರಾಕ್ಷೆ ಮಡುಗಿದ ಕೂಡಲೇ ಶ್ರವಣ ಮಹಾರಾಜ ಪಾದ್ರಾಕ್ಷೆ ಧರಿಸುವಾಗ। ಹೆಬ್ಬೆಳ್ಳು ಸನ್ನೆ ಮಾಡ್ತೀನಿ। ಹುಟ್ಟರೆ ಕಲ್ಲು ಬಕ್ಕನೆ ಬಾಯಿ ಬಿಡಬೇಕು। ಅಂತೇಳಿ ಮೊದಲೆ ಆ ಪರಮಾತ್ಮನಿಗೆ ತೀರ್ಮಾನ ಕೊಟ್ಟರಂತೆ। ಆಗಲಿ ಅಷ್ಟು ಸಹಾಯ ಮಾಡಿಕೊಡುತೀಯಾ ಅಂತೇಳುವಾಗ। ಆಗಲಿ ಮಾದೇವ ಸಿವಸಿವಾ ನಿನಗಿಂತ ನಾನೆಷ್ಟೆ। ನಮ್ಮ ಕಷ್ಟ ಬಿಡುಗಡೆ ಮಾಡಿದರೆ ಸಾಕು। ಆಗಲೀ ಅಂತೇಳಿ ಭೂದೇವಿ ನಿಂತರು। ಆಗ ಸಿವ ಸಿವಾ ನಮ್ಮಪ್ಪಾಜಿಯವರು। ಸೂರ್ಯದೇವರನ್ನು ಕರೆದನಂತೆ। ಕೇಳಪ್ಪಾ ಸೂರ್ಯದೇವ। ಹುಟ್ಟರೆ ಕಲ್ಗೆ ನಿನ್ನ ಕಿಡಿ ತೆರೆದು ನೋಡಬೇಕೋ। ಹುಟ್ಟರೆ ಕಲ್ಲು ಗಡಗಡನೆ ಕಾಯಬೇಕು। ಅರಗುಯ್ದ ಮೇಲೆ ಅರಗು ಕುದಿ ಉಟ್ಟಬೇಕು। ಹಾಗಿರಬೇಕು। ಹಾಗೇ ಆಗಲಿ ಮಹಾಪ್ರಭು ಅಂತೇಳಿ ಒಪ್ಪಿ ನಿಂತನಂತೆ। ವರ ಕೊಟ್ಟ ನಾರಾಯಣನ ಹತ್ತಿರ ಕರೆದು ನಿಲ್ಲಿಸಿ। ಅಪ್ಪಾಜಿಯವರೇ ಮಹಾದೇವ ಸಿವ ಸಿವ। ನಿನ್ನ ನಾಮ ಡೊಂಕಾಗಿರಬೇಕು। ಸೂರ್ಯ ನಿನ್ನಲ್ಲಿ ನೋಡಿ। ಬ್ರಹ್ಮ ನಿನ್ನಲ್ಲಿ ಪಂಚಾಗ ಕೇಳ್ತಾನೆ। ಅವನಿಗೆ ಮೃತ್ಯುಂಜಯ ಹೆಗಲೇರಿರುತದೆ ಕಣಯ್ಯಾ। ಬ್ರಹ್ಮ ನೀನು ಸುಳ್ಳೇಳಬೇಕು। ಆವಾಗ ಸುರ ಮುನ್ನೂರ ಮೂವತ್ತ ಮೂರು ಕೋಟಿ ದೇವತೆಗಳಿಗೆ। ಬೋದನೆ ಹೇಳಿದ ಮಹದೇವ। ನಾನು ತಲೆಗೊಂದು ಕಲ್ಲು ಅಂತೀನಿ। ಅಂತ್ಯ ಕಾಲದಲ್ಲಿ ತಲೆಗೊಂದು ಕಲ್ಲು ಹಾಕ್ಬುಡಿ। ಶ್ರವಣನ ಸಂಹರಿಸಿ ಬರ್‍ತಿನಿ। ಇಷ್ಟು ಸಹಾಯ ಮಾಡಿದರೆ ಸಾಕೆಂದ। ಆಹಾರಕ್ಕೆ ಬಾರಿ ತೊಂದರೆ ಆಗಿದೆ। ನಮಗೆ ನೀರು ಕೊಡು ಮೊದಲಾಗಿ ಅಂದ್ರು। ಆಗ ಹಾಲು ಕೊಳ, ನೀರು ಕೊಳ। ಆನಂದವಾಗಿ ಸೃಷ್ಟಿ ಮಾಡಿದ ಕೆಂಡಗಣ್ಣು ಮಲೆ ಮಾದಪ್ಪನವರು। ಅರಿವಿಲ್ಲದ ಮಲೆ ಒಳಗೆ ಆನಂದವಾಗಿ ಆಲು ಕೊಳದಲ್ಲಿ

ಆನಂದವಾಗಿ ಹಾಲು ಕುಡಿದರು। ಫಲಹಾರಗಳೆಂದರೆ ಜಂಬುನೇರಳೆ ಕಿತ್ತಳೆ ಹಣ್ಣಂತೆ। ಕಸಿ ಮಾಡಿದ ಮಾವಿನ ಹಣ್ಣು। ಕೊಳದೇರಿಮ್ಮಾಲೆ ಆನಂದವಾಗಿ ಉದ್ಭವಿಸಿತ್ತು। ವೆಚ್ಚಾಳದಲ್ಲಿ ದೇವತೆಗಳೆಲ್ಲಾ ಫಲಹಾರ ಊಟ ಮಾಡಿ ಮಾದೇವನ ಸನ್ನಿದಾನದಲ್ಲಿ ಬಂದು ನಿಂತು। ಬೋದನ ಕೇಳಿದರಂತೆ ಕೆಂಡಗಣ್ಣ ಮಲೆ ಮಾದಪ್ಪನವರು। ನಾನು ಹೋಗಿ ಬರಲೆ ಅಂದನಲ್ಲಾ। ಶಿವ ಶಿವಾ ನಮಗೆ ಮಣ ಮೂಗಂಡುಗ ಅರಗು ಬೇಕು ಅಂದರು। ಮಲೆ ಮಾದಪ್ಪನವರು ಹೆಬ್ಬೆಳ್ಳು ತೋರಿದರಂತೆ। ಏನೇನು ಬೋದನೆ ಹೇಳಬೇಕು। ಎಲ್ಲರಿಗೂನೂ ವಹಿಸಿಬಿಟ್ಟು। ಅವನು ಹರಳಯ್ಯನ ಮಠಕ್ಕೆ ಕಡೆದು ಬತ್ತವನ್ನಲಾ। ಮೂಡಲ ಮಲೆಯ ಮಾದೇವಾ।

ಆಹಾ... ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೆ।

ಹರಳಪ್ಪನವರು ಬೆತ್ತದ ಮೊರವನ್ನು ತೆಗೆದು। ಮುತ್ತು ರತ್ನ ಸಣ್ಣಕ್ಕಿ ಸಣ್ಣ ಬೇಳೆ ಹಣವನ್ನು ಮಡಗಿದನಂತೆ। ನಡುವೆ ಒಂದು ಜೊತೆ ಪಾದರಕ್ಷೆ ಇಟ್ಟುಕೊಂಡು। ಚಿನ್ನದ ಗಂಡೀಲಿ ಪನ್ನೀರು ತಂದಾವನಲ್ಲೋ ಹರಳಯ್ಯ ಶಿವ ಸರಣಾನು।

ಆಹಾ... ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೆ।

ನೀನು ಒರ್ವನೇ ದಾನ ತಂದಿಡೋದು ಒಪ್ಪಿಗೆ ಇಲ್ಲ ಅಂತೇಳಿ। ನಿಂತಾವನಲ್ಲಾ ಮೂಡಲಮಲೆಯ ಮಾದೇವಾ।

ಆಹಾ... ಕ್ವಾರಣ್ಣ ನೀಡಮ್ಮ ಮಾದೇವ ಲಿಂಗನಿಗೆ।

ನಿನ್ನ ಅರ್ಧಾಂಗಿ ಕಲ್ಯಾಣಮ್ಮನವರು ನೀನು। ದಂಪತಿಗಳು ಸಹಿತವಾಗಿ ಒಲಿದು ನಿಂತು। ನನ್ನ ಸನ್ನಿದಾನದಲ್ಲಿ ಪಾದ ತೊಳೆದರೆ। ನನಗೆ ಒಪ್ಪಿಗೆ ಆಯ್ತದೆ। ತೃಪ್ತಿಯಿಂದ ನೀನು ಕೊಡ್ತಕ್ಕಂತ ಪಾದ್ರಾಕ್ಷಿಗಳನ್ನು ಒಪ್ಪಿ। ಮೂಡಲ ಮಲೆ ಕೈಲಾಸಕ್ಕೆ ಹೋಗ ಬಲ್ಲೆ। ಅಲ್ಲದಿದ್ರೆ ನಾನು ದಾನ ತಕ್ಕಳದೂ ಇಲ್ಲ। ಮುತ್ತಿನ ಪಾದ ಕೊಡುವುದಿಲ್ಲ ಅಂತೇಳಿ। ಮಲೆ ಮಾದೇಶ್ವರರು ಆನಂದವಾಗಿ ಹಿಂದಕ್ಕೆ ನಿಂತನಂತೆ। ಆಗ ಶರಣನಾದ ಹರಳಪ್ಪನವರು। ಕೇಳಪ್ಪಾ ಮಲೆ ಮಾದಪ್ಪನವರೇ ನನ್ನ ಅರ್ದಾಂಗಿ ಕಲ್ಯಾಣಮ್ಮನವರು। ಅವರು ತವರು ಮನೆಗೆ ಹೋಗಿ ಏಳು ದಿವಸವಾಯಿತು। ಅಂತೇಳಿ ಮಲೆ ಮಾದೇವನ ಸನ್ನಿದಾನದಲ್ಲಿ ಪರಮ ಭಕ್ತನಾದ ಹರಳಪ್ಪನವರು ಶಿವ ಶಿವಾ। ಸತ್ಯವಾದ ಶಿವ ಸರಣ ಆವನು ಒಂದು ದಿವಸ ಸುಳ್ಳು ಹೇಳಿರಲಿಲ್ಲ। ಅಂತ ಕಾಲದಲ್ಲಿ ಆಪತ್ತು ಬಾಂದವ ಕಾಪಾಡಿದರೆ ಕಾಪಾಡಬಹುದು ಇಲ್ಲದಿದ್ದರೆ ಬಿಡಬಹುದು ಎಂತವನಲ್ಲಾ ಹರಳಯ್ಯ ಶಿವ ಸರಣಾನೂ।

ಆಹಾ... ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೆ।

ಹರಳಯ್ಯನವರೇ ನಿನ್ನ ಅರ್ಧಾಂಗಿ ಕಲ್ಯಾಣಮ್ಮನ ಹೆಸರು ಹಿಡಿದು। ನೀನು ಸೂರು ಸಾರಿ ಸೊಲ್ಲೆತ್ತಿ ಕರೆದರೆ। ಆಕೆ ಇಲ್ಲಿಗೆ ಬರುತಾರೆ ಎಂದರು. ಮಾದೇವನ ನಿಹತ್ತ ಆನಂದವಾಗಿ ನೆನಪಿಟ್ಟು ಮಲೆ ಮಾದೇವ ಆಪತ್ತು ಬಾಂಧವ। ರಕ್ಷಣೆ ಕೊಡ್ತಾ ಇದ್ದೀಯಲ್ಲಪ್ಪಾ। ಶಿವ ಶಿವಾ ಸೃಷ್ಟಿಕರ್ತ ಅಂತೇಳಿ। ತನ್ನ ಅರ್ದಾಂಗಿ ಸೊಲ್ಲೆತ್ತಿ ಹರಳಯ್ಯನವರು। ಕಲ್ಯಾಣಿ ಕಲ್ಯಾಣಿ ಅಂತೇಳಿ ಕೂಗವನಲ್ಲೋ ಹರಳಯ್ಯ ಶಿವ ಶರಣಾನೂ।

ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।

ಕರಿವಂತ ಗಳಿಗೆ ಒಳಗೆ ಕಲ್ಯಾಣಮ್ಮನವರು। ಚಿನ್ನದ ಗಿಂಡಿ ಒಳಗೆ ಪನ್ನೀರಿಡಿದು। ಆನಂದವಾಗಿ ಅಗ್ನಿ ತುಂಬಿಕೊಂಡು ಅದರ ಮ್ಯಾಲೆ ಮೂಗುಳ ದೂಪ ಉಯ್ಯಕೊಂಡು। ಅಗ್ನಿ ಮ್ಯಾಲೆ ಆನಂದವಾಗಿ ಬಂದಾವಳಲ್ಲ। ಕಲ್ಯಾಣಮ್ಮ ಶಿವಶರಣೆ।

ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಹರಳಪ್ಪನವರು ಕಲ್ಯಾಣಮ್ಮನವರು ದಂಪತಿಗಳು ಕೂಡಿ ವೆಚ್ಚಾಳದಲ್ಲಿ। ಮುತ್ತಿನ ಪಾದವನ್ನು ತೊಳೆದರಂತೆ। ದೇವಲೋಕದ ಕೆಂಡ ಸಂಪಿಗೆ ಪುಷ್ಪಗಳನ್ನು ಮುಡಿಸಿ। ನಾಗಲಿಂಗ ಪುಶ್ಪ ಮುಡಿಸಿ ಹರಹರಾ ಅಷ್ಟದೂಪಗಳನ್ನು ನೀಡಿ ಆನಂದವಾಗಿ ಬಜನೆ ಮಾಡಿ ಕಲ್ಯಾಣಮ್ಮನವರು ಅವರ ಪಾದದ ಮೇಲಿರತಕ್ಕಂತ ಪುಶ್ಪ ತೆಗೆದು। ತನ್ನ ಮಂಡೆ ಮ್ಯಾಲೆ ಧರಿಸಿ। ಪಾದ ರಕ್ಷೆಗಳನ್ನು ಮೊರದಲ್ಲಿಟ್ಟುಕೊಂಡು। ವೆಚ್ಚಾಳದಲ್ಲಿ ಮುತ್ತಿನ ಕ್ವಾರಣ್ಯ ತತ್ತಾವಳಲ್ಲ। ಕಲ್ಯಾಣಮ್ಮ ಶಿವಶರಣೆ।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಶಿವ ಶಿವಾ ನಾಳೆ ಮಂಗಳವಾರದ ದಿವಸ। ಹನ್ನೆರಡು ಗಂಟೆ ಒಳಗೆ। ಹರ ಹರಾ ಹುಟ್ಟರೆ ಕಲ್ಲಿನ ಮ್ಯಾಲಕ್ಕ ನೀನೇ ಮುಟ್ಟಿ ತರಬೇಕು। ಪಾದ್ರಾಕ್ಷಿಗಳನ್ನು ನಾನು ಮುಟ್ಟಿದರೂ। ಆಕಾಸಕ್ಕೂ ಭೂಮಿಗೂ ಕೀಲು ಕೊಟ್ಟಂತೆ। ದಗ್ಗನತ್ತಿ ಬಗ್ಗನೆ ಬೂದಿ ಆಗೋಗ್ತೀನಿ। ಭಸ್ಮ ಆಗೋಗ್ತೀನಿ ಹರಳಪ್ಪನವರೇ। ಆತನನ್ನು ಭಸ್ಮ ಮಾಡಬೇಕು। ಶ್ರವಣ ಮಹಾರಾಜನನ್ನು ಕೊಲ್ಲೋದಕ್ಕೋಸ್ಕರ ಈ ಪಾದ್ರಾಕ್ಷಿ। ನೀನೇ ಮುಟ್ಟಿ ತರಬೇಕು ಅಂತೇಳಿ। ಒಪ್ಪಸಿ ಬಿಟ್ಟು। ನಮ್ಮಪ್ಪಾಜಿ ಮಲೆ ಮಾದಪ್ಪ। ಅವನು ಮತ್ತೊಂದು ಅವತಾರ ಎತ್ತಿ ಬರ್‍ತವನಲ್ಲೋ ಮೂಡಲ ಮಲೆಯ ಮಾದೇವಾ

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ಆಗ ನಮ್ಮಪ್ಪಾಜಿ ಮಲೆ ಮಾದಪ್ಪನವರು। ಮತ್ತೊಂದು ಅವತಾರವನ್ನು ಎತ್ತಿದನಂತೆ। ಹರಕಲು ಜೋಳಿಗೆ ಮುರುಕಲು ಬೆತ್ತವನ್ನು ಹಿಡಿದು। ಶ್ರವಣ

ಮಹಾರಾಜನ ಸಂದಾನಕ್ಕೆ ಬಂದನಂತೆ। ಆಗ ಮಂಗಳವಾರ ದಿವಸ ಹನ್ನೊಂದು ಗಂಟೆಗೆ ಬಂದ। ಆ ಕಡೆ ಅರಮನೆ ಒಳಗಡೆ ಡಂಗೂರವಾಯಿತು। ಏನಂತೇಳಿ ಶ್ರವಣ ಮಹಾರಾಜನ ಪಟ್ಟಣದಲ್ಲಿ ಸಾರ್‍ತಿದ್ದಾರೆ। ಶ್ರವಣ ಮಹಾರಾಜ ಮಂಗಳವಾರ ಹನ್ನೆರಡು ಗಂಟೆಗೆ ಊರ ಬಿಟ್ಟು ಊರಾಚೆ ಹುಟ್ಟರೆ ಕಲ್ಲಿನ ಮ್ಯಾಲೆ ಪಾದ್ರಾಕ್ಷಿ ಸ್ವೀಕರಿಸುತ್ತಾರೆ। ಅವರು ಪಟ್ಟಣದಲ್ಲಿ ಪಟ್ಟ ಕಟ್ಟಿಸಿಕೊಳ್ತಾರೆ। ಅವರು ವೆಚ್ಚಾಳದಲ್ಲಿರ್ತಾರೆ। ಅವರ ದರ್ಶನಕ್ಕೆ ಮಹಾಪ್ರಜೆಗಳೆಲ್ಲಾ ಬರಬೇಕು। ಅಂತೇಳಿ ಡಂಗೂರ ಮಾಡಿಸಿದರಂತೆ। ಹರ ಹರಾ ಶ್ರವಣ ಮಹಾರಾಜನಿಗೆ। ಕೋಳಿ ಕೂಗೋ ಮುಂಜಾವದಲ್ಲಿ। ಹರಿಯಾಗಿರ ತಕ್ಕಂತವನು ವರಕೊಟ್ಟ ಗುರು। ಸಿಸ್ಸನಾಗಿ ಆತನ ಹತ್ತಿರವೇ ಆಸೀನರಾಗಿದ್ರಲ್ಲಾ। ನಾಮಧಾರಣೆ ಮಾಡಿದ। ನಾಮ ತೆಯ್ದು। ಹಣೆ ಮೇಲೆ ಕ್ಯಾರೋಮ ಓದಂಗೆ ಹೊಂಟೋಯ್ತು ನಾಮ ಡೊಂಕಾಗಿ। ನಿಲುಗನ್ನಡಿ ಒಳಗೆ ನೋಡಿದನಂತೆ। ಸೂರ್ಯನಲ್ಲಿ ಕನ್ನಡಿ। ನಾಮ ಡೊಂಕಲಾಗಿತ್ತು। ಬ್ರಹ್ಮ ಪಂಚಾಂಗ ನೋಡು ಅಂದ। ಪಂಚಾಂಗ ನೋಡುವಂತ ಕಾಲದಲ್ಲಿ। ಮೃತ್ಯುಂಜಯ ಹೆಗಲೇರಿ ಕುಂತಿದ್ದನಂತೆ। ಇವತ್ತು ಹನ್ನೆರಡು ಗಂಟೆ ಒಳಗೆ। ನೀನು ಸತ್ತೋಗ್ತಿಯೇ। ಅದನ್ನು ಹೇಳಲಿಲ್ಲ ಬ್ರಹ್ಮದೇವರು। ನಿನ್ನ ಪಟ್ಟಣಕ್ಕೆ ವೆಚ್ಚಾಳ ಮಹಾಪ್ರಭು। ಸುಳ್ಳೇಳುವಾಗ ಅಲ್ಲೇ ಕಡೆದು। ತನ್ನ ಮನದಲ್ಲಿ ಬತ್ತಾವನಲ್ಲೋ। ಬಂಕಾಪುರಿ ಶ್ರವಣಾನು

ಆಹಾ... ಕ್ವಾರಣ್ಣ ನೀಡಮ್ಮ ಕೋಡುಗಲ್ಲಯ್ಯನಿಗೆ।

ಮಂಗಳವಾರದ ದಿವಸ। ಹನ್ನೆರಡು ಗಂಟೆಗೆ। ಹುಟ್ಟರೆ ಕಲ್ಲಿಗೆ ದಯವಾದರಂತೆ। ಬಂಕಾಪುರಿ ಶ್ರವಣ ಮಹಾರಾಜ। ಹರಳಯ್ಯ ಸಿವಸರಣ ಪಾದ್ರಾಕ್ಷಿಗೆ ಒಪ್ಪಿದನಲ್ಲಾ। ಒಂದು ಜೊತೆ ಪಾದ್ರಾಕ್ಷಿ ತಕ್ಕೊಂಡು। ಮಂಗಳವಾರದ ದಿವಸ ಆನಂದವಾಗಿ ಬಂದು ನಿಂತಿದ್ದನಂತೆ। ಆಕಾಸ ಅಂತು ನೋಡಿ ದರಣೆ ಬಗ್ಗಿ ನೋಡಿದ। ಬಂಕಾಪುರಿ ಶ್ರವಣ ಮಹಾರಾಜ। ಅಷ್ಟದೇವತೆಗಳ ಮಧ್ಯೆ ನಿಂತಿದ್ದಾನಲ್ಲ ಕೆಂಡಗಣ್ಣು ಮಲೆಯ ಮಾದಪ್ಪನವರು। ಏನಯ್ಯ ಮಾದಿಗ ನೀನು ಒಪ್ಪಿದವನು। ಸಿವ ಸಿವಾ ಒಪ್ಪಿಗೆಯಂತೆ ತರಲಿಲ್ಲವೇ ಅಂತ ಕೇಳಿದರು। ತಂದಿದ್ದೀನಿ ಮಹಾಪ್ರಭು। ಮಡಗಯ್ಯ ಅಂತ ಕೇಳಿದ್ದಂತೆ। ಹುಟ್ಟರೆ ಕಲ್ಲಿನ ಮ್ಯಾಲೆ ಮಣ ಮೂಗಂಡುಗ ಅರಗ ತಂದು। ಸರ ಮುನ್ನೂರು ಮೂವತ್ತ ಮೂರು ಕೋಟಿ ದೇವತೆಗಳು। ತಂದು ಉಯ್ದರಂತೆ। ಮಲೆ ಮಾದಪ್ಪನವರು ಹರಳಪ್ಪನಿಗೆ ಕೈ ಸನ್ನೆ ಮಾಡುವಾಗ। ಹರಳಪ್ಪನವರು ಪಾದ್ರಾಕ್ಷಿ ಮಡಗಿದರು ಅರಗಿನ ಮ್ಯಾಲೆ। ಈಗ ಸ್ವೀಕರಿಸಿ ಅಂತೇಳಿ ನಿಂತವರಲ್ಲಾ ಮೂಡಲ ಮಲೆಯ ಮಾದೇವಾ।

ಆಹಾ... ಕ್ವಾರಣ್ಣ ನೀಡಮ್ಮ ಮಹದೇವ ಲಿಂಗನಿಗೆ।

ಆಗಲೀಗ ಸಿವ ಸಿವಾ! ಬಲದ ಪಾದ್ರಾಕ್ಷಿ ಸರ್‍ರ್ಯಾಗಿ ಆಗ್ಬುಡ್ತು ಎಡದ ಉಂಗುಷ್ಟ ಸ್ವಲ್ಪ ಬಿಗಿಯಾಗ್ಬುಡ್ತು! ಹೇ ಯಾಕೋ ಈ ರೀತಿ ಆಟತೆ ಕೊಟ್ಟಿದ್ದಿ! ಏನೂ ಇಲ್ಲ ಬಲದ ಪಾದವನ್ನು ಮುಂದಿಟ್ಟುಕೊಂಡು! ಒಂದು ಸಾರಿ ತುಳಿಯಪ್ಪಾ ಅಂದ್ರು! ಜಾಡಿಸಿ ತುಳಿದ ಶ್ರವಣೇಶ್ವರ! ಅಪ್ಪಾ ದಡ್ಡನೆ ಮೊಕಡನಾಗಿ ಬಿದ್ದವನಲ್ಲೋ! ಜಗದೊಡೆಯಾ!

ಆಹಾ... ಕ್ವಾರಣ್ಕ ನೀಡಮ್ಮ ಕೋಡುಗಲ್ಲಿನ ಮ್ಯಾಗೆ!

ಅವಾಗಲೀಗ ಮೊಕಡವಾಗಿ ಬಿದ್ದಂತ ಕಾಲದಲ್ಲಿ ಮುದ್ದು ಮಾದಪ್ಪನವರು ಎತ್ತಿ ಅವನ ಬೆನ್ನ ಮ್ಯಾಲೆ, ತನ್ನ ಪಾದವನ್ನು ಮಡಗಿದ! ಹನ್ನೆರಡಾಳುದ್ದಾ ಪಾತಾಳಕ್ಕೆ! ಜಗಾ ಜಗನೆ ಭೂಮಿ ಜಗ್ಗಂದು ಬಿಡ್ತು! ಪಾತಾಳಕ್ಕೆ ಹೋಗ್ಬಿಟ್ಟ ಶ್ರವಣ!

ನನ್ನ ಸರಿಮಾನ ಈ ಧರಣಿ ಮ್ಯಾಲೆ ಯಾರಿದ್ದಾರೆ ಎಂದು! ಅಷ್ಟಮದದಿಂದ ಪಾದವನ್ನು ತಂದು! ದರಿಸಕ್ಕೆ ಹೋದರಂತೆ! ಮಲೆ ಮಾದಪ್ಪನವರು ಪಾದ್ರಾಕ್ಷಿ ದರಿಸುದಕ್ಕೂ ಮಾದೇವ ಹೆಬ್ಬೆಟ್ಟು ಸೈಗೆ ಮಾಡಿದನಂತೆ! ಪಾದ್ರಾಕ್ಷಿ ತಗಲಿದ ಕೂಡಲೇ! ಆಕಾಸಕ್ಕೂ ಭೂಮಿಗೂ ಕೀಲುಕೊಟ್ಟಂತೆ ಧಗ್‍ನತ್ತಿಕೊಂಡನಂತೆ! ಹುಟ್ಟರೆ ಕಲ್ಲು ಬಕ್ಕನೆಬಾಯಿ ಬಿಟ್ಟು ನಿಂತಾವನಲ್ಲೋ ಬಂಕಾಪುರಿ ಶ್ರವಣಾನ!

ಆಹಾ... ಕ್ವಾರಣ್ಕ ನೀಡಮ್ಮ ಮಾದೇವ ಲಿಂಗನಿಗೆ!

ಶಿವ ಶಿವಾ ಹುಟ್ಟರೆ ಕಲ್ಲು! ಬಕ್ಕನೆ ಬಾಯಿ ಬಿಟ್ಟು ನಿಂತು ಕೊಳ್ಳುವಂತಾ ಕಾಲದಲ್ಲಿ! ಬಂಕಾಪುರಿ ಶ್ರವಣ ಮಹಾರಾಜರು! ಆನಂದವಾಗಿ ಎರಡು ಕಲ್ಲಿಗೂ ನಡುವೆ! ಸಿವ ಸಿವಾ ಮೂರಾಳುದ್ದ ಅಂಡಿಗೆ ಇಳಿದು ವೊಂಟೋದ್ರಂತೆ! ಆಗಾ ನಮ್ಮಪ್ಪಾಜಿ ಮಲೆ ಮಾದಪ್ಪನವರು! ಸರ ಮುನ್ನೂರು ಮುವತ್ತಮೂರು ಕೋಟಿ ದೇವತೆಗಳು! ಮಹಾದೇವನ ಹಿಂಬಾಗದಲ್ಲಿ ನಿಂತಿದ್ದರಲ್ಲಾ ಅವನ ತಲೆಗೊಂದು ಕಲ್ಲು ಅಂತೇಳಿ! ನಿಂತಾವನಲ್ಲೋ ಮೂಡಲ ಮಲೆಯ ಮಾದೇವಾ!

ಆಹಾ... ಕ್ವಾರಣ್ಕ ನೀಡಮ್ಮ ಮಾದೇವ ಲಿಂಗನಿಗೆ!

ಸಿವ ಸಿವಾ ಅಷ್ಟದೇವತೆಗಳು ಹಾಕಿದ ಗುಂಡುಗಳಿಗೆಲ್ಲಾ ಆತನ ಎದೆ ಹತ್ರಕ್ಕೆ ಬಂದು ನಿಂತು ಕೊಳ್ತಂತೆ! ಇನ್ನೂ ಅವರ ದೇಹ ನಿರಸ ಕಾಣ್ತಿತ್ತಲ್ಲಾ! ವಸ್ತು ಹೋಗಿರಲಿಲ್ಲವಂತೆ ಬೇಯ್ತಾ ಇದ್ರೂನೂ! ನೀನು ಯಾರು ಅಂತೇಳಿ ವೆಚ್ಚಾಳದಲ್ಲಿ ಕೇಳವನಲ್ಲೋ ಬಂಕಾಪುರಿ ಶ್ರವಣಾನೂ

ಆಹಾ... ಕ್ವಾರಣ್ಕ ನೀಡಮ್ಮ ಮಾದೇವ ಲಿಂಗನಿಗೆ!

ನಾನೇ ಮಾದೇವ! ಮಲೆ ಮಹಾದೇವ... ಮಹಾದೇವ ಅಂತೇಳಿ! ಮಾದೇವ ಅಂದ್ರೆ ಯಾರಯ್ಯಾ ಅಂತ ಕೇಳಿದನು! ನಾನು ಕೂಡಲ ಸಂಗಮದೇವ ಅಂತ! ಸಿವ

ಸಿವಾ ನೀನು ಕೃತಯುಗದ ಪುರುಸನೇ। ಹೌದಯ್ಯ ಮಹಾರಾಜ ಅಂದನಂತೆ। ಆಗ ತನ್ನ ದೇಹದಲ್ಲಿ ತಾನೇ ಯೋಚನೆ ಮಾಡಿದ। ಈತ ಕೃತಾಯುಗದ ಪುರಸ ಆದಕ್ಕೆ ನನ್ನನ್ನು ಕೊಂದಾಕಿದ್ದಾನೆ। ಆದರೆ ಸಿವ ಸಿವಾ ನಿನಗೆ ಹೂವು ನೀರು ಹಾಕ್ತವರಲ್ಲಾ! ಅರಿವಿಲ್ಲದೆ ಮಲೆ ಒಳಗೆ ತಮ್ಮ ಮಕ್ಕಳು। ಅವರಿಗೆ ತಿನ್ನಲಿಕ್ಕೆ ಹಿಟ್ಟಿಲ್ಲದೆ। ಕುಡಿಯಲಿಕ್ಕೆ ನೀರಿಲ್ಲದೆ। ಮೈದೆಯಕ್ಕೆ ಬಟ್ಟೆ ಇಲ್ಲದೆ। ಅಂದಕ ನಿಂದಕ ಮಾಡಿ ಬಿಟ್ಟು। ನಿನ್ನ ಸ್ಥಳದಲ್ಲೇ ಅವರನ್ನು ಇರಿಸಿದೆ। ಅವರನ್ನು ನಾನು ಬಯಲು ಬೀಳಿಸ್ದೆ ಇದ್ದಮ್ಯಾಲೆ। ನಾನು ಶ್ರವಣ ಮಹಾರಾಜನಲ್ಲ ಅಂದನು। ವೈರಾಗ್ಯ ಮಾಡಿದನಂತೆ ಮಾದೇವನ ಮ್ಯಾಲೆ। ಅವನು ವಸ್ತು ಪೋಗ್ತಾ, ಇದ್ರೂನೂ ಶ್ರವಣ ಮಹಾರಾಜ। ನೀನು ಹೋಗೋ ದಾರಿ ನೋಡಯ್ಯ ಅಂದನು। ಇಲ್ಲಿಗೆ ಮರ್ರೋಗ್ತದೆ ನನ್ನ ಹೆಸರು। ಕಲಿ ನಾಸವಾಗುವ ತನಕ। ನನಗೊಂದು ಹೆಸರು ಕೊಡಬೇಕು ಎಂದವನಲ್ಲೋ ಬಂಕಾಪುರಿ ಶ್ರವಣಾನೂ।

ಆಹಾ... ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲಯ್ಯನಿಗೆ।

ಅವನು ರಕ್ಷಣೆ ಕೇಳುವಂತಾ ಕಾಲದಲ್ಲಿ। ಬಂಕಾಪುರಿ ಶ್ರವಣ ಮಹಾರಾಜನಿಗೆ। ವರವನ್ನು ಕೊಟ್ಟು ನಿಂತವನಲ್ಲಾ ಮೂಡಲ ಮಲೆಯ ಮಾದೇವಾ।

ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।

ನನಗೆಈ ರೀತಿ ಮೋಸ ಮಾಡ್ದೆ ಅಂತೇಳಿ। ನಾನು ನಗ್ಲು ಮುಳ್ಳಾಗಾದ್ರೂ ಹುಟ್ಟಿ। ನಿನ್ನ ಏಳು ಮಲೆ ಕೈಲಾಸಕ್ಕೆ ಬರುವಂತ ಪರಿಸೆಗೆ। ಕಾಲಿಗಾದ್ರೂ ಚುಚ್ಚಿಕೊಂಡು। ನಾ ಅಯ್ಯಪ್ಪಾ ಅನ್ನಿಸದೇ ಇದ್ದ ಮ್ಯಾಲೆ। ನಾನು ಶ್ರವಣ ದೊರೆ ಅಲ್ಲ ಅಂತವನೇ ಶ್ರವಣಯ್ಯ।

ಆಹಾ... ನೋಡಿ ನಮ್ಮ ಸಿವನಾ।

ನೀನು ನೆಗ್ಲು ಮುಳ್ಳಾಗಿ ಹುಟ್ಟಿ। ನನ್ನ ಪರಿಸೆ ಕಾಲಿಗೆ ಚುಚ್ಚಿಕೊಂಡು। ಜನಕ್ಕೆ ಅಯ್ಯಪ್ಪಾ ಅನ್ನಿಸಿದ್ರೆ। ನನ್ನ ಸರಿಸೋ ಕೈನಲ್ಲೇ। ಈಗ ಬೇಯ್ತಾ ಇದ್ದೀಯೋ। ಅದೇ ರೀತಿ ಈ ನೆಗ್ಗಲು ಮುಳ್ಳೆಲ್ಲಾ ಕಿತ್ತಾಕಿ। ಗುಡ್ಡೆ ಹಾಕಿಸ್ಬಿಟ್ಟು। ಇದೇ ರೀತಿ ನನ್ನ ಪರಿಸೇ ಕೈನಲ್ಲಿ ಬೆಂಕಿ ಹಾಕಿ ಬೇಯಸ್ತಾ ಇದ್ದೀನಿ। ಅಗ್ನಿ ಕೂಡ ಸುಡದೇ ಹೋದ್ರೆ। ನಾನು ಮಾದೇವನೇ ಅಲ್ಲ ಅಂತವರೇ ಮಾದೇವಾ।

ಆಹಾ... ನೋಡಿ ನಮ್ಮ ಸಿವನಾ।

ಆವಾಗಲೀಗ ನಮ್ಮಪ್ಪಾಜಿ। ನಿಂತುಕೊಂಡು ನಗ್ತಾ ಇರೋವರಂತೆ। ಸಿವ ಸಿವಾ ಶ್ರವಣ ದೊರೆ ಬೇಯ್ತಾ ಕತ್ತು ಉರ್ರೋದ್ಯಂತೆ ಆದರೆ ನಾನು ಪೋಗವ್ವು ಓಗ್ತಾ

ಇದ್ದೀನಿ। ನನಗೆ ಯಾವುದಾದ್ರೂ ಹೆಸ್ರು ಉಳ್ಳಂಗೆ ಮಾಡ್ಬೇಕು। ಅಂತ ಕೇಳ್ಕಂಬುಡ್ತಂತೆ। ಅಗ್ನಿ ಬೇಯಪ್ಪಾ ಆದ್ರೆ ವರ್ಷಕ್ಕೊಂದು ದಿವಸ ದೀಪಾವಳಿ ದಿವ್ಸ। ಹಳ್ಳಿ ಜನರೆಲ್ಲಾ ಪಂಜತ್ತಿಸಿಕೊಂಡು। ಈವಾಗ ಎಂಗುರಿತಾದೆ। ಅದೇ ರೀತಿಯಾಗಿ ನಿನ್ನ ಹೆಸರಿನ ಮ್ಯಾಲೆ। ಪಂಜಿನ ಬೆಳಕು ತೋರಿಸ್ತೀನಿ ಓಗಪ್ಪಾ। ಅಂತೇಳಿ ನಮ್ಮಪ್ಪಾಜಿ ಅಲ್ಲೇ ಸಾಪ ಕೊಡುತವರೇ ಮಾದೇವಾ।'

ಅಹಾ...! ನೋಡಿ ನಮ್ಮ ಶಿವನಾ।

ಅಂತ್ಯ ಕಾಲದಲ್ಲಿ ವಸ್ತು ಪೋಗುವಾಗ ಬಾಯಿತುಂಬಾ ಮಾದೇವ ಅಂತೇಳಿ। ಕರೆದನಂತೆ। ಕೇಳಪ್ಪಾ ಶ್ರವಣ ಮಹಾರಾಜ। ಕಲಿನಾಸವಾಗುವ ತನಕ। ನನಗೆ ಹೂವು ನೀರು ಹಾಕ್ತಕ್ಕಂತ ತಮ್ಮಡಿ ಮಕ್ಕಳು। ಈ ಶ್ರವಣನ ಬೋಳಿವೊಳಗೆ। ಒಂದು ಮಗ್ಗಲು ರೊಟ್ಟಿ ಸುಟ್ಟಿ। ಸುಟ್ಟ ರೊಟ್ಟಿ ಪರ ಅಂತ ಮಾಡಿ। ನಿನ್ನ ಬುರುಡೆ ಉಳಿದದಲ್ಲಾ। ಎದೆಯಿಂದಾಚೆಗೆ। ಆ ಬುರುಡೆಗೆ ಮೂರು ನಾಮ ಧರಿಸಿ। ಒಂದು ತಿಂಗಳು ಶಿವ ಸಿವಾ। ಮೂವತ್ತೊಂದು ದಿವಸ। ಸ್ರಾವಣ ಸನಿವಾರ ಅಂತೇಳಿ। ವಾರ ಮಾಡಿಕೊಳ್ಳಿ ಅಂತೇಳಿ। ಪಟ್ಟವನ್ನು ಕಟ್ಟು ಬಿಟ್ಟು। ಆಗ ನಮ್ಮಪ್ಪಾಜಿ ಮಲೆ ಮಾದಪ್ಪನವರು।

ಆಹಾ ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಗಂಡುಗಲಿ ವಾಹನದವರೇ ಗುರು ಕೆಂಡಗಣ್ಣ ದಯಮಾಡವರೆ।
ಆಹಾ ಹಿಂಡಿಗೆ ತಕ್ಕಾದ ಗಂಡುಗಲಿ ಮ್ಯಾಲೆ ಜಗ್ಗಿಸಿ ನಾಟ್ಯವಾಡವರೆ।
ಕ್ವಾರಣ್ಯಗಳ ನೀಡಮ್ಮ ಕೋಡುಗಲ್ಲು ಮಾದೇವನಿಗೆ।'

ನೋಡಪ್ಪಾ ರಂಗಸ್ವಾಮಿ ಈಗ ಶ್ರವಣಯ್ಯ ಸಾಯ್ತಾನೆ। ನೀನು ಸಂಕುನ ಕೂಗಾಕು ಅಂತಾರೆ ಮಾದೇವಾ।

ನೋಡಿ ನಮ್ಮ ಶಿವನಾ।

ನೋಡಪ್ಪಾ ನನ್ನ ಬೆಟ್ಟಕ್ಕೆ ಬರುವಂತ ಹದಿನಾರು ಸೀಮೆ ಗುಂಗಳು। ರಂಗನೊಡ್ಡು ಅಂತ್ಹೇಳಿ ನಿನಗೆ ಮುಂದಲ ಪೂಜೆ ಮಾಡ್ಲಪ್ಪ। ಸಂಕುನ ಕೂಗಾಕಪ್ಪಾ ಅಂದ್ರು। ನಾರಾಯ್ಣ ಮಗುಲ್ಲಾತ್ತ ಸಂಕೆತ್ಕೊಂಡು। ಸಂಕುನ ಕೂಗಿಡ್ತವನೆ ನಾರಾಯ್ಣ।

ನೋಡಿ ನಮ್ಮ ಶಿವನಾ।

ಎಲ್ಲಾ ಮಾರಿ ಮಸ್ಣಿ ದುರ್ಗಿ ಚೌಡೀರೆಲ್ಲ ಕಲ್ಲಾಕಿದ್ರೆ। ಮುಕ್ಕಡಳ್ಳ ಮಾರಮ್ಮ ಅನ್ನತಕ್ಕವಳು ನನ್ನ ಅನ್ನ ಕೊಟ್ಟಂತ ತಂದೆ ತಲೇ ಮೇಲ ಕಲ್ಲಾಕ್ಲ ಅಂತ್ಹೇಳಿ। ಕಲ್ಲಾಕ್ತೆ

ಸುಮ್ನೆ ನಿಂತಿದ್ಲಂತೆ। ನಮ್ಮಪ್ಪಾಜಿ ಏಳ್ಕಲೆ ಹೆತ್ತಯ್ಯ। ಈ ಹೆಣ್ಣಿಂಬ ಹೆಣ್ ಜಲ್ಮ ತನ್ನ ಬುದ್ಧಿ ಬುಡಕಿಲ್ಲ ಅಂತೇಳಿ। ಮುಕುಡಳ್ಳಿ ಮಾರಿಯ ನೆಲಕೆ ತುಳುದವರೆ। ಬರುವಂತ ನನ್ನ ಪರ್ಸೆ ನಿನಗೊಂದು ದೂಪ ಹಾಕ್ಲಿ ಅಂದ್ಬುಟ್ಟು। ಶ್ರವಣ ದೊರೆ ತಂದು। ರಂಗ ನೊಡ್ಡಿನಲ್ಲಿ ಇಳ್ಸಿ। ನನ್ನರುಸೆ ನಿನಗೊಂದು ದೂಪ ಹಾಕ್ಲಪ್ಪ ಅಂತ್ಹೇಳಿದ್ರು। ಸನಿ ದೇವರು ಬಂದು ಮಾದೇವನಿಗೆ ಸರಣ್ಮಾಡಿ। ಸ್ವಾಮಿ ಸನಗೇನಪ್ಪಣೆ ಅಂತ ಕೇಳುದ್ರು। ಅಪ್ಪಾ ಸನಿಮಾತ್ಮ। ನನ್ನೇಳು ಮಲೆ ಕೈಲಾಸದ ದಾರಿಲಿರೊ ಒಡ್ಡಲ್ಲಿ ನೀನು ನೆಲೆಗೊಳ್ಳಪ್ಪ। ಒಲುದ್ರೆ ಮಾದೇವ। ಒಲಿದೋದ್ರೆ ಸನಿ ದೇವನಾಗಪ್ಪ। ನಿಮಗೆ ಜಯವಾಗ್ಲಿ ಹೋಗಿ ದ್ವಾರಪ್ಪ ಅಂದ್ರು। ಬಂಕಾಪುರಿ ಶ್ರವಣ ದೊರೆ ಧಗಾಧಗುನೆ ಅತ್ತಿ ಧಿಗೀಧಿಗ್ನೆ ಉರುದೋದ್ನಂತೆ। ಶ್ರವಣ್ದೊರೆ ಹೆಡ್ತಿ ಪದ್ಮಾವತಮ್ಮ ಅನ್ನಕ್ಕವ್ವ। ಲಬಾ ಲಬನೆ ಬಾಯ್ಬಂಡ್ಕೊಂಡು ಮಾದೇವನ ಪಾದ ತಬ್ಕೊಂಡು। ಮಾದಪ್ಪ ಅವುರ್ಗು ಒಂದು ಬೇಳ್ಕೆ ಚೆಲ್ಲಿದ್ರು। ಅವಳು ಮ್ಯಾಕಾರಿ ಕೆಳೀಕೆ ಬಿದ್ದು ಪ್ರಾಣ ಬುಟ್ಟಂತೆ। ಮಾದಪ್ಪ ಅಗ್ನಿ ದೇವ್ರ ಬಂಕಾಪುರಿ ಶ್ರವಣ್ದೊರೆ ಅರಮನೆಯ। ಸುಟ್ಟು ಭಸ್ಮ ಮಾಡಮ್ಮ ಅಂದ್ರಂತೆ। ಮಾದೇವ್ಪನ ಮಾತ್ಕೇಳಿ ಅಗ್ನಿ ದೇವಿ। ಒಂದು ನೇತ್ರುವನ್ನು ಬುಟ್ಟಂತೆ। ಶ್ರವಣನರಮನೆ ಧಗಾಧಗ್ನೆ ಕತ್ಕೊಂಡುರುದೋಯ್ತು। ಅವನರಮನೆ ಉರೀಸ್ಬುಟ್ಟು ಮಾದೇಶ್ವರ। ತನ್ನ ತಾಯಿ ಕೊಟ್ಟಿದ್ದ ಬುತ್ತಿ ತಂದು ಜಡೆಯೊಳಗೆ ಮಡಿಕಂಡಿದ್ರಲ್ಲಾ। ತಗ್ದು ಆ ಸುರಮುನ್ನೂರು ಕೋಟಿ ಗಣಂಗಳಿಗೆಲ್ಲ ಊಟಕ್ಕೆ ಬಡುಸ್ಬುಟ್ಟು ದೊಡ್ಡಾಲಳ್ಳದಲ್ಲಿ। ಕೈಯತೊಳುದವುರೆ ನನ್ನ ಮಾದೇವ।

ನೋಡಿ ನಮ್ಮ ಶಿವನಾ।

ದೇವಾನು ದೇವತೆಗಳೆಲ್ಲ ಮಾದೇವನ ಪಾದುಕ್ಕೆ। ಬಂದು ಹಾಸಾಸಿ ಅಡಿ ಬೀಳ್ತಿದ್ದಾರೆ। ನೀವು ಯಾವ್ಯಾವ ಸ್ಥಾನದಲ್ಲಿದ್ರೊ ಆ ಸ್ಥಾನಗಳ್ಗೆ ಹೊಂಟೋಗಿ। ನರ್ದುಟುಗಳ್ಗೆ ನಿಮ್ಮ ದರುಸ್ನ ಕೊಟ್ಕೊಂಡು ನೀವ್ ಬಾಳಾಟ ಮಾಡಿ ಅಂದಿದ್ದಾರೆ। ಮಾದೇವ್ನುನ ಅಪ್ಣೆ ಆದೇಟ್ಗೆ ಎಲ್ರೂ। ಅವರವರ ಸ್ಥಾನಕ್ಕೆ ಹೊಂಟೋದ್ರು। ಅಪ್ಪಾ ರಂಗಸ್ವಾಮಿ। ನಾನು ಈ ನನ್ನೇಳ್ ಮಲೆ ಕೈಲಾಸಕ್ಕೆ ಹೋಗ್ತೀನಪ್ಪಾ। ನೀನು ಇಲ್ಲೇ ನೆಲೆಗೊಂಡಿರು। ನನ್ನ ಪರ್ಸೆಯೆಲ್ಲ ನಿನ್ಗೆ ಒಂದು ಕಾಸುನ ಧೂಪ ಹಾಕ್ಲಿ। ಕರವೆತ್ತಿ ಕೈಮುಗೀಲಿ। ನಿನಗೊಂದು ಗೋವಿಂದನ ಇಕ್ಲಿಯಪ್ಪಾ ಅಂದ್ಬುಟ್ಟು। ಮಾದೇಶ್ವರ ಆಸುರವಾದವನ್ನು ಮಾಡಿ। ಅವ್ರು ಮೂಡ್ಲು ಮಲೆ ಕೈಲಾಸಕ್ಕೆ ಹೋಯ್ತಾವ್ರೆ ಮಾದೇವ।

ನೋಡಿ ನಮ್ಮ ಶಿವನಾ।

ಅರಗಿನ ಚಮ್ಮಾಳ್ಗೆ ಹೂಡಿದರು।
ಧರೆಯ ಮೇಲೆ ತಂದಿರಿಸಿದರು। ನರು
ಮುರಿಯೆಂಬ ಶ್ರವಣನ ಕೊಂದರು।
ತವಸರೆಯಾ ಮೇಲೆ।[೮]

# ಟಿಪ್ಪಣಿಗಳು

೧. ಕಂಸಾಳೆ '೨'ವನ್ನು ಪ್ರಮುಖವಾಗಿಟ್ಟುಕೊಂಡು ಶ್ರವಣನ ಸಾಲಿಗೆ ಒಂದು ರೂಪು ಕೊಟ್ಟಿರುವೆ.

೨. ಕಂಸಾಳೆ ೭ರಲ್ಲಿ ಸತ್ಯವಂತ ಮಲ್ಲಿದೇವಿ ಮಾದಾರಿ ಚನ್ನಯ್ಯನಿಂದ ಪಾದರಕ್ಷೆ ಮಾಡಿಸುತ್ತಾನೆ ಮಾದೇಶ್ವರ.

೩. ಕಂಸಾಳೆ ೪ರಲ್ಲಿ ಹರಳಯ್ಯ ಲಿಂಗಮ್ಮ ದಂಪತಿಗಳು .

೪. ಕಂಸಾಳೆ ೩ರಲ್ಲಿ ಹರಳಯ್ಯನ ಹೆಂಡತಿ ಅಹಲ್ಯಾ.

೫. ಕಂಸಾಳೆ ೯ : ಹರಳಯ್ಯ - ಮಾದಲಾಂಬಿಕೆ ದಂಪತಿಗಳು.

೬. ಕಂಸಾಳೆ ೮ : ಹರಳಯ್ಯ - ಕಲ್ಯಾಣಮ್ಮ ದಂಪತಿಗಳು.

# ಅರ್ಥಕೋಶ

### ಅ

ಅಂಬೆ-ಪಾರ್ವತಿ, ತಾಯಿ
ಅಮೃತವನ್ನು ಕಚ್ಚಿಕೊಂಡು-ಮೊಲೆ ಕಚ್ಚಿಕೊಂಡು
ಅಗೇವು-ಭೂಮಿಯಲ್ಲಿನ ಕಣಜ
ಅರುವೆ-ಮಡಿಕೆ
ಅಂಡಿಗೆ-ಕೆಳಗೆ
ಅಪ್ಪರ-ಅಪಾರ
ಅರಿವಾಣ-ತಟ್ಟೆ
ಅಮೂರ್ತವಾಗಿತ್ತು-ಅಮೃತವಾಗಿತ್ತು
ಅಟ್ಟಿ-ಮನೆ
ಅಮ್ಮಿ-ಹೆಣ್ಣು ಮಕ್ಕಳನ್ನು ಪ್ರೀತಿಗೆ ಕರೆವುದು
ಅಂಬಲಿ-ಗಂಜಿ

### ಆ

ಆತ್ರಿಸಿ-ಆತುರದಿಂದ
ಆರ-ಆಹಾರ
ಆಸತ್ರಯ-ಆಶ್ರಯ
ಆಪಾಟ-ಅಷ್ಟೊಂದು
ಆಲು-ಹಾಲು
ಅಂಬಾವ-ಅಹಂಕಾರ

### ಇ

ಇಂಗಡವಾಗಬೇಕು-ಬೇರೆ ಆಗಬೇಕು
ಇದ್ಮ-ವಿದ್ಮೆ
ಇಸ್ತಾರ-ವಿಸ್ತಾರ
ಇಳ್ಳ-ವೀಳ್ಯ
ಇಸಂಪ್ರಾಜಿ ಒತ್ತ-ವಿಷಾಪಹಾರಿ ಗುತ್ತಿ
ಇಸುಬ್ರಮ್ಮ-ವಿಷ ಬ್ರಹ್ಮ
ಇಷ್ಣು-ವಿಷ್ಣು

### ಈ

ಈದ-ಮರಿಹಾಕಿದ
ಈರತ್ಕಟ್ಟೆ-ವಿರಕ್ತಕಟ್ಟೆ
ಈರತ್ತ ಮುನಿ-ವಿರಕ್ತ ಮುನಿ
ಈಳ್ಯ-ವೀಳ್ಯ

### ಉ

ಉಯ್ಯಂಡು-ಎರೆದುಕೊಂಡು
ಉಪಾದಾನ-ಮೆಚ್ಚಿಕೊಡುವದಾನ
ಉರುಳಗ-ಊಳಿಗ
ಉಬುತ್ತಿ-ವಿಭೂತಿ
ಉರಿಗದ್ಗೆ-ಗುರುಗಳು ಕುಳಿತುಕೊಳ್ಳುವ ಉರಿ ಸಿಂಹಾಸನ
ಉರಸಂಗಿ ಕ್ವರಡು-ಚುರುಚುರು
ಉಂಟುಮಾಡುವ ಚಾವಟಿ

### ಊ

ಊಬತ್ತಿ-ವಿಭೂತಿ

### ಎ

ಎಕ್ಕುಡ್ಡಿ-ನಾಶಮಾಡಿ
ಎಡ್ಗೊತ್ತು-ಅವೇಳೆ
ಎಣಿ-ನೆಪ
ಎರ-ಇರುವೆ

ಎರಳು-ಎಳ್ಳು

ಎಸ್ರು-ಸಾರು

ಏ

ಏಗ-ಯೋಗ

ಏಡು-ಎರಡು

ಐ

ಐನಾತಿ-ಶ್ರೇಷ್ಠ

ಐಲು-ಹುಚ್ಚು

ಐಕ್ಳು-ಮಕ್ಕಳು

ಒ

ಒಚ್ಚರಿಕೆ-ಒಂದು ಕಡೆಗೆ

ಒಗ್ಗಾನ-ಜೀವನ, ಸಂಸಾರ

ಒದಿಕಂಡೋಗಿ-ಅಟ್ಟಾಡಿಸಿಕೊಂಡು ಹೋಗುವುದು

ಒಂದಣ-ನಾಲ್ಕಾಣೆ

ಒಗಟ-ಒಗಟು

ಓ

ಓಜ-ಉಪಾಧ್ಯಾಯ

ಕ

ಕ್ವಾರಪ್ಪ-ತೆಗೆದುಕೋ

ಕಾಮ-ಕಾಮಧೇನು

ಕಾರ್ಣ್ಯ-ಭಿಕ್ಷೆ

ಕಾನಿ-ಕಾಡು

ಕೊಟಾರ-ಕಣ

ಕೌದಿ-ಸಣ್ಣ ಸಣ್ಣ ಬಣ್ಣದ ಬಟ್ಟೆಗಳಿಂದ ಹೊಲಿದ ಹೊದಿಕೆ

ಕವುಳು-ಮುಚ್ಚು

ಕಾಗಡಿ-ತೊಟ್ಟಿಲು

ಕಿರುಜಂಗು-ಸಣ್ಣ ಗಂಟೆ

ಕೋಲುಮಂಡೆ-ಕೋಲಿನಂತ ಇಳಿಬಿದ್ದ ಕೂದಲುಳ್ಳ ತಲೆ

ಕೊಂಗ-ಧಾನ್ಯ ತೂರುವ ಉದ್ದನೆ ಮೊರ

ಕೊರಡು-ಬಾವುಟ

ಕಣತಮ್ಮ-ಕೊರವಂಜಿ

ಕನ್ನ-ಸಂದು

ಕರ್ಸ್ತು-ಕರ್ತೃ

ಕಳಗು-ಕಳುಹಿಸು

ಕಾಳೆ-ಕಹಳೆ

ಕೆಲ್ಸಿ-ಕ್ಷೌರಿಕ

ಗ

ಗ್ಯಾನ-ಜ್ಞಾನ

ಗಕ್ಕನೆ-ಇದ್ದಕ್ಕಿದ್ದಹಾಗೆ

ಗಣತಿ ತಿಂಗಳು-ಯಾವ ಯಾವ ಭಕ್ತರು ಬೆಟ್ಟಕ್ಕೆ ಬಂದಿದ್ದರು ಎಂಬ ಲೆಕ್ಕ ಬರೆದುಕೊಳ್ಳುವ ತಿಂಗಳು ದೀಪಾವಳಿ, ಶಿವರಾತ್ರಿ ತಿಂಗಳು

ಗುಳ್ಳ-ಗುಡಿಸಲು

ಗವ್ವ-ಗಮಲು

ಗಲಗು-ಶಬ್ದ

ಗಾಚಾರ-ಗ್ರಹಚಾರ

ಗ್ವಾಟೆ-ಚೀಲ

ಗುತ್ತಿ-ಪೊದೆ

ಗಾಳಿ-ದಯ್ಯ

ಗುದ್ಗೆ-ದೊಣ್ಣೆ

ಗೇಯಿನು-ಕಟ್ಟಿಸು

ಗೌಳಿ-ಹಲ್ಲಿ

ಗದ್ಗೆ-ಪೀಠ

ಗುಡಾಣ-ದಪ್ಪ ಮಡಿಕೆ

ಗೋಗಲ್ಲು-ಕೋಡುಗಲ್ಲು

ಗಂಟ-ತನಕ, ವರಗೆ

ಗುಂಡ್ಗೆ-ಹೃದಯ

ಘ

ಘಟ-ದೇಹ

ಚ

ಚೊಟ್ಟು-ತೊಟ್ಟು

ಚಜ್ಜೆಲಿಂಗ-ಸಜ್ಜೆಲಿಂಗ

ಚಕ್ರ-ತೋಟಿ

ಚಮ್ಮಾವುಗೆ-ಪಾದರಕ್ಷೆ

ಚೊಳ್ಳೆಸರು-ನೀರು ಪಾರು

ಚಕಳ-ಚರ್ಮ

ಚಿಳ್ಳುಗುರು-ಚೂಪಾದ ಉಗುರು

ಚವುಲ-ಬೀಸಣಿಗೆ

ಚೋಜುಗ-ಸೋಜಿಗ

ಚಂಚಾರ-ಸಂಚಾರ

ಚಾಕ್ರಿ-ಕೆಲಸ

ಚಲಿಗೆ-ಚೌರಿಗೆ

ಚಿಟಕರು-ಶಿಷ್ಯರು

ಚೇಜಿ-ಕುದುರೆ

ಚಪ್ಪೋಡು-ಶಾಸನ

ಚಂಚುಗಾರ-ವೀಳಯದ ಜೊತೆ ಮುಂಗಡವಾಗಿ ಕೊಟ್ಟ ಹಣ

ಜ

ಜಟ್ಮುನಿ-ಜಡೆಮುನಿ

ಜಾಮ-ಜಾವ

ಜಿಟ-ದಿಟ

ಜಿನ-ದಿನ

ಜಿಷ್ವ-ದಿನ

ಜಲಕ-ಸ್ನಾನ

ಜಲಗೊಂಬು-ಜೋಲಾಡುತ್ತಿರುವ ಕೊಂಬು ಉದ್ದನೆಯ ಕೊಂಬು, ಜಲ್ಲೆಗೊಂಬು

ಜೀಮ-ಜೀವ

ತ

ತಕ್ಕಾ-ತೆಗೆದುಕೋ

ತಮ್ಮಡಿ-ಪೂಜಾರಿ

ತಾಕೀತು-ಕಟ್ಟಾಜ್ಞೆ

ತಾರ್ರು-ಸಾರಿಸು

ತಿಮಿ-ತಿಪಿ

ತೇಜಿ-ಕುದುರೆ

ತಡಕು-ಮಡುಕು

ತಳಾರ-ನಿಧಾನ

ತಾಬು-ಅಧೀನ

ತ್ಯಾಮ-ತ್ಯಾವ

ತ್ರಿಷ್ಣೆ-ಸೃಷ್ಟಿ

ತೊಂಬೆ-ದೊಡ್ಡ ಧಾನ್ಯ ಶೇಖರಣ ಗೂಡೆ

ದ

ದಂಡಕಿ-ಹತ್ತಿರಕ್ಕೆ

ದಂಡಿವಾರ-ದನಕ್ಕೆ ಕಟ್ಟುವ ಮರದ ಕೊಂಟು

ದುಡುಕು-ಮಾಡು (ತೊಡಗು)

ಮಡ-ದೃಢ

ಧೂಳ್ತ-ಮಂತ್ರಿಸಿದ ಬೂದಿ

ದಾವು-ಬಾಯಾರಿಕೆ

ದುಂಬು-ಧೂಳು

ದ್ರಿವ್ಯ-ದಿವ್ಯ

ನ

ನೇತ್ರ-ಕಣ್ಣು

ನಿರುಮಳ-ನಿರಾಳ

ನಗ್ಗು-ನರುಕು

ನಿಚ್ಚ-ನಿತ್ಯ

ನಿಸಾನಿ-ಬಾವುಟ

ನಾಗೇರು-ದನಗಳ ನಾಲಿಗೆಗೆ ಬರುವ ರೋಗ

ನಿಚ್ಚಯ-ನಿಶ್ಚಯ

ನೇಮ-ನಿಯಮ

ನೆಪ್ಪು-ನೆನಪು

### ಪ

ಪರಿಸೆ-ಯಾತ್ರಾರ್ಥಿ, ಭಕ್ತ

ಪತರಿಸಿ-ಅಗಲಿಸಿ

ಪಾರ-ಪಹರೆ, ಕಾವಲು

ಪೋಡು-ಗುಡಿಸಲು

ಪಾದ್ರಾಕ್ಷಿ-ಪಾದರಕ್ಷೆ

ಪಳ್ಳಿಮನೆ-ಪಾಠಶಾಲೆ

ಪೀಕದಾನಿ-ತಾಂಬೂಲ ಉಗಿವ ಪಾತ್ರೆ

ಪಾವಡೆ-ಬಟ್ಟೆ

### ಬ

ಬರಗ-ಹುಲಿ

ಬೇಳ್ಕೆ-ಮಾಯದ ಬೂದಿ

ಬಿಮ್ಮನ್ಸೆ-ಬಸುರಿ

ಬಾಂಡ-ಪಾತ್ರೆ

ಬಲಚೋರಿ-ಬಲಗಡೆ

ಬೋನ-ಅನ್ನ

ಬ್ಯಾಲ-ಬೇಲದ ಹಣ್ಣು

ಬೋಳ-ಬೆಟ್ಟ

ಭಸ್ಮಂಗ-ವಿಭೂತಿ

ಬಿರಲು-ಹಿಡಗಲು, ಕಸಬರಿಕೆ

ಬ್ಯಾನೆ-ಬೇನೆ

ಬೋಮಾನ-ಬಹುಮಾನ

### ಮ

ಮೈಮೆ-ಮಹಿಮೆ

ಮುಂದರದೆ-ಮೊದಲೆ

ಮೇಲ್ಲಕ್ಕರೆ ಶೆಟ್ರು-ಉಪ್ಪಲಿಗಶೆಟ್ರು

ಮಸ್ತಾಗಿ-ಹೆಚ್ಚಾಗಿ

ಮುಕ್ಕಾಲು ಮಂಚ-ಮೂರು ಕಾಲುಳ್ಳ ಮಂಚ

ಮಜ್ಜಣ-ಸ್ನಾನ

ಮೊರೆ-ಮುಖ

ಮೇಲುಸಕ್ರೆ-ಉಪ್ಪು

ಮಚ್ಚು-ಕತ್ತಿ

ಮಸ್ತೇಪು-ಸಾಮಗ್ರಿ

ಮಂಡೆ ಮಾಸು-ಮುಟ್ಟು ನಿಲ್ಲುವಿಕೆ

ಮಡಗು-ಇರಿಸು

ಮೊರಳು-ಮಡಿಲು

ಮೋಕೋಪಲ್ಲಿ-ಗೌಪ್ಯವಾಗಿ

ಮಿಳ್ಳದೆ-ಹೊರಳದೆ

ಮಂಜಲಿಗೆ-ಚಾಪೆ

ಮುಗ್ಗಾವಣೆ-ಅಡ್ಡೆ

ಮೋರ್ತ-ಮುಹೂರ್ತ

ಮದ್ದು-ವಿಷ

ಮೇಟಿ-ಕಣದ ಮಧ್ಯೆ ನೆಟ್ಟಿರುವ ಕಂಬ

ಮೈಮುಂಬು-ಆವೇಶ ಬರು

ಮಸ್ತಕ-ತಲೆ

ಮೋರ್ತ್ತ-ಮುಹೂರ್ತ

### ಯ

ಯಾಪ್ತಿ-ಪಾಡು

ಯಾತವು-ಯಾವ ಕಡೆ

ಯಾಸ-ವೇಷ

### ರ

ರವುಸು-ರಭಸ

ರುದ್ರಗೋಪ-ರುದ್ರನಂತೆ ವಿಪರೀತ ಕೋಪ

### ಲ

ಲಗತ್ತು-ಸರಿಸಮ

ಲಾದ-ನಾದ

ಲೆಂಗಣ್ಣೆ-ಬೆಟ್ಟ

### ವ

ವೇಗ-ಯೋಗ

ವೆಚ್ಚಾಳ-ಹೆಚ್ಚಳ

ವಿಗ್ಗಾಣೇಶ್ವರ-ವಿಶ್ವೇಶ್ವರ

ವಾಲಗ-ಸಭೆ

ವೋಟುಮಯ್ಯ-ವೋಸ್ಟಮಯ್ಯ

ವ್ಯಾಗ-ಯಾಗ

ವಂಚಾಣೆ-ವಂಚನೆ

ವಂದ್ರಿ-ಜರಡಿ

## ಶ

ಶಿವಸೆರಗು-ಮಂಗಳ ವಸ್ತ್ರ

## ಸ

ಸರಸ್ವತಿ-ರಾಗಿಕಲ್ಲು

ಸಬ್ತು-ಶಬ್ದ

ಸಿವಕಂತೆ-ಶರಣರ ಮೈಲಿಗೆ ಬಟ್ಟೆ

ಸೀತಾಳ ಚಪ್ಪರ-ಹಸಿರುವಾಣಿ ಚಪ್ಪರ ಹೊಂಗೆ ಬಸರಿ, ಮಾವಿನ ಸೊಪ್ಪಿನ ಚಪ್ಪರ

ಸಂಕು-ಶಂಖ

ಸೊರಣ-ಸ್ಮರಣೆ

ಸಳಿ-ಚಳಿ

ಸಬಗಸ್ತು-ಹೆಣ್ಣು ಗಂಡು ಮೆರವಣಿಗೆ ಬೀದಿಗಳಲ್ಲಿ

ಸಿದುರೆ-ಸಿಪ್ಪೆ

ಸಲಗು-ಸಲಹು

ಸಳ್ಳ-ಸಡಿಲ

ಸಾಚಾವಾದ್ರೆ-ನಿಜವಾದಲ್ಲಿ

ಸಿಬ್ರಿ-ಬೇಸರ

ಸೆಬ್ಬೆ-ಕೋಲು

ಸೈತುವಾಗಿ-ಸಹಿತವಾಗಿ

ಸ್ವಾಡಿಗೆ-ಹಸಿ ಅವರೆಕಾಯಿ

ಸ್ವಾನೆ-ಜನಗು

ಸೊಳ್ಳು-ದೀಪ

ಸಮ್ಮಾರ-ಸಂಹಾರ

ಸುಂಡುಹೋಗು-ಇಂಗಿಹೋಗು

ಸನ್ನೇಸಿ-ಸನ್ಯಾಸಿ

ಸಂಕ-ಕಂಕುಳು

ಸುತ್ತಾಲೆ-ಸುತ್ತಿನ ಕೋಟೆ

ಸ್ವಾಕ-ಮುಖ

ಸಂದಿ-ಸಮಯ

## ಹ

ಹರುವಾಣ-ತಟ್ಟೆ

ಹೆಚ್ಚುಮಾಡು-ರಾಶಿಪೂಜೆ ಮಾಡು

ಹುಟ್ಟರೆ ಕಲ್ಲು-ತಾನಾಗಿ ಉದ್ಭವಿಸಿದ ಬಂಡೆ ಕಲ್ಲು

ಹಿಂಚರಿ-ಹಿಂದುಗಡೆ

ಹಗೇವು-ಕಣಜ

ಹರುಸ-ಹರ್ಷ

ಹೆಚ್ಚುಗಟ್ಲೆ-ವಿಶೇಷ ಭೋಜನ

ಹಸ್ಲಿ-ಹಚ್ಚಿ

ಹೊಪ್ಪೆ-ಹೊಪ್ಪಳೆ

ಹಾವುಗೆ-ಪಾದುಕೆ

ಹಿಂಡೇ ಕೂಳು-ಪಿಂಡ

ಹುಂಡಿ-ದೊಡ್ಡಿ

## ಮಾದೇಶ್ವರ ಕಾವ್ಯ ಸಂಪಾದನೆಯಲ್ಲಿ ಉಪಯೋಗಿಸಿಕೊಂಡ ಅಪ್ರಕಟಿತ ಮತ್ತು ಪ್ರಕಟಿತ ಸಾಹಿತ್ಯ

೧. ಕಂಸಾಳೆ ಕಥಾ ಸಂಪ್ರದಾಯ ೧ - ವರಕೋಡು ಮಾದಯ್ಯ ಹಾಗೂ ಸಿ. ಮಾದಯ್ಯ (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೨. ಕಂಸಾಳೆ ಕಥಾ ಸಂಪ್ರದಾಯ ೨ - ಕನಕಪುರ ತಾಲ್ಲೂಕು ಮಳಗಾಳಿನ ಮರಿ ಎಸ್. ಮಾದಪ್ಪ ಮತ್ತು ಪಂಚಲಿಂಗಪ್ಪ (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೩. ಕಂಸಾಳೆ ಕಥಾ ಸಂಪ್ರದಾಯ ೩ - ನರಸೀಪುರ ತಾಲ್ಲೂಕಿನ ಆಲ್ಗೋಡು ಪುಟ್ಟ ಮಾದಯ್ಯ ಮತ್ತು ನಂಜಯ್ಯ (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೪. ಕಂಸಾಳೆ ಕಥಾ ಸಂಪ್ರದಾಯ ೪ - ಮಂಡ್ಯ ಜಿಲ್ಲೆಯ ಕಿರುಗಾವಲಿನ ಮಹದೇವ ಶೆಟ್ಟಿ (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೫. ಕಂಸಾಳೆ ಕಥಾ ಸಂಪ್ರದಾಯ ೫ - ಚಾಮರಾಜನಗರ ತಾಲ್ಲೂಕಿನ ಮಧುವನ ಹಳ್ಳಿಯ ಮಹಾದೇವ ಮತ್ತು ಮಹಾದೇವ ಶೆಟ್ಟಿ (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೬. ಕಂಸಾಳೆ ಕಥಾ ಸಂಪ್ರದಾಯ ೬ - ಮದ್ದೂರು ತಾಲ್ಲೂಕಿನ ಉಪ್ಪಾರದೊಡ್ಡಿಯ ಪೂಜಾರ ಸಿದ್ಧಶೆಟ್ಟಿ ಮತ್ತು ಈರಯ್ಯ (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೭. ಕಂಸಾಳೆ ಕಥಾ ಸಂಪ್ರದಾಯ ೭ - ಕಬ್ಬಳ್ಳಿ ಗ್ರಾಮದ ಚಾಮಯ್ಯ ಮತ್ತು ಸಂಗಡಿಗರು (ಅಪ್ರಕಟಿತ). (ಸಂಪಾದಕರು ಡಾ. ಬಿ.ಎಸ್. ಸ್ವಾಮಿ)

೮. ಮಲೆಯ ಮಾದೇಶ್ವರ - ಸಂಪಾದಕರು : ಡಾ. ಕೇಶವನ್ ಪ್ರಸಾದ್, ಹಂಪಿ ವಿಶ್ವವಿದ್ಯಾಲಯ, ಹಂಪಿ (ಪ್ರಕಟಿತ).

೯. ಮಲೆಯ ಮಾದೇಶ್ವರ - ಸಂಪಾದಕರು : ಪಿ.ಕೆ. ರಾಜಶೇಖರ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು, ೧೯೭೩.